# ಅನಂತ ನಿಧಿ





...ನ ಸಂಪಾದಕರು
...ಟಿ.ವಿ. ವೆಂಕಟಾಚಲ ಶಾಸ್ತ್ರೀ

ಸಂಪಾದಕರು
ಡಾ. ಎ. ಶಶಿಕಲ
ಡಾ. ಸತ್ಯನಾರಾಯಣ ಮಲ್ಲಿಪಟ್ಟಣ

# ಅನಂತ ನಿಧಿ

(ಡಾ. ಎನ್. ಅನಂತರಂಗಾಚಾರ್ ಅವರ ಸಂಸ್ಮರಣ ಗ್ರಂಥ)




ಪ್ರಧಾನ ಸಂಪಾದಕರು

ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ

ಸಂಪಾದಕರು

ಡಾ. ಎ. ಶಶಿಕಲ

ಡಾ. ಸತ್ಯನಾರಾಯಣ ಮಲ್ಲಿಪಟ್ಟಣ

ಡಾ. ಎನ್. ಅನಂತರಂಗಾಚಾರ್ಯರ ಶತಮಾನೋತ್ಸವ ಸಮಿತಿ

೬೮ ಬಿ. ಆಶ್ರಮ ರಸ್ತೆ ಹಿಂಭಾಗ, ಮೂರನೆಯ ಬ್ಲಾಕ್,

ಜಯಲಕ್ಷ್ಮೀಪುರಂ, ಮೈಸೂರು - ೫೭೦ ೦೧೨.

**Anantha Nidhi**

A centenary commemorative volume of Dr. N. Anantharangachar, Edited by Dr. T.V. Venkatachala Shastri, Dr. Shashikala & Dr. Sathyanarayana Mallipattana.

Published by Dr. N.Anantharangachar centenary committee,68, 'B' Ashram Road, 3rd Block, Jayalakshmipuram, Mysore - 570 012.







First Edition: 2004
Pages: 342
Price: Rs. 150/-



DTP at: Prasadhan Computers, Bejai, Mangalore.
Printed at: Print Park, 284, Ist main, 407, Yelahanka, New Town, Bangalore.

ಈ ಪುಸ್ತಕವನ್ನು ಡಾ. ಎನ್. ಅನಂತರಂಗಾಚಾರ್ ಅವರ ಮೊಮ್ಮಕ್ಕಳಾದ ಅಭಿಜಿತ್ ರಾಮಪ್ರಿಯನ್ ಮತ್ತು ಅಕ್ಷತಾ ರಾಮಪ್ರಿಯನ್ ಇವರ ಹೆಸರಿನಲ್ಲಿ ಪ್ರಾಯೋಜಿಸಲಾಗಿದೆ.

# ಮುನ್ನುಡಿ

ಡಾ. ಎನ್. ಅನಂತರಂಗಾಚಾರ್ ಅವರ ಶತಮಾನೋತ್ಸವದ ಈ ಸಂದರ್ಭದಲ್ಲಿ ಅವರ ಪ್ರೀತಿಯ ಶಿಷ್ಯವೃಂದದವರೂ ಆಪ್ತರೂ ಇಷ್ಟರೂ ಬಿಂಬಿಸಿರುವ ಅವರ ಚಿತ್ರವನ್ನು 'ಅನಂತನಿಧಿ'ಯ ರೂಪದಲ್ಲಿ ಪ್ರಕಾಶಪಡಿಸುತ್ತಿದ್ದೇವೆ. ಅನಂತರಂಗಾಚಾರ್ಯರ ಶಿಷ್ಯವೃಂದದಂತೆಯೇ ಅವರ ಬಂಧುವರ್ಗವೂ ವಿಶಾಲವಾದುದು. ಆಚಾರ್ಯರ ವ್ಯಕ್ತಿತ್ವ ನೂರಾರು ಜನರನ್ನು ತಟ್ಟಿದೆ, ಜೀವನವನ್ನು ಬೆಳಗಿಸಿದೆ. ಇದಕ್ಕೆ ಪೂರಕವಾದ ಆಚಾರ್ಯರೊಂದಿಗಿನ ಅನುಭವಗಳನ್ನು ಮೆಲುಕು ಹಾಕುವುದಕ್ಕಾಗಿಯೇ ಈ ಸಂಚಿಕೆ ಹೊರಬಂದಿದೆ. ಈ ಹೊತ್ತಗೆಯಲ್ಲಿ 'ಮನಮುಟ್ಟಿದ ಅನುಭವ'ಗಳ ಜೊತೆಗೆ ಅನಂತರಂಗಾಚಾರ್ಯರ ಪ್ರೌಢಲೇಖನಗಳನ್ನೂ ಅವರ ಅನುಭವದ ಸುತ್ತಮುತ್ತ ಹೆಣೆದಿರುವ ಇತರ ಆಕರ್ಷಕ ಬರಹಗಳನ್ನೂ ಒಟ್ಟುಮಾಡಲಾಗಿದೆ. ಈ ಬೇರೆ ಬೇರೆ ಲೇಖನಗಳನ್ನು ಆಯಾ ಲೇಖನಗಳ ಸ್ವರೂಪಕ್ಕನುಗುಣವಾಗಿ 'ನಮನ', 'ಲೇಖನ', 'ಸ್ಮರಣ', 'ಚಿಂತನ' ಎಂಬ ಭಾಗಗಳಲ್ಲಿ ಜೋಡಿಸಲಾಗಿದೆ. ಆಚಾರ್ಯರನ್ನು ಕುರಿತಂತೆ ಅವರ ಆಪ್ತರು ಬರೆದ ಲೇಖನಗಳನ್ನು 'ಸ್ಮರಣ' ದಲ್ಲಿಯೂ ಆಚಾರ್ಯರು ಹಿಂದಿನ ಗ್ರಂಥಗಳನ್ನು ಕವಿಗಳನ್ನು, ಕೃತಿಗಳನ್ನು ಕುರಿತು ಬರೆದಿರುವ ಬರಹಗಳನ್ನು 'ಲೇಖನ'ದಲ್ಲಿಯೂ ಆಚಾರ್ಯರು ತಮ್ಮ ಜೀವನದ ಮಹತ್ವದ ಕ್ಷಣಗಳನ್ನು ನೆನೆದು ಬರೆದ ಬರಹಗಳನ್ನು 'ಸ್ಮರಣ'ದಲ್ಲಿಯೂ ಆಚಾರ್ಯರ ವಿಶಿಷ್ಟ ಆಲೋಚನೆಗಳನ್ನು 'ಚಿಂತನ'ದಲ್ಲಿಯೂ ಅಳವಡಿಸಲಾಗಿದೆ. ಈ ಎಲ್ಲ ಚಿತ್ರಗಳೂ ಒಟ್ಟಾರೆ ಆಚಾರ್ಯರ ವ್ಯಕ್ತಿತ್ವದ ಆಳವನ್ನೂ ಅಗಾಧತೆಯನ್ನೂ ಕಟ್ಟಿಕೊಡುತ್ತವೆ.

'ಅನಂತನಿಧಿ' ಅನೇಕರ ಪ್ರೀತಿ ವಾತ್ಸಲ್ಯ ವಿಶ್ವಾಸ ದುಡಿಮೆಯ ಫಲ. ನಮ್ಮ ಗುರುಗಳಾದ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ ಅವರು ಪ್ರಧಾನ ಸಂಪಾದಕರಾಗಿ ಈ ಕೃತಿಯ ಹಂದರವನ್ನು ಬಿಡಿಸಿ ತೋರಿಸಿ ಅದರ ಮುಕ್ತಾಯದವರೆಗೂ ಮಾರ್ಗದರ್ಶನ ಮಾಡಿದ್ದಾರೆ. ಅತ್ಯಂತ ಶ್ರದ್ಧೆಯಿಂದ ಈ ಕೃತಿ ಮೂಡಿದ ಪ್ರತೀ ಹಂತದಲ್ಲಿ ಕ್ರಿಯಾತ್ಮಕವಾಗಿ ಭಾಗಿಯಾಗಿದ್ದಾರೆ. ಸಂಪಾದಕ ಸಮಿತಿಯ ಸರ್ವಸದಸ್ಯರೂ ಆಚಾರ್ಯರ ಬಗೆಗಿನ ಪ್ರೀತಿ ಗೌರವಗಳ ಹಿನ್ನೆಲೆಯಲ್ಲಿ ನಮಗೆ ವಾತ್ಸಲ್ಯಪೂರ್ವಕವಾದ ಮಾರ್ಗದರ್ಶನ ನೀಡುತ್ತಾ ಕೃತಿಯ

ಮೆರುಗಿಗೆ, ಘನತೆಗೆ ಅಗತ್ಯವಾದ ಸೂಚನೆಗಳನ್ನು ನೀಡುತ್ತಾ 'ಅಪ್ಪ'ನ ನೆನಪು ಮರುಕಳಿಸುವಂತೆ ವಿಶ್ವಾಸ ತೋರಿದ್ದಾರೆ. 'ಅನಂತನಿಧಿ'ಯ ಲೇಖಕರು ಆಚಾರ್ಯರನ್ನು ಕುರಿತ ಪ್ರೀತಿಯಿಂದ ಅಮೂಲ್ಯವಾದ ಲೇಖನಗಳನ್ನು ಬರೆದುಕೊಟ್ಟಿದ್ದಾರೆ. ಕೋಶಾಧಿಕಾರಿಗಳಾದ ಡಾ. ಎ. ಜಾನಕಿ ಅವರು ಶತಮಾನೋತ್ಸವದ ಜೊತೆಜೊತೆಗೆ ಈ ಕೃತಿಯು ಬೆಳಕು ಕಾಣುವುದಕ್ಕೂ ಶ್ರಮಿಸಿದ್ದಾರೆ. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಅರವಿಂದ ಮಾಲಗತ್ತಿ ಅವರು ಆಚಾರ್ಯರ ಲೇಖನಗಳನ್ನು ಪ್ರತಿಮಾಡಿಕೊಳ್ಳಲು ಅವಕಾಶ ಮಾಡಿಕೊಡುವುದರ ಮೂಲಕ ತಮ್ಮ ವಿಶ್ವಾಸವನ್ನು ತೋರಿದ್ದಾರೆ. ಈ ಹೊತ್ತಗೆ ಮೂಡಿ ಬರುವಲ್ಲಿ 'ಪ್ರಸಾಧನ'ದ ಡಾ. ನಾ. ದಾಮೋದರ ಶೆಟ್ಟಿಯವರ ಪಾತ್ರ ಮಾತಿಗೆ ನಿಲುಕದ್ದು. ಕುಮಾರಿ ಪುಷ್ಪ ಡಿ.ಟಿ.ಪಿ.ಯನ್ನು ಅಚ್ಚುಕಟ್ಟಾಗಿ ಮಾಡಿಕೊಟ್ಟಿದ್ದಾರೆ. ಶ್ರೀ ರಾಮಪ್ರಿಯನ್ ಅವರು ಇದರ ಪ್ರಾಯೋಜಕರಾಗಿ ಮುಂದೆ ಬಂದಿದ್ದಾರೆ. ಬಿ.ಎಂ.ಶ್ರೀ ಪ್ರತಿಷ್ಠಾನದವರು ವಿವಿಧ ರೀತಿಯಲ್ಲಿ ಸಹಕರಿಸಿದ್ದಾರೆ. ನಮ್ಮ ಕುಟುಂಬ ವರ್ಗದವರು ಹತ್ತು ಹಲವು ರೀತಿಯಲ್ಲಿ ಪುಸ್ತಕ ಪ್ರಕಟಣೆಗೆ ಸಹಾಯ ಮಾಡಿದ್ದಾರೆ. ಬೆಂಗಳೂರಿನ 'ಪ್ರಿಂಟ್ ಮಾರ್ಕ್ಸ್' ಸಂಸ್ಥೆಯವರು ಅಂದವಾಗಿ ಮುದ್ರಿಸಿ ಕೊಟ್ಟಿದ್ದಾರೆ. ಈ ಎಲ್ಲರಿಗೂ ನಾವು ಅತ್ಯಂತ ಆಭಾರಿಯಾಗಿದ್ದೇವೆ. ಎಲ್ಲರಿಗೂ ನಮ್ಮ ಕೃತಜ್ಞತಾಪೂರ್ವಕವಾದ ನಮನಗಳು.

**ಡಾ. ಎ. ಶಶಿಕಲ**
**ಡಾ. ಸತ್ಯನಾರಾಯಣ ಮಲ್ಲಿಪಟ್ಟಣ**

## ವಿಷಯಸೂಚಿ

### ನಮನ



### ಲೇಖನ

## ಸ್ಮರಣ



## ಚಿಂತನ

# ಪ್ರವೇಶಿಕೆ

**ಟಿ.ವಿ. ವೆಂಕಟಾಚಲ ಶಾಸ್ತ್ರೀ**

೧

ಎನ್. ಅನಂತರಂಗಾಚಾರ್ಯರ ಸಾಹಿತ್ಯಿಕ ಸಾಧನೆ ಬಹುಮುಖವಾದುದು, ಬಹೂಪಯೋಗಿಯಾದುದು; ನಿರ್ಮಾಣಗೊಂಡಿರುವ ಸಾಹಿತ್ಯವನ್ನು ಒಗ್ಗೂಡಿಸಿ ನೋಡಿದರೆ, ಅವರು ಒಬ್ಬ ಶ್ರಮಿಕನಂತೆ ದುಡಿದಿದ್ದಾರೆ, ಕೃಷಿಕನಂತೆ ಗೆಯ್ಮೆ ಮಾಡಿದ್ದಾರೆ ಎಂದು ಹೇಳುವ ಹಾಗೆ ಅದರ ಗಾತ್ರ ವಿಸ್ಮಯ ಹುಟ್ಟಿಸುತ್ತದೆ. ಅವರು ಉತ್ಸಾಹದಿಂದ ಪುಟಿಯುವ ಚಿಲುಮೆ, ಚಟುವಟಿಕೆಯ ಜೀವ. ಅವರ ಆಸಕ್ತಿಯ ಕಾರ್ಯಕ್ಷೇತ್ರಗಳು ಹಲವಾರು: ಅಧ್ಯಯನ - ಅಧ್ಯಾಪನ, ಸಾಹಿತ್ಯ ರಚನೆ, ದೇವಾಲಯ ಜೀರ್ಣೋದ್ಧಾರ, ಬೇಸಾಯ, ಧರ್ಮ ಸಂಸ್ಥೆಗಳ ಸ್ಥಾಪನೆ - ವ್ಯವಸ್ಥೆ, ವಯಸ್ಕರ ಶಿಕ್ಷಣ, ಕುಸ್ತಿ - ವ್ಯಾಯಾಮ, ಪೌರೋಹಿತ್ಯ, ಉಪನ್ಯಾಸ - ಹೀಗೆ ಅವುಗಳ ವಿಸ್ತಾರ. ಏಕಕಾಲದಲ್ಲಿ ಅವರು ಬಹುಶ್ರುತವಿದ್ವಾಂಸರು, ಬಹುಕರ್ಮಿಸಾಮಾಜಿಕರು.

ಅಧ್ಯಾಪಕರಾಗಿ ದಶಕಗಳ ದುಡಿಮೆ ಅಧ್ಯಯನ ಅಧ್ಯಾಪನಗಳಿಗೆ ಸಾಹಿತ್ಯಸಂಬಂಧವಾದ ಲೇಖನಗಳ ಹಾಗೂ ಕೃತಿಗಳ ರಚನೆಗೆ ಅವರನ್ನು ಒಗ್ಗಿಸಿದ್ದೂ ಬಗ್ಗಿಸಿದ್ದೂ ಸ್ವಾಭಾವಿಕವೇ ಆಗಿದೆ. ಸಾಹಿತ್ಯಚರಿತ್ರೆ, ಗ್ರಂಥ ಸಂಪಾದನೆ, ಧಾರ್ಮಿಕ ಸಾಹಿತ್ಯ, ರಾಮಾಯಣದ ಅಧ್ಯಯನ, ಕಲೆ, ಇತಿಹಾಸ, ಪುರಾತತ್ತ್ವವಿಷಯಗಳು. ಸೂಚಿಸಾಹಿತ್ಯ ಹೀಗೆ ಹಲವು ಪ್ರಮುಖಗಳಲ್ಲಿ ಆಚಾರ್ಯರು ಸಮಾನರೀತಿಯ ಆಸಕ್ತಿ ಪರಿಶ್ರಮ ಪ್ರೌಢಿಮೆಗಳನ್ನು ಪ್ರಕಟಿಸಿದ್ದಾರೆ.

ಆಚಾರ್ಯರ ಪ್ರಿಯವಾದ ಕ್ಷೇತ್ರ ಗ್ರಂಥಸಂಪಾದನೆ. ಗ್ರಂಥಸಂಪಾದಕರಾಗಿ ಸಾಹಿತ್ಯ ಕೃಷಿಗೆ ಹೊರಟವರು ಬರಬರುತ್ತ ಭಾರತೀಯ ಹಾಗೂ ಕರ್ಣಾಟಕ ಸಾಹಿತ್ಯ ಸಂಸ್ಕೃತಿ ಇತಿಹಾಸ ಧರ್ಮ ಸಮಾಜ ವ್ಯಕ್ತಿಚರಿತ್ರೆ ಎಂಬ ಅಧ್ಯಯನ ಕ್ಷೇತ್ರಗಳಿಗೂ ತಮ್ಮ ಆಸಕ್ತಿಯ ಹರವನ್ನು ಹಬ್ಬಿಸಿದರು. ಒಂದು ಅಂದಾಜಿನಂತೆ ಅವರ ಬಿಡಿಬರಹಗಳು ಸು. ೧೫೦, ಪುಸ್ತಕಗಳು ೩೦. ಎಷ್ಟೋ ಬಿಡಿಬರಹಗಳು ಸಣ್ಣ ಪುಸ್ತಕಗಳಾಗಬಹುದಾದವು; ಪುಸ್ತಕಗಳು ಹಲವು

ಭಾಗಗಳಾಗಬಹುದಾದವು. ಹೀಗಾಗಿ ಹಲವು ಸಾವಿರ ಪುಟಗಳ ಸಾಹಿತ್ಯಸರದಾರರು ಅವರು. ಕೆಲವು ಪ್ರಕಟವಾಗಿವೆ, ಇನ್ನು ಕೆಲವು ಹಸ್ತಪ್ರತಿರೂಪದಲ್ಲಿವೆ.

ಆಚಾರ್ಯರ ಕೃತಿಸಮಸ್ತವನ್ನೂ ವಿಮರ್ಶೆಯ ತಕ್ಕಡಿಯಲ್ಲಿಟ್ಟು ತೂಗಿದರೆ, ಗ್ರಂಥಸಂಪಾದನೆಯ ಕ್ಷೇತ್ರಕ್ಕೆ ಅವರ ಕಾಣಿಕೆ ದೊಡ್ಡದು ಎನ್ನುವ ಸತ್ಯ ಹೊರಪಡುತ್ತದೆ. ಅವರು ವೃತ್ತಿಜೀವನವನ್ನು ಆರಂಭಿಸಿದ್ದು ಮೈಸೂರಿನ ಪ್ರಾಚ್ಯ ಕೋಶಾಗಾರದಲ್ಲಿ ಪಂಡಿತರಾಗಿ, ಗ್ರಂಥಸಂಪಾದಕರಾಗಿ. ಅಲ್ಲಿ ಅವರಿಗೆ ಎಂ.ಎಸ್. ಬಸವಲಿಂಗಯ್ಯ, ಎಚ್. ಆರ್. ರಂಗಸ್ವಾಮಿ ಅಯ್ಯಂಗಾರ್ ಅವರ ಮಾರ್ಗದರ್ಶನ ದೊರೆಯಿತು. ಹಳ್ಳಿಹಳ್ಳಿಗಳನ್ನು ಸುತ್ತಿ ಪ್ರಾಚೀನ ಹಸ್ತಪ್ರತಿಗಳನ್ನು ಸಂಗ್ರಹಿಸಿದರು; ತಾಳೆಯೋಲೆಗಳನ್ನು ಓದುವ ಜಾಣ್ಮೆಯನ್ನು ಕಲಿತರು. ನಾನಾ ಸ್ಥಳಗಳ ಹಸ್ತಪ್ರತಿಭಂಡಾರಗಳೊಂದಿಗೆ ಒಡನಾಟ ಹೆಚ್ಚಿದಂತೆಲ್ಲ ಗ್ರಂಥ ಸಂಪಾದನೆ ಅವರಿಗೆ ಆಪ್ತವಾದ ಅಧ್ಯಯನ ವಿಷಯವಾಯಿತು, ಹವ್ಯಾಸವಾಯಿತು. ಮೈಸೂರಿನ ಪ್ರಾಚ್ಯ ಕೋಶಾಗಾರದ ಸಲುವಾಗಿ ಹಸ್ತಪ್ರತಿಗಳನ್ನು ಹುಡುಕಿ ತರಲು ಪ್ರವಾಸ ಹೊರಡುವುದು ಅಲ್ಲಲ್ಲಿಯ ಮಠಮಾನ್ಯಗಳ ಹಾಗೂ ಖಾಸಗಿವ್ಯಕ್ತಿಗಳ ಹಸ್ತಪ್ರತಿಗಳ ಪರಿಚಯವನ್ನು ಹತ್ತಿರದಿಂದ ಪಡೆಯಲು ಅವಕಾಶ ಮಾಡಿಕೊಟ್ಟಿತು. ಹಾಗೆ ತಂದವನ್ನು, ಹಾಗೆಯೇ ಮುದ್ರಿತವಾದವನ್ನು ಸೂಚಿಬದ್ಧಗೊಳಿಸುವಲ್ಲಿಯೂ ಅವರು ಉತ್ಸಾಹಿಸಿದರು (ಪ್ರ.ಕ. ೨೧-೧, ೨, ೪; ೨೨-೧). ತಮ್ಮ ಇಂಥ ಒಂದು ಪ್ರವಾಸವನ್ನು, ದಕ್ಷಿಣ ಕನ್ನಡ ಜಿಲ್ಲೆಯ ಕಡೆಯದನ್ನು, ಈಚೆಗೆ ಅವರು ಬರಹವೊಂದರಲ್ಲಿ ನಿರೂಪಿಸಿದ್ದಾರೆ (ಲೋಚನ ೩-೧, ೧೯೮೫). ಈ ಅನುಭವ ಸ್ವಾರಸ್ಯಕರವಾಗಿದ್ದು, ಅದು ಅವರ ವಾಗ್ಮಿತೆಗೆ, ಜೈನಸಾಹಿತ್ಯಪರಿಣತಿಗೆ, ಶ್ರಮ ಶ್ರದ್ಧೆ ನಿಷ್ಠೆಗಳಿಗೆ ಒಂದು ಆಧಾರಸಾಕ್ಷ್ಯವೆನ್ನುವಂತಿದೆ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಗ್ರಂಥಸಂಪಾದನೆ ಪಠ್ಯವಾಗಿ ನಿಯಮನ ಗೊಳ್ಳುವುದಕ್ಕೆ (೧೯೬೧-೬೨) ಹಲವು ವರ್ಷಗಳ ಹಿಂದೆಯೇ ಕನ್ನಡ ಗ್ರಂಥ ಸಂಪಾದನೆಯ ವಿಧಿ ವಿಧಾನಗಳನ್ನು ವಿಮರ್ಶಿಸಿ ಅವರು ಒಂದು ಸಂಶೋಧನಾತ್ಮಕ ಲೇಖನವನ್ನು 'ಕನ್ನಡ ಗ್ರಂಥಗಳ ಸಂಪಾದನೆ ಅಥವಾ ಪರಿಷ್ಕರಣ' ಎಂಬ ಹೆಸರಿನಿಂದ ಬರೆದು ಪ್ರಕಟಿಸಿದ್ದರು (ಪ್ರ.ಕ. ೩೧-೨, ೧೯೪೯). ಈ ವಿದ್ವತ್ಪೂರ್ಣವಾದ ಲೇಖನದಲ್ಲಿ ಸಂಪಾದನೆಯ ವಿಧಿ ವಿಧಾನಗಳನ್ನು ಕಾವ್ಯೋದಾಹರಣೆಗಳ ಮೂಲಕವಾಗಿ ನಿರೂಪಿಸಿದ್ದು, ಈ ವಿಷಯದಲ್ಲಿ ಅವರ ಸಹಪಾಠಿಗಳೂ ಸಮಾನಧರ್ಮಿಗಳೂ ಆದ ಡಿ.ಎಲ್. ನರಸಿಂಹಾಚಾರ್ಯರ ಅಧ್ಯಯನ ಶೋಧನಗಳ ಪ್ರಯೋಜನವನ್ನು ಅವರು ಪಡೆದುಕೊಂಡಿರುವುದು ಸ್ಪಷ್ಟವಾಗಿಯೇ ಇದೆ. ಕುಮಾರವ್ಯಾಸ ಭಾರತದ ಪರಿಷ್ಕರಣ ಕರ್ತರು ಅಗತ್ಯವಾದ ಗಮನಿಸಬೇಕಾದ ಕೆಲವು ಅಮೂಲ್ಯಸೂಚನೆಗಳೂ ಹಸ್ತಪ್ರತಿ ಭಂಡಾರಗಳ ಒಂದು ಪಟ್ಟಿಯೂ ಇಲ್ಲಿ ಬಂದಿರುವುದು ವಿಶೇಷವಾಗಿ ಗಮನಿಸತಕ್ಕುದಾಗಿದೆ.

ಆಚಾರ್ಯರು ಹಸ್ತಪ್ರತಿಗಳ ಅಧ್ಯಯನದ ಪ್ರತ್ಯಕ್ಷ ಅನುಭವವಿದ್ದವರಾದ ಕಾರಣ, ಪ್ರಾಚೀನ ಕವಿ ಕಾವ್ಯಗಳ ಸಂಪಾದಿತ ಮುದ್ರಣಗಳನ್ನು ವಿಮರ್ಶಿಸುವಾಗ ಈ ಅನುಭವವನ್ನು ಅವರು ಚೆನ್ನಾಗಿ

ಬಳಸಿಕೊಂಡಿದ್ದಾರೆ. ಪ್ರ.ಕ.ದಲ್ಲಿ ಪ್ರಕಟವಾಗಿರುವ ಆದಿಪುರಾಣ, ವರ್ಧಮಾನ ಪುರಾಣ ಮತ್ತು-ಖಗೇಂದ್ರಮಣಿದರ್ಪಣಗಳ ವಿಮರ್ಶೆಗಳಲ್ಲಿ ಇದನ್ನು ಗಮನಿಸಬಹುದಾಗಿದೆ. ಆಯಾ ಗ್ರಂಥಸಂಪಾದಕರು ಅನುಸರಿಸಿದ ಸಂಪಾದನ ವಿಧಾನಗಳನ್ನು ಅವರು ವಿಮರ್ಶಿಸುತ್ತಾರೆ. ಹಸ್ತಪ್ರತಿ ಲಭ್ಯತೆಯ ವಿವರಗಳನ್ನು ಕೊಟ್ಟು ಅವನ್ನು ವಿಮರ್ಶಿಸುತ್ತಾರೆ; ಹಸ್ತಪ್ರತಿ ಲಭ್ಯತೆಯ ವಿವರಗಳನ್ನು ಕೊಟ್ಟು ಅವನ್ನು ಬಳಸಿಕೊಳ್ಳಬಹುದಾಗಿದ್ದ ಸಾಧ್ಯತೆಯನ್ನು ಚರ್ಚಿಸುತ್ತಾರೆ. ಪಾಠನಿಷ್ಕರ್ಷೆಯಲ್ಲಿ ಪಾಠಭೇದಗಳ ಅವಲಂಬನೆ, ಭಾಷೆ ಶೈಲಿ ಛಂದಸ್ಸುಗಳ ಸಹಾಯ ಇವನ್ನೆಲ್ಲ ಸಯುಕ್ತಿಕವಾಗಿ ನಿರ್ವೇಕಿಸುತ್ತಾರೆ. ಈ ಸಂಗತಿಗಳನ್ನು ಗಮನಿಸಿದಾಗ ಅವರಿಗೆ ಈ ಕ್ಷೇತ್ರದ ಸೌಲಭ್ಯ ಅಧಿಕಾರಗಳು ಎಷ್ಟರಮಟ್ಟಿಗೆ ಇದ್ದುವೆಂಬುದನ್ನು ತಿಳಿಯಲು ನಮಗೆ ಅವಕಾಶವಾಗುತ್ತದೆ.

ಗ್ರಂಥಸಂಪಾದನೆಯ ವಿಧಿ ವಿಧಾನಗಳನ್ನು ಪರಿಚಯಿಸಿಕೊಂಡು ಆಚಾರ್ಯರು ಸಂಪಾದಿಸಿದ ಪ್ರಮುಖವಾದ ಗ್ರಂಥಗಳು ಪಂಡಿತ ಮನ್ನಣೆಯನ್ನೂ ಅಭ್ಯಾಸಿಗಳ ಆದರವನ್ನೂ ಗಳಿಸಿವೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯ ಕೋಶಾಗಾರ ಹಾಕಿಕೊಂಡ ಯೋಜನೆಯ ಅನ್ವಯ ಕುಮಾರವ್ಯಾಸಭಾರತದ ಪರ್ವಗಳು 'ಕರ್ಣಾಟಕ ಮಹಾಭಾರತ'ದ ಭಾಗಗಳಾಗಿ ೧೯೧೨ರಿಂದ ಒಂದು ರೀತಿಯಲ್ಲಿ ವ್ಯವಸ್ಥಿತವಾಗಿ ಬರತೊಡಗಿ, ಯುದ್ಧಪಂಚಕದ ಜವಾಬ್ದಾರಿಯನ್ನು ಪ್ರಾಚ್ಯಕೋಶಾಗಾರದ ಕಾವ್ಯಸಮಿತಿ ಸಂಪಾದಕಮಂಡಲಿಯೊಂದಕ್ಕೆ ಒಪ್ಪಿಸಿತು. ಆದಿಪಂಚಕದ ಸಂಪಾದನೆ ೧೯೨೨ಕ್ಕೆ ಮುಗಿದಿದ್ದು, ಈಗ ಯುದ್ಧಪಂಚಕದ ಕೆಲಸವನ್ನು ಕೈಗೆತ್ತಿಕೊಂಡ ಮೇಲೆ ಭೀಷ್ಮಪರ್ವದ ಸಂಪಾದನೆಯ(ಸಂ. ಡಿ. ಎಲ್. ನರಸಿಂಹಾಚಾರ್, ೧೯೩೩) ಅನಂತರದಲ್ಲಿ ದ್ರೋಣ, ಕರ್ಣ ಮತ್ತು ಶಲ್ಯ ಗದಾಪರ್ವಗಳನ್ನು ಅನಂತರಂಗಾಚಾರ್ಯರೊಬ್ಬರೇ ನಿರ್ವಹಿಸಿದರು (೧೯೩೬, ೧೯೪೦, ೧೯೪೩). ಇದು ಕಾರ್ಯ ಸಮಿತಿಗೆ ಆಚಾರ್ಯರ ವಿಷಯದಲ್ಲಿದ್ದ ವಿಶ್ವಾಸವನ್ನು ಅವರ ಕಾರ್ಯಕ್ಷಮತೆಯ ಬಗೆಗೆ ಇದ್ದ ಭರವಸೆಯನ್ನು ಎತ್ತಿತೋರಿಸುವ ಸಂಗತಿಯಾಗಿದೆ. ಈಚೆಗೆ ಈ ಪರ್ವಗಳು ಹಲವು ಪುನರ್ಮುದ್ರಣಗಳನ್ನು ಕಂಡಿವೆ. ಇವುಗಳಲ್ಲಿ ಪಾಠಶೋಧನೆ ಸಂಕಲನಕಾರ್ಯಗಳು ಬಲುಮಟ್ಟಿಗೆ ತೃಪ್ತಿಕರವಾಗಿ ನಡೆದಿವೆಯೆಂದು ಹೇಳಬಹುದಾಗಿದೆ.

ಪ್ರಾಚೀನ ಕಾವ್ಯಗಳ ಸಂಪಾದನೆಯಲ್ಲಿ ಮಲ್ಲಿಕಾರ್ಜುನನ 'ಸೂಕ್ತಿ ಸುಧಾರ್ಣವ' ವೆಂಬ ಕಾವ್ಯಸಂಕಲನದ ಸಂಪಾದನೆ (೧೯೪೭) ಆಚಾರ್ಯರಿಗೆ ತಂದುಕೊಟ್ಟ ಕೀರ್ತಿ ಮಿಗಿಲಾದುದು. ಈ ಶ್ರೇಷ್ಠವಾದ ಕಾವ್ಯಸಂಕಲನ ಪ್ರಾಚೀನ ಕನ್ನಡ ಕಾವ್ಯಸಾಹಿತ್ಯದ ಸಾರವತ್ತಾದ ಭಾಗಗಳನ್ನು ಒಳಗೊಂಡ ಒಂದು ರತ್ನಸಂಪುಟ; ಅಲ್ಲದೆ ನಷ್ಟವಾಗಿರುವ ಪ್ರಾಚೀನ ಸಾಹಿತ್ಯದ ಕೆಲವಾದರೂ ಕೃತಿಭಾಗಗಳ ಉಪಲಬ್ಧತೆಗೆ, ಕವಿಗಳ ಇತಿವೃತ್ತದ ಶೋಧನೆಗೆ ಸಹಾಯ ಮಾಡುವ ಕೃತಿ. ಇದನ್ನು ಸಂಪಾದನೆಗೆ ಎತ್ತಿಕೊಂಡದ್ದು ಆಚಾರ್ಯರ ಅದೃಷ್ಟವೆಂದೇ ಹೇಳಬೇಕು. ೭ ಹಸ್ತಪ್ರತಿಗಳ ಆಧಾರದಿಂದ ಸಂಪಾದಿಸಿರುವ ಈ ಕೃತಿಯ ಪ್ರಸ್ತಾವನೆಯಲ್ಲಿ ಉದ್ಧೃತ ಕೃತಿಭಾಗಗಳ ಆಕರಗಳ ವಿಚಾರವನ್ನೂ ಅನುಪಲಬ್ಧ ಸಾಹಿತ್ಯದ ವ್ಯಾಪ್ತಿ ವಿಸ್ತಾರ ವಿಶೇಷತೆಗಳನ್ನೂ ಆಳವಾಗಿ ವಿಮರ್ಶಿಸಿದ್ದಾರೆ. ಕರ್ನಾಟಕದ

ಇತಿಹಾಸ, ಕನ್ನಡ ಸಾಹಿತ್ಯಚರಿತ್ರೆ ಇವುಗಳಿಗೆ 'ಸೂಕ್ತಿಸುಧಾರ್ಣವ'ದ ಕೊಡುಗೆ ಅನನ್ಯವಾದುದು ಎಂಬುದನ್ನು ಸಮರ್ಥವಾಗಿ ಎತ್ತಿಹೇಳಿದ್ದಾರೆ. ಕರ್ತೃ ಜೈನನೇ ಬ್ರಾಹ್ಮಣನೇ ಎಂಬ ವಿಚಾರ ಬಹುಕಾಲದಿಂದ ವಾದಗ್ರಸ್ತವಾಗಿದೆ. ಈ ಬಗ್ಗೆ ಕವಿಚರಿತೆಕಾರರು, ಎ. ವೆಂಕಟಸುಬ್ಬಯ್ಯನವರು, ಎಂ. ಎಚ್. ಕೃಷ್ಣ ಮತ್ತು ಎ. ಪಿ. ಚೌಗಲೆ ಮೊದಲಾದವರು ಮಾಡಿರುವ ವಿಚಾರಗಳನ್ನು ಆಚಾರ್ಯರು ಸವಿಮರ್ಶವಾಗಿ ಪರಿಶೀಲಿಸಿದ್ದು, ಈ ಕವಿಯ ಮತವಿಚಾರದಲ್ಲಿ ಅವರ ವಾದ ಹೊಸ ಪೀಳಿಗೆಯ ವಿದ್ವಾಂಸರಿಗೆ ಸಮ್ಮತವಾಗಿರುವ ಹಾಗೆ ತೋರುತ್ತದೆ.

'ಸೂಕ್ತಿ ಸುಧಾರ್ಣವ'ದ ಸಂಪಾದನೆಯ ಕಾಲದಲ್ಲಿ ಗಳಿಸಿದ್ದ ಅನುಭವ ಅವರಿಗೆ 'ಕಾವ್ಯಸಾರ'ದ ಸಂಪಾದನೆಯಲ್ಲಿಯೂ (೧೯೭೩)ಸಹಾಯಕ್ಕೆ ಬಂದಿದೆ. ಇಲ್ಲಿ ಕವಿಕಾವ್ಯ ವಿಚಾರದ ವಿಮರ್ಶೆಗಿಂತ ಆಯೆರಡು ರಚನೆಗಳನ್ನೂ ಒಳಗೊಂಡ ಹಾಗೆ 'ಕವಿರಾಜಮಾರ್ಗ' ಮೊದಲಾದ ಲಕ್ಷಣಗ್ರಂಥಗಳಲ್ಲಿಯೂ ಅಭಿನವವಾದಿ ವಿದ್ಯಾನಂದನ ಸಂಕಲನದಲ್ಲಿಯೂ ಆಕರಗಳು ದೊರೆಯದ ಪದ್ಯಗಳು ಯಾವುವು, ಎಷ್ಟು ಎಂಬ ಗಣಿತದ ಕಡೆಗೆ ಅವರ ಲಕ್ಷ್ಯ ಹೋಗಿದೆ. ಹಲವು ಪುಟಗಳವರೆಗೆ ಸಾಗುವ ಈ ಅನುಬಂಧಶ್ರೇಣಿ ಈ ತೆರನ ಕೆಲಸದಲ್ಲಿ ಅವರ ದೃಕ್ಪಥವನ್ನು ನಿಚ್ಚಟವಾಗಿ ಪ್ರಕಟಿಸಿದೆ. ಸೂಚಿಗಳ ಮೂಲಕ ಸುಮಾರು ೪೦೦೦ ಪದ್ಯಗಳಿಗೆ ಆಕರ ತಿಳಿಯದು ಎನ್ನುವುದು ವಿದಿತವಾಗಿ, ಪ್ರಾಚೀನ ಕನ್ನಡ ಸಾಹಿತ್ಯ ಎಷ್ಟನ್ನು ಕಳೆದುಕೊಂಡಿದೆ ಎನ್ನುವ ಒಂದು ಅಂದಾಜು ನಮಗೆ ಸಿಕ್ಕಿದಂತಾಗಿ, ಅದು ನಮ್ಮ ವಿಷಾದವನ್ನು ಹೆಚ್ಚಿಸುತ್ತದೆ.

ಆದರೆ ದಿಟವಾಗಿ ಅಜ್ಞಾತಕರ್ತೃಕವಾದ, ಕಾವ್ಯಸಾರ ರಚಿತವಾಗಿರುವುದು ಮಲ್ಲಕೃತವೆನ್ನುವ ಆಚಾರ್ಯರು 'ಸೂಕ್ತಿ ಸುಧಾರ್ಣವ'ದ ಆಧಾರದ ಮೇಲೆ; ಅಷ್ಟು ಮಾತ್ರವಲ್ಲ, 'ಸೂಕ್ತಿ ಸುಧಾರ್ಣವ'ದ ವಿಸ್ತೃತ ಪಾಠವೇ ಈ 'ಕಾವ್ಯಸಾರ'. ಆದರೆ ಈ ಎರಡೂ ಭಿನ್ನಕರ್ತೃಕಗಳೆಂದು ಆಚಾರ್ಯರು ಭಾವಿಸಿರುವುದು ಒಂದು ನ್ಯೂನತೆಯೇ ಸರಿ. ಇದು ಏನಿದ್ದರೂ ಈ ವಿಸ್ತೃತಪಾಠ ಸಹ ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ಪರಾಮರ್ಶಯೋಗ್ಯವಾದ ರಚನೆಯೆನ್ನುವುದರಲ್ಲಿ ಸಂಶಯವಿಲ್ಲ.

'ಸೂಕ್ತಿಸುಧಾರ್ಣವ', 'ಕಾವ್ಯಸಾರ' ಈ ಕಾವ್ಯಸಂಕಲನಗಳ ಆಕರಶೋಧ, ಇಲ್ಲಿಯ ಗಣಿತ ಗುಣಿತಗಳ ಕ್ರೋಢೀಕರಣ 'ಕನ್ನಡ ಚಂಪೂಕಾವ್ಯಗಳ ಪದ್ಯಾನುಕ್ರಮಣಿಕೆ'ಯ ಸಿದ್ಧತೆಗೆ ಅವರನ್ನು ಪ್ರಚೋದಿಸಿದಂತೆ ತೋರುತ್ತದೆ. ಈ ಕೃತಿ ೬೪೦ ವಿಶಾಲ ಪುಟಗಳಲ್ಲಿ (Demy quar to) ಮುದ್ರಿತವಾಗಿರುವ ಒಂದು ಮಹಾನುಕ್ರಮಣಿ. ೪೫ ಚಂಪೂಕಾವ್ಯಗಳ ಪದ್ಯಗಳಿಗೆ ಇಲ್ಲಿ ಅಕಾರಾದಿಯಿದೆ. ಇದಕ್ಕಾಗಿ ಒಂದು ಲಕ್ಷ ಪಟ್ಟಿಕೆಗಳನ್ನು ಮಾಡಿಕೊಳ್ಳಲಾಯಿತಂತೆ. ಪಂಪನಿಂದ ಷಡಕ್ಷರಿಯ ವರೆಗೆ ಹುಟ್ಟಿದ ಚಂಪೂಗ್ರಂಥಗಳನ್ನು ಇಲ್ಲಿ ಗಮನಿಸಿದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಉದಾರತೆಯಿಂದ ಪ್ರಕಟವಾಗಿರುವ(೧೯೭೭) ಈ ಗ್ರಂಥ ಪ್ರಸಾರಾಂಗದ ನಿರ್ದೇಶಕರು ಹೇಳುವಂತೆ, "ಅಸಾಧ್ಯವಾದ ದೈಹಿಕ ಮತ್ತು ಮಾನಸಿಕ ಶ್ರಮವನ್ನು ಒಳಕೊಳ್ಳುವ ಕೆಲಸ; ಶ್ರದ್ಧೆ ತಾಳ್ಮೆ ಶ್ರಮಗಳಿಂದ ಮಾತ್ರ ಲಭಿಸಬಹುದಾದ ಕೆಲಸ".

ಈ ತೆರನ ಅನುಕ್ರಮಣಿಕೆಗಳ ಬಗೆಗೆ ಆಚಾರ್ಯರೇ ಬರೆದ ಒಂದು ಉಪಯುಕ್ತವಾದ ಪ್ರಸ್ತಾವನೆಯೂ ಇಲ್ಲಿ ಉಂಟು. ತಮ್ಮ ವಿದ್ಯಾಗುರುಗಳಾದ ಎ. ಆರ್. ಕೃಷ್ಣಶಾಸ್ತ್ರಿಗಳಿಗೆ ಗ್ರಂಥವನ್ನು ಸಮರ್ಪಿಸಿದ್ದಾರೆ. ಶಾಸ್ತ್ರಿಗಳು ಆಚಾರ್ಯರನ್ನು ತಮ್ಮ ಚಿರಂಜೀವಿಯೆಂದೇ ತಿಳಿದು ವ್ಯವಹರಿಸುತ್ತಿದ್ದುದು ನನಗೆ ತಿಳಿದಿದೆ. ಆಸಕ್ತರು ತಮಗೆ ಬೇಕಾದ ಗ್ರಂಥದ ಬೇಕಾದ ಪದ್ಯವನ್ನು ಬೇಕಾದ ಹೊತ್ತಿನಲ್ಲಿ ನೆನಪಿಗೆ ತಂದುಕೊಳ್ಳಲು ಸಹಾಯ ಮಾಡುವ ಈ ಗ್ರಂಥ ಸದೃಶ ಪದ್ಯಗಳ ತುಲನೆಗೆ, ಆಕರಗಳ ಖಚಿತತೆಗೆ ಸಹ ಒದಗುವಂಥದು. 'ಶಬ್ದಮಣಿದರ್ಪಣ' ದ ನಾಂದೀ ಪದ್ಯದ ವ್ಯಾಕರಣಾಂಶವನ್ನು ವಿಮರ್ಶಿಸುವಾಗ ನನಗೆ ಈ ಗ್ರಂಥದಿಂದ ಆದ ಪ್ರಯೋಜನ ಅನನ್ಯವಾದುದು. ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದಿಂದ ದೊರೆತ ನೆರವಿನಿಂದ ನಾಲ್ಕು ವರ್ಷಗಳ ಕಾಲ ಶ್ರಮಿಸಿ ಈ ಕೆಲಸವನ್ನು ಆಚಾರ್ಯರು ಪೂರೈಸಿದ್ದಾರೆ, (೧೯೬೪-೬೮); ಅವರಿಗೆ ಕುಟುಂಬವರ್ಗದ ನೆರವು ಸಹ ದೊರೆತಿದೆ.

ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಲು ಉದ್ದೇಶಿಸಿದ್ದ ಚಾವುಂಡರಾಯ ಪುರಾಣ ಆದಿಪುರಾಣಕ್ಕೆ ನಿಂತುಹೋಗಿತ್ತು (ಕ.ಸಾ.ಪ. ಸಂ. ೨,೩). ಅದನ್ನು ಆಚಾರ್ಯರು ಮುಂದುವರಿಸಲು ನಿಶ್ಚಯಿಸಿ, ಅಜಿತಪುರಾಣದಿಂದ ತೊಡಗಿ ಶಾಂತಿಪುರಾಣದವರೆಗೆ ಪಾಠಾಂತರಗಳೊಂದಿಗೆ ಸಂಪಾದಿಸಿ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಕ್ರಮವಾಗಿ ಪ್ರಕಟಿಸಿದರು (ಸಂ. ೨೬-೧; ೨೭-೧, ೨; ೨೯ - ೧, ೨; ೧೯೪೧ ಜೂನ್ - ೧೯೪೪ ಮಾರ್ಚ್-ಜೂನ್). ಪಾಠಾಂತರ ಸಂಕಲನ ನಡೆದಿದ್ದೂ ಗ್ರಂಥಸಂಪಾದನ ಸಾಮಗ್ರಿಯ ವಿವರಗಳನ್ನು ಏಕೆ ಕೊಡಲಾಗಿಲ್ಲವೋ ತಿಳಿಯದು; ಅಲ್ಲದೆ ಈ ಗ್ರಂಥದ ಸಂಪಾದನೆಯನ್ನು ಮುಂದುವರಿಸಿ ಏಕೆ ಪೂರೈಸಿಲ್ಲವೋ ತಿಳಿಯದು. ಅದು ಸಾಧ್ಯವಾಗಿದ್ದರೆ, ಈ ಗ್ರಂಥದ ಸಂಪಾದಕರಾಗಿ ಅದರ ಕರ್ತೃವಿಗೆ ಹಾಗೂ ಕನ್ನಡ ಸಾಹಿತ್ಯಕ್ಕೆ ಬಹು ದೊಡ್ಡಸೇವೆಯನ್ನು ಅವರು ಸಲ್ಲಿಸಿದಂತಾಗುತ್ತಿತ್ತು; ಅವರೂ ಹೆಚ್ಚು ಕೀರ್ತಿಶಾಲಿಗಳಾಗುತ್ತಿದ್ದರು. ಈಚೆಗೆ ಪ್ರಕಟವಾಗಿರುವ ಈ ಗ್ರಂಥದ ಯಾವುದೇ ಪರಿಷ್ಕರಣವೂ ತೃಪ್ತಿಕರವಾಗಿಲ್ಲವೆಂದು ಇಲ್ಲಿ ವಿಷಾದದಿಂದ ಹೇಳಬೇಕಾಗಿದೆ. ಈಗಲೂ ಆಚಾರ್ಯರು ಮಾಡಿ ಬಿಟ್ಟಲ್ಲಿಂದ ಮುಂದಕ್ಕೆ ಯಾರಾದರೂ ಸಮರ್ಥರು ಈ ಕೆಲಸವನ್ನು ಕೈಗೆತ್ತಿಕೊಂಡು ಪೂರೈಸಬಹುದಾಗಿದೆ.

ಹೀಗೆಯೇ ೨ನೆಯ ಚಾವುಂಡರಾಯನ 'ಲೋಕೋಪಕಾರ'ದ ಸಂಪಾದನಕಾರ್ಯ ಸಹ ಪ್ರಥಮಾಶ್ವಾಸಕ್ಕೆ ನಿಂತುಹೋಗಿದೆ (ಪ್ರ.ಕ. ೩೧-೧, ೧೯೪೯). ಹಳಗನ್ನಡ ನಡುಗನ್ನಡ ಕವಿಗಳ ಚರಿತ್ರೆ, ಕಾವ್ಯಗಳ ಪರಿಚಯ ಮತ್ತು ವಿಮರ್ಶೆಗಳ ವಿಷಯದಲ್ಲಿ ಆಚಾರ್ಯರಿಗೆ ಎಂದಿನಿಂದಲೂ ಬೆಂಬಿಡದ ನಚ್ಚು. ಈ ತೆರನ ಅವರ ಬರಹಗಳು ಪ್ರಬುದ್ಧ ಕರ್ಣಾಟಕ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಕನ್ನಡ ನುಡಿ ಈ ಕೆಲವು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಅವರು ಚಿಕ್ಕ ಪ್ರಾಯದಲ್ಲೇ ಬರೆದು ಪರಿಷತ್ಪತ್ರಿಕೆಯಲ್ಲಿ ಪ್ರಕಟಿಸಿದ 'ಅಜಿತಪುರಾಣ'ದ ಮತ್ತು ಪಂಪ ಕವಿಯ ಮೇಲಿನ ವಿಮರ್ಶ ಪ್ರಬಂಧಗಳು (೧೫-೨, ೧೯೩೦; ೧೫-೪ ೧೯೩೧) ವಸ್ತು ನಿರ್ವಹಣೆ ಮತ್ತು ಲೇಖನ

ಶೈಲಿಯಲ್ಲಿ ಒಂದು ಪ್ರೌಢಿಮೆಯನ್ನೂ ಸಹೃದಯತೆಯನ್ನೂ ಪ್ರಕಟಿಸುತ್ತವೆ. ಅಲ್ಲದೆ ವಿಮರ್ಶಕರಾಗಿ ಒಂದು ಸೂಕ್ಷ್ಮವಾದ ತುಲನಾತ್ಮಕ ದೃಷ್ಟಿ, ದಾಕ್ಷಿಣ್ಯಕ್ಕೆ ಕಟ್ಟುಬೀಳದ ಧೈರ್ಯವಾದ ನಿಲವು ನಿರ್ಣಯಗಳು ಇವನ್ನೂ ಅಲ್ಲಿ ಕಾಣಬಹುದು. ಈ ವ್ಯಾಪ್ತಿಯ ವಿಚಾರ ವಿಮರ್ಶೆಗಳನ್ನು ಅವರು ಮುಂದುವರಿಸದೆ ಹೋದುದು ಏಕೋ ತಿಳಿಯದು.

ಆಚಾರ್ಯರು ಪ್ರಾಚ್ಯಕೋಶಾಗಾರದ ಪಂಡಿತರಾಗಿ ಕೈ ಬರಹದ ಗ್ರಂಥಗಳ ಸಂಗ್ರಹಕ್ಕೆ ಸುತ್ತಾಡಿದಾಗ, ಇತರರೂ ಹಾಗೆಯೇ ಸುತ್ತಾಡಿದಾಗ, ಅಪ್ರಕಟಿತ ಗ್ರಂಥಗಳು ಗೋಚರವಾದವು. 'ಗುರುಭಕ್ತಚಾರಿತ್ರ (ವಿರುಪರಾಜ), ' ಅನಂತನಾಥ ಚರಿತೆ' (ಚಿಕ್ಕಪದ್ಮಣ ಸೆಟ್ಟಿ), ' ನವಮೋಹನ ತರಂಗಿಣಿ' (ಕೋಳೂರು ಶಂಕರ), 'ರಸಿಕ ಮನೋರಂಜನ ವಿಲಾಸ' (ಕುಂಡಲಗಿರಿ) ಅಂಥವುಗಳಲ್ಲಿ ಕೆಲವು. ಆಚಾರ್ಯರು ಇವನ್ನು ಓದಿ ಆಯಾ ಕಾವ್ಯಗಳನ್ನು ಕವಿಚರಿತೆಕಾರರ ಮಾದರಿಯಲ್ಲಿ ಉದಾಹರಣೆಗಳೊಂದಿಗೆ ಸರಳವಾಗಿ ಪರಿಚಯ ಮಾಡಿಕೊಟ್ಟಿದ್ದಾರೆ. (ಪ್ರ. ಕ. ೧೪-೩, ೨೧-೨, ೪ , ೨೪-೧). ಇಲ್ಲಿ ವಸ್ತುವಿವರಣೆ, ಕವಿವಿಚಾರ, ಭಾಷಾಶೈಲಿಗಳು, ಕಾವ್ಯಗುಣ ಸಾಮಾನ್ಯ ಪರಿಚಯಕ್ಕೆ ಸಾಕಾಗುವಮಟ್ಟಿಗೆ ಸಂಕ್ಷಿಪ್ತವಾಗಿ ನಿರೂಪಿತವಾಗಿವೆ.

ಇಂಥ ಕಡೆ ಆಚಾರ್ಯರು ಕಣ್ಣುಕಟ್ಟಿದ ಕುದುರೆಯ ದೃಷ್ಟಿಯಲ್ಲಿ ವಸ್ತುವಿವೇಚನೆ ಮಾಡುವವರಲ್ಲ ಎನ್ನುವುದಕ್ಕೆ 'ಗುರುಭಕ್ತಚಾರಿತ್ರ'ದ ಅವರ ಲೇಖನವನ್ನೇ ನೋಡಬಹುದು. ಕರ್ಣಾಟಕ ಕವಿಚರಿತೆಯ ಮೂಲಕ 'ತ್ರಿಭುವನ ತಿಲಕ'ವೊಂದೇ ವಿರುಪರಾಜನ ರಚನೆಯೆಂದು ತಿಳಿದುಬಂದಿತ್ತು. ಆಚಾರ್ಯರು ಕವಿಯ ವಂಶಪರಂಪರೆಯ ಆಧಾರದ ಮೇಲೆ ಎರಡು ರಚನೆಗಳೂ ಒಬ್ಬನೇ ಕವಿಯದು ಎಂದು ತುಲನೆಮಾಡಿ ಗುರುತಿಸುತ್ತಾರೆ.

ಬೆಂಗಳೂರು ಆಕಾಶವಾಣಿಯಲ್ಲಿ ಕುಮಾರವ್ಯಾಸನ ವಿಷಯವಾಗಿ ಬಿತ್ತರಿಸಿದ ಒಂದು ಬಾನುಲಿ ಭಾಷಣವನ್ನು ಬಹುಶಃ ವಿಸ್ತರಿಸಿ ಒಂದು ವಿಮರ್ಶಲೇಖನವನ್ನು ಪ್ರಕಟಿಸಿದ್ದಾರೆ, ಆಚಾರ್ಯರು (ಪ್ರ.ಕ. ೪೪-೧) . ಕುಮಾರವ್ಯಾಸ ಭಾರತದ ಪರ್ವಗಳನ್ನು ಸಂಪಾದಿಸಿದ್ದ ಅವರಿಗೆ ಆ ಕಾವ್ಯದ ಒಳ್ಳೆಯ ಪರಿಚಯವಿದ್ದುದು ಸ್ವಾಭಾವಿಕವೇ. ಹೀಗಾಗಿ ಈ ಭಾಷಣದಲ್ಲಿ ಆ ಕಾವ್ಯದ ಮುಖ್ಯವಾದ ಘಟ್ಟಗಳನ್ನು ಗುರುತಿಸಿ, ಪಾತ್ರಗಳ ಸ್ವಭಾವವನ್ನು ವಿಶ್ಲೇಷಿಸಿ, ಭಾಷೆ ಶೈಲಿಗಳ ಸ್ವರೂಪವನ್ನು ವಿವರಿಸಿ ಒಟ್ಟಾರೆ ಒಂದು ಹದದಲ್ಲಿ ಆ ಕಾವ್ಯದ ಹಿರಿಮೆಯನ್ನು ತಮ್ಮ ಸಹೃದಯ ವಿಮರ್ಶೆಯ ಮೂಲಕ ಎತ್ತಿ ಹಿಡಿದಿದ್ದಾರೆ. ಗಾಢಾವಗಾಹನ ವಿಲ್ಲದಿರಬಹುದು; ಆದರೆ ಸಮಗ್ರತೆಯ ದೃಷ್ಟಿಯಿದೆ.

ಕವಿ ಕಾವ್ಯಗಳ ಸಂಬಂಧವಾಗಿ ಆಚಾರ್ಯರ ಕೆಲವು ಕಿರುಹೊತ್ತಗೆಗಳೂ ಇವೆ. ಪೊನ್ನನ ಮೇಲೆ ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಪ್ರಕಟವಾಗಿದೆ (೧೯೭೧). ಇಲ್ಲಿ ಆಚಾರ್ಯರ ತಮಿಳುಭಾಷಾಜ್ಞಾನ ಸಹಾಯಕ್ಕೆ ಬಂದಿರುವುದನ್ನು ತಮಿಳು ಶ್ರೀಪುರಾಣದ ಮೂಲ ಮತ್ತು ಅನುವಾದಗಳ ಸೇರ್ಪಡೆಯಿಂದ ತಿಳಿಯಬಹುದಾಗಿದೆ. ಹೀಗೆಯೇ ರನ್ನನ ಮೇಲೆ ಕೂಡ ಅವರ ಪುಸ್ತಕ ಬಂದಿದೆ.

ಬಿ.ಎಂ. ಶ್ರೀ ಅವರ ಆದ್ಯಶಿಷ್ಯರಾದುದರಿಂದ ಅವರ 'ಅಶ್ವತ್ಥಾಮನ್' ನಾಟಕದ ಪರಿಚಯಲೇಖನವನ್ನು ಹಿಂದೆಯೇ ಬರೆದಿದ್ದರು ( ಪ್ರ. ಕ. ೨೧-೨, ೧೯೪೦). ಈಚೆಗೆ ಅದನ್ನೇ ಸ್ವಲ್ಪ ಬೆಳೆಸಿ ಸಣ್ಣ ಪುಸ್ತಕ ಮಾಡಿದರು (೧೯೫೪). ಇಲ್ಲಿ 'ಆಕ್ಷೇಪಗಳ ಸಮಾಧಾನ' ಮೊದಲುಗೊಂಡು ಹಲವು ಮುಖಗಳಲ್ಲಿ ನಾಟಕದ ಪರಿಚಯವನ್ನು ಮಾಡಿಕೊಟ್ಟಿದೆ. ವಿ.ಸೀ. ಅವರೂ ಶ್ರೀ ಅವರ ಶಿಷ್ಯರಲ್ಲಿ ಆಪ್ತರಾಗಿದ್ದವರೇ; ಅವರು ಸಹ ಒಂದು ಪುಸ್ತಕವನ್ನು ಇನ್ನೂ ವ್ಯಾಪಕವಾದ ಭೂಮಿಕೆಯ ಮೇಲೆ ಬರೆದಿದ್ದಾರೆ. ಈ ವಿಮರ್ಶೆ ಹೆಚ್ಚು ಪ್ರೌಢವಾದುದು.

ಈಚೆಗೆ ಒಂದೇ ವರ್ಷದಲ್ಲಿ (೧೯೭೩) ಎರಡು ಹಳಗನ್ನಡ ಕಾವ್ಯಗಳನ್ನು ಸಂಪಾದಿಸಿ ಪ್ರಕಟಿಸಿದ್ದು ಅವರ ಸಾಹಸ, ಉದ್ಯೋಗಶೀಲತೆ ಯಾವ ಎತ್ತರದವು ಎಂಬುದನ್ನು ಸೂಚಿಸುತ್ತದೆ. ಆಗ್ಗೆ ಅವರು ಎಪ್ಪತ್ತರ ಹೊಸ್ತಿಲಿಗೆ ಬಂದಿದ್ದರು ಎಂಬುದನ್ನು ಇಲ್ಲಿ ಗಮನಿಸಬೇಕು.

ಇವುಗಳಲ್ಲಿ ಒಂದು ಬಿ. ಮಲ್ಲಪ್ಪನವರಿಂದ ಸಂಪಾದಿತವಾಗಿ ಬಹುಕಾಲದಿಂದ ಸಾಹಿತ್ಯಾಭ್ಯಾಸಿಗಳಿಗೆ ಅಲಭ್ಯವೆಂಬಂತೆ ಇದ್ದ ಕರ್ಣಾಟಕ ಕಾದಂಬರಿ (೧೮೯೨); ಇನ್ನೊಂದು ಎಸ್.ಜಿ. ನರಸಿಂಹಾಚಾರ್ - ಮಂ. ಆ. ರಾಮಾನುಜಯ್ಯಂಗಾರ್ ಅವರಿಂದ ಸಂಯುಕ್ತವಾಗಿ ಸಂಪಾದಿತವಾಗಿದ್ದ, ಹಾಗೆಯೇ ಅಭ್ಯಾಸಕ್ಕೆ ಅಲಭ್ಯವಾಗಿದ್ದ 'ಪಂಚತಂತ್ರ' (೧೮೯೮). ಇವೆರಡೂ ಬ್ರಾಹ್ಮಣಕವಿಗಳ ರಚನೆಗಳು, ಕಾವ್ಯಮೌಲ್ಯದ ದೃಷ್ಟಿಯಿಂದ ಉತ್ತಮಶ್ರೇಣಿಗೆ ಸೇರಿದವು. ಈ ಸಂಗತಿಯನ್ನು ಬಹುಶಃ ಮನಗಂಡೇ ಆಚಾರ್ಯರು ಇವನ್ನು ಸಂಪಾದಿಸಿ ಪ್ರಕಟಿಸಿರಬೇಕು. ಅಲ್ಲದೆ ಆ ಗ್ರಂಥಗಳು ಪ್ರಕಟವಾಗಿದ್ದ ರೀತಿಯಲ್ಲಿ ಅವುಗಳಿಗೆ ಪುನಃಸಂಪಾದನೆಯ ಚಿಕಿತ್ಸೆಯ ಆವಶ್ಯಕತೆಯೂ ಇದ್ದಿತು. ಹೀಗೆ ಮಾಡಿದ್ದರಿಂದಾಗಿ ಹೊಸ ಕಾಲದ ಅಗತ್ಯಗಳಿಗೆ ಅನುಗುಣವಾಗಿ ಪೀಠಿಕೆ, ಶಬ್ದಕೋಶ ಮುಂತಾದುವನ್ನು ಒಳಕೊಂಡು, ಕ್ರಮಬದ್ಧವಾದ ಪಾಠಸಂಕಲನ, ಸ್ವೀಕೃತಿ ಮತ್ತು ಪಾಠಭೇದನಿರ್ದೇಶನ ಇವನ್ನು ಅನ್ವಯಿಸಿ ಆ ಪ್ರಾಚೀನಕೃತಿಗಳನ್ನು ಪರಿಷ್ಕರಿಸಿ ಪ್ರಕಟಿಸುವುದು ಸಾಧ್ಯ ಎಂಬುದೂ ವಿದಿತವೇ ಇದೆ.

'ಕರ್ಣಾಟಕ ಕಾದಂಬರಿ' ಒಂದು ಒಳ್ಳೆಯ ಕಾವ್ಯವೇ ಆದರೂ ಅದರ ಹಸ್ತಪ್ರತಿಗಳ ಅನುಪಲಬ್ಧತೆ ಕಾರಣವಾಗಿ ಮಲ್ಲಪ್ಪನವರ ಆವೃತ್ತಿಯನ್ನೇ ಆಚಾರ್ಯರು ಆಧಾರ ಪ್ರತಿಯಾಗಿಟ್ಟುಕೊಂಡಿದ್ದಾರೆ. ಱ-ೞ ಅಕ್ಷರಗಳ ಶಬ್ದಗಳನ್ನು ಆ ರೂಪಗಳಿಗೆ ಮಾರ್ಪಡಿಸಿರುವುದು, ಅಕ್ಷರಸ್ಖಾಲಿತ್ಯಗಳನ್ನು ತಿದ್ದಿರುವುದು, ವೃತ್ತಕಂದಗಳನ್ನು ಚತುಷ್ಪದಿಗಳ ಆಕೃತಿಗೆ ತಂದಿರುವುದು, ಅಭ್ಯಾಸಕ್ಕೆ ಅನುಕೂಲವಾಗುವಂತೆ ದರ್ಪಣವೆಂಬ ಟೀಕೆ ಬರೆದಿರುವುದು, ಪದ್ಯಗಳನ್ನು ಸುಲಭವಾಗಿ ಗುರುತಿಸಲು ಅಕಾರಾದಿ ಕೊಟ್ಟಿರುವುದು ಇವೆಲ್ಲ ಮೇಲ್ಪಾಡುಗಳೇ ಆಗಿವೆ. ಆದರೆ 'ಕಾದಂಬರೀ ಸಂಗ್ರಹ'ದ ಸಂಪಾದಕರನ್ನು ಅನುಸರಿಸಿ ಪರಿಚ್ಛೇದಗಳನ್ನು ಶೀರ್ಷಿಕೆಗಳೊಂದಿಗೆ ತೋರಿಸಿರುವುದು ಸಮರ್ಥನೀಯವಲ್ಲ. ಪೀಠಿಕೆಗೆ ವಿವರಪುಷ್ಟಿಯಿಲ್ಲ.

ಈ ಮೇಲ್ಪಾಡುಗಳಿಂದ ಹಿಂದಿನ ಪರಿಷ್ಕರಣವನ್ನು ಇಲ್ಲಿ ಉತ್ತಮಪಡಿಸಿರುವುದು ನಿಜವೇ ಆದರೂ ರಚನೆಯ ಸಂಪಾದನೆ ಇನ್ನೂ ಹೆಚ್ಚಿನ ಪರಿಷ್ಕಾರವನ್ನು ಕೇಳುತ್ತದೆ; ಆಚಾರ್ಯರ

ಕಣ್ಣು ತಪ್ಪಿಸಿ ಇನ್ನೂ ಅರೆಕೊರೆಗಳು ಉಳಿದುಕೊಂಡಿವೆ. ಹಾಗೆ ನೋಡಿದರೆ, ನಮ್ಮ ಪ್ರಾಚೀನ ಸಾಹಿತ್ಯಕೃತಿಗಳ ಸಂಪಾದನೆಯಲ್ಲಿ ಪ್ರತಿಯೊಂದರಲ್ಲಿಯೂ ಯಾವುದೋ ಪ್ರಮಾಣದಲ್ಲಿ ಅರೆಕೊರೆಗಳು ಕಣ್ಣೊತ್ತುತ್ತಲೇ ಇವೆ.

ಆಚಾರ್ಯರು 'ಪಂಚತಂತ್ರ'ದ ಸಂಪಾದನೆಗೆ ಪಟ್ಟಿರುವ ಶ್ರಮ ದೊಡ್ಡದು. ಹಳೆಯ ಮುದ್ರಿತಪರಿಷ್ಕರಣವನ್ನು ಬಳಸಿದ್ದರೂ ಹೆಚ್ಚಿನ ಹಸ್ತಪ್ರತಿಗಳನ್ನೂ ಬಳಸಿದ್ದಾರೆ. ಅಲ್ಲದೆ ಲಭ್ಯತೆಯ ದಾಖಲಾತಿಯಿರುವ ಇನ್ನೂ ಕೆಲವು ಪ್ರತಿಗಳಿಗಾಗಿ ಹುಡುಕಾಡಿಯೂ ಇದ್ದಾರೆ. ಹಸ್ತಪ್ರತಿಗಳನ್ನು ತುಲನೆ ಮಾಡಿ ಸವಿಮರ್ಶವಾಗಿ ಈ ಪರಿಷ್ಕರಣವನ್ನು ಸಿದ್ಧ ಮಾಡಿರುವುದರಿಂದ ಇದು ಹೊಸ ಪರಿಷ್ಕರಣವೇ ಆಗಿದೆ. ತಮ್ಮ ಕಾಲಕ್ಕೆ 'ಪಂಚತಂತ್ರ'ದ ವ್ಯಾಪಕವಾದ ಅಧ್ಯಯನದಿಂದ ಖ್ಯಾತರಾಗಿದ್ದ ಎ. ವೆಂಕಟಸುಬ್ಬಯ್ಯನವರಿಂದಲೂ ವಿಪುಲವಾಗಿ ಸಹಾಯಪಡೆದಿರುವ ಆಚಾರ್ಯರು ಅವರು ಬರಹಗಳ ಪ್ರಯೋಜನವನ್ನೂ ಪಡೆದುಕೊಂಡಿದ್ದಾರೆ. ಅವಲೋಕನವೆಂಬ ಟೀಕೆಯ ಜೊತೆಗೆ ಉಪಯುಕ್ತವಾದ ಅನುಬಂಧಗಳನ್ನೂ ಸೇರಿಸಿದ್ದಾರೆ.

ಆದರೆ ಇಲ್ಲಿ ಗಮನಿಸತಕ್ಕ ಸಂಗತಿಯೊಂದಿದೆ: ಹಳೆಯ ಮತ್ತು ಹೊಸ ಪರಿಷ್ಕರಣಗಳೆರಡರಲ್ಲಿಯೂ ಬರುವ ಶ್ಲೋಕಸಂಬಂಧಿಯಾದ ಕನ್ನಡಟೀಕೆ ಹೊಸಗನ್ನಡದಲ್ಲಿರುವುದು ವಿಚಾರಾರ್ಹವಾದ್ದು. ಟೀಕೆ ಈಚಿನ ಕಾಲದ್ದು ಎನ್ನುವುದು ಸ್ಪಷ್ಟ. ಬೇರೆ ಗಾತ್ರದ ಅಕ್ಷರದಲ್ಲಿ ಮುದ್ರಿಸಿದ್ದರೂ ಅದು ಕವಿಕೃತವೆಂದೇ ಭಾವಿಸುವ ಗೊಂದಲಕ್ಕೆ ಅವಕಾಶವಿದೆ. ಕೆಲವು ಅನುಬಂಧಗಳು ಉಪಯುಕ್ತವಾದವು; ಇನ್ನು ಕೆಲವು ಅವಶ್ಯವಿರಲಿಲ್ಲ. ಅವಲೋಕನವೆಂಬ ಟೀಕೆ ಇನ್ನೂ ವಿಸ್ತೃತ ಪರಿಷ್ಕೃತ ನಿಷ್ಕೃಷ್ಟ ಆಗಲು ಅವಕಾಶಗಳಿದ್ದುವು. ಇವೆಲ್ಲ ಏನೇ ಇದ್ದರೂ, ಈ ಗ್ರಂಥದ ಸಂಪಾದನೆಗೆ ಆಚಾರ್ಯರು ಅಪಾರವಾಗಿ ಶ್ರಮವಹಿಸಿದ್ದಾರೆ; ಉಪಕಾರಮಾಡಿದ್ದಾರೆ.

ಚಿಕ್ಕದಾದರೂ ಚೊಕ್ಕವಾದ ರಚನೆ ' ಮಾನೌಮಿಯ ಚೌಪದ'. ಕರ್ನಾಟಕದ ಇತಿಹಾಸ ಸಂಸ್ಕೃತಿ ಕಲೆ ಗಣಿತ ನಾಣ್ಯಪದ್ಧತಿಗೆ ಸಂಬಂಧಿಸಿದ ಹಲವಾರು ಕುತೂಹಲಕರ ಸಂಗತಿಗಳನ್ನು ಒಳಕೊಂಡಿರುವ ಈ ರಚನೆಯನ್ನು ಸಂಪಾದಿಸಲು ಆಯ್ದುಕೊಂಡಿದ್ದು ಶ್ಲಾಘ್ಯವಾದ ವಿಷಯ.

ಈ ಪುಟ್ಟ ಪುಸ್ತಕವನ್ನು ಮೊದಲು ಜಯಕರ್ನಾಟಕದಲ್ಲಿ ಆಚಾರ್ಯರು ಪ್ರಕಟಿಸಿದರು; ಬಳಿಕ ಇದು ೧೯೪೦ರಲ್ಲಿ ಸ್ವತಂತ್ರವಾಗಿ ಪ್ರಕಾಶಗೊಂಡು ೧೯೬೧, ೧೯೭೦ರಲ್ಲಿ ಪುನರ್ಮುದ್ರಣಗಳನ್ನು ಕಂಡಿತು. ಇದರ ಸಂಶೋಧನಾತ್ಮಕವಾದ ಪ್ರಸ್ತಾವನೆ ಈ ಚೌಪದ ಗಾಯನದ ಸಂಸ್ಕೃತಿಯನ್ನು ಚೆನ್ನಾಗಿ ಗುರುತಿಸಿದೆ. ಅಷ್ಟು ಹಿಂದೆ ಈ ರಚನೆಯ ಪ್ರಕಟನೆಗೆ ಆಚಾರ್ಯರು ಆಸಕ್ತಿ ವಹಿಸದಿದ್ದರೆ, ಇದು ಇನ್ನೂ ಅಲಕ್ಷಿತವಾಗಿಯೇ ಉಳಿಯುವ ಸಂಭವವಿತ್ತು. ಈ ಕೃತಿಯೊಳಗಿನ ನಾಣ್ಯವೈವಿಧ್ಯದ ವೈಶಿಷ್ಟ್ಯವನ್ನು ಗುರುತಿಸಿ ಖ್ಯಾತ ನಾಣ್ಯಶಾಸ್ತ್ರಜ್ಞರು ಈಗಾಗಲೇ ವಿಚಾರಮಾಡಿದ್ದಾರೆ.

ವಿದ್ಯಾರ್ಥಿಗಳ ಪಠ್ಯದ ಸಲುವಾಗಿ ಆಚಾರ್ಯರು ಸಿದ್ಧಮಾಡಿರುವ 'ಕುಮಾರರಾಮ ಸಾಂಗತ್ಯ ಸಂಗ್ರಹ 'ಜಗನ್ನಾಥವಿಜಯ ಸಂಗ್ರಹ', 'ರಾಮಾಶ್ವಮೇಧ ಸಂಗ್ರಹ' ಇವು ಯಥೋಚಿತವಾದ ಪೀಠಿಕೆ, ಪರಿಚ್ಛೇದ ನಿರ್ದೇಶನಗಳನ್ನು ಒಳಕೊಂಡು ವಿದ್ಯಾರ್ಥಿಗಳಿಗೆ ಪ್ರಿಯ ಪಠ್ಯಗಳಾಗಿವೆ.

ಅನಂತರಂಗಾಚಾರ್ಯರ ಬಹುದೊಡ್ಡ ಸಾಧನೆಯೆಂದರೆ, ಅವರು ಮೈಸೂರು ವಿಶ್ವವಿದ್ಯಾನಿಲಯದ ಮೂಲಕ ಪ್ರಕಟಿಸಿರುವ (೧೯೭೦) 'ಸಾಹಿತ್ಯಭಾರತೀ' ಎಂಬ ವಿವಿಧ ಭಾಷೆಗಳ ಸಾಹಿತ್ಯದ ಸಮೀಕ್ಷೆಯ ಮಹಾಗ್ರಂಥ. ಇದರ ಸ್ವರೂಪವನ್ನು ಅಂದು ಪ್ರಸಾರಾಂಗದ ಅಧ್ಯಕ್ಷರಾಗಿದ್ದ ಕೆ. ವಿ. ಪುಟ್ಟಪ್ಪನವರೇ ಹೀಗೆ ವಿವರಿಸಿದ್ದಾರೆ (ಮುನ್ನುಡಿ, ಪು. x- xi)

"ಶ್ರೀಮಾನ್ ಎನ್. ಅನಂತರಂಗಾಚಾರ್ಯರ 'ಸಾಹಿತ್ಯಭಾರತೀ' ಒಂದು ಅಪೂರ್ವ ಕೃತಿ. ಏಕೆಂದರೆ ಮೊಟ್ಟಮೊದಲ ಬಾರಿಗೆ ಭರತಖಂಡದ ಹತ್ತೊಂಬತ್ತು ಅಧಿಕೃತ ಭಾಷೆಗಳ ಸಾಹಿತ್ಯಚರಿತ್ರೆಯ ಜೊತೆಗೆ ಇಲ್ಲಿ ಭಾರತೀಯರಿಂದ ರಚಿತವಾಗುತ್ತಿರುವ ಇಂಗ್ಲಿಷ್ ಸಾಹಿತ್ಯದ ಚರಿತ್ರೆಯೂ ರೂಪುಗೊಂಡಿದೆ. ನಮಗೆ ತಿಳಿದಂತೆ, ಇಂಗ್ಲಿಷ್ ಭಾಷೆಯಲ್ಲಾಗಲಿ ಭರತಖಂಡದ ಬೇರೆ ಭಾಷೆಗಳಲ್ಲಿಯಾಗಲಿ ಇಪ್ಪತ್ತು ಭಾಷಾಸಾಹಿತ್ಯ ಚರಿತ್ರೆಗಳನ್ನು ಉಗಮದಿಂದ ಇಂದಿನವರೆಗೆ ಸಮೀಕ್ಷಿಸಿರುವ ಮತ್ತೊಂದು ಗ್ರಂಥ ಇಲ್ಲ. ಈ ಗ್ರಂಥದಲ್ಲಿ ಪ್ರತಿಯೊಂದು ಸಾಹಿತ್ಯದ ವಿಷಯವಾಗಿಯೂ ಅದರ ಭೌಗೋಳಿಕವ್ಯಾಪ್ತಿ, ಮೂಲ, ಇತರ ಭಾಷೆಗಳ ಸಂಪರ್ಕ, ಆದಿಕಾಲದಿಂದ ಇಲ್ಲಿಯವರೆಗಿನ ಕವಿ ಕಾವ್ಯಗಳ ಪರಿಚಯ, ಅವುಗಳಿಗಾದ ವಿವಿಧ ಪ್ರಭಾವಗಳು, ಚರಿತ್ರೆಯ ವಿವಿಧ ಹಂತಗಳು, ಪ್ರಾದೇಶಿಕ ಗುಣಗಳು ಮೊದಲಾದುವನ್ನು ಹೆಚ್ಚು ಚರ್ಚೆಗೆ ಪ್ರವೇಶಿಸದೆ, ಈಗ ಸಾಮಾನ್ಯವಾಗಿ ಬಹುಜನಮಾನ್ಯವಾದ ಅಭಿಪ್ರಾಯಗಳನ್ನು ಅಂಗೀಕರಿಸಿ ನಿರೂಪಿಸಿದ್ದಾರೆ. ಸಂಸ್ಕೃತ ಸಾಹಿತ್ಯ ಚರಿತ್ರೆಯನ್ನು ಕುರಿತು ಹೇಳುವುದಾದರೆ, ಕಾವ್ಯಭಾಗದಷ್ಟೇ ಶಾಸ್ತ್ರಭಾಗಕ್ಕೂ ಪ್ರಾಧಾನ್ಯ ಕೊಟ್ಟು, ವ್ಯಾಕರಣ ನಿಘಂಟು ಜ್ಯೋತಿಷ ಛಂದಸ್ಸು ಧರ್ಮಶಾಸ್ತ್ರ ಅರ್ಥಶಾಸ್ತ್ರ ಆಯುರ್ವೇದ ಶಿಲ್ಪ ಸಂಗೀತ ಮತ್ತು ತತ್ತ್ವಶಾಸ್ತ್ರಗಳನ್ನು ಅವುಗಳ ಚಾರಿತ್ರಿಕ ಹಿನ್ನೆಲೆಯಲ್ಲಿ ವಿವೇಚಿಸಿದ್ದಾರೆ. ಇಲ್ಲಿನ ಇನ್ನೊಂದು ವಿಶೇಷಾಂಶವೆಂದರೆ, ಪ್ರತಿಯೊಂದು ಸಾಹಿತ್ಯದಲ್ಲಿಯೂ ಅದರ ಪತ್ರಿಕಾಪ್ರಪಂಚದ ಬೆಳವಣಿಗೆಯನ್ನೂ ನಿರೂಪಿಸಿರುವುದು."

ಈ ಗ್ರಂಥದ ಕೆಲಭಾಗಗಳು ಮೊದಲು ಪ್ರಬುದ್ಧ ಕರ್ಣಾಟಕದ ಸಂಚಿಕೆಗಳಲ್ಲಿ ಪ್ರಕಟವಾಗಿದ್ದಂತೆ ತೋರಿದರೂ ಈ ಪ್ರಮಾಣದ ವಿಸ್ತೃತರೂಪ ಇಲ್ಲಿಯೇ ಅದು ಪಡೆದಿರುವುದೆಂದು ಹೇಳಬೇಕು. ವಿಚಾರಪುಷ್ಟಿ, ನಿರರ್ಗಳಗದ್ಯಗತಿ ಎದ್ದು ತೋರುವ ಈ ಗ್ರಂಥದ ವಿಷಯಾನುಕ್ರಮಣಿಕೆಯೇ ೧೮ ಪುಟಗಳಷ್ಟು ದೊಡ್ಡದಾಗಿದೆ. ಸಾವಿರ ಪುಟಗಳನ್ನು ಧಾರಾಳವಾಗಿ ದಾಟಿ ಸಾಗಿರುವ ಈ ಕೃತಿ ಏಕಕರ್ತೃಕವೆಂಬುದನ್ನು ನೆನೆದಾಗ ಅದರ ಕರ್ತೃವಿನ ತಾಳ್ಮೆ ಪರಿಶ್ರಮ ಶ್ರದ್ಧೆ ವಿಸ್ಮಯವನ್ನುಂಟುಮಾಡುತ್ತವೆ. ಒಂದೊಂದು ಅಧ್ಯಾಯವೇ ಒಂದು ಪುಸ್ತಕವಾಗಬಹುದಾದ ವ್ಯಾಪ್ತಿ ಇಲ್ಲಿಯದು. ಇದು ಪುಸ್ತಕಗಳ ಪುಸ್ತಕ; ಬಹುಸಾಹಿತ್ಯಕೋಶ, ಜೊತೆಗೆ ಸಾಹಿತಿಗಳ ಚಿತ್ರಗಳು, ಶಾಸನಗಳ ಪಡಿಯಚ್ಚುಗಳು, ಭಾಷಾಮಾದರಿಗಳು, ಲಿಪಿ

ವಿಕಾಸದ ಘಟ್ಟಗಳು, ನಕ್ಷೆಗಳು ಇವೆಲ್ಲ ಇದರ ಉಪಯುಕ್ತತೆಯನ್ನು ಹೆಚ್ಚಿಸಿವೆ. ಇವನ್ನೆಲ್ಲ ಸಂಗ್ರಹಿಸಲು ಆಚಾರ್ಯರು ತುಂಬ ಶ್ರಮಪಟ್ಟಿರಬೇಕು, ತುಂಬ ಪುಸ್ತಕಗಳನ್ನು ಓದಿರಬೇಕು. ತುಲನಾತ್ಮಕವಾಗಿ ಅಧ್ಯಯನ ಮಾಡಿರಬೇಕು. ಭಾರತದ ಭಾಷೆಗಳ ಸಾಹಿತ್ಯಶರೀರದಲ್ಲಿ ಹರಿಯುವ ಭಾರತೀಯ ಮನೋಧರ್ಮ, ಸಂಸ್ಕೃತಿಗಳನ್ನು ಗುರುತಿಸಬೇಕು ಎಂದು ಮುಂತಾಗಿ ಅಪೇಕ್ಷಿಸುವವರಿಗೆ ಈ ಮಹಾಗ್ರಂಥ ಅನನ್ಯರೀತಿಯಿಂದ ಸಹಾಯಮಾಡಬಲ್ಲುದಾಗಿದೆ. "ಭಾರತೀಯ ಭಾಷೆಗಳು ಹಲವು, ಸಾಹಿತ್ಯ ಒಂದೇ" ಎನ್ನುವ ಸುಂದರವಾದ ಸೂಕ್ತಿಯ ಸಾರ್ಥಕತೆ ತಿಳಿಯಲು ಇಂಥ ಪುಸ್ತಕಗಳಲ್ಲಿಯೇ ನಾವು ಅವಶ್ಯವಾದ ಜೀವದ್ರವ್ಯವನ್ನು ಅರಸಬೇಕಾಗುತ್ತದೆ.

ಆಚಾರ್ಯರು ಈ ಗ್ರಂಥದ ರಚನೆಗೆ ವಿವಿಧ ಭಾಷೆಗಳ ಸಾಹಿತ್ಯಚರಿತ್ರೆಗಳನ್ನು ವ್ಯಾಪಕವಾಗಿ ವ್ಯಾಸಂಗ ಮಾಡಿದ್ದಾರೆ, ತದ್‌ಜ್ಞರ ನೆರವು ಪಡೆದಿದ್ದಾರೆ. ಇದು ಸಾರತಃ ಚರಿತ್ರೆಯ ಗ್ರಂಥ; ಸಮೀಕ್ಷೆಯ ಗ್ರಂಥ. ಇಲ್ಲಿ ವಿಮರ್ಶೆಯ ಭಾಗ ಹೆಚ್ಚಾಗಿಲ್ಲ, ಇದ್ದರೂ ಸರ್ವತ್ರ ಅದು ಕಾಣುತ್ತಿಲ್ಲ, ಆ ಈ ಉಲ್ಲೇಖಗಳು ಇಲ್ಲಿ ಬಿಟ್ಟುಹೋಗಿವೆ, ವ್ಯಕ್ತಿನಾಮ ಗ್ರಂಥನಾಮಗಳ ನಮೂದುಗಳಲ್ಲಿ ತಪ್ಪಾಗಿವೆ ಎಂದು ಮುಂತಾಗಿ ಕೆಲವರು ನ್ಯಾಯವಾಗಿಯೇ ಆಕ್ಷೇಪಿಸುತ್ತಾರೆ. ಆದರೆ ಇಂತಹ ದೊಡ್ಡ ಕೆಲಸವೊಂದನ್ನು ಕೈಗೂಡಿಸಿದಾಗ, ಅದರಲ್ಲಿ ಕಂಡಬರುವ ಲೋಪದೋಷಗಳನ್ನೂ ನ್ಯೂನಾತಿರೇಕಗಳನ್ನೂ ನಾವು ಸಹಿಸಿಕೊಳ್ಳುವುದರಲ್ಲಿ ಅನುಚಿತವಾದುದೇನೂ ಇಲ್ಲ. ಪ್ರಾಚ್ಯ ಹಾಗೂ ಪಾಶ್ಚಾತ್ಯ ಭಾರತೀಯ ಸಾಹಿತ್ಯ ಚರಿತ್ರೆಗಳಲ್ಲಿಯೂ ಯಾವುದೋ ಪ್ರಮಾಣದಲ್ಲಿ ಇವು ಕಂಡುಬರುತ್ತಿರುವುದು ನಮಗೆ ತಿಳಿದಿದೆ; ಸಮೀಕ್ಷೆಯಾದರೂ ಸಾಕಲ್ಯದತ್ತ ಸಾಗುವ ದೃಢಲಕ್ಷ್ಯವಿರುವುದನ್ನು ಒಪ್ಪಿಕೊಳ್ಳಬೇಕು.

'ಭಾರತೀಯ ತೀರ್ಥ ಕಲಾಕ್ಷೇತ್ರ ಸಂದರ್ಶಿನಿ' ಆಚಾರ್ಯರ ಇನ್ನೊಂದು ವಿರಳವಾದ ಗ್ರಂಥ. ಇದನ್ನು ಅವರು ತಮ್ಮ ೮೦ನೆಯ ಹುಟ್ಟುಹಬ್ಬದ ಸವಿನೆನಪಿಗೆ ತಾವೇ ಪ್ರಕಟಿಸಿರುವಂತೆ ತೋರುವುದು. ಪ್ರತಿಯೊಬ್ಬ ಭಾರತೀಯನಿಗೂ ಅಖಿಲಭಾರತ ತೀರ್ಥಕಲಾಕ್ಷೇತ್ರಗಳ ಪರಿಚಯ ಬಹುಕಾಲದಿಂದಲೂ ಜೀವನದ ಒಂದು ಕಡ್ಡಾಯವಾದ ಅಂಗವಾಗಿತ್ತು. ಈಗಲಂತೂ ಅದರ ಆವಶ್ಯಕತೆ ಮತ್ತಷ್ಟು ಹೆಚ್ಚಿದೆ. ಹಾಗೆಯೇ ಸೌಲಭ್ಯಗಳೂ ವಿಶೇಷವಾಗಿವೆ. ಆದರೆ ಅಖಿಲ ಭಾರತ ತೀರ್ಥಕ್ಷೇತ್ರಗಳ ಯೋಗ್ಯ ಕೈಪಿಡಿಯೊಂದು ವಿಶೇಷ ಲಭ್ಯವಾಗಿಲ್ಲ. ಕನ್ನಡದಲ್ಲೂ ಅತಿವಿರಳವೆಂದೇ ಹೇಳಬಹುದು. ಆ ಅವಶ್ಯಕತೆಯನ್ನು ಪೂರ್ಣ ಮಾಡುವುದಕ್ಕಾಗಿ ಈ ಗ್ರಂಥವನ್ನು ರಚಿಸಲಾಗಿದೆ."

ಇದು ಅವರೇ ಅರಿಕೆಯಲ್ಲಿ ತಿಳಿಸಿರುವ ಮಾತು. ಒಂದು ದೃಷ್ಟಿಯಿಂದ ಇದು ನಿಜ. ತೀರ್ಥಕ್ಷೇತ್ರಗಳಾದರೆ ಸಂಪ್ರದಾಯದ ಜಾಡಿನ ಸ್ಥಳಪುರಾಣಗಳು, ಕಲಾಕ್ಷೇತ್ರಗಳಾದರೆ ಸರ್ಕಾರದ ಪ್ರಾಚ್ಯವಸ್ತು ಇಲಾಖೆಯ ಕೈಪಿಡಿಗಳು ಇವು ನಮ್ಮ ಕಣ್ಣಿಗೆ ಬೀಳುತ್ತವೆ. ಆದರೆ ಸಾಮಾನ್ಯ ಜನರನ್ನು ಉದ್ದೇಶಿಸಿ ಆಧುನಿಕದೃಷ್ಟಿಯಿಂದ ಬರೆದ ಸರಳ ಪರಿಚಯಾತ್ಮಕ ಗ್ರಂಥಗಳ ಕೊರತೆ ನೀಗಿಸಲು ಇಂಥ ಗ್ರಂಥಗಳು ಬೇಕಾಗುತ್ತವೆ. ಆಚಾರ್ಯರ ಕೃತಿ ಅಂಥದು. ೩೬೪ ಪುಟಗಳ ಈ

ಪುಸ್ತಕದಲ್ಲಿ ವಿಖ್ಯಾತವಾದ ಶ್ರೀ ವೈಷ್ಣವ ಮತ್ತು ಶೈವಕ್ಷೇತ್ರಗಳನ್ನೂ ಕಲಾಕ್ಷೇತ್ರಗಳನ್ನೂ ವಿವಿಧ ಶೀರ್ಷಿಕೆಗಳ ಕೆಳಗೆ ಪರಿಚಯ ಮಾಡಿದೆ. ವಿಸ್ತೃತ ಪೂರ್ವಪೀಠಿಕೆಯ ಮೂಲಕ ಭಾರತೀಯ ದೇವಾಲಯಗಳ ವಾಸ್ತುವಿವರಗಳು, ಸಂಸ್ಕೃತಿಸ್ವರೂಪ, ಸಾಮಾಜಿಕ ಐತಿಹಾಸಿಕ ನೆಲೆಗಳ ವಿಚಾರ ವಿಮರ್ಶೆ ಇವೆಲ್ಲ ಹೃದ್ಯವಾಗಿ ನಿರೂಪಣೆಗೊಂಡಿವೆ. ಇಂಥ ಪರಿಷ್ಕಾರವಾದ ಲೇಖನಗಳು ಕನ್ನಡದಲ್ಲಿ ಹೆಚ್ಚಾಗಿಲ್ಲ. ದೈವಭಕ್ತಿಯ ಅನುಸಂಧಾನಕ್ಕೆ ಯೋಗ್ಯವಾದ ಭೂಮಿಕೆ ಇದರಿಂದ ನಿರ್ಮಾಣಗೊಂಡಂತಾಗಿದೆ. ವಿಪುಲವಾದ ಮಾಹಿತಿಸಂಗ್ರಹ, ಸಂಕಲನ ಮತ್ತು ಸಂಯೋಜನೆಗಳಲ್ಲಿ ಆಚಾರ್ಯರು ಸಿದ್ಧಹಸ್ತರು; ಮಾಹಿತಿದಾರ ವಿದ್ವಾಂಸರಲ್ಲಿ ಅಗ್ರಗಣ್ಯರು. ಈ ಕೃತಿಯಲ್ಲಿ ವೈಷ್ಣವಕ್ಷೇತ್ರಗಳ ಮಾಹಿತಿಯೇ ಹೆಚ್ಚು. ಅದು ಶ್ರೀವೈಷ್ಣವರಾದ ಲೇಖಕರ ಪಕ್ಷಪಾತವಾಗಿಯೂ ತೋರಬಹುದು. ಕಲಾಕ್ಷೇತ್ರಗಳ ಉಲ್ಲೇಖ ತೀರ ಕಡಮೆಯೆಂದೂ ಕೆಲವರು ಭಾವಿಸಲವಕಾಶವಿದೆ. ಈ ಭಾಗವನ್ನು ಪುಸ್ತಕದ ಪರಿಧಿಯಿಂದ ಹೊರಗೇ ಉಳಿಸುವುದಾಗಿದ್ದರೆ ಪುಸ್ತಕದ ಮಹತ್ತ್ವಕ್ಕೆ ಯಾವುದೇ ಕೊರತೆಯಿರುತ್ತಿರಲಿಲ್ಲ.

ಕನ್ನಡ ಸಾಹಿತ್ಯ ಪರಿಷತ್ತಿನ ಸಮೂಲ ಗದ್ಯಾನುವಾದ ಯೋಜನೆಗಾಗಿ ಸಿದ್ಧಮಾಡಿಕೊಟ್ಟ ಪಂಪಭಾರತ ಗದ್ಯಾನುವಾದ ಒಂದು ಶ್ರಮಸಾಧ್ಯವಾದ ಸಾಹಿತ್ಯಪರಿಚರ್ಯೆ. 'ಪಂಪಭಾರತ ದೀಪಿಕೆ', 'ಪಂಪಭಾರತ ಕಥಾಲೋಕ' ಇವು ಈ ಮೊದಲೇ ಒಂದು ರೀತಿಯಲ್ಲಿ ಈ ಪರಿಚರ್ಯೆಯನ್ನು ಮಾಡಿದ್ದರೂ ಪರಿಷತ್ತಿನ ಒಂದು ನಿರ್ದಿಷ್ಟಯೋಜನೆಗೆ ಅನುಸಾರವಾಗಿ ಈ ಗದ್ಯಾನುವಾದ ಸಿದ್ಧವಾಗಿದೆ (೧೯೭೭). ವಿಸ್ತಾರವಾದ ಉಪೋದ್ಘಾತ ಕವಿಕಾವ್ಯಪರಿಚಯದ ನಾನಾಮುಖಗಳಿಂದ ಕೂಡಿದೆ. ಐತಿಹಾಸಿಕ ಹಿನ್ನೆಲೆ ಪಂಪಸಾಹಿತ್ಯಸೂಚಿ, ಪಂಪಭಾರತ ಶಬ್ದಕೋಶ ಈ ಅನುಬಂಧಗಳು ಅಭ್ಯಾಸಿಗಳಿಗೆ ಬಹುವಾಗಿ ಸಹಾಯಮಾಡುತ್ತವೆ. ಉಪೋದ್ಘಾತದಲ್ಲಿಯೂ ಅನುವಾದದಲ್ಲಿಯೂ ಕೆಲವು ನ್ಯೂನಾತಿರೇಕಗಳುಂಟು. ಇವನ್ನು ಪ್ರಬುದ್ಧರಾದ ಓದುಗರು ಸ್ವತಃ ವಿವೇಚನೆಯಿಂದ ವಿಮರ್ಶೆಯಿಂದ, ಅನ್ಯ ಸಾಧನಸಾಮಗ್ರಿಯ ಸಹಾಯದಿಂದ ಸರಿಪಡಿಸಿಕೊಳ್ಳಲು ಸಾಧ್ಯವಿದೆ. ಉಪೋದ್ಘಾತದಲ್ಲಿ ಆದಿಪುರಾಣವಿಚಾರವನ್ನು ಕೈಬಿಡಬಹುದಾಗಿತ್ತು.

ಪರಿಷತ್ತಿನ ಪ್ರಚಲಿತಮುದ್ರಣದ ಆಧಾರದ ಮೇಲೆ ಪಂಪಭಾರತದ ಪಾಠವನ್ನು ಸಿದ್ಧಪಡಿಸಿದೆಯೆಂದು ಆಚಾರ್ಯರು ತಿಳಿಸಿದ್ದಾರೆ. ಜೊತೆಗೆ ಕೆಲವು ಅಡಿಟಿಪ್ಪಣಿಗಳ ಪಾಠಾಂತರಗಳ ಪುನರ್ವಿಮರ್ಶೆಯಿಂದ ಆ ಪಾಠಗಳನ್ನೂ ಉಪಯೋಗಿಸಿಕೊಂಡುದಾಗಿ ತಿಳಿಸಿದ್ದಾರೆ. ಆದರೆ ಪುನರ್ವಿಮರ್ಶೆಗೆ ಇನ್ನೂ ಹೇರಳವಾಗಿ ಅವಕಾಶಗಳಿವೆ; ಶಬ್ದಾರ್ಥಗಳ ಗ್ರಹಿಕೆಯಲ್ಲಿ ದೀಪಿಕೆಯನ್ನು ಇನ್ನೂ ಹೆಚ್ಚಾಗಿ ಬಳಸುವ ಸಾಧ್ಯತೆಯೂ ಇತ್ತು. ಗದ್ಯಶೈಲಿ ಹಳಗಾಲದ ಪಂಡಿತರ ಬರಹದ ಧಾಟಿಯನ್ನು ಕೆಲಮಟ್ಟಿಗೆ ನೆನಪಿಸುವುದೂ ನಿಜವೇ.

ಆಚಾರ್ಯರು ಕವಿಚರಿತೆಕಾರರಾದ ಡಾ. ನರಸಿಂಹಾಚಾರ್ಯರ ವಿಷಯದಲ್ಲಿ ಬಹುವಾಗಿ ಪ್ರೀತಿಗೌರವಗಳನ್ನು ಇಟ್ಟುಕೊಂಡಿದ್ದರು; ಅವರ ಬಹುಪಾಲು ಸಾಹಿತ್ಯವನ್ನು ಅಭ್ಯಾಸ

ಮಾಡಿದರು. ಅವರು ಬರೆದ 'ರಾ. ನರಸಿಂಹಾಚಾರ್ಯ (ಜೀವನ ಮತ್ತು ಕಾರ್ಯ)' ಎಂಬ ಪುಸ್ತಕವನ್ನು ಸಾಹಿತ್ಯ ಸಂಪತ್ತು ತನ್ನ ತ್ರೈಮಾಸಿಕ ಪುಸ್ತಕಮಾಲೆಯ ಮೊದಲನೆಯ ಗ್ರಂಥದಲ್ಲಿ ಪ್ರಕಟಿಸಿದೆ. ಇದರ ಸಲುವಾಗಿ ನರಸಿಂಹಾಚಾರ್ಯರ ಎಲ್ಲ ಬರಹಗಳನ್ನೂ ಬಗೆದು ಓದಿಕೊಂಡು ಆಚಾರ್ಯರು ಅಭ್ಯಾಸಮಾಡಿದ್ದಾರೆ; ನರಸಿಂಹಾಚಾರ್ಯರ ಸಹೋದ್ಯೋಗಿಗಳನ್ನೂ ಬಳಗದವರನ್ನೂ ಕಂಡು ಮಾಹಿತಿ ಸಂಗ್ರಹಿಸಿದ್ದಾರೆ. ಈ ಮಹಾವಿದ್ವಾಂಸರ ಬಗೆಗೆ ಇಂತಹ ಬರಹ ಅದುವರೆಗೆ ಬಂದಿರಲಿಲ್ಲ ಎನ್ನುವುದನ್ನು ಗಮನಿಸಬೇಕು. ಇಲ್ಲಿಯ ಸಾಮಗ್ರಿ ಕುತೂಹಲಕರವಾದುದು; ವಿಷಯನಿರೂಪಣೆ ಸರಳವಾದುದು, ಬಹುಮುಖವಾದುದು; ನರಸಿಂಹಾಚಾರ್ಯರಿಗೂ ಎ. ವೆಂಕಟಸುಬ್ಬಯ್ಯನವರಿಗೂ ಏಕೆ ಭಿನ್ನಾಭಿಪ್ರಾಯ ಹುಟ್ಟಿಕೊಂಡಿತು ಎನ್ನುವ ವಿಷಯವನ್ನು ತಿಳಿಯಬೇಕೆನ್ನುವವರಿಗೆ ಇಲ್ಲಿರುವ ಮಾಹಿತಿ ಇನ್ನೆಲ್ಲಿಯೂ ದಾಖಲಾದಂತಿಲ್ಲ.

ಆರ್. ನರಸಿಂಹಾಚಾರ್ಯರ ಮೇಲೆ ಒಂದು ಅಭಿನಂದನ ಗ್ರಂಥವನ್ನು ಪ್ರಕಟಿಸಬೇಕೆಂಬ ಉತ್ಕಟವಾದ ಅಪೇಕ್ಷೆ ಎಂ.ಎಚ್. ಕೃಷ್ಣ ಅವರಿಗೆ ಇತ್ತೆಂದೂ ಅದು ಕೈಗೂಡದೆ ಹೋಗಿ ಅವರು ಕೊರಗುತ್ತಿದ್ದರೆಂದೂ ಅನಂತರಂಗಾಚಾರ್ಯರು ಒಂದೆರಡು ಸಲ ನನ್ನೊಂದಿಗೆ ಮಾತಾಡುತ್ತ ತಿಳಿಸಿದ್ದರು. ಈಗಲೂ ಒಂದು ಸಂಸ್ಮರಣಗ್ರಂಥವನ್ನು ಆಸಕ್ತರು ಸಿದ್ಧಮಾಡಬಹುದಾಗಿದೆ; ಪಿಎಚ್.ಡಿ. ಅಧ್ಯಯನವನ್ನೂ ನಡೆಸಬಹುದಾಗಿದೆ.

ಅನಂತರಂಗಾಚಾರ್ಯರ ಮೊದಲ ನಚ್ಚು ಹಳಗನ್ನಡ ಕವಿ ಕಾವ್ಯಗಳಾದರೆ, ಎರಡನೆಯ ನಚ್ಚು ಶ್ರೀವೈಷ್ಣವಸಾಹಿತ್ಯ. ರಾಮಾಯಣ ಅಧ್ಯಯನಗಳು, ವೇದಾಂತ ದೇಶಿಕರ ಬಗೆಗೆ ಅಪಾರ ಭಕ್ತಿಗೌರವಗಳು, ಅವರಿಗೆ. ೧೯೪೦ ರಷ್ಟು ಹಿಂದೆಯೇ 'ವೇದಾಂತ ದೇಶಿಕರು ಮತ್ತು ಅವರ ಗ್ರಂಥಗಳು' ಎಂಬ ಪುಸ್ತಕವನ್ನು ಹೊರತಂದರು. ಈಚೆಗೆ 'ಶ್ರೀ ನಿಗಮಾಂತ ಮಹಾದೇಶಿಕರು' ಎಂಬುದನ್ನು ಆಚಾರ್ಯರ ಸಪ್ತಮಶತಮಾನೋತ್ಸವ ಪ್ರಕಾಶನದಡಿಯಲ್ಲಿ ಬೆಳಕಿಗೆ ತಂದರು (೧೯೬೮). ದೇಶಿಕರ ಜೀವನ ಸಾಧನೆಗಳನ್ನು ರಚನೆಗಳನ್ನು ಸರಳವಾಗಿ, ಸಂಕ್ಷಿಪ್ತವಾಗಿ ಪರಿಚಯಿಸುವ ಈ ಗ್ರಂಥಗಳು ಶ್ರೀ ವೈಷ್ಣವ ಸಮುದಾಯದಲ್ಲಿ ತುಂಬ ಜನಪ್ರಿಯತೆ ಸಂಪಾದಿಸಿವೆ. ಈ ಗ್ರಂಥಗಳ ರಚನೆಯಲ್ಲಿ ಆಚಾರ್ಯರ ಸಂಶೋಧನದೃಷ್ಟಿ, ವೈಷ್ಣವ ಸಂಸ್ಕೃತಿಪರಿಚಯ, ಅವರ ಸಂಸ್ಕೃತ ಕನ್ನಡ ಉಭಯಭಾಷಾಜ್ಞಾನ ಚೆನ್ನಾಗಿ ಮೈದೋರಿದೆ. ಮೊದಲ ಗ್ರಂಥ ಹುಟ್ಟುವ ಕಾಲಕ್ಕೆ ದೇಶಿಕರ ಬಗ್ಗೆ ಕನ್ನಡದಲ್ಲಿ ಹೇಳಿಕೊಳ್ಳುವ ಬರಹಗಳಿಲ್ಲವೆನ್ನುವುದು ಮುನ್ನುಡಿಯಿಂದಲೂ ತಿಳಿಯುತ್ತದೆ. ಮೈಸೂರಿನ ಶ್ರೀ ಮದಾಚಾರ್ಯ ಶ್ರೀಸೂಕ್ತಿಕೈಂಕರ್ಯ ಸಭಾದ ಕಾರ್ಯದರ್ಶಿಯಾಗಿ ಆಚಾರ್ಯರು ತಿರುವಾಯ್‌ಮೊಳಿಯ ಮೂಲ ಮತ್ತು ವ್ಯಾಖ್ಯಾನಗಳು ಸಮುಚ್ಚಯಗೊಂಡ ಭಗವದ್ವಿಷಯವಿಚಾರಗಳನ್ನೂ ದೇಶಿಕರ ಸ್ತೋತ್ರಗಳನ್ನೂ ಕುರಿತ ಹಾಗೆ ಮಾಡಿರುವ ಸೇವೆ ಅವರ ಮನೋಧರ್ಮ ವಿಷ್ಣುಪಥದಲ್ಲಿ ನಿರಂತರವಾಗಿ ವಿಹರಿಸುವುದರಲ್ಲಿ ಸುಖಿಸುತ್ತಿತ್ತು ಎನ್ನುವುದನ್ನು ಇಂಗಿತಗೊಳಿಸುತ್ತದೆ. ಇದೇ ಏಕನಿಷ್ಠೆ, ತನ್ಮಯತೆ ಕಾರಣ ಎನ್ನುವಂತೆ ಕನ್ನಡದ ವೀರಶೈವ ಸಾಹಿತ್ಯವನ್ನು ಕ್ಷಿಪ್ರವಾಗಿ ಹೊರತು

ಅಷ್ಟಾಗಿ ಅವರು ಹಚ್ಚಿಕೊಳ್ಳಲೇ ಇಲ್ಲ. 'ನಮ್ಮಾಳ್ವಾರರ ಭಕ್ತಿಮಾರ್ಗ' (ಸಂಭಾವನೆ, ೧೯೪೧)ದಲ್ಲಿ ಅವರು ವೈಷ್ಣವಭಕ್ತರ ಜೀವನೋದ್ದೇಶ ಸಂದೇಶಗಳನ್ನು ನಿರೂಪಿಸುವಾಗ ತಮ್ಮನ್ನೇ ಅವುಗಳಿಗೆ ಒಪ್ಪಿಸಿಕೊಂಡಿದ್ದಾರೆ; ತಮಿಳುಸ್ತೋತ್ರಗಳಲ್ಲಿ ಕೆಲವನ್ನು ಆಚಾರ್ಯರೇ ಕನ್ನಡಿಸಿದ್ದು, ಅವು ವಿವಿಧ ಛಂದೋಬಂಧಗಳಲ್ಲಿ ಚೇತೋಹಾರಿಯಾಗಿ ಮೂಡಿವೆ. ೪೦ ವರ್ಷಗಳ ಬಳಿಕವೂ ಆಚಾರ್ಯರು ತಮಿಳು ಸಾಹಿತ್ಯದ ಸಂತರನ್ನೂ ಅವರ ರಚನೆಗಳನ್ನೂ ಆಯಾಸವಿಲ್ಲದೆ ಕನ್ನಡಿಗರಿಗೆ ಪರಿಚಯಿಸುತ್ತಲೇ ಹೋಗಿದ್ದಾರೆ. ವೇದಾಂತ ದೇಶಿಕರ ಸ್ತೋತ್ರ, ಕಾವ್ಯ, ವ್ಯಾಖ್ಯಾನ ಮತ್ತು ಶಾಸ್ತ್ರಗ್ರಂಥಗಳನ್ನು ದ್ರಾವಿಡ ಗ್ರಂಥಗಳನ್ನೂ ಕುರಿತು ಪತ್ರಿಕೆಗಳಿಗೆ ಅವರು ಬರೆದರು. ರಾಮಾನುಜರ ನಂತರದ ಆಚಾರ್ಯಪೀಠಗಳು, ಶಿಲಪ್ಪದಿಕಾರಂ ಮತ್ತು ಮಣಿಮೇಖಲೈ, ಶಾಸನಗಳಲ್ಲಿಯೂ ದಿವ್ಯಪ್ರಬಂಧಗಳಲ್ಲಿಯೂ ವೆಂಕಟೇಶ್ವರ, ಆಳ್ವಾರರ ವೈಶಿಷ್ಟ್ಯ, ನಾಯನಾರರು-ಆಳ್ವಾರರು, ಶರಣರು - ಆಳ್ವಾರರು ಹೀಗೆ ಎಷ್ಟೋ ವಿಷಯವನ್ನಧಿಕರಿಸಿದ ಲೇಖನಗಳನ್ನು ಏಕಪ್ರಕಾರವಾಗಿ ಬರೆದರು. ಅವರ ಸಮೀಪಬಂಧುಗಳಾದ ಎಸ್.ಎಸ್. ಅನಂತರಂಗಾಚಾರ್ಯರು ಈ ದಿಕ್ಕಿನಲ್ಲಿಯೇ ಮುಂದೆ ಸಾಗಿದ್ದನ್ನು ಇಲ್ಲಿ ನೆನೆಯಬೇಕು.

ತಮಿಳಿನ ದಿವ್ಯ ಪ್ರಬಂಧಗಳು ಹೇಗೋ ಹಾಗೆಯೇ ರಾಮಾಯಣಸಾಹಿತ್ಯವೂ ಆಚಾರ್ಯರ ಪರಮಾನುರಕ್ತಿಯ ವಿಷಯ. ಈ ಸಂಬಂಧವಾಗಿ ಪ್ರಬುದ್ಧ ಕರ್ಣಾಟಕ ಮೊದಲಾದೆಡೆ ಅವರು ಭಾರತೀಯ ರಾಮಾಯಣಸಾಹಿತ್ಯದ ವಿವಿಧ ಸಮೀಕ್ಷಾಲೇಖನಗಳನ್ನು ಬರೆದು ಪ್ರಕಟಿಸಿದ್ದು, ಈ ಲೇಖನಗಳೆಲ್ಲಾ 'ರಾಮಾಯಣ ಭಾರತಿ'ಯಲ್ಲಿ ಸಮಾವೇಶಗೊಂಡಿರುವುದು ಕಾಣುತ್ತದೆ. ಇಲ್ಲಿ ವಿವಿಧಭಾಷೆಗಳ ವಿವಿಧಧರ್ಮಗಳ ರಾಮಾಯಣಗಳ ಪರಿಚಯವಿದೆ; ಇತಿಹಾಸವಿದೆ, ಪಾತ್ರವಿವೇಚನೆಯಿದೆ, ತತ್ತ್ವ ವಿಚಾರವಿದೆ.

ಸಂಸ್ಕೃತ ಸಾಹಿತ್ಯದ ಪ್ರತ್ಯಕ್ಷಪರಿಚಯವಿದ್ದವರು, ಆಚಾರ್ಯರು. ಹಾಗಾಗಿ ವಾಲ್ಮೀಕಿ, ವ್ಯಾಸ, ಕಾಳಿದಾಸ, ಜಯದೇವ ಮೊದಲಾದವರ ಕೃತಿಗಳನ್ನು ಕುರಿತು, ವಿಶಾಲವ್ಯಾಪ್ತಿಯಲ್ಲಿ ವೈದಿಕ ವಾಙ್ಮಯ, ಮಹಾಭಾರತ, ಪುರಾಣಗಳು ಇವನ್ನು ಕುರಿತು ವಿಮರ್ಶೆಯ ಪರಿಚಯದ ಬರಹಗಳನ್ನು ವಿವಿಧ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ.

ಶಾಸ್ತ್ರ ವ್ಯಾಸಂಗದಲ್ಲಿ ತೊಡಗಿರುವವರಿಗೆ ಅನುಕೂಲಿಸುವಂತೆ ಜೈನಧರ್ಮಪರಿಭಾಷೆಯ ಸಂಗ್ರಹವೊಂದನ್ನು ಪ್ರಕಟಿಸಿದ್ದೂ (ಪ್ರ.ಕ. ೫೩-೨), ಈಚೆಗೆ ಕನ್ನಡ ಲಿಪಿಯ ವಿಕಾಸವನ್ನು ಕುರಿತು ಸಣ್ಣ ಲಿಪಿಚಿತ್ರಸೂಚಿಯೊಂದಿಗೆ ವಿಸ್ತಾರವಾಗಿ ವಿವೇಚಿಸಿದ್ದೂ (ಲೋಚನ, ೩-೨, ಡಿ. ೧೯೮೫; ೪-೧, ೨ ಜೂ. ಡಿ. ೧೯೮೬) ಇಲ್ಲಿ ತಪ್ಪದೆ ಉಲ್ಲೇಖಿಸತಕ್ಕ ಸಂಗತಿಗಳಾಗಿವೆ. ವಾಸ್ತವವಾಗಿ ಈಯೆರಡೂ ಪ್ರತ್ಯೇಕ ಪುಸ್ತಕಗಳಾಗಿ ಬರಬೇಕಾದವು. ಇತಿಹಾಸದ ವಿದ್ಯಾರ್ಥಿಗಳನ್ನು ಬಹುವಾಗಿ ಆಕರ್ಷಿಸುವ ಅವರ ಲೇಖನಗಳಲ್ಲಿ 'ಕರ್ಣಾಟಕದ ಶಾಸನಗಳು' (ಅಭಿವಂದನೆ, ೧೯೫೬) ಮತ್ತು ' ಮೈಸೂರು ದೇಶದ ಕೆಲವು ಶಿಲ್ಪಿಗಳು'(ಪ್ರ.ಕ. ೩೫-೧, ೧೯೫೩)

ಗಮನಾರ್ಹವಾದವು. ಇವುಗಳಲ್ಲಿಯ ವಸ್ತುವಿವೇಚನೆ ಕುತೂಹಲಕರವಾದುದು. ಆಚಾರ್ಯರಿಗೆ ಶಾಸನ ಮತ್ತು ಶಿಲ್ಪಸಂಸ್ಕೃತಿಯಲ್ಲಿದ್ದ ಆಸಕ್ತಿಗೆ ಇವು ಸಾಕ್ಷ್ಯಗಳು. ಆಚಾರ್ಯರ ಈ ತೆರನ ಬಹುಪಾಲು ಬರಹಗಳು ಸಾಮಾನ್ಯರನ್ನು ಉದ್ದೇಶಿಸಿ ಸಿದ್ಧವಾದವು; ಪರಿಚಯಾತ್ಮಕ, ಪ್ರಬೋಧಕ ಲೇಖನಗಳು. ಇಲ್ಲಿ ಗ್ರಂಥಸಂಪಾದನೆ (ತಾತ್ತ್ವಿಕ, ಪ್ರಾಯೋಗಿಕ), ಪ್ರಾಚೀನ ಕವಿ ಕಾವ್ಯ ವಿಮರ್ಶೆ ಇವುಗಳಲ್ಲಿ ಸ್ಫುಟಗೊಳ್ಳುವ ಸಂಶೋಧಕದೃಷ್ಟಿ ಕಂಡುಬರುವುದು ಶಕ್ಯವಿಲ್ಲ. ಆದರೆ ಆ ದೃಕ್ಪಥ ಪೂರ್ತಿಯಾಗಿ ಮರೆಯಾಗಿಲ್ಲ. ಈ ದೃಷ್ಟಿಯಿಂದ ಆಚಾರ್ಯರನ್ನು ಸಾಹಿತ್ಯ ಪರಿಚರ್ಯೆಗೆ ಹೆಸರೆತ್ತಿದ ಜಿ.ಪಿ. ರಾಜರತ್ನಂ ಅವರೊಂದಿಗೆ ಹೋಲಿಸಬಹುದು.

ಮನಸ್ಸು ಮಾಡಿದರೆ ಆಚಾರ್ಯರು ಸಂಶೋಧಕನ ನೆಲೆಯಲ್ಲಿಯೂ ಕೆಲಸ ಮಾಡಲು ಶಕ್ತರಾಗಿದ್ದರು. ಸಂಶೋಧನೆಯ ಶುದ್ಧಸತ್ತ್ವದ ಆರಾಧಕರೂ ಆಗುತ್ತಿದ್ದರು ಎನ್ನುವುದಕ್ಕೆ ಸಾಕ್ಷ್ಯಗಳಿವೆ. ಖಗೇಂದ್ರಮಣಿದರ್ಪಣದ ಸಂಪಾದನೆ ಎ. ವೆಂಕಟರಾವ್ - ಎಚ್. ಶೇಷ ಅಯ್ಯಂಗಾರ್ ಇವರಿಂದ ಆಗಿದ್ದು, ಇದನ್ನು ಮದರಾಸು ವಿಶ್ವವಿದ್ಯಾನಿಲಯ ಪ್ರಕಟಿಸಿದೆ (೧೯೪೨). ಇದನ್ನು ಆಚಾರ್ಯರು ಪ್ರ.ಕ.ದಲ್ಲಿ ವಿಮರ್ಶಿಸಿದ್ದಾರೆ (೨೫-೧). ಇದು ಒಂದು ಪರಿಷ್ಕಾರವಾದ ವಿಮರ್ಶೆ. ಆಚಾರ್ಯರು ಪರಿಷ್ಕರಣದಲ್ಲಿಯ ಲೋಪದೋಷಗಳನ್ನು ಸಯುಕ್ತಿಕವಾಗಿ ಚರ್ಚಿಸಿ ಒಳ್ಳೆಯ ಪಾಠಗಳನ್ನು ಅಲ್ಲಲ್ಲಿ ಸಲಹೆಮಾಡಿದ್ದಾರೆ. ಗ್ರಂಥ ಸ್ವರೂಪವನ್ನು ಚರ್ಚಿಸುವಾಗ ಆಚಾರ್ಯರು ಸಹಾಯಕ ಸದೃಶಗ್ರಂಥಗಳೊಂದಿಗೆ ತುಲನೆಮಾಡಿ ನೋಡಿರುವುದಂತೂ ಅವರ ಶ್ರದ್ಧೆಯನ್ನೂ ವ್ಯಾಸಂಗದ ವಿಸ್ತಾರವನ್ನೂ ಎತ್ತಿ ತೋರಿಸುತ್ತದೆ. 'ಸ್ವಚ್ಛಂದಂ' ಎಂಬ ಕಾವ್ಯನಾಮದಲ್ಲಿ ಅವರು 'ಆದಿಪುರಾಣ' (ಸಂ. ಕುಂದಣಗಾರ್, ಚೌಗುಲೆ) ಮತ್ತು 'ವರ್ಧಮಾನ ಪುರಾಣ' (ಸಂ. ಮರಿಯಪ್ಪ ಭಟ್ಟ, ಗೋವಿಂದರಾವ್) ಇವನ್ನು ವಿಮರ್ಶಿಸಿರುವ ರೀತಿಯಲ್ಲಿಯೂ ಅದನ್ನು ಕಾಣಬಹುದು (ಪ್ರಬುದ್ಧ ಕರ್ಣಾಟಕ, ೩೪-೪, ೧೯೫೩). ಇಲ್ಲಿ ಆ ಎರಡೂ ಗ್ರಂಥಗಳ ಹಸ್ತಪ್ರತಿಗಳ ಲಭ್ಯತೆಯ ವಿವರಗಳಿಂದ ಹಿಡಿದು ಮುದ್ರಣದೋಷಗಳವರೆಗೆ ಎಲ್ಲ ಮುಖಗಳಲ್ಲಿಯೂ ಕೃತಿವಿಮರ್ಶೆ ನಡೆದಿದೆ. ಈ ವಿಮರ್ಶೆಯಲ್ಲಿ ಆಚಾರ್ಯರು ಪ್ರಕಟಿಸಿರುವ ಧೈರ್ಯ ದಿಗಿಲು ಹುಟ್ಟಿಸುವಂಥದು, ಸುಲಭವಾಗಿ ಶತ್ರುಸಂಪಾದನೆ ಮಾಡಿಕೊಡುವಂಥದು. 'ಆದಿಪುರಾಣ'ದ 'ಗೃಹಕೋಕಿಲಾ' ಶಬ್ದದ (೨-೧೪೮) ಅರ್ಥವಿಚಾರವಂತೂ ಕುತೂಹಲಕರವಾದುದು; ಕುವೆಂಪು ಅವರು ನೀಡಿದ ಒಂದು ಉಪಯುಕ್ತವಾದ ಸಲಹೆಯನ್ನೂ ಆಚಾರ್ಯರು ಇಲ್ಲಿ ದಾಖಲಿಸಿದ್ದಾರೆ. 'ಆದಿಪುರಾಣ'ದ ಮೇಲಿನ ತಮ್ಮ ವಿಮರ್ಶೆ ಕಟುವಾಯಿತೆಂದು ಕೆಲವರು ಹೇಳುತ್ತಾರೆ ಎಂಬ ಮಾತನ್ನು ನನ್ನಲ್ಲಿಯೂ ಒಂದೆರಡು ಸಲ ಹೇಳಿದ್ದರು.

ಆಚಣ್ಣನ 'ವರ್ಧಮಾನ ಪುರಾಣ'ದ ಬಗೆಗೆ ಬರೆಯುತ್ತ ಒಂದೆಡೆ ಹೀಗೆಂದಿದ್ದಾರೆ: "ವರ್ಧಮಾನ ತೀರ್ಥಂಕರರು ಇತರ ೨೫ ಪೌರಾಣಿಕವ್ಯಕ್ತಿಗಳಂತಿರದೆ ಸಜೀವವಾಗಿ ಬಾಳಿ ಬದುಕಿದ ಐತಿಹಾಸಿಕ ವ್ಯಕ್ತಿ. ಆತನ ಜೀವಮಾನದಲ್ಲಿ ಮಾನವರನ್ನು ನಗಿಸಿ ಕುಣಿಸಿ ಅಳಿಸಿ

ಆತನಲ್ಲಿ ವಿಶೇಷ ಪೂಜ್ಯತೆಯನ್ನುಂಟುಮಾಡುವ ಅನೇಕ ರಸನಿಮಿಷಗಳೂ ಭಾವಸಮಾಧಿಗಳೂ ಆಗಿಹೋಗಿರಬೇಕು. ಕವಿಗೆ ಒಳಗಣ್ಣು ಮಾತ್ರ ಇದ್ದಿದ್ದರೆ ಇಂತಹ ಅನೇಕ ಸನ್ನಿವೇಶಗಳನ್ನು ಆರಿಸಿಕೊಂಡು ಗ್ರಂಥವನ್ನು ಸಜೀವವನ್ನಾಗಿಯೂ ಆತ್ಮೀಯವನ್ನಾಗಿಯೂ ಮಾಡಬಹುದಾಗಿತ್ತು. ಅದಕ್ಕೆ ಬದಲಾಗಿ ಗ್ರಂಥದ ೧೬ ಆಶ್ವಾಸಗಳಲ್ಲಿ ಹನ್ನೆರಡೂವರೆ ಆಶ್ವಾಸಗಳಲ್ಲಿ ಸಾಂಪ್ರದಾಯಿಕವಾದ ನೀರಸವಾದ ಪುರಾಣವೊಂದನ್ನು ನೆಯ್ದಿರುವ ಈ ಗ್ರಂಥವನ್ನು ಉತ್ತಮಗ್ರಂಥವೆಂದು ಹೇಳುವುದು ಅನುಚಿತವೇ ಅಲ್ಲದೆ ನಿಜವಾದ ಉತ್ತಮಕವಿಗಳಿಗೆ ಅನ್ಯಾಯ ಮಾಡಿದಂತಾಗುತ್ತದೆ." ಹೀಗೆ ಬರೆಯುವಾಗ ಆಚಾರ್ಯರು 'ಗೊಡ್ಡು ಪಂಡಿತ'ರಾಗಿ ನಮಗೆ ಕಾಣಿಸುವುದಿಲ್ಲ, ಬಿ.ಎಂ.ಶ್ರೀ ಅವರ 'ಮಾನಸಪುತ್ರ'ರಲ್ಲಿ ಒಬ್ಬರಾಗಿ ಕಾಣಿಸುತ್ತಾರೆ. ಈ ತೆರನ ಮನೋಧರ್ಮ ಶ್ರೀಯವರ ಶಿಷ್ಯರಿಗೆ ಅವರಿಂದ ಬಂದ ಬಳುವಳಿ.

ಈ ಸಂದರ್ಭದಲ್ಲಿ ನನಗೆ ನನ್ನ ಇನ್ನೊಬ್ಬ ಗುರುಗಳಾದ ಡಿ.ಎಲ್. ನರಸಿಂಹಾಚಾರ್ಯರು ನೆನಪಾಗುತ್ತಾರೆ. ಡಿ.ಎಲ್.ಎನ್. ಶಬ್ದಕೋಶವಾಗಿ ಬೆಳೆದ ಪಾತಾಳಗರಡಿ; ಅನಂತರಂಗಾಚಾರ್ಯರು ವಿಶ್ವಕೋಶವಾಗಿ ಹಬ್ಬಿದ ಮಾರಿಬಲೆ. ಇಬ್ಬರ ದಾರಿಯೂ ಕೆಲಮಟ್ಟಿಗೆ ಭಿನ್ನ; ಆದರೆ ಅನುಸಂಧಾನಯೋಗ್ಯ. ಇಬ್ಬರೂ 'ನಾಮೆಲ್ಲಮೊಂದೆ ಗರುಡಿಯೊಳೋದಿದ ಮಾನಸರೆವು" (ಪಂಪಭಾರತ ೯-೪೮ ವ.) ಎಂದು ಹೆಮ್ಮೆಪಡುತ್ತಿದ್ದ ನಡೆಗಲಿಗಳು, ನುಡಿಗಲಿಗಳು.

## ೨

೧೯೪೮ರ ಮಧ್ಯಭಾಗದಲ್ಲಿ ಕಾಲೇಜು ವಿದ್ಯಾಭ್ಯಾಸಕ್ಕೆ ಎಂದು ನಾನು ಮೈಸೂರುನಗರಕ್ಕೆ ಬಂದೆ. ಹಳ್ಳದ ಕೇರಿಯಲ್ಲಿದ್ದ ಬಂಧುಗಳ ಮನೆಯಲ್ಲಿ ಬಿಡಾರಮಾಡಿ ಇಂಟರ್ ಮೀಡಿಯೆಟ್ ತರಗತಿಗೆ ವಿಶ್ವವಿದ್ಯಾನಿಲಯದ ಫಸ್ಟ್ ಗ್ರೇಡ್ ಕಾಲೇಜು (ಈಗ ಯುವರಾಜ ಕಾಲೇಜು) ಸೇರಿದೆ. ಆಗ್ಗೆ ಅಲ್ಲಿದ್ದ ಕನ್ನಡ ಅಧ್ಯಾಪಕರಲ್ಲಿ ಎನ್. ಅನಂತರಂಗಾಚಾರ್ಯರೇ ಹಿರಿಯರು. ಅವರು ನಮಗೆ ಕಲಿಸುತ್ತಿದ್ದ ಪಠ್ಯ ಡಿ.ಎಲ್. ನರಸಿಂಹಾಚಾರ್ಯರು ಸಂಪಾದಿಸಿದ್ದ 'ಪಂಪರಾಮಾಯಣ ಸಂಗ್ರಹ'. ಅವರ ಪಾಠದ ವಿಚಾರವಿರಲಿ, ಅವರ ದೇಹಸೌಷ್ಠವ ವರ್ಚಸ್ಸು, ಉತ್ಸಾಹಗುಣ ಬಹುಬೇಗ ನಮ್ಮನ್ನು ಅವರತ್ತ ಸೆಳೆದುಕೊಂಡುವು. ಅವರ ಸ್ಮಿತಪೂರ್ವಭಾಷಿತ್ವ, ಮುಖಪ್ರಸನ್ನತೆ ಧ್ವನಿಗಾಂಭೀರ್ಯ ನಮಗೆ ಮೋಹಕವಾಗಿ ಕಂಡುವು.

ಆಚಾರ್ಯರ ಪಾಠಕ್ರಮ ವಿಶಿಷ್ಟವಾದುದು. ನನಗೆ ತಿಳಿದಂತೆ ಅವರು ಅಂತಹ ಪೂರ್ವಸಿದ್ಧತೆಯನ್ನೇನೂ ಮಾಡಿಕೊಂಡು ತರಗತಿಗೆ ಬರುತ್ತಿರಲಿಲ್ಲ. ಆ ಮೊದಲು ಈ ಪಠ್ಯವನ್ನು ಹಲವು ವರ್ಷ ವಿದ್ಯಾರ್ಥಿಗಳಿಗೆ ಅವರು ಕಲಿಸಿದ್ದಿರಬೇಕು. ಹೀಗಾಗಿ ಪೂರ್ವಸಿದ್ಧತೆ ಬೇಕಾಗುತ್ತಿರಲಿಲ್ಲವೇನೋ. ಕೆಲವೊಮ್ಮೆ ವಿದ್ಯಾರ್ಥಿಗಳಿಂದಲೇ ಪಠ್ಯಪುಸ್ತಕವನ್ನು ಕೇಳಿ ಪಡೆದುಕೊಂಡು ಪಾಠಮಾಡುತ್ತಿದ್ದರು. ಅವರು ಗಹನ ಗಂಭೀರವಾದ ವಿಚಾರವಿಮರ್ಶೆಗಳಿಂದ ಎಂದೂ ಪಾಠಕ್ಕಾಗಿ ತಲೆಬಿಸಿ ಮಾಡಿಕೊಂಡವರಲ್ಲ; ವಿದ್ಯಾರ್ಥಿಗಳಿಗೂ ತಲೆಬಿಸಿ ಮಾಡಿದವರಲ್ಲ.

ಪಾಠದಲ್ಲಿ ಸರಳತೆ ನಿರರ್ಗಳತೆಗಳು ಎದ್ದು ಕಾಣುವ ಲಕ್ಷಣಗಳಾಗಿದ್ದುವು. ಪಾಠದ ಮುಖ್ಯ ಆಕರ್ಷಣೆಯೆಂದರೆ, ಪದ್ಯಗಳನ್ನು ವಾಚಿಸುತ್ತಿದ್ದ ಧಾಟಿ. ಸರಾಗವಾಚನದಿಂದ ಆ ಪದ್ಯಗಳು ವಿದ್ಯಾರ್ಥಿಗಳಿಗೆ ಸುಖಕರವಾದ ಅನುಭವ ಕೊಡುತ್ತಿದ್ದವು. ಇದು ಅವರೇ ಒಮ್ಮೆ ನನಗೆ ಹೇಳಿದಂತೆ, ಅವರ ಗುರುಗಳಾಗಿದ್ದ ಕಾನಕಾನಹಳ್ಳಿ ವರದಾಚಾರ್ಯರ ಪದ್ಧತಿ.

ಆಚಾರ್ಯರ ಪಾಠಕ್ರಮ, ಹಳಗನ್ನಡ ಭಾಷೆಯ ನಾದಮಾಧುರ್ಯ ಗಾಂಭೀರ್ಯಗಳು ನಾನು ಮುಂದೆ ಕನ್ನಡವನ್ನು ವಿಶೇಷವಾಗಿ ಕಲಿಯುವುದಕ್ಕೆ ನನಗೆ ಪ್ರಬಲವಾಗಿ ಪ್ರೇರಣೆ ನೀಡಿದುವು. ನನ್ನ ಹೈಸ್ಕೂಲು ಕನ್ನಡ ಅಧ್ಯಾಪಕರೂ ನನ್ನ ಕನ್ನಡಪ್ರೀತಿಗೆ ತಕ್ಕ ಅಭಿಪ್ರಾಯ ಹಾಕಿದ್ದರು. ಒಮ್ಮೆ ಆಚಾರ್ಯರು ಫಸ್ಟ್‌ಗ್ರೇಡ್ ಕಾಲೇಜು ಮೆಟ್ಟಿಲು ಹತ್ತಿ ಮೇಲೆ ಹೋಗುತ್ತಿರುವಾಗ, ನಾನು ನೇರವಾಗಿ ಅವರನ್ನು ಕೇಳಿದೆ :" ಸರ್, ಕನ್ನಡ ಬಿ.ಎ. ಆನರ್ಸ್ ಸೇರಬೇಕಾದರೆ ನಾನು ಏನು ಮಾಡಬೇಕು?" ಅವರು ತಕ್ಷಣವೇ ಹಸನ್ಮುಖರಾಗಿ, "ನೂರಕ್ಕೆ ಐವತ್ತರ ಮೇಲೆ ಅಂಕಗಳು ಬರಬೇಕು" ಎಂದರು.

ಕನಸು ನನಸಾಯಿತು. ನಾನು ಕನ್ನಡ ಬಿ.ಎ. ಆನರ್ಸ್ ವಿದ್ಯಾರ್ಥಿಯಾದೆ. ಕುವೆಂಪು ಅವರು ಸೇರಿದಂತೆ ಇಲ್ಲಿ ದೊಡ್ಡದೊಡ್ಡ ಅಧ್ಯಾಪಕರು ಪಾಠ ಹೇಳುತ್ತಿದ್ದರು. ಆ ವರ್ಷ (೧೯೫೦) ಅನಂತರಂಗಾಚಾರ್ಯರು ನಮಗೆ 'ಶಬ್ದಮಣಿದರ್ಪಣ'ದ ಪಾಠ ತೆಗೆದುಕೊಂಡರು. ಅವರು ಈ ವ್ಯಾಕರಣಪಾಠ ಮಾಡುತ್ತಿದ್ದುದು ೧೦-೧೫ ನಿಮಿಷವಷ್ಟೆ, ಅದೂ ಇನ್ನೇನು ತರಗತಿ ಮುಗಿಯುವ ವೇಳೆ ಬಂದಿದೆ ಎನ್ನುವಾಗ. ಇದು ಅವರಿಗೆ ಇಷ್ಟವಾದ ವಿಷಯವಾಗಿದ್ದಂತೆ ತೋರದು. ಆ ಮೊದಲು ಅವರು ವಿದ್ಯಾರ್ಥಿಗಳ ಲೋಕಾನುಭವಕ್ಕೆ ಬೇಕಾಗುವ ಏನೇನೋ ವಿಷಯಗಳನ್ನು ಒಂದೇ ಸಮನೆ ಹೇಳುತ್ತಿದ್ದರು. ಈ ವಿಷಯಗಳು ದಶಕಗಳ ಹಿಂದಿನ ಕನ್ನಡ ಜನದ ಬದುಕು ಬವಣೆಗಳಿಗೆ, ಆಚಾರ ವಿಚಾರಗಳಿಗೆ ಸಂಬಂಧಿಸಿ ಇರುತ್ತಿದ್ದುವು. ಈ ವಿಷಯಗಳೇ ಪುಸ್ತಕಪಾಠಕ್ಕಿಂತ ಮುಖ್ಯವೆಂದು ಅವರು ಭಾವಿಸಿದ್ದರೆಂದು ತೋರುತ್ತದೆ. ಎಷ್ಟೋ ವೇಳೆ, "ನಾವು ಬದುಕುತ್ತಿರುವ ಕಾಲ ಬರಡುಗಾಲ, ನಾವು ಒಳ್ಳೆಯವು ಸವಿಯಾದವು ಎನ್ನುವುದನ್ನು ಕಾಣದ ನತದೃಷ್ಟರು" ಎನ್ನುವ ಹಾಗೆ ಅವರ ನಿರೂಪಣೆಯಿರುತ್ತಿದ್ದಿತು. "ಮಕ್ಕಳುಣ್ಣುವ ಕಾಲಕ್ಕೆ ಬರ ಬಂತು" ಎನ್ನುವ ಮಾತನ್ನು ನಾನು ಮೊದಲು ಅವರ ಬಾಯಲ್ಲೇ ಕೇಳಿದ್ದು. ಯಾವಾಗಲೂ ಉಲ್ಲಾಸ ಉತ್ಸಾಹ ಅವರ ಮುಖಭಾವದಲ್ಲಿ ಚಿಮ್ಮುತ್ತಿದ್ದುವು. ಬಿರುಗಾಳಿಯಂತೆ ತರಗತಿಯೊಳಗೆ ನುಗ್ಗಿ ಬಂದು, ವಿಲಕ್ಷಣವಾದ ಋಜುಭಂಗಿಯಲ್ಲಿ ನಿಂತು ಅವರು ಪಾಠವನ್ನು ಆರಂಭಿಸುವುದು ನಮಗೆ ಮೋಹಕವಾಗಿ ಕಾಣುತ್ತಿತ್ತು. ಒಂದು ಗತ್ತಿನಲ್ಲಿ ಪಠ್ಯಪುಸ್ತಕವನ್ನು ಬಲಗೈಯಿಂದ ಎದೆಗವಚಿ ಹಿಡಿಯುವಲ್ಲಿಯೂ ಸೊಗಸು ಗಾಂಭೀರ್ಯಗಳನ್ನು ಕಾಣಬಹುದಾಗಿತ್ತು.

ವಿದ್ಯಾರ್ಥಿಗಳನ್ನು ಪ್ರೇಕ್ಷಣೀಯ ಸ್ಥಳಗಳಿಗೆ ಕರೆದೊಯ್ಯುವುದರಲ್ಲಿ ಅವರಿಗೆ ತುಂಬ ಉತ್ಸಾಹ. ಒಂದು ದಿನದ ಪ್ರವಾಸದಲ್ಲಿ ಒಮ್ಮೆ ಸೋಮನಾಥಪುರ ತಲಕಾಡು ಶಿವನಸಮುದ್ರಗಳಿಗೆ ಅವರು ನಮ್ಮನ್ನೆಲ್ಲ ಕರೆದುಕೊಂಡು ಹೋಗಿದ್ದರ ನೆನಪು ನನಗೆ ಚೆನ್ನಾಗಿದೆ.

ಅವರ ವಿದ್ಯಾರ್ಥಿಗಳೇ ಆಗಿದ್ದು ನಮ್ಮ ಕಾಲಕ್ಕೆ ಅಧ್ಯಾಪಕರಾಗಿದ್ದ ಉ.ಕಾ. ಸುಬ್ಬರಾಯಾಚಾರ್ಯರು ಸಹ ಅಂದು ಜೊತೆಗಿದ್ದರು. ಆಚಾರ್ಯರು ತಾವೇ ಶಿಲ್ಪಗಳು ಶಾಸನಗಳು ಮುಂತಾದವುಗಳ ಐತಿಹಾಸಿಕ ವಿವರಗಳನ್ನು ಮಾರ್ಗದರ್ಶಕನಂತೆ ನಿರೂಪಿಸುತ್ತಿದ್ದರು. ಉ.ಕಾ.ಸು. ಅವರನ್ನು ಪಕ್ಕಕ್ಕೆ ಕರೆದು ನಿಲ್ಲಿಸಿಕೊಂಡು ಸೋಮನಾಥಪುರದ ಶಿಲ್ಪಗಳ ಬಗೆಗೆ ವಿವರವಾಗಿ ತಿಳಿಸಿದ್ದು ಸಹ ಕಣ್ಣಿಗೆ ಕಟ್ಟಿದಂತಿದೆ. ಇಂತಹ ಪ್ರವಾಸಗಳಲ್ಲಿ ಆಚಾರ್ಯರು ತಮ್ಮ ಮನೆಯಲ್ಲಿಯೇ ರುಚಿಕರವಾದ ಬಗೆಬಗೆಯ ತಿಂಡಿಗಳನ್ನು ಅನ್ನಗಳನ್ನೂ ಮಾಡಿಸಿಕೊಂಡು ಬರುತ್ತಿದ್ದರಲ್ಲದೆ, ತಾವೇ ನಿಂತು ವಿದ್ಯಾರ್ಥಿಗಳಿಗೆ ಉಪಚಾರಮಾಡುತ್ತ ಬಡಿಸುತ್ತಿದ್ದರು. ಸಂಪ್ರದಾಯಸ್ಥರಾದ ತಾವು ಮಾತ್ರ ಏನನ್ನೂ ತೆಗೆದುಕೊಳ್ಳುತ್ತಿರಲಿಲ್ಲ ಅಥವಾ ಏನಾದರೂ ಹಣ್ಣು ತಿನ್ನುತ್ತಿದ್ದರೋ ಏನೋ! ನಮ್ಮ ಪ್ರವಾಸಕ್ಕೆ ತಲಾ ಆರೆಂಟು ರೂಪಾಯಿಗಳನ್ನು ವಿದ್ಯಾರ್ಥಿಗಳಿಂದ ವಸೂಲು ಮಾಡಿದ್ದರೆಂದು ತೋರುವುದು. ನಾನು ಆ ಹಣ ಕೊಡುವ ಸ್ಥಿತಿಯಲ್ಲಿರಲಿಲ್ಲ; "ಪರವಾ ಇಲ್ಲ, ಬಾ" ಎಂದು ಶಿಷ್ಯವಾತ್ಸಲ್ಯ ತೋರಿಸಿದರು. ಆ ವಾತ್ಸಲ್ಯಪಥದಲ್ಲಿ ನಾನು ಮುಂದೆಯೂ ಉದ್ದಕ್ಕೆ ನಡೆದೆ.

ನಾನು ಕನ್ನಡ ಎಂ. ಎ. ತರಗತಿಗೆ ಸೇರಿದಾಗ (೧೯೫೩) ಆಚಾರ್ಯರು ನಮಗೆ ಯಾವ ಪಾಠವನ್ನೂ ತೆಗೆದುಕೊಳ್ಳಲಿಲ್ಲ. ಈ ವರ್ಷ ನಾನು ವಸತಿ ಊಟಗಳಿಗೆ ನನ್ನದೇ ಏರ್ಪಾಟುಗಳನ್ನು ಮಾಡಿಕೊಳ್ಳಬೇಕಾಗಿ ಬಂತು. ಶಿಷ್ಯಸುಲಭರಾದ ಆಚಾರ್ಯರನ್ನು ವಾರಾನ್ನಕ್ಕೆ ಆಶ್ರಯಿಸಿದೆ. ನನ್ನ ಮನಸ್ಸಿಗೆ ಯಾವ ಕಿಂಕೃತಿಯೂ ಆಗದ ಹಾಗೆ ತಮ್ಮ ಹಾಗೂ ತಮ್ಮ ಒಬ್ಬ ಸೋದರರ ಮನೆಯಲ್ಲಿ ಎರಡು ದಿನಗಳ ಏರ್ಪಾಡು ಮಾಡಿಕೊಟ್ಟರು. ನಮ್ಮ ಇನ್ನೊಬ್ಬ ಗುರುಗಳಾದ ಕ.ವೆಂ. ರಾಘವಾಚಾರ್ಯರೂ ಒಂದು ದಿನಕ್ಕೆ ಅವಕಾಶ ಮಾಡಿಕೊಟ್ಟರು. ಬೇರೊಂದು ರೀತಿಯಲ್ಲಿ ತ. ಸು. ಶಾಮರಾಯರೂ ಎಸ್.ವಿ. ಪರಮೇಶ್ವರ ಭಟ್ಟರೂ ಸಹಾಯ ಮಾಡಿದರು. ಡಿ.ಎಲ್. ನರಸಿಂಹಾಚಾರ್ಯರ ಎದುರಿನಲ್ಲಿ ನಿಂತು ಅವರನ್ನು ಏನು ಕೇಳುವುದಕ್ಕೂ ನನಗೆ ಧೈರ್ಯವಾಗಲಿಲ್ಲ. ಆದರೆ ಮುಂದೆ ನಾನು ಎಂ.ಎ. ಮುಗಿಸಿದ ಮೇಲೆ ಅವರು ನನಗೆ ಮಿಗಿಲಾದ ನೈತಿಕಸ್ಥೈರ್ಯವನ್ನು ನೀಡಿದರು, ಅನೇಕ ವಿಧಗಳಲ್ಲಿ ಸಹಾಯವನ್ನೂ ಮಾಡಿದರು.

ಆಚಾರ್ಯರು ತಮ್ಮ ಜೊತೆಗೇ ನನ್ನನ್ನೂ ಊಟಕ್ಕೆ ಕೂರಿಸಿಕೊಳ್ಳುತ್ತಿದ್ದರು. ನಾನೂ ಅವರ ಮಕ್ಕಳೂ ಸಾಲಾಗಿ ಕೂರುತ್ತಿದ್ದೆವು. ಅದರಲ್ಲಿ ಯಾವ ಪಂಕ್ತಿಭೇದದ ಮುಚ್ಚುಮರೆಯೂ ಇರುತ್ತಿರಲಿಲ್ಲ. ಗುರುಪತ್ನಿ ಮೊದಲಲ್ಲಿ ಅನ್ನ ತಂದು ಬಡಿಸುವಾಗ ನನಗೆ ಭಯವಾಗುತ್ತಿತ್ತು. ಅವರು ಒಂದು ಸಲ ಎಲೆಗೆ ಅನ್ನ ಬಡಿಸಿದರೆಂದರೆ, ಅದು ನನಗೆ ಮೂರು ಹೊತ್ತಿಗೆ ಸಾಕಾಗುವಷ್ಟು ಪ್ರಮಾಣದಲ್ಲಿರುತ್ತಿತ್ತು. ಆಚಾರ್ಯರು ತಾವು ಪರಿಷ್ಕಾರವಾಗಿ ಊಟಮಾಡುತ್ತಲೇ, ನನಗೆ ಹೀಗೆ ಹೀಗೆ ಊಟ ಮಾಡಬೇಕು, ವ್ಯಂಜನಗಳನ್ನು ಹೀಗೆ ಸವಿಯಬೇಕು ಎಂದು ತಿಳಿಯಹೇಳುತ್ತಿದ್ದರು. ನಾನು ಮಜ್ಜಿಗೆ ಮೊಸರು ಬಳಸುವುದಿಲ್ಲ ಎಂಬುದಕ್ಕೆ ಕನಿಕರ ಪಡುತ್ತಿದ್ದರು. ಅವರ ತಮ್ಮನ ಮನೆಯ ಊಟದಲ್ಲಿ ಸಾಮಾನ್ಯವಾಗಿ ಗೋರಿಕಾಯಿ ಬಾಳಕ ನನಗೆ ತುಂಬ ಇಷ್ಟವಾಗುತ್ತಿತ್ತು. ಮಜ್ಜಿಗೆ ಮೊಸರು ಬಳಸುತ್ತಿರಲಿಲ್ಲವಾದ್ದರಿಂದ ಎರಡು

ಸಲ ಸಾರೋ ಹುಳಿಯೋ ಹಾಕಿಸಿಕೊಳ್ಳುತ್ತಿದ್ದೆ. ಒಂದೊಂದು ಸಲ ರಾತ್ರಿಯ ಊಟದಲ್ಲಿ ಅದು ತಕ್ಕ ಪ್ರಮಾಣದಲ್ಲಿ ಉಳಿಯುದೆ, ಮನೆಯ ಯಜಮಾನಿತಿ 'ಮಜ್ಜಿಗೆ ಹಾಕಿಸಿಕೊಳ್ಳಿಪ್ಪ' ಎನ್ನುತ್ತಿದ್ದರು. ನನ್ನ ರೂಢಿ ತಿಳಿಯದೆ ಅಥವಾ ಮರೆತುಹೋಗಿ ಅವರು ಪೇಚಿಗೆ ಸಿಕ್ಕಿಕೊಳ್ಳುತ್ತಿದ್ದುದುಂಟು.

ಆಚಾರ್ಯರು ತಮ್ಮ ಮನೆಯ ಯಾವುದೇ ವಿಶೇಷಕಾರ್ಯಕ್ರಮದಲ್ಲಿಯೂ ಅದು ಸಾರ್ವತ್ರಿಕವಿರಲಿ ಖಾಸಗಿಯಿರಲಿ, ನನ್ನನ್ನು ಬರಮಾಡಿಕೊಳ್ಳುತ್ತಿದ್ದರು. ಸಾರ್ವತ್ರಿಕ ಎಂದರೆ ಗೋಕುಲಾಷ್ಟಮಿಯ ಕೃಷ್ಣಪ್ರಸಾದದ ಮಧುರವಾದ ಆಹ್ವಾನ. ಪುಳಿಯೋಗರೆಯೊಂದಿಗೆ ಹತ್ತಾರು ಸಿಹಿ ಖಾರದ ತಿಂಡಿಗಳನ್ನು ಕೇಳಿ ಕೇಳಿ ಆಚಾರ್ಯರೂ ಮನೆಯ ಮಕ್ಕಳೂ ಸಂಭ್ರಮದಿಂದ ಬಡಿಸುತ್ತಿದ್ದರು. ಶುಭ್ರ ಸಾಂಪ್ರದಾಯಿಕ ವೇಷಭೂಷಣಗಳಲ್ಲಿ ಆಚಾರ್ಯರು ತಾವು ನಿಂತೇ ಇದ್ದು ಅತಿಥಿಗಳನ್ನು ಉಪಚರಿಸುತ್ತಿದ್ದರು. ತಮಿಳು ಸಿಹಿಭಕ್ಷ್ಯವಾದ ತುಣೆತೇಂಗೊಳಲು ಎಂಬ ಅಪೂರ್ವವಾದ ಸಿಹಿಪದಾರ್ಥವನ್ನು ನಾನು ಮೊದಲ ಸಲ ಕಂಡಿದ್ದೂ ಉಂಡಿದ್ದೂ ಇಲ್ಲಿಯೇ. ಎಷ್ಟು ಕಾಲದಿಂದ ಅವರ 'ನೃಸಿಂಹಪ್ರಾಸಾದ'ದಲ್ಲಿ ಈ ಸೇವೆ ನಡೆಯುತ್ತಿದ್ದಿತೋ ನನಗೆ ತಿಳಿಯದು. ನಾನು ಈ ಸಲುವಾಗಿ ಅವರ ಮನೆಗೆ ಹೋಗುವುದು ರೂಢಿಯಾದಾಗ ಎಸ್.ವಿ. ರಂಗಣ್ಣ, ಕೆ. ವೆಂಕಟರಾಮಪ್ಪ, ಎಚ್. ಎಂ. ಶಂಕರನಾರಾಯಣ ರಾವ್ ಮೊದಲಾದವರು ಅಲ್ಲಿ ಸೇರುತ್ತಿದ್ದುದನ್ನು ಕಂಡಿದ್ದೇನೆ. ಕನಿಷ್ಠಪಕ್ಷ ೨೦-೨೫ ಜನವಾದರೂ ಹೀಗೆ ಸೇರುತ್ತಿದ್ದರು. ಇನ್ನು ಖಾಸಗಿಯಾದುದು ಎಂದರೆ, ಮನೆಯ ಸಣ್ಣ ದೊಡ್ಡ ಧಾರ್ಮಿಕ ಕಾರ್ಯಕ್ರಮಗಳು, ಪೂಜೆ ಮೊದಲಾದುವು. ತಪ್ಪದೆ ಒಳ್ಳೆಯ ಊಟಕ್ಕೆ ಇವು ಆಹ್ವಾನಗಳಾಗಿರುತ್ತಿದ್ದುವು. ಇಂತಹ ಒಂದು ಸನ್ನಿವೇಶದಲ್ಲಿ ಅವರು 'ಕರ್ಣಾಟಕ ಕಾದಂಬರಿ'ಯ ನಾಂದೀಪದ್ಯವನ್ನು ರಾಗವಾಗಿ ವಾಚಿಸಿ, "ಎಲ್ಲಯ್ಯ, ಈಗ ನೀನು ಹೇಳು ನೋಡೋಣ" ಎಂದರು. ನಾನೇನೂ ಏಕಸಂಧಿಗ್ರಾಹಿಯಲ್ಲ, ದ್ವಿಸಂಧಿ ತ್ರಿಸಂಧಿಗ್ರಾಹಿಯೂ ಅಲ್ಲ. ನನಗೆ ಕಷ್ಟವಾಯಿತು. ನಡುನಡುವೆ ಸಾಲು ತಪ್ಪುತ್ತಿತ್ತು. ಪೂರ್ತಿ ಸರಿಯಾಗಿ ಹೇಳಿದ ಮೇಲೆಯೇ ನಾನು ಬಿಡುಗಡೆ ಪಡೆದದ್ದು; ಹೊರಡಲು ಹೊಸ್ತಿಲಾಚೆಗೆ ನಾನು ನಿಂತಿದ್ದಾಗ ನನಗೆ ಈ ಪರೀಕ್ಷೆಯನ್ನೊಡ್ಡಿದ್ದರು, ಅದೃಷ್ಟದಿಂದ ತೇರ್ಗಡೆಯಾದೆ.

ನಾನು ಮೈಸೂರು ಬಿಟ್ಟು ಬೇರೆ ಬೇರೆ ಕಡೆ ಅಧ್ಯಾಪಕ ವೃತ್ತಿ ನಡಸಿ ೧೯೬೮ರಲ್ಲಿ ಮೈಸೂರಿಗೆ ಮರಳಿ, ಮಾನಸಗಂಗೋತ್ರಿ ಸೇರಿದೆ. ನಾನು ವಿದ್ಯಾರ್ಥಿಯಾಗಿದ್ದಾಗ ಅವರ ಬರಹಗಳಲ್ಲಿ ಕೆಲವನ್ನು ನನಗೆ ಓದಿ ಹೇಳುತ್ತಿದ್ದರು, ನನ್ನಿಂದ ನಕಲು ಮಾಡಿಸುತ್ತಿದ್ದರು. ಮೈಸೂರಿನಲ್ಲಿ ಅಧ್ಯಾಪಕನಾದ ಮೇಲೆ ನಾನು ಪ್ರಬುದ್ಧ ಕರ್ಣಾಟಕದ ಸಂಪಾದಕನಾಗಿದ್ದಾಗ ಅವರು ಬರೆದು ಕಳಿಸುತ್ತಿದ್ದ ಬರಹಗಳನ್ನು ಆದ್ಯತೆಯ ಮೇಲೆ ಅಚ್ಚಾಗುವಂತೆ ನೋಡಿಕೊಳ್ಳುತ್ತಿದ್ದೆ. ಅವರೂ ೧೯೪೮-೫೩ರ ನಡುವೆ ತ. ಸು. ಶಾಮರಾಯರೊಂದಿಗೆ ಪತ್ರಿಕೆಯ ಸಂಪಾದಕರಾಗಿದ್ದವರು. ಈ ಅವಧಿಯಲ್ಲಿ ಕೆಲವು ಸಂಚಿಕೆಗಳು ಕೃಶಗಾತ್ರದಲ್ಲಿರುತ್ತಿದ್ದುದು

ನಿಜ; ಆದರೆ ಎಸ್. ವಿ.ಪರಮೇಶ್ವರ ಭಟ್ಟ, ಆರ್. ಎಲ್. ನರಸಿಂಹಯ್ಯ, ಕೆ. ಕೃಷ್ಣಮೂರ್ತಿ ಮೊದಲಾದವರ ಬರಹಗಳು ಧಾರಾವಾಹಿಗಳಾಗಿ ಬರುತ್ತ ಆಸಕ್ತರನ್ನು ಸೆಳೆಯುತ್ತಿದ್ದವು. ಅವರು ಸಂಪಾದಕರಾಗಿದ್ದಾಗ ನನ್ನ ಮೇಲೆ ಕೃಪೆ ತೋರಿ ಆಗ ನಾನು ಬರೆಯುತ್ತಿದ್ದ ವಚನಕವನಗಳಿಂದ ಒಂದು ವಚನವನ್ನು ಆಯ್ದು ಪ್ರ.ಕ.ದಲ್ಲಿ ಮುದ್ರಿಸಿದರು (ಚಂದ್ರಿಕಾ :m ೩೩-೩). ಆಗ ನನಗಾದ ಸಂತೋಷ ಅಷ್ಟಿಷ್ಟಲ್ಲ. ಉಳಿದವು ಬೇರೊಂದು ಮಾಸಪತ್ರಿಕೆಯಲ್ಲಿ ಕ್ರಮವಾಗಿ ಪ್ರಕಟವಾಗುತ್ತಿದ್ದ ಕಾರಣ, ಅವರು ಅಪೇಕ್ಷಿಸಿದರೂ ನನಗೆ ಮತ್ತೆ ಕೊಡುವುದಾಗಲಿಲ್ಲ. ಈಗ ಆ ಎಲ್ಲ ಬರಹಗಳೂ ಆ ಮಾಸಪತ್ರಿಕೆಯಂತೆಯೇ ಪೂರ್ತಿ ನಷ್ಟವಾಗಿ ಹೋಗಿವೆ. ಈ ವಚನಕವನಗಳು ನನ್ನ ಹಳಗನ್ನಡಪ್ರೀತಿಯ ಮೊದಲ ತೊದಲುಗಳು (೧೯೫೨-೫೩).

ಆಚಾರ್ಯರು ೧೯೮೬ ಡಿಸೆಂಬರ್ ತಿಂಗಳಲ್ಲಿ ದೇಹಾಂತವನ್ನೈದುವವರೆಗೆ ನನಗೆ ಅವರ ಒಡನಾಟವಿರುತ್ತಿತ್ತು. ಅವರು ನನ್ನನ್ನು ಬಿಡುತ್ತಿರಲಿಲ್ಲ; ನಾನು ಅವರನ್ನು ಬಿಡುತ್ತಿರಲಿಲ್ಲ. ಆಗಿಂದಾಗ್ಗೆ ಅವರ ಮನೆಗೆ ಹೋಗಿ ಅವರೊಂದಿಗೆ, ಮನೆಯವರೊಂದಿಗೆ ಮಾತಾಡಿ ಬರುತ್ತಿದ್ದೆ; ಜೊತೆಗೆ ನನ್ನ ಪತ್ನಿಯನ್ನೂ ಕರೆದುಕೊಂಡು ಹೋಗುತ್ತಿದ್ದೆ. ಯೋಗಕ್ಷೇಮದ ಜೊತೆಗೆ ಏನಾದರೂ ಸಾಹಿತ್ಯವಿಷಯ ಚರ್ಚಿಸುತ್ತಿದ್ದರು, ತಾವು ಬರೆದುದನ್ನು ಓದಿ ಹೇಳುತ್ತಿದ್ದರು, ಪರಿಷ್ಕರಿಸಿಕೊಡುವಂತೆ ಕೇಳುತ್ತಿದ್ದರು. ನಾನು ಹೋಗುವುದು ತಡವಾದರೆ ಕಾಗದ ಬರೆದು ಕರೆಸಿಕೊಳ್ಳುತ್ತಿದ್ದರು. ಕಾಗದ ಬರೆದರೂ ನಾನು ಹೋಗದ ಸಂದರ್ಭಗಳಿವೆ. ಹೀಗೊಂದು ಸಲ ತಡೆದು ಅವರನ್ನು ಭೇಟಿಯಾದಾಗ, ಅವರು ನೊಂದುಕೊಂಡು ಕಠಿನವಾಗಿ ಮಾತಾಡಿದರು. ನನ್ನ ಮನಸ್ಸು ಅದನ್ನು ಅಪಮಾನವಾಗಿ ಭಾವಿಸಿತು. ಅವರು ಮಾತು ಮುಗಿಸಿದ ಮೇಲೆ, "ತಾವು ನನ್ನ ಗುರುಗಳು, ಆದ್ದರಿಂದ ಸಹಿಸಿಕೊಳ್ಳುತ್ತೇನೆ" ಎಂದುಬಿಟ್ಟೆ. ಆಮೇಲೆ ಅಂತಹ ಸಂದರ್ಭ ಬಾರದ ಹಾಗೆ ಎಚ್ಚರವಹಿಸಿದೆ. ಅವರ ಕಣ್ಣ ಮುಂದೆ ಬೆಳೆದವನು ನಾನು; ಅವರ ಮನೆಯ ಅನ್ನ ಉಂಡು ಬೆಳೆದವನು; ಹಾಗೆ ನಾನು ಮಾತಾಡಬಾರದಿತ್ತು ಎಂದು ಆಮೇಲೆ ತುಂಬ ಬೇಸರಪಟ್ಟೆ.

ಆಚಾರ್ಯರು ಕನ್ನಡ ಅಧ್ಯಯನ ಸಂಸ್ಥೆಗೆ ಆಗಾಗ ಬರುತ್ತಿದ್ದರು; ಆಗ ಅವರು ನನ್ನ ಕೋಣೆಗೂ ಬಂದು ಮಾತಾಡಿಸುತ್ತಿದ್ದರು. ಹೀಗೆ ಬಂದು ಹೋಗುವಾಗ ಸೈಕಲ್ ಮೇಲೆಯೇ ಬರುತ್ತಿದ್ದರು. ೭೦ ದಾಟಿದ ಮೇಲೆಯೂ ಇದು ನಡೆದಿತ್ತು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುಸ್ತಕ ಬಹುಮಾನಸ್ಪರ್ಧೆಯಲ್ಲಿ ಒಂದು ಸಲ ಇಬ್ಬರಿಗೂ ಪ್ರಶಸ್ತಿ ಬಂತು. ಅವರಿಗಂತೂ ತುಂಬ ಸಂತೋಷವಾಯಿತು. ವಿದ್ಯಾರ್ಥಿಗಳನ್ನು ಅವರು ಉದ್ದೇಶಿಸಿ ಮಾತಾಡುವಾಗ ಸ್ವಾಮಿ (ಎಚ್. ತಿಪ್ಪೇರುದ್ರ ಸ್ವಾಮಿ), ಶಾಸ್ತ್ರಿ ಎಂದು ಹ್ರಸ್ವಗೊಳಿಸಿ ತಮ್ಮ ಆತ್ಮೀಯತೆಯನ್ನು ಪ್ರಕಟಿಸುತ್ತಿದ್ದರು.

ಆಚಾರ್ಯರು ತಮ್ಮ ಪೂರ್ವವಯಸ್ಸಿನಲ್ಲಿ ಚೆನ್ನಾಗಿ ವ್ಯಾಯಾಮಮಾಡುತ್ತಿದ್ದರು. ಕ್ರಮಬದ್ಧವಾಗಿ ಸಾಮುಮಾಡಿ ತಮ್ಮ ದೇಹಾರೋಗ್ಯ ಕಾಪಾಡಿಕೊಂಡವರು. ಅವರು ದಂಡ

ಬಸ್ಕಿ ತೆಗೆಯುತ್ತಿದ್ದರು. ಕರೇಲ ತಿರುಗಿಸುತ್ತಿದ್ದರು. ಕುಸ್ತಿ ಮಾಡುತ್ತಿದ್ದರು. ಕುಸ್ತಿಪಟುವಾಗಿ ಮೈಸೂರಿನ ಪೈಲ್ವಾನರೊಂದಿಗೆ ಕುಸ್ತಿಮಾಡುವರೆಂದು ಸಹ ಬಲ್ಲವರಿಂದ ನಾನು ಕೇಳಿದ್ದೇನೆ. ಇತಿಹಾಸಪ್ರಾಧ್ಯಾಪಕ ಎಂ.ಎಚ್. ಕೃಷ್ಣ ಅವರನ್ನು ಅವರ ಮಧ್ಯವಯಸ್ಸಿನಲ್ಲಿಯೂ ಒಳಿತಕ್ಕೋ ವ್ಯಾಯಾಮಮಾಡುವಂತೆ ತಾವು ಪ್ರೋತ್ಸಾಹಿಸಿದ್ದಾಗಿ ಒಮ್ಮೆ ನನಗೆ ತಿಳಿಸಿದರು. ಚಾಮುಂಡಿ ಬೆಟ್ಟದ ಮೆಟ್ಟಿಲು ಹತ್ತಿಳಿಯುವ ಸ್ಪರ್ಧೆಗಳಲ್ಲೂ ಅವರು ಇರುತ್ತಿದ್ದರು. ಈಗಲೂ ಅವರ ಮಕ್ಕಳು, ತಮ್ಮಂದಿರ ಮಕ್ಕಳು ಈ ವಿಷಯವನ್ನು ನೆನೆಯುತ್ತಾರೆ; ತಮಗೆ ದೊರೆತ ಮಾರ್ಗದರ್ಶನಕ್ಕೆ ಕೃತಜ್ಞತೆ ಸಲ್ಲಿಸುತ್ತಾರೆ.

ಮಧುಮೇಹ ತೀವ್ರಗೊಂಡು ಆಚಾರ್ಯರು ಕಾಲಿನ ವ್ರಣಕ್ಕೆ ಚಿಕಿತ್ಸೆಗೆ ಎಂದು ಕೆ.ಆರ್. ಆಸ್ಪತ್ರೆಗೆ ಸೇರುವಂತಾದಾಗ ನಾನು ಬಲುಮಟ್ಟಿಗೆ ನನ್ನ ಪತ್ನಿಯೊಂದಿಗೆ ಅವರನ್ನು ನೋಡಿಕೊಂಡು ಬರಲು ಹೋಗುತ್ತಿದ್ದೆ. ಅಲ್ಲಿ ಚಿಕಿತ್ಸೆ ಅವರಿಗೆ ತೃಪ್ತಿಕರವಾಗಿ ನಡೆದಂತೆ ತೋರಲಿಲ್ಲ. ಆ ವೇಳೆಗೆ ಅವರು ಬೇರೊಂದು ಖಾಸಗಿ ಆಸ್ಪತ್ರೆಯಲ್ಲಿಯೂ ಇದ್ದು ಬಂದಿದ್ದರು. ಆಗ್ಗೆ ಒಮ್ಮೆ ಹಾ. ಮಾ. ನಾಯಕರ ಅಪೇಕ್ಷೆಯಂತೆ ಅವರನ್ನು ಆ ಆಸ್ಪತ್ರೆಗೆ ಕರೆದೊಯ್ದಿದ್ದೆ. ಅಲ್ಲಿ ಆಚಾರ್ಯರ ಸ್ಥಿತಿ ಚಿಂತಾಜನಕವಾಗಿತ್ತು. ಆ ಸ್ಥಿತಿಯಲ್ಲಿಯೂ ಕನ್ನಡ ಎಂ.ಎ. ಮಾಡಿದ್ದ ತಮ್ಮ ಮಗಳಿಗಾಗಿ ಏನಾದರೂ ಉದ್ಯೋಗ ಸಾಧ್ಯವೇ ಎಂದು ಅವರನ್ನು ಪ್ರಶ್ನಿಸಿದ್ದು ನನ್ನ ನೆನಪಿನಲ್ಲಿದೆ. ಕೆ. ಆರ್. ಆಸ್ಪತ್ರೆಯ ಒಂದು ವಾರ್ಡಿನಲ್ಲಿದ್ದಾಗ ಅವರ ಮನೆಯವರೆಲ್ಲರೂ ಅವರನ್ನು ತುಂಬ ಮುತುವರ್ಜಿಯಿಂದ ನೋಡಿಕೊಂಡರು. ಒಂದು ಸಲ ಅವರು ಅರೆಪ್ರಜ್ಞಾವಸ್ಥೆಯಲ್ಲಿ ಎನ್ನುವಂತೆ ಇದ್ದಾಗ ನಾನು ಅಲ್ಲಿದ್ದೆ. ಅವರ ದೊಡ್ಡಮಗಳು ವಿಷ್ಣುಸಹಸ್ರನಾಮವನ್ನು ಗಟ್ಟಿಯಾಗಿ ಹೇಳುತ್ತಿದ್ದರು. ಆಚಾರ್ಯರ ಮುಖದತ್ತ ನನ್ನ ಕಣ್ಣು ಹಾಯಿಸಿದೆ. ಅವರು ತಮ್ಮ ಹೊಲದ ಸೂರ್ಯಕಾಂತಿ ಬೆಳೆಯ ವಿಚಾರ ಕನವರಿಸುತ್ತಿದ್ದರು. ಕೃಷಿ ಅವರ ಬದುಕಿನ ಒಳತಳದ ನಚ್ಚಾಗಿತ್ತು.

ತಿರುಮಕೂಡಲು ನರಸೀಪುರದಲ್ಲಿ ಆಚಾರ್ಯರಿಗೆ ಪೈತೃಕವಾಗಿ ಹಾಗೂ ಬಹುಶಃ ತಾವೇ ರೂಢಿಸಿದ ಹೊಲಗದ್ದೆಗಳಿದ್ದುವೆಂದು ಕಾಣುತ್ತದೆ. ಅವುಗಳಲ್ಲಿ ಒಬ್ಬ ಕೃಷಿಕರಾಗಿ ಬೆಳೆ ಬೆಳೆಯುವ ಹವ್ಯಾಸ ಅವರಿಗೆ ಎಂದಿನಿಂದಲೂ ಇತ್ತು. ಮನೆಯಲ್ಲಿ ಬತ್ತದ ಫಸಲು ಚೀಲಗಳಲ್ಲಿ ತುಂಬಿರುತ್ತ ಅವರು ಸುಭಿಕ್ಷದಲ್ಲಿದ್ದರೆನ್ನುವುದನ್ನು ಸಾರುತ್ತಿತ್ತು. ಇದರಿಂದಾಗಿ ಮನೆಯ ಸಂಸಾರ ದೊಡ್ಡದಾಗಿದ್ದರೂ ಅಲ್ಲಿ ನೆಮ್ಮದಿಗೆ ಯಾವ ಕೊರತೆಯೂ ಇರಲಿಲ್ಲ. ನನ್ನಂಥ ವಾರದ ಹುಡುಗರಿರಲಿ, ತಮ್ಮ ಬಳಗದ ಎಷ್ಟೋ ಜನ ವಿದ್ಯಾರ್ಥಿಗಳನ್ನು ಅವರು ತಮ್ಮ ಮನೆಯಲ್ಲಿ ವರ್ಷಗಟ್ಟಲೆ ಪೋಷಿಸುತ್ತಿದ್ದರು. ಹಾಗೆ ಪೋಷಣೆಗೊಂಡವರು, ತಮ್ಮ ಬದುಕಿನಲ್ಲಿ ಸುಸ್ಥಿತಿಯ ನೆಲೆಗೆ ಏರಿದಾಗ ಕೃತಜ್ಞತೆಯಿಂದ ಸ್ಮರಿಸುವುದನ್ನು ನಾನು ನೋಡಿದ್ದೇನೆ. ಸಂಸ್ಕೃತವಿದ್ವಾಂಸ ಎಸ್.ಎಸ್. ಅನಂತರಂಗಾಚಾರ್ಯರು ತಾವು ಐದು ವರ್ಷಕಾಲ ಏಕಪ್ರಕಾರವಾಗಿ ಅವರ ಮನೆಯಲ್ಲಿದ್ದು ವಿದ್ಯಾಭ್ಯಾಸ ಮಾಡಿದ್ದಾಗಿ ಹೇಳುತ್ತಾರೆ. ಒಮ್ಮೆ ನನಗೆ ಗುರುಗಳು ಅಲ್ಲೇ

ಇಷ್ಟು ಒಬ್ಬ ಕೂಲಿಯಾಳಿನ ಬಗ್ಗೆ ಹೀಗೆ ಒಂದು ಮಾತು ಹೇಳಿದರು : "ನೋಡಯ್ಯ, ಇವನು ಈಗ ಸೌದೆ ಒಡೆದು ಕೆಲಸ ಮುಗಿಸಿದ್ದಾನೆ. ಇವನಿಗೆ ನಾನು ಇಷ್ಟು ಕೂಲಿ ಕೊಡಬಹುದು; ಆದರೆ ಇವನಿಗೆ ಸಂತೋಷವಾಗುವುದಾದರೆ, ಅದು ನಾನು ಕರೆದು ಊಟ ಹಾಕಿದಾಗ ಮಾತ್ರ." ಇದನ್ನು ನಾನು ಆಗಾಗ ನೆನೆಯುತ್ತಿರುತ್ತೇನೆ. ಆಚಾರ್ಯರು ಮಾಡಿರುವಷ್ಟು ಅನ್ನದಾನ ಬಂಧು ಬಳಗದವರಲ್ಲಿ ಯಾರೂ ಮಾಡಿಲ್ಲವೆಂದು ಅವರಿಗೆ ಹತ್ತಿರದವರು ಈಗಲೂ ಹೇಳುತ್ತಿರುತ್ತಾರೆ.

ಆಚಾರ್ಯರ ದೇಹಸ್ಥಿತಿ ತೀರ ಕೆಟ್ಟು, ಏನೂ ಸುಧಾರಣೆಯಿಲ್ಲ ಎನ್ನುವಂತಾದಾಗ ಕುಟುಂಬದವರು ಹೇಗಾದರಾಗಲಿ ಎಂದು ಅವರನ್ನು ಅದೇ ಸ್ಥಿತಿಯಲ್ಲಿ ಕೆ. ಆರ್. ಆಸ್ಪತ್ರೆಯಿಂದ ಮನೆಗೆ ಸಾಗಿಸಿ ತಂದರು. ಆದರೆ ನಮ್ಮೆಲ್ಲರ ಸುದೈವ; ಮನೆಗೆ ಬಂದ ಮೇಲೆ ಅದೇ ಆಸ್ಪತ್ರೆಯ ಬೇರೊಬ್ಬ ವೈದ್ಯರು ಮಾಡಿದ ಧೈರ್ಯದಿಂದ, ಆಚಾರ್ಯರ ಪಾದಭಾಗವನ್ನು ಕತ್ತರಿಸಿ ತೆಗೆದ ಮೇಲೆ ಅವರ ದೇಹಸ್ಥಿತಿ ಕ್ರಮಕ್ರಮವಾಗಿ ಸುಧಾರಿಸುತ್ತ ಬಂದಿತು. ಅಲ್ಲಿಂದಾಚೆಗೆ ಕೆಲವು ವರ್ಷಗಳು ಅವರು ಸಮಾಧಾನದಿಂದ ಬದುಕಿದರು. ತಮ್ಮ ಸಾಹಿತ್ಯಿಕ ಚಟುವಟಿಕೆಗಳನ್ನು ಬಿರುಸಿನಿಂದ ಮುಂದುವರಿಸಿದರು. ಓಡಾಟ ಮಾತ್ರ ನಿಂತಿತು. ಆಗಾಗ ಮನೆಗೆ ಹೋಗಿ ಮಾತಾಡಿಸಿ ಬರುತ್ತಿದ್ದೆ; ಅವರು ತೀರಿಕೊಂಡ ದಿವಸ ನಾನು ಊರಲ್ಲಿ ಇರಲಿಲ್ಲವಾದ್ದರಿಂದ, ಬಳಿಕ ವಿಷಯ ತಿಳಿದಾಗ ಮನಸ್ಸಿನಲ್ಲಿ ಏನೋ ಒಂದು ಬಗೆಯ ಶೂನ್ಯ ಆವರಿಸಿದ ಅನುಭವವಾಯಿತು.

ಅನಂತರಂಗಾಚಾರ್ಯರ ವ್ಯಕ್ತಿತ್ವ ಬಹುಮುಖವಾದುದು, ಬಹುವರ್ಣರಂಜಿತವಾದುದು. ಅವರು ತಮ್ಮನ್ನು ಅಧ್ಯಾಪಕರೆಂದು ತಿಳಿಯುತ್ತಿದ್ದ ಹಾಗೆಯೇ ಕೃಷೀವಲ, ಧಾರ್ಮಿಕ ಸಂಘ ಸಂಸ್ಥೆಗಳ ವ್ಯವಸ್ಥಾಪಕ, ಪುರೋಹಿತ ಎಂದು ಸಹ ತಿಳಿಯುತ್ತಿದ್ದರು. ಅಲ್ಲದೆ ನಟರೂ ನಿರ್ದೇಶಕರೂ ಆಗಿ ಬಿ.ಎಂ.ಶ್ರೀ ಅವರ 'ಗದಾಯುದ್ಧ ನಾಟಕ'ವನ್ನು ಆಡಿದ್ದೂ ಆಡಿಸಿದ್ದೂ ಅದರಲ್ಲಿ ಪಾತ್ರಧಾರಿಯೂ ನೆನಪುಗಾರನೂ ಆಗಿ ಭಾಗವಹಿಸಿದ್ದ ನನಗೆ ಒಂದು ಮರೆಯಲಾಗದ ಅನುಭವ (೧೯೫೧-೫೨). ಈ ನಾಟಕದಲ್ಲಿ ಆಚಾರ್ಯರು ದುರ್ಯೋಧನನಾಗಿ, ಎಚ್.ಎಸ್. ಬಿಳಿಗಿರಿ ಭೀಮಸೇನನಾಗಿ, ಎಚ್. ಎಂ. ಶಂಕರನಾರಾಯಣರಾಯರು ಸಂಜಯನಾಗಿ, ಕೆ.ವಿ. ಸುಬ್ಬಣ್ಣ ದ್ರೌಪದಿಯಾಗಿ, ಜಿ. ರುದ್ರಯ್ಯ ಧೃತರಾಷ್ಟ್ರನಾಗಿ, ಆಚಾರ್ಯರ ದೊಡ್ಡ ಮಗ ನರಸಿಂಹಾಚಾರ್ ಕೃಷ್ಣನಾಗಿ ಮುಖ್ಯಪಾತ್ರಗಳಲ್ಲಿದ್ದರು. ನಾನು ಭೀಷ್ಮನ ಪಾತ್ರದ ಮಾತುಗಳನ್ನು ಒಪ್ಪಿಸುವವನಾಗಿದ್ದೆ; ಆದರೆ ಹೆಚ್ಚುಕಾಲ ನೆನಪುಗಾರನಾಗಿ ತೆರೆಯ ಮರೆಯಲ್ಲೇ ಇರಬೇಕಾಗಿತ್ತಾದ ಕಾರಣ, ನಾಟಕವನ್ನು ಸರಿಯಾಗಿ ನೋಡಲು ನನಗೆ ಅವಕಾಶವೇ ಆಗಲಿಲ್ಲ. ಈಗಿನ ಮೈಸೂರು ಮೆಡಿಕಲ್ ಕಾಲೇಜು ಆ ಕಾಲಕ್ಕೆ ವಸ್ತುಪ್ರದರ್ಶನದ ಅಂಗಳವಾಗಿತ್ತು. ಅಲ್ಲಿ ನಾಟಕ ತುಂಬಿದ ಸಭೆಯ ಮುಂದೆ ಪ್ರದರ್ಶಿತವಾಯಿತು. ಉದ್ದಕ್ಕೆ ನಾಟಕವಲ್ಲಿ ಆಚಾರ್ಯರೂ ಬಿಳಿಗಿರಿಯವರೂ ವಿಜೃಂಭಿಸಿದರು. ಹೀಗೆಯೇ ಆಚಾರ್ಯರು ಬಿ.ಎಂ.ಶ್ರೀಯವರ 'ಅಶ್ವತ್ಥಾಮನ್', 'ಪಾರಸಿಕರು', ನಾಟಕಗಳಲ್ಲಿ ಕೂಡ ಅಭಿನಯಿಸಿದ್ದರೆಂದು ಕೇಳಿದ್ದೇನೆ.

'ಅಶ್ವತ್ಥಾಮನ್' ನಾಟಕದ ಸಾಲುಗಳು ಅವರಿಗೆ ಹೃದ್ಗತವಾಗಿದ್ದುದನ್ನು ನಾನು ಬಲ್ಲೆ. ಯಾವುದೇ ನಾಟಕವಿರಲಿ, ಅವರು ಅದನ್ನು ಉತ್ಸಾಹದಿಂದ ನಿರ್ದೇಶಿಸುತ್ತಿದ್ದರು. ಪಾತ್ರಧಾರಿಗಳಿಗೆಲ್ಲ ಸ್ವಾಂತರ್ಜಿತನಲ್ಲಿ ಧಾರಾಳವಾಗಿ ತಿಂಡಿ ತೀರ್ಥಗಳನ್ನು ಕೊಡಿಸುತ್ತಿದ್ದರು. ಮಸಾಲೆದೋಸೆಯಂತೂ ತಪ್ಪದೆ ಇರುತ್ತಿತ್ತು!

ಧಾರ್ಮಿಕ ಸಂಘಟನೆಗಳಲ್ಲಿ ಆಚಾರ್ಯರು ಮುಖ್ಯಸ್ಥರಾಗಿ ಭಾಗವಹಿಸುತ್ತಿದ್ದರು. ಅವರು ವೃತ್ತಿಯಿಂದ ಲೌಕಿಕರಾಗಿದ್ದರೂ ಪ್ರವೃತ್ತಿಯಿಂದ ವೈದಿಕರಾಗಿದ್ದರು. ಒಳ್ಳೆಯ ಸಂಪ್ರದಾಯ ಶಿಕ್ಷಣವನ್ನು ಪಡೆದುಕೊಂಡಿದ್ದರು. ವೇದಘೋಷ, ತಮಿಳುಪ್ರಬಂಧಗಳು ಎರಡೂ ಅವರಿಗೆ ಬಹುಪ್ರಿಯವಾಗಿದ್ದವು. ಉಚ್ಚಕಂಠದಲ್ಲಿ ಅವನ್ನು ಮನೆಯ ಸಮಾರಂಭಗಳಲ್ಲಿಯೂ ದೇವಾಲಯದ ಸೇವೆಗಳಲ್ಲಿಯೂ ಮೊಳಗಿಸುತ್ತಿದ್ದರು. ಆಚಾರ್ಯರ ಆರಾಧ್ಯದೇವತೆ ಟಿ. ನರಸೀಪುರದ ಗುಂಜಾ ನರಸಿಂಹಸ್ವಾಮಿ. ಆ ದೈವದ ಸೇವೆಯಲ್ಲಿ ಅವರು ನಿರಂತರವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದರು; ದೇಗುಲದ ಸುಸ್ಥಿತಿಗಾಗಿ ಒಂದಲ್ಲ ಒಂದು ಪ್ರಯತ್ನವನ್ನು ನಡಸುತ್ತಲೇ ಇದ್ದರು. ದೇವಾಲಯಕ್ಕೆ ವಿದ್ಯುದ್ದೀಪಗಳ ವ್ಯವಸ್ಥೆ, ಹೊಸರಥದ ನಿರ್ಮಾಣ, ಬ್ರಾಹ್ಮಣಸಂತರ್ಪಣೆ ಇತ್ಯಾದಿಗಳಲ್ಲಿ ಅವರು ಯಶಸ್ವಿಯಾಗಿ ಕಾರ್ಯ ನಿರ್ವಹಿಸಿದರು. ತಮ್ಮ ವಿದ್ಯಾರ್ಥಿಯಾಗಿದ್ದ ಕರ್ನಾಟಕದ ಮಾಜಿ ಮುಖ್ಯಮಂತ್ರಿ ದಿವಂಗತ ದೇವರಾಜ ಅರಸು ಅವರನ್ನು ಕಂಡು ದೇವಸ್ಥಾನದ ಹೊಸರಥಕ್ಕೆ ಐವತ್ತು ಸಾವಿರ ರೂಪಾಯಿಗಳ ಸಹಾಯದ್ರವ್ಯ ತಾವು ಪಡೆದುಕೊಂಡುದಾಗಿ ಒಮ್ಮೆ ಅವರೇ ನನಗೆ ತಿಳಿಸಿದರು.

ತಮ್ಮ ಮನೆಯ ಹತ್ತಿರದ ಶ್ರೀ ವೈಷ್ಣವಸಭಾ ಸಂಸ್ಥೆಯನ್ನೂ ಭವನವನ್ನೂ ಆರ್ಥಿಕವಾಗಿ ಸುಭದ್ರಗೊಳಿಸಲು ತಮ್ಮ ಕುಟುಂಬದವರ ಸಹಕಾರದೊಂದಿಗೆ ವಹಿಸಿದ ಶ್ರಮವೂ ಮಾಡಿದ ತ್ಯಾಗವೂ ಸ್ಮರಣಾರ್ಹವಾದುದು. ಈ ಸಭಾಭವನದಲ್ಲಿಯೇ ಅವರ ಮನೆಯ ಕೆಲವು ಶುಭ ಸಮಾರಂಭಗಳು ಜರುಗುತ್ತಿದ್ದುದನ್ನು ನಾನು ಬಲ್ಲೆ. ಬಹುಶಃ ಆಚಾರ್ಯರ ಲಂನೆಯ ಜನ್ಮದಿನವೂ ಇಲ್ಲಿಯೇ ನಡೆದು, ನಾನು ಅದರಲ್ಲಿ ಭಾಗವಹಿಸಿದ್ದೆ. ಈ ಸಮಾರಂಭಕ್ಕೆ ಬೆಂಗಳೂರಿನಿಂದ ಆಚಾರ್ಯರ ಸನ್ಮಿತ್ರರಾದ ಎಂ.ವಿ. ಸೀತಾರಾಮಯ್ಯನವರು ಬಂದಿದ್ದರು; ಆಚಾರ್ಯರಿಗೆ ನಮಸ್ಕಾರ ಪೂರ್ವಕವಾಗಿ ಪಂಚೆಶಲ್ಯಗಳ ಉಡುಗೊರೆ ನೀಡಿದರು. ಆಚಾರ್ಯರ ಸ್ವಂತ ಪುಸ್ತಕ ಭಂಡಾರದ ಅನೇಕ ವಿದ್ವತ್‌ಪತ್ರಿಕೆಗಳೂ ಪುಸ್ತಕಗಳೂ ಎಂ.ವಿ.ಸೀ. ಸ್ಥಾಪಿಸಿದ ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ ಪುಸ್ತಕ ಭಂಡಾರವನ್ನು ಸೇರಲು ಅವರಿಬ್ಬರ ನಡುವಣ ಈ ಮೈತ್ರಿಯೇ ಕಾರಣ. ಇಬ್ಬರೂ ಇದ್ದಾಗಲೇ ಈ ಕೆಲಸ ನಡೆಯಿತೆಂದು ಕೇಳಿದ್ದೇನೆ.

ಶ್ರೀ ವೈಷ್ಣವಸಾಹಿತ್ಯದ ಪ್ರಕಟಣೆ ಪ್ರಸಾರಗಳಿಗಾಗಿ ಆಚಾರ್ಯರು ತುಂಬ ಶ್ರಮವಹಿಸಿದರು. ವೇದಾಂತ ದೇಶಿಕರ ಜೀವನ ಸಾಹಿತ್ಯಗಳ ಪ್ರಸಾರ ಅವರಿಗೆ ತುಂಬ ಆಪ್ತವಾದ ವಿಷಯವಾಗಿತ್ತು. ಹಾಗೆಯೇ ಆಳ್ವಾರರ ಜೀವನ ಸಂದೇಶ ಸಾಹಿತ್ಯಗಳು ಕೂಡ. ಶ್ರೀವೈಷ್ಣವಸಮುದಾಯದ

ಹಿರಿಯರಲ್ಲಿ, ತಮ್ಮ ಕಾಲದವರಲ್ಲಿ, ಅವರು ಒಬ್ಬ ನೇತಾರರಂತೆ ಇದ್ದರು. ಮಠಗಳಲ್ಲಿ ಮಾನ್ಯತೆಯನ್ನು ಸಂಪಾದಿಸಿದ್ದರು. ವೈದಿಕವಿದ್ಯೆಯನ್ನು ರೂಢಿಸಿಕೊಂಡು, ಅಪೇಕ್ಷಿಸಿದ ಗೃಹಸ್ಥರ ಮನೆಗಳಲ್ಲಿಯೂ ತಮ್ಮ ಬಳಗದವರ ಮನೆಗಳಲ್ಲಿಯೂ ಪೌರೋಹಿತ್ಯವನ್ನು ವಹಿಸುತ್ತಿದ್ದರು; ಕಲಾಪಗಳಲ್ಲಿ ಏನಾದರೂ ಶಾಸ್ತ್ರೀಯ ಸಮಸ್ಯೆಗಳು ತಲೆದೋರಿದರೆ ಪರಿಹರಿಸುತ್ತಲೂ ಇದ್ದರು.

ಇದು ಒಂದು ಮುಖವಾದರೆ, ಇನ್ನೊಂದು ಲೌಕಿಕ ವಿದ್ಯಮಾನಗಳಿಗೆ ಸಂಬಂಧಿಸಿದ್ದು. ವಯಸ್ಕ ಅಕ್ಷರಸ್ಥರಿಗಾಗಿ ನೂರಾರು ಗ್ರಾಮಪುಸ್ತಕಭಂಡಾರಗಳನ್ನು ಏರ್ಪಡಿಸಿದರು. ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸಗಳಲ್ಲಿ ಭಾಗವಹಿಸಿದರಸು. ಉತ್ತಮ ವಾಗ್ಮಿಗಳಾಗಿದ್ದು ಕರ್ನಾಟಕದ ಬೇರೆ ಬೇರೆ ಸ್ಥಳಗಳಲ್ಲಿಯೂ ಉಪನ್ಯಾಸಗಳನ್ನು ನೀಡಿದರು. ತಮ್ಮ ಬೋಧನೆಯ ಮೂಲಕವೂ ಪ್ರೋತ್ಸಾಹದ ಮೂಲಕವೂ ಕನ್ನಡ ಭಾಷೆ ಸಾಹಿತ್ಯಗಳಲ್ಲಿ ವಿದ್ಯಾರ್ಥಿಗಳಿಗೆ ಆಸಕ್ತಿ ಹುಟ್ಟುವಂತೆ ಮಾಡಿದರು; ಪ್ರವಾಸಗಳ ಮೂಲಕ ಕರ್ನಾಟಕದ ಸಾಂಸ್ಕೃತಿಕ ನೆಲೆಗಳನ್ನು ಅವರಿಗೆ ಪರಿಚಯಿಸಿದರು.

ಆಚಾರ್ಯರ ಗುರುವರ್ಗ ತುಂಬ ಮಾನ್ಯವಾಗಿದ್ದು, ಬಿ.ಎಂ.ಶ್ರೀ ಅವರು ವೆಂಕಣ್ಣಯ್ಯನವರು, ಕೃಷ್ಣಶಾಸ್ತ್ರಿಗಳು, ಕಾನಕಾನಹಳ್ಳಿ ವರದಾಚಾರ್ಯರು, ಎಸ್.ವಿ. ರಂಗಣ್ಣನವರು, ರಾಳ್ಳಪಲ್ಲಿ ಅನಂತಕೃಷ್ಣ ಶರ್ಮರು ಇವರೆಲ್ಲ ಅವರ ಗುರುವರ್ಗಕ್ಕೆ ಸೇರಿದವರು. ಕನ್ನಡ ಎಂ.ಎ. ಮೊದಲ ತಂಡದ ವಿದ್ಯಾರ್ಥಿಯಾಗಿದ್ದ ಕಾರಣ(೧೯೨೭), ಕುವೆಂಪು, ಡಿ.ಎಲ್. ನರಸಿಂಹಾಚಾರ್, ಕೆ. ವೆಂಕಟರಾಮಪ್ಪ, ಡಿ.ಕೆ. ಭೀಮಸೇನ ರಾವ್ ಮೊದಲಾದವರು ಅವರಿಗೆ ಸಹಪಾಠಿಗಳಾಗಿದ್ದರು. ಅವರ ಶಿಷ್ಯಸಂಪತ್ತಿಯೂ ವಿಸ್ತಾರವಾದುದು, ಗಣ್ಯವಾದುದು. ಇಲ್ಲಿ ರಾಜಕೀಯಸ್ಥರಿದ್ದಾರೆ, ವಿಜ್ಞಾನಿಗಳಿದ್ದಾರೆ, ಇತಿಹಾಸಜ್ಞರಿದ್ದಾರೆ, ಸಾಹಿತಿಗಳಿದ್ದಾರೆ, ಸಾಮಾಜಿಕರಿದ್ದಾರೆ, ಹಿರಿಯ ಅಧಿಕಾರಿಗಳಿದ್ದಾರೆ. ಆಚಾರ್ಯರು ಯಾವ ಬಿಂಕ ಬಿಗುಮಾನಗಳೂ ಇಲ್ಲದೆ ಎಲ್ಲರೊಂದಿಗೂ ಧಾರಾಳವಾಗಿ ವ್ಯವಹರಿಸುತ್ತಿದ್ದರು. ಸಂಸ್ಕೃತ ಕನ್ನಡ ತಮಿಳು ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ತದ್‌ಜ್ಞತೆಯಿದ್ದವರಾದ ಕಾರಣ, ಅವರು ಆಯಾ ಭಾಷೆಗಳ ವಿದ್ವಾಂಸರೊಂದಿಗೆ ಅಧ್ಯಾಪಕರೊಂದಿಗೆ ಸುಖವಾಗಿ ವ್ಯವರಿಸಬಲ್ಲವರಾಗಿದ್ದರು.

ತಮ್ಮ ವಿದ್ಯಾಗುರುಗಳಾಗಿದ್ದ ಬಿ.ಎಂ. ಶ್ರೀಕಂಠಯ್ಯನವರು, ಟಿ.ಎಸ್. ವೆಂಕಣ್ಣಯ್ಯನವರು, ಎ. ಆರ್. ಕೃಷ್ಣಶಾಸ್ತ್ರಿಗಳು ಈ ಮೂವರ ವಿಷಯದಲ್ಲಿಯೂ ಅವರಿಗೆ ಅಪರಿಮಿತವಾದ ಗೌರವ. ಶ್ರೀಯವರು ಮಹಾರಾಜ ಕಾಲೇಜು ಕರ್ನಾಟಕ ಸಂಘದಲ್ಲಿ ಮೊದಲ ಸಲ ಉಪನ್ಯಾಸ ಮಾಡಲು ಆಹ್ವಾನಿತರಾದಾಗ, ಅವರು ಇಂಗ್ಲಿಷ್ ಭಾಷೆಯಲ್ಲಿ ಉಪನ್ಯಾಸ ಮಾಡಲು ಆರಂಭಿಸಿದರಂತೆ; ಆಗ ಸಂಘದ ಕಾರ್ಯದರ್ಶಿಯೋ ಕಾರ್ಯಕರ್ತರೋ ಆಗಿದ್ದ ಆಚಾರ್ಯರು ಕರ್ನಾಟಕ ಸಂಘದ ಕಾರ್ಯಕ್ರಮವಾದ್ದರಿಂದ ಕನ್ನಡದಲ್ಲೇ ಉಪನ್ಯಾಸ ಮಾಡಬೇಕೆಂಬುದಾಗಿ ಧೈರ್ಯವಾಗಿ ಮೇಲೆದ್ದು ಅವರಿಗೆ ಸೂಚಿಸಿದರಂತೆ. ಆ ಗಳಿಗೆಗೆ ಅದು

ಅನಿರೀಕ್ಷಿತ; ಪ್ರಿಯವರಿಗೆ ಕೋಪ ಬಂತು. ಆದರೆ ಅಂದಿನಿಂದ ಪ್ರಿಯವರು ಮೈಚಳಿ ಬಿಟ್ಟು, ಸಾರ್ವಜನಿಕ ಉಪನ್ಯಾಸಗಳನ್ನು ಕನ್ನಡದಲ್ಲೇ ಮಾಡತೊಡಗಿದರಂತೆ. ಈ ವಿಷಯ ಆಚಾರ್ಯರಿಂದಲೇ ನಾನು ಕೇಳಿದ್ದು. ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಎಂ.ಎ. ಪ್ರಾರಂಭವಾದ ವರ್ಷ (೧೯೨೭) ಸೂಕ್ತಸಂಖ್ಯೆಯ ವಿದ್ಯಾರ್ಥಿಗಳನ್ನು ಕೂಡಿಸಲು ಆಚಾರ್ಯರೂ ತುಂಬ ಪ್ರಯತ್ನಪಟ್ಟರೆಂದು ಕೇಳಿದ್ದೇನೆ. ವೆಂಕಣ್ಣಯ್ಯನವರಿಗೆ ವಾಸದ ಮನೆಯನ್ನು ಒಮ್ಮೆ ಬಾಡಿಗೆಗೆ, ಇನ್ನೊಮ್ಮೆ ಕ್ರಯಕ್ಕೆ ಕೊಡಿಸುವಲ್ಲಿಯೂ ಸಹಾಯಮಾಡಿದರಂತೆ. ಅವರೇ ಒಂದು ಕಡೆ ಈ ಮಾತು ನೆನೆದಿದ್ದಾರೆ.

ಎಸ್. ಅನಂತರಂಗಾಚಾರ್ಯರ ಸಾಹಿತ್ಯಿಕಸಾಧನೆ ವಿಶಾಲವ್ಯಾಪ್ತಿಯುಳ್ಳದು. ಅಗಾಧ ಪರಿಶ್ರಮಕ್ಕೆ ಮಾತ್ರ ಸಾಧ್ಯವಾಗುವಂಥದು. ಆ ಸಾಧನೆಗೆ ಅದರದೇ ಗುರಿಯಿದೆ, ಮಿತಿಯಿದೆ. ಅವರು ಕರ್ನಾಟಕ ಇತಿಹಾಸ ಸಂಸ್ಕೃತಿಯ ಭವ್ಯತೆಯನ್ನು ಎಲ್ಲಾ ದಿಕ್ಕುಗಳಲ್ಲಿಯೂ ಎಲ್ಲಾ ಮುಖಗಳಲ್ಲಿಯೂ ನೋಡಲು ಅಪೇಕ್ಷಿಸಿದರು. ತಮ್ಮ ನೋಟವನ್ನು ಆಸಕ್ತರಾದ ಎಲ್ಲಾ ಕನ್ನಡಿಗರಿಗೆ ತಮ್ಮ ಬರಹಗಳ ಮೂಲಕ ತಲಪಿಸಲು ಪ್ರಯತ್ನಿಸಿದರು. ಕನ್ನಡ ಸಂಸ್ಕೃತಿಯ ದೂರದಿಗಂತಗಳ ವರ್ಣರಂಜಿತಪ್ರಭೆಯ ಮೋಹಕ್ಕೆ ಒಳಗಾದ ಅವರು ಅದರಿಂದ ಹೊರಬಂದುದೇ ಇಲ್ಲ. ಅವರ ಬರಹಗಳು ಹೆಚ್ಚಾಗಿ ಪರಿಚಯಗಳು, ಸಮೀಕ್ಷೆಗಳು, ಕಥನಗತಿಯವು ಎಂಬುದು ನಿಜ; ಅಲ್ಲಿ ವಿಮರ್ಶೆ, ಸಂಶೋಧನೆ ಎಂಬವು ಕಡಮೆ ಎಂಬುದೂ ನಿಜ. ಇದಕ್ಕೆ ಹಲವು ಕಾರಣಗಳಿವೆ. ಅವರ ಸೇವೆ ಹೆಚ್ಚಾಗಿ ಪದವಿ ತರಗತಿಗಳ, ಪೂರ್ವ ಪದವಿ ತರಗತಿಗಳ ವಿದ್ಯಾರ್ಥಿಗಳಿಗೇ ವಿನಿಯೋಗವಾಯಿತು. ಅವರು ವಸ್ತುವೈವಿಧ್ಯ, ಗ್ರಂಥ ಬಾಹುಳ್ಯಗಳನ್ನು ಹೆಚ್ಚು ಇಷ್ಟಪಟ್ಟರು. ಅಲ್ಲದೆ ಪದವಿ ತರಗತಿಗಳ ಅಧ್ಯಾಪಕರ ನಡುವೆ ಅವರು ಹಿರಿಯರಾಗಿದ್ದ ಕಾರಣ, ಕಿರಿಯರಿಗೆ ಮಾರ್ಗದರ್ಶನ ಮಾಡುವ, ಸಾಂಸ್ಥಿಕ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಗುರುತರ ಜವಾಬ್ದಾರಿಯನ್ನು ಅವರು ಹೊತ್ತಿದ್ದರು.

ಆಚಾರ್ಯರ ವಿದ್ವತ್ತೆಯ, ಸಂಶೋಧನೆಯ ದೃಷ್ಟಿ ವಿಶೇಷವಾಗಿ ಕಾಣುವುದು ಗ್ರಂಥ ಸಂಪಾದನೆಯ ಕ್ಷೇತ್ರದಲ್ಲಿ. 'ಸೂಕ್ತಿಸುಧಾರ್ಣವ', 'ಕಾವ್ಯಸಾರ'ಗಳ ಸಂಪಾದನೆಯಲ್ಲಿ ಅವರ ಪರಿಶ್ರಮ ದೊಡ್ಡದು. ಇವಕ್ಕೆ ಬರೆದ ಪ್ರಸ್ತಾವನೆಗಳಲ್ಲಿ ಸಂಶೋಧನೆಯ ದೃಷ್ಟಿಯನ್ನು ಕಾಣಬಹುದಾಗಿದೆ, ಪ್ರಾಚೀನ ಕವಿ ಕಾವ್ಯಗಳ ವಿಮರ್ಶೆಯಲ್ಲಿ, ಸಂಪಾದಿತ ಗ್ರಂಥಗಳ ಮೌಲ್ಯಮಾಪನದಲ್ಲಿ ಕೂಡ ಆ ದೃಷ್ಟಿ ನಿಚ್ಚಳವಾಗಿದೆ. ಸಾಹಿತ್ಯದ ಉಪಾಸನೆ ಶೋಧನೆ ಪ್ರಕಟನೆಗಳಲ್ಲಿ ಸಂಶೋಧನೆಯೇ ಸರ್ವಸ್ವವಲ್ಲ; ಅದು ಒಂದು ವಿಧಾನ, ವಿದ್ಯಮಾನ ಮಾತ್ರ.

ಆಚಾರ್ಯರ ಮಾಹಿತಿಗಳ ಕ್ರೋಡೀಕರಣ ಸೂಚೀಕರಣಗಳ ಹುಚ್ಚು ಅವರ ಆಯುಷ್ಯದ ಬಹುಭಾಗವನ್ನು ತಿಂದುಹಾಕಿದಂತೆ ತೋರುತ್ತದೆ. ಆದರೆ ಸಾಹಿತ್ಯಾಭ್ಯಾಸಿಗಳಿಗೆ, ಸಂಶೋಧಕರಿಗೆ ಇವುಗಳಿಂದ ಆಗಿರುವ ಉಪಕಾರ ದೊಡ್ಡದು. ಉಪಯುಕ್ತ ಎಂಬ ಕಾರಣದಿಂದಲೇ ಆಚಾರ್ಯರ

ಕೆಲವು ಪುಸ್ತಕಗಳು ಹಲವು ಸಲ ಪುನರ್ಮುದ್ರಣಗೊಂಡಿವೆ.

ಅನಂತರಂಗಾಚಾರ್ಯರು ೮೨ ವರ್ಷಗಳ ಕಾಲ ತುಂಬುಜೀವನ, ಚಟುವಟಿಕೆಯ ಜೀವನ ನಡೆಸಿದರು. ಸಾವು ನೋವುಗಳನ್ನು, ಕಷ್ಟನಷ್ಟಗಳನ್ನು ಕಂಡರು. ಆದರೆ ಎಲ್ಲವನ್ನೂ ಧೈರ್ಯದಿಂದ ನಗುನಗುತ್ತಲೇ ಎದುರಿಸಿದರು, ಸುಖ ಸಂತೋಷಗಳನ್ನೂ ಕಂಡರು. ಗಣ್ಯಸಾಮಾಜಿಕರಾಗಿ ಬಾಳುವೆ ಮಾಡಿದರು. ಅವರ ಸಾಹಿತ್ಯಿಕ ಸಾಧನೆಗಳಲ್ಲಿ ಅರೆಕೊರೆಗಳನ್ನು ಹುಡುಕಿ ತೋರಿಸುವುದು ಕಷ್ಟವೇನೂ ಅಲ್ಲ. ಆದರೆ ಆಗಿರುವ ಪ್ರಯೋಜನಗಳ ದೃಷ್ಟಿಯಿಂದ ಅವಕ್ಕೆ ಮಹತ್ತ್ವ ಕೊಡಬೇಕಾಗಿಲ್ಲ. ಅವರ ಸ್ವಭಾವದಲ್ಲಿ ಇಂಥ ಅಂಥ ದೌರ್ಬಲ್ಯಗಳಿದ್ದುವು ಎಂದು ಹೇಳುವವರಿದ್ದಾರೆ. ದೌರ್ಬಲ್ಯಗಳು ಯಾರಲ್ಲಿ ಇಲ್ಲವೋ ನನಗೆ ತಿಳಿಯದು. ನನ್ನ ಗುರುಗಳಾದ ಕುವೆಂಪು ಅವರು, "ದೇವರು ನಮ್ಮನ್ನು ಕರಡಚ್ಚುಗಳ ರೂಪದಲ್ಲಿ ಲೋಕಕ್ಕೆ ಕಳಿಸಿದ್ದಾನೆ" ಎಂದು ಹೇಳುತ್ತಿದ್ದರು. ನಾವೆಲ್ಲಾ ಕರಡಚ್ಚುಗಳೇ, ತಪ್ಪಿಲ್ಲದೆ ತಿದ್ದಿ ಮುದ್ರಿಸಿದ ಹಾಳೆಗಳಲ್ಲ.

ಆಚಾರ್ಯರು ತಾವು ಬದುಕಿದ್ದ ಕಾಲದಲ್ಲಿ ತಮ್ಮ ವಿದ್ಯಾರ್ಥಿಗಳಿಗೆ, ಮಿತ್ರರಿಗೆ, ಸಹೋದ್ಯೋಗಿಗಳಿಗೆ ಪ್ರಿಯರಾಗಿದ್ದರು; ಬಂಧುಗಳ, ಸಮುದಾಯದವರ, ಸಾರ್ವಜನಿಕರ ಪ್ರೀತಿಗೌರವಗಳನ್ನು ಸಂಪಾದಿಸಿದ್ದರು. ತಮ್ಮ ಸುತ್ತಣ ಹತ್ತು ಜನಕ್ಕೆ ಬೇಕಾದವರಾಗಿದ್ದರು. ಅವರು ತಮ್ಮ ವೈವಿಧ್ಯಮಯವೂ ಉಪಯುಕ್ತವೂ ಆದ ಸಾಹಿತ್ಯಕೃತಿಗಳಿಂದ ಕನ್ನಡ ಸಾಹಿತ್ಯ ಸಂಪತ್ತನ್ನು ಹೆಚ್ಚಿಸಿದರು. ನಿರಂತರ ಉದ್ಯೋಗಶೀಲತೆಯನ್ನು, ಪರಿಶ್ರಮವನ್ನು ಜೀವದ ಉಸಿರಾಗಿ ಇಟ್ಟುಕೊಂಡು, ನಂಬಿದ ದೈವವನ್ನು ದೃಢವಾಗಿ ನೆಚ್ಚಿಕೊಂಡು ಸಾರ್ಥಕವಾಗಿ ತಮ್ಮ ಜೀವನಯಾತ್ರೆಯನ್ನು ಪೂರೈಸಿದರು. ಇದಕ್ಕಿಂತ ಇನ್ನೇನು ಬೇಕು? ಆಚಾರ್ಯರಿಗೆ ಪ್ರಿಯವಾದ ಕಾವ್ಯವಾಗಿದ್ದ 'ಗದಾಯುದ್ಧ'ದ ಮಾತನ್ನು ಬಳಸಿ "ನಿಜಸಾಹಸೈಕದೇಶಾನುಮರಣಮೆಮಗಕ್ಕೆ ಗಡಾ" ಎಂದು ಹಾರೈಸುತ್ತೇನೆ.



# ಗರಡಿಯಾಚಾರ್ಯ

ನಾ. ನಾಗಪ್ಪ

ಭಾರತೀಯ ಸಾಹಿತ್ಯದ ಬುನಾದಿಯೇ ಶ್ರೀ ಅನಂತರಂಗಾಚಾರ್ಯರ ಸಾಹಿತ್ಯ ಭಾರತೀ. ಈ ಬೃಹತ್ ಗ್ರಂಥದ ಸರಿಸಮಾನವಾದ ಮತ್ತೊಂದು ಗ್ರಂಥ ಯಾವ ಇತರ ಭಾರತೀಯ ಭಾಷೆಯಲ್ಲಿಯೂ ಇದುವರೆಗೆ ಬಂದಿಲ್ಲ. ಭಾರತೀಯ ಸಾಹಿತ್ಯದ ಇತಿಹಾಸವನ್ನು ರಾಷ್ಟ್ರಭಾಷಾಹಿಂದಿಯಲ್ಲಿ ಬರೆಯಿಸಿ ಹಿಂದಿ ಎಂ. ಎ. ತರಗತಿಗೆ ಪಠ್ಯವಾಗಿ ಇಡತಕ್ಕದ್ದು ಎಂದು ಮಹಾತ್ಮಾಗಾಂಧಿಯವರು ೧೯೪೬ರಲ್ಲಿ ಮದ್ರಾಸಿನಲ್ಲಿ ಏರ್ಪಡಿಸಿದ್ದ ದಕ್ಷಿಣಭಾರತ ಹಿಂದೀ ಪ್ರಚಾರ ಸಭೆಯ ರಜತಮಹೋತ್ಸವದ ಸಂದರ್ಭದಲ್ಲಿ ತಮ್ಮ ಭಾಷಣದಲ್ಲಿ ಅಪ್ಪಣೆಕೊಡಿಸಿದರು. ಇದನ್ನು ಗಮನಿಸಿ ನಮ್ಮ ಕರ್ನಾಟಕದ ಪ್ರೊ॥ ಅನಂತರಂಗಾಚಾರ್ಯರು 'ಸಾಹಿತ್ಯಭಾರತೀ' ರಚಿಸಿದರು. ಅದಕ್ಕೆ ಅವರಿಗೆ ಮೈಸೂರು ವಿಶ್ವವಿದ್ಯಾನಿಲಯವು ಗೌರವ ಡಿಲಿಟ್ ಡಿಗ್ರಿ ಕೊಟ್ಟು (೧೯೭೫) ಸನ್ಮಾನಿಸಿದೆ. ಆ ದಿನದ ಪದವೀಪ್ರದಾನ ಸಮಾರಂಭದಲ್ಲಿ ನಾನು ಉಪಸ್ಥಿತನಿದ್ದೆ. ಶ್ರೀ ಅನಂತರಂಗಾಚಾರ್ಯರು ಪಂಚೆಯನ್ನು ಉಟ್ಟು ಶಾಲು ಹೊದ್ದುಕೊಂಡು ಶ್ರೋತ್ರಿಯ ಬ್ರಾಹ್ಮಣರಂತೆ ಕಾಣುತ್ತಿದ್ದರು. ನನಗೆ ಅದನ್ನು ನೋಡಿ ಅತಿಶಯವಾದ ಆನಂದವಾಯಿತು. ಆಚಾರ್ಯರು ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿಗೂ ಪಾತ್ರರಾದವರು.

'ಸಾಹಿತ್ಯ ಭಾರತೀ' (೧೯೭೦)ಗ್ರಂಥದಲ್ಲಿ ಏನೇ ಇರಲಿ, ಇದೇ ಅಖಿಲ ಭಾರತೀಯ ಆಧುನಿಕ (ಮತ್ತು ಬಹುಮಟ್ಟಿಗೆ ಹೇಗೆ ೧೦೦೦ ಇಸವಿಯಿಂದ ಈಚಿನ) ಭಾರತೀಯ ಸಾಹಿತ್ಯದ ಇತಿಹಾಸವಾಗಿದೆ. ಭಾರತೀಯ ಸಾಹಿತ್ಯದ ರೂಪರೇಖೆಯೇನು ಎಂದು ಡಾ॥ ನಾಗೇಂದ್ರರು (ದಿಲ್ಲಿ ವಿಶ್ವವಿದ್ಯಾಲಯದ ನಿವೃತ್ತ ಹಿಂದಿ ಪ್ರೊಫೆಸರ್) ಚರ್ಚಿಸುತ್ತಿದ್ದ ಕಾಲ ಅದಾಗಿತ್ತು. ಅವರು ಪಾಟ್ನಾ ವಿಶ್ವವಿದ್ಯಾಲಯದಲ್ಲಿ ನಡೆದ ಒಂದು ವಿಚಾರಗೋಷ್ಠಿಯಲ್ಲಿ ಹಿಂದೀ ಸಾಹಿತ್ಯದ ಇತಿಹಾಸವನ್ನು ಪುನರ್ವಿಮರ್ಶಿಸಿ ಅದರಲ್ಲಿ ಭಾರತೀಯ ಸಾಹಿತ್ಯವನ್ನು ಅಳವಡಿಸಬೇಕೆಂಬ ವಿಚಾರವನ್ನು ನಮ್ಮ ಮುಂದೆ ಮಂಡಿಸಿದ್ದರು. ಹಿಂದೀ ಅಖಿಲಭಾರತೀಯ ಸಂಪರ್ಕಭಾಷೆ. ಅದು ಭಾರತೀಯ ರಾಷ್ಟ್ರಭಾಷೆ . ಆ ಭಾಷೆಯ ಸಾಹಿತ್ಯದಲ್ಲಿ ಅಖಿಲ ಭಾರತೀಯ ಸಾಹಿತ್ಯವು

ಒಳಗೊಳ್ಳುವುದು ಸಹಜ ಎಂಬ ಅಭಿಪ್ರಾಯವನ್ನು ನಮ್ಮ ಮುಂದಿಟ್ಟರು. ಮತ್ತೆ ಕೆಲವರು ಆ ಸಭೆಯಲ್ಲಿ ಭಾರತೀಯ ಕಥಾಸಾಹಿತ್ಯ, ಕಾದಂಬರಿ ಸಾಹಿತ್ಯ, ನಾಟಕ ಸಾಹಿತ್ಯ, ಕಾವ್ಯ ಸಾಹಿತ್ಯ ನಡೆದು ಬಂದ ದಾರಿಯನ್ನು ಗುರುತಿಸಿ ಭಾರತೀಯ ಸಾಹಿತ್ಯದ ಇತಿಹಾಸವನ್ನು ರಚಿಸತಕ್ಕದ್ದು ಎಂದು ಮತ್ತೊಂದು ಅಭಿಪ್ರಾಯವನ್ನು ಮಂಡಿಸಿದರು. ಭಾರತೀಯ ಕಥಾ ಸಾಹಿತ್ಯವನ್ನು ಅರಿತ (೧೯೭೦) ಭಾಷಾ' ಪತ್ರಿಕೆಯ ವಿಶೇಷಾಂಕವೊಂದು ದಿಲ್ಲಿಯ ಹಿಂದೀ ನಿರ್ದೇಶನಾಲಯದ ವತಿಯಿಂದ ಪ್ರಕಟವಾಗಿದೆ. ಅಖಿಲ ಭಾರತೀಯ ಏಕಾಂಕೀ ಎಂಬ ಇನ್ನೊಂದು ಗ್ರಂಥ ಈಚೆಗೆ ಹೊರಬಂದಿದೆ.

ಕೆಲವರು ರಸದೃಷ್ಟಿಯಿಂದ ಭಾರತೀಯ ಸಾಹಿತ್ಯದ ಇತಿಹಾಸವನ್ನು ಬರೆಯಬೇಕಾದದ್ದೆಂದು ಅಭಿಪ್ರಾಯ ವ್ಯಕ್ತಪಡಿಸಿದರು. ಅಖಿಲ ಭಾರತೀಯ ಶೃಂಗಾರ ರಸಪ್ರಧಾನವಾದ ಸಾಹಿತ್ಯ, ಭಾರತೀಯ ವೀರರಸಪ್ರಧಾನಸಾಹಿತ್ಯ, ಭಾರತೀಯ ಹಾಸ್ಯ-ವ್ಯಂಗ್ಯ-ಪ್ರಧಾನ ಸಾಹಿತ್ಯ - ಎಂಬ ವಿಧಿಗಳನ್ನು ದೇಶದ ಮುಂದೆ ಪ್ರಸ್ತಾಪಿಸಿದರು.

ಇಷ್ಟರಲ್ಲಿ ದೀರ್ಘಕಾಲದ ಅಧ್ಯಯನದ ಪರಿಣಾಮವಾಗಿ ಆಚಾರ್ಯ ಪ್ರೊ|| ಅನಂತರಂಗಾಚಾರ್ಯರು ಸಾಹಿತ್ಯ ಭಾರತೀ (೧೯೭೦) ಎಂಬ ಮೇರುಕೃತಿಯನ್ನು ಪ್ರಕಟಿಸಿ ಇಡೀ ದೇಶವನ್ನೇ ಬೆರಗುಗೊಳಿಸಿದರು. ಇಂತಹ ಕ್ರಾಂತಿಪುರುಷರು ಇನ್ನೊಬ್ಬರಿಲ್ಲ. ಈ ಉದ್ಗ್ರಂಥವನ್ನು ಕುರಿತು ಕುವೆಂಪು ಅವರು "ನಮಗೆ ತಿಳಿದಂತೆ ಇಂಗ್ಲೀಷ್ ಭಾಷೆಯಲ್ಲಾಗಲಿ ಭರತಖಂಡದ ಬೇರೆ ಭಾಷೆಗಳಲ್ಲಿಯಾಗಲಿ ಇಪ್ಪತ್ತು ಭಾಷಾ ಸಾಹಿತ್ಯಚರಿತ್ರೆಗಳನ್ನು ಉಗಮದಿಂದ ಇದುವರೆಗೆ ಸಮೀಪಿಸಿರುವ ಮತ್ತೊಂದು ಗ್ರಂಥ ಇಲ್ಲ" ಎಂಬುದಾಗಿ ಹೇಳಿದ್ದಾರೆ. ಇದು ಅಕ್ಷರಶಃ ನಿಜ.

ಅನಂತ ರಂಗಾಚಾರ್ಯರು ೪-೬-೧೯೦೪ರಲ್ಲಿ ತಿರಮಕೂಡಲು ನರಸೀಪುರವೆಂಬ ಕಪಿಳಿಲ ಕಾವೇರಿ ನದಿಗಳ ಸಂಗಮ ಸ್ಥಳವಾದ ಪವಿತ್ರ ತೀರ್ಥಯಾತ್ರಾ ನಗರದಲ್ಲಿ ಜನಿಸಿದರು. ೧೯೨೯ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಮೈಸೂರು ಪ್ರಾಚ್ಯವಿದ್ಯಾವಿಭಾಗದಲ್ಲಿ (ಓರಿಯೆಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್) ಪಂಡಿತರಾಗಿ ಕೆಲಸಕ್ಕೆ ಸೇರಿದರು. ಆಗ ಊರೂರು ತಿರುಗಿ ಎಷ್ಟೋ ಕೈಬರಹದ ಗ್ರಂಥಗಳು, ಓಲೆಗರಿ ಗ್ರಂಥಗಳ ಕಟ್ಟುಗಳು ಮತ್ತು ಇತರ ಪ್ರಾಚ್ಯವಿದ್ಯೆಗೆ ಸಂಬಂಧಪಟ್ಟ ಹಳಗನ್ನಡ ಮತ್ತು ನಡುಗನ್ನಡ ಗ್ರಂಥಗಳನ್ನು ಶೇಖರಿಸಿ ಕೈಬರಹದ ಗ್ರಂಥಭಂಡಾರಕ್ಕೆ ಸೇರಿಸಿದರು. ಆ ಕಾಲದಲ್ಲಿ ಶ್ರೀ. ಆರ್. ನರಸಿಂಹಾಚಾರ್ಯರು ಪ್ರಪ್ರಥಮವಾಗಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆದವರು ಇವರನ್ನು ಕುರಿತು ಅನಂತರಂಗಾಚಾರ್ಯರು ಒಂದು ಗ್ರಂಥವನ್ನೇ ರಚಿಸಿದ್ದಾರೆ.

ನಂತರ ಇಂಟರ್ ಮಿಡಿಯಟ್ ಮತ್ತು ಮಹಾರಾಜಾ ಕಾಲೇಜುಗಳಲ್ಲಿ ಕನ್ನಡ ವಿಭಾಗದ ಪ್ರಾಧ್ಯಾಪಕರಾಗಿ ಆಚಾರ್ಯರು ದೀರ್ಘ ಕಾಲ ಸೇವೆ ಸಲ್ಲಿಸಿದರು. ಇವರು ಇಂಗ್ಲೀಷ್, ಸಂಸ್ಕೃತ, ತಮಿಳು ಮತ್ತು ಕನ್ನಡ ಸಾಹಿತ್ಯಗಳಲ್ಲಿ ಸಾಕಷ್ಟು ಕೃಷಿಮಾಡಿದ್ದಾರೆ.

ಪ್ರೊ|| ಬಿ. ಎಂ. ಶ್ರೀಕಂಠಯ್ಯನವರ 'ಅಶ್ವತ್ಥಾಮನ್' ನಾಟಕವು ಮೈಸೂರಿನಲ್ಲಿ ಪ್ರಥಮತಃ ರಂಗಮಂದಿರದಲ್ಲಿ ಮೆರೆದಾಗ ಆಚಾರ್ಯರು ಆ ನಾಟಕದಲ್ಲಿ ಅಶ್ವತ್ಥಾಮನ್-ಪಾತ್ರವನ್ನು ವಹಿಸಿದ್ದರು. ರಂಗತಾಲೀಮಿನಲ್ಲಿ ಅವರು ನಿಷ್ಣಾತರಾಗಿದ್ದರೂ 'ಅಶ್ವತ್ಥಾಮನ್' ನಾಟಕದ ಎಷ್ಟೋ ಪಂಕ್ತಿಗಳನ್ನು ಅವರು ತಮ್ಮ ೮೦ನೇ ವಯಸ್ಸಿನಲ್ಲಿ ನಮ್ಮ ಮುಂದೆ ಹೇಳಿ ನಮ್ಮನ್ನು ಬೆರಗು ಗೊಳಿಸುತ್ತಿದ್ದರು.

ಆಚಾರ್ಯರು ರಂಗತಾಲೀಮಿನಂತೆ ವ್ಯಾಯಾಮ ತಾಲೀಮಿನಲ್ಲಿಯೂ ನಿಪುಣರು. ಅವರು ಮಹಾರಾಜಾ ಕಾಲೇಜಿನಲ್ಲಿ 'ಗರಡಿ' ಎಂಬ ನಾಡುವ್ಯಾಯಾಮಶಾಲೆಯ ಸ್ಥಾಪನೆಗೆ ಕಾರಣರಾದರು. ಆಗಿನ ಮಹಾರಾಜಕಾಲೇಜ್ ಇತಿಹಾಸ ವಿಭಾಗದ ಪ್ರೊಫೆಸರ್ ಡಾ|| ಎಂ. ಎಚ್. ಕೃಷ್ಣ ಗರಡಿಸಮಿತಿಯ ಅಧ್ಯಕ್ಷರಾಗಿದ್ದರು. ನಾನು ಗರಡಿ ಸಾಧನೆಯಲ್ಲಿ ಆಚಾರ್ಯರ ಶಿಷ್ಯ. ನಿತ್ಯ ಪ್ರಾತಃಕಾಲ ೫ ಗಂಟೆಗೆ ಗರಡಿಮನೆಯಲ್ಲಿ ಎಣ್ಣೆದೀಪದ ಮಿನುಗುಟ್ಟುವ ಬೆಳಕಿನಲ್ಲಿ ಆಚಾರ್ಯರು ದಂಡೆ (ಸುಮಾರು ೧೦೦೦) ಒತ್ತುತ್ತಿದ್ದರು. ನಮಗೆ ೫೦ರಿಂದ ೧೦೦ರವರೆಗೆ ದಂಡೆ ಒತ್ತುವುದರಲ್ಲಿ ಮೈಯೆಲ್ಲ ಬೆವರಿನಿಂದ ಒದ್ದೆಮುದ್ದೆಯಾಗುತ್ತಿತ್ತು. ನಮ್ಮ ಜೊತೆಯಲ್ಲಿ, ನಮ್ಮ ಪಕ್ಕದ ಮನೆಯ ಪ್ರೊ|| ಟಿ. ಕೃಷ್ಣಮೂರ್ತಿ (ಸಂಖ್ಯಾಶಾಸ್ತ್ರದ ಅಧ್ಯಾಪಕರು) ನಮ್ಮ ಜೊತೆಯಲ್ಲಿ ಚಾಮುಂಡಿಪುರಂ ಬಡಾವಣೆಯಿಂದ ಕಾಲೇಜಿನ ತನಕ ನಡೆದು ಬಂದು ವ್ಯಾಯಾಮ ಮಾಡುತ್ತಿದ್ದರು. ಶ್ರೀ ಅನಂತರಂಗಾಚಾರ್ಯರು ಗರಡಿಯ ಕೆಮ್ಮಣ್ಣಿನಲ್ಲಿ ನಿತ್ಯ ಸೊಂಟದವರೆಗೆ ಹೂತುಕೊಂಡು ಕುಳಿತಿರುತ್ತಿದ್ದರು. ಗರಡಿಕಂಭ ಕಟ್ಟುವುದರಲ್ಲಿ ಆಚಾರ್ಯರು ಹೆಸರು ಮಾಡಿದ್ದರು. ಎರಡೂ ತೊಡೆಗಳ ಮಧ್ಯ ಕಂಭವನ್ನು ಅವರು ಹಿಡಿದು ವ್ಯಾಯಾಮ ಮಾಡುವ ಕಲೆಯಲ್ಲಿ ಆಚಾರ್ಯರು ಯಾವ ಗರಡಿನ ಉಸ್ತಾದನಿಗೂ ಕಮ್ಮಿ ಇರಲಿಲ್ಲ. ಸಾಲದ್ದಕ್ಕೆ ಕಂಭಕ್ಕೆ ಎಣ್ಣೆ ಬಳಿಯುತ್ತಿದ್ದರು. ಕಂಭವನ್ನು ಮುಟ್ಟಿದರೆ ಕೈ ಜಾರುತ್ತಿತ್ತು. ಅಂಥ ಕಂಭವನ್ನು ಏರಿ ಎರಡು ತೊಡೆಯಿಂದ ಕಂಭವನ್ನು ಮೆಟ್ಟಿ ಹಿಡಿದು ವ್ಯಾಯಾಮಮಾಡುವುದೆಂದರೆ ನಮಗೆಲ್ಲಾ ಆಶ್ಚರ್ಯವಾಗುತ್ತಿತ್ತು. ಆಚಾರ್ಯರು ದಸರಾ ಕುಸ್ತಿಪಂದ್ಯದಲ್ಲೂ ಜೊತೆ ಹಾಕಿಸಿಕೊಂಡು ನಮ್ಮ ಮಹಾರಾಜರ ಎದುರಿಗೆ ಕಾಲೇಜ್ ಗರಡಿಯ ಹೆಸರು ಶಾಶ್ವತವಾಗಿ ನಿಲ್ಲುವಂತೆ ಮಾಡಿದ್ದರು.

ಆಚಾರ್ಯರ ನೇರ ವಿದ್ಯಾರ್ಥಿಯಾಗುವ ಸೌಭಾಗ್ಯ ನನಗೆ ದೊರೆಯಲಿಲ್ಲ. ಆಗ ನಾನು ಗಣಿತಶಾಸ್ತ್ರದ ಬಿ.ಎ. ಆನರ್ಸ್ ತರಗತಿಯ ವಿದ್ಯಾರ್ಥಿಯಾಗಿದ್ದೆ. ನಂತರ ಹಿಂದಿ ಎಂ.ಎ. ಪಾಸ್ ಮಾಡಿಕೊಂಡು ಕಾಶಿಯಿಂದ ಬಂದ ಮೇಲೆ ಹಿಂದಿ ಲೆಕ್ಚರರ್ ಆದೆ. ಆಗ ಆಚಾರ್ಯರು ಹಿರಿಯ ಪ್ರಾಧ್ಯಾಪಕರು. ಕಾಮನ್ ರೂಮಿನಲ್ಲಿ ನಮ್ಮ ಜೊತೆಯಲ್ಲಿದ್ದರು. ಅವರು ಶ್ರೀ ನ. ರಂಗಾಚಾರ್ ರಿಜಿಸ್ಟ್ರಾರ್ ಪದವಿಯಿಂದ ಬಡ್ತಿ ಹೊಂದಿ ಮರಿಮಲ್ಲಪ್ಪ ಟೀಚರ್ಸ್ ಕಾಲೇಜಿನ ಪ್ರಿನ್ಸಿಪಾಲ್ ಆಗಿ ವರ್ಗವಾಗಿ ಹೋದ ಸಂದರ್ಭದಲ್ಲಿ ಸುಮಾರು ೧೦೦ ಜನ ಅಧ್ಯಾಪಕ ವೃಂದ, ವ್ಯಾಯಾಮಶಾಲೆಗೆ ಸಂಬಂಧಪಟ್ಟವರು ಯೂನಿವರ್ಸಿಟಿ ಅನಿಸಿದ

ಮುಖ್ಯಸ್ಥರು, ಯೂನಿವರ್ಸಿಟಿ ಲೈಬ್ರರಿಯವರು ಎಲ್ಲರಿಗೂ ಬೆಳದಿಂಗಳ ಊಟ-ಪುಳಿಯೋಗರೆ-ಮೊಸರನ್ನ ಇತ್ಯಾದಿ ಮಾಡಿ ಬಡಿಸಿದರು. ಅದರ ರುಚಿ ಇನ್ನೂ ಮಾಸಿಲ್ಲ.

ಆಚಾರ್ಯರು ಗರಡಿಸಾಧನೆಯಲ್ಲಿ ನಿಪುಣರು. ಆಗ ಕನ್ನೇಗೌಡನ ಕೊಪ್ಪಲಿನಲ್ಲಿ "ಕೊಪ್ಪಲು ಬಸವ" ಎಂಬ ಪೈಲ್ವಾನ ಇದ್ದ. ಸರಸ್ವತಿಪುರಂನಲ್ಲಿ ಆಚಾರ್ಯ ಅನಂತ ರಂಗಾಚಾರ್ಯರ ವಾಸ. ಬಸವನ ಗರಡಿ ಅವರ ಮನೆಗೆ ಸಮೀಪದಲ್ಲಿತ್ತು. ಅಲ್ಲಿಗೆ ಆಚಾರ್ಯರು ಹೋಗುತ್ತಿದ್ದರು. "ಸೊಬಾನ್" ಗರಡಿ ಸಾಧನೆಯನ್ನು ಉತ್ತೇಜಿಸುವ ಹಾಡನ್ನು ಕಲಿತಿದ್ದರು. ಆ ಹಾಡಿನಲ್ಲಿ ಯಥೇಷ್ಟ ಹಿಂದೂಸ್ತಾನಿ ಶಬ್ದಗಳು ಮಿಳಿತವಾಗಿದ್ದವು. ಸೊಬಾನ್ ಕೇಳುವುದಕ್ಕೆ ಬಹಳ ಹಿತವಾಗಿ ವ್ಯಾಯಾಮ ಮಾಡುವವರಿಗೆ ಹುಮ್ಮಸ್ಸು ಕೊಡುವಂಥ ಗುಣವುಳ್ಳದ್ದಾಗಿರುತ್ತಿತ್ತು. ಈಗಲೂ ನಿತ್ಯ-ಪ್ರಾತಃಕಾಲ ಸಾಯಂಕಾಲ ಆರಾರು ಬೆಸುಗೆ ಮಾಡಿ ನಾನು ವ್ಯಾಯಾಮ ಮಾಡಿ ದೇಹಾರೋಗ್ಯವನ್ನು ಕಾಪಾಡಿಕೊಂಡು ಬಂದಿದ್ದೇನೆ. ನನಗೆ ಈಗ ೯೨ ವರ್ಷ ವಯಸ್ಸು ಆಯಿತು. ಇಷ್ಟು ಕಾಲ ತಕ್ಕಮಟ್ಟಿಗೆ ಆ ದೇಹಾರೋಗ್ಯವನ್ನು ಕಾಪಾಡಿಕೊಂಡು ಬಂದಿದ್ದು ಆಚಾರ್ಯರ ಕೃಪೆಯಿಂದಲೇ ಹೊರತು ಬೇರೆ ಯಾವ ರೀತಿಯಿಂದಲೂ ಅಲ್ಲ.

ಆಚಾರ್ಯ ಅನಂತರಂಗಾಚಾರ್ಯರು ಕೃಷೀವಲರು. ಅವರಿಗೆ ಸ್ವಂತ ತರಿಜಮೀನು ಊರಲ್ಲಿತ್ತು. ಊರು ತಿರುಮಕೂಡಲು ನರಸೀಪುರ. ಅವರು ಮನೆಯಲ್ಲಿ ಜೋಡೆತ್ತಿನ ಗಾಡಿಯನ್ನು ಇಟ್ಟಿದ್ದರು. ಸೋಸಲೆ ಎತ್ತಿನ ಸೇವೆ ಅವರ ದಿನಚರಿ ಕಾರ್ಯಕ್ರಮವಾಗಿತ್ತು. ಅವರ ಜ್ಯೇಷ್ಠಪುತ್ರನೂ ಗಾಡಿ ನಡೆಸುವುದರಲ್ಲಿ ಹೆಸರುವಾಸಿಯಾಗಿದ್ದನು. ಬೆಳಿಗ್ಗೆ ೪ ಗಂಟೆಗೆ ಗಾಡಿ ಕಟ್ಟಿಕೊಂಡು ೯ (ಒಂಭತ್ತು) ಗಂಟೆಗೆ ನರಸೀಪುರವನ್ನು ತಲಪುತ್ತಿದ್ದರು. ಗದ್ದೆಯ ನಾಟಿ, ಕಳೆಕೀಳುವುದೂ ನಾಚಾ ನೋಡಿಕೊಳ್ಳುವುದು ಮತ್ತು ಕುಯಿಲು- ಇಷ್ಟನ್ನು ಸ್ವಂತವಾಗಿ ಮಾಡಿಸುತ್ತಿದ್ದರು. ನಮಗೆಲ್ಲಾ ಇದನ್ನು ನೋಡಿ ಆಶ್ಚರ್ಯವಾಗುತ್ತಿತ್ತು. ಗದ್ದೆಯಿಂದ ನಿತ್ಯಗಟ್ಟಲೆಯ ಭುಕ್ತಿಗೆ ತಕ್ಕಷ್ಟು ಭತ್ತ ಬರುತ್ತಿತ್ತು. ಆಚಾರ್ಯರ ಮನೆಯೇ ಒಂದು ಗುರುಕುಲದಂತೆ ಇರುತ್ತಿತ್ತು. ಎಷ್ಟೋ ಜನ ಬಡವಿದ್ಯಾರ್ಥಿಗಳಿಗೆ ಅವರ ಮನೆಯಲ್ಲಿಯೇ ಉಚಿತ ಭೋಜನ ದೊರಕುತ್ತಿತ್ತು.

ಆಚಾರ್ಯರು ಈಗಿನ ಪ್ರಪಂಚದ - ಅಂದರೆ ಅನ್ಯಾಯ, ಅಧರ್ಮ, ಅತ್ಯಾಚಾರ - ಇಂಥವುಗಳ ಹತ್ತಿರ ಸುಳಿದೂ ನೋಡುತ್ತಿರಲಿಲ್ಲ. ಅವರು ಅತ್ಯಂತ ಸಾತ್ವಿಕಜೀವನ ನಡೆಸುವವರು.

ಆಚಾರ್ಯರ ಕನ್ನಡ ಭಾಷೆ ಮತ್ತು ಸಾಹಿತ್ಯಸೇವೆ ಅಪಾರವಾಗಿದೆ. ಅವರು ಶೇಖರಿಸಿದ ಕನ್ನಡ ತಾಳೆಗರಿಗ್ರಂಥಗಳ ಸಹಾಯದಿಂದ ಪ್ರಾಚ್ಯವಿದ್ಯಾವಿಭಾಗದ ನಿರ್ದೇಶನದ ಅನೇಕ ಗ್ರಂಥಗಳನ್ನು ಪ್ರಕಟಿಸಿದರು. ಅಕ್ಷರ ಪ್ರಚಾರಸಂಸ್ಥೆಯವರಾಗಿ ಮೈಸೂರು ಸೀಮೆಯ ಉದ್ದಗಲದಲ್ಲೆಲ್ಲಾ ವಿದ್ಯಾಯಾತ್ರೆ ಕೈಗೊಂಡು ಉಪನ್ಯಾಸ ನೀಡಿದರು. ಅವರ ಉಪನ್ಯಾಸಗಳು ವಿದ್ವತ್ಪೂರ್ಣವಾಗಿಯೂ ಪಾಮರ ರಂಜಕವಾಗಿಯೂ ಇರುತ್ತಿದ್ದವು. ವಿದ್ಯಾರ್ಥಿಗಳ

ಉಪಯೋಗಕ್ಕಾಗಿ ಗದುಗಿನ ಭಾರತದ ದ್ರೋಣಪರ್ವ, ಕರ್ಣಪರ್ವ, ಶಲ್ಯಪರ್ವ ಮತ್ತು ಗದಾಪರ್ವಗಳನ್ನು ಪ್ರತ್ಯೇಕ ಪುಸ್ತಕಗಳಾಗಿ ಪ್ರಕಟಿಸಿದರು. ಅವರ ಪಂಪಭಾರತದ ಗದ್ಯಾನುವಾದ ಕಾಲೇಜಿನ ವಿದ್ಯಾರ್ಥಿಗಳಿಗೆ ತುಂಬಾ ಸಹಾಯಕವಾಗಿದೆ. ಅನುವಾದದ ಸಹಾಯದಿಂದಲೇ ಬಿ.ಎ. ತರಗತಿಯಲ್ಲಿ ಉತ್ತೀರ್ಣರಾದವರು ಅನೇಕರಿದ್ದರು. ಅವರು ತಯಾರಿಸಿದ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಗೊಂಡ ಲೇಖನಗಳ ಅಕಾರಾದಿ ತುಂಬ ಉಪಯುಕ್ತವಾದದ್ದು. ವ್ಯಾಕರಣ, ಛಂದಶ್ಶಾಸ್ತ್ರ, ಗ್ರಂಥಸಂಪಾದನೆ, ಹಳಗನ್ನಡ ಕಾವ್ಯಗಳ ಕನ್ನಡ ಅನುವಾದ-ಇಂತಹ ಕಷ್ಟಸಾಧ್ಯವಾದ ಕೆಲಸಗಳೆಲ್ಲವೂ ಇವರಿಗೆ ವಹಿಸಲಾಗುತ್ತಿತ್ತು. ಇಂತಹ ಶ್ರಮಸಾಧ್ಯವಾದ ವಿದ್ವತ್ಕಾರ್ಯವನ್ನು ಆಚಾರ್ಯರು ಸಂತೋಷವಾಗಿ ಸರ್ವರಿಗೂ ಉಪಯೋಗವಾಗುವ ರೀತಿಯಲ್ಲಿ ನೆರವೇರಿಸುತ್ತಿದ್ದರು.

ಆಚಾರ್ಯರು ಬಹಳ ಉದಾರಿಗಳು. ಯಾರ ಮುಂದೂ ಅವರು ಕೈ ಒಡ್ಡಿದವರಲ್ಲ. ಕಷ್ಟ ಸಹಿಷ್ಣುವಾಗಿ ಅನೇಕ ಮುಃಖದ ಪ್ರಸಂಗಗಳಲ್ಲಿ ಸಿಕ್ಕಿಕೊಂಡು ನರಳಿದರು. ಡಯಾಬಿಟೀಸ್ ಇವರ ಪಾಲಿಗೆ ಮೃತ್ಯುವಾಗಿ ಬಂದಿತು. ಸರ್ಜಿಕಲ್ ಆಪರೇಷನ್ ಆದ ಮೇಲೆ ಪೈಲವಾನ್ ಆಗಿದ್ದವರು ಪರಾವಲಂಬಿಗಳಾದರು. ಇವರ ಕೃತಿಗಳ ಸಂಪಾದನೆ, ಪ್ರಕಟನೆ ಮತ್ತು ಇವರ ಜನ್ಮಶತಾಬ್ದಿಯ ನೆನಪಿನ ಗ್ರಂಥದ ಪ್ರಕಟನೆ-ಇವರಿಗೆ ಇವರ ಶಿಷ್ಯರೂ, ಮನೆಯವರೂ, ಕನ್ನಡ ಸಾರಸ್ವತ ಲೋಕದವರೂ ಕಾಣಿಕೆಯಾಗಿ ಈಗಲಾದರೂ ನೀಡತಕ್ಕದ್ದು, ಇದು ನಮ್ಮ ಕರ್ತವ್ಯ - ಇಂತಹ ವಾಗ್ಮಿಗಳು, ವಿದ್ವಾಂಸರು, ಸಾತ್ವಿಕರು ವಿರಳ. ಇವರ ಸಾಹಿತ್ಯಭಾರತೀ ಹಿಂದೀ ಭಾಷೆಗೆ ಅನುವಾದಯೋಗ್ಯವಾದ ಗ್ರಂಥ.



# ಬಹುಮುಖ ವ್ಯಕ್ತಿತ್ವ

ಸಿ. ಮಹಾದೇವಪ್ಪ

ಮೈಸೂರು ವಿಶ್ವವಿದ್ಯಾನಿಲಯದ ಮಹಾರಾಜಾ ಹಾಗೂ ಯುವರಾಜಾ ಕಾಲೇಜಿನಲ್ಲಿ ೧೯೩೭ರಿಂದ ೧೯೪೨ರ ಅವಧಿಯಲ್ಲಿ ಇದ್ದ ಕನ್ನಡ ಅಧ್ಯಾಪಕರ ಬಳಗದಲ್ಲಿ ಶ್ರೀಯುತ ಅನಂತರಂಗಾಚಾರ್ಯರೂ ಒಬ್ಬರು. ಸರ್ಕಾರಿ ಮರಿಮಲ್ಲಪ್ಪ ಪ್ರೌಢಶಾಲೆಯಿಂದ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಮೊದಲನೇ ಬಾರಿಗೆ ೧೯೩೭ರಲ್ಲಿ ಉತ್ತೀರ್ಣನಾಗಿ ಯುವರಾಜಾ ಕಾಲೇಜಿನ ಕಲಾವಿಭಾಗಕ್ಕೆ ವಿದ್ಯಾರ್ಥಿಯಾಗಿ ಸೇರಿ ವ್ಯಾಸಂಗ ಮಾಡುವಾಗ, ನನಗೆ ಅವರು ಕನ್ನಡ ಪಾಠ ಮಾಡುತ್ತಿದ್ದರು. ಶ್ರೀ ಅನಂತರಂಗಾಚಾರ್ ಸೀನಿಯರ್ ಪಾಠ ಮಾಡುತ್ತಿದ್ದುದು ನನ್ನ ಮನಸ್ಸಿನಲ್ಲಿ ಇಂದಿಗೂ ಅಚ್ಚಳಿಯದೆ ನೆಲಸಿದೆ. ಅವರ ಕಂಚಿನ ಕಂಠದಿಂದ ಹೊರಬಿದ್ದ ದನಿಯಲ್ಲಿ ನಾಗಚಂದ್ರನ ರಸಸ್ಯಂದಿಯಾದ ಪದ್ಯಗತಿಯ ರಸಭಾವಗಳು ವಿದ್ಯಾರ್ಥಿವೃಂದದ ಮನ ಸೆಳೆಯುವಂತಿದ್ದುವು.

ರಾಮಚಂದ್ರಚರಿತಪುರಾಣವೆಂದು ಗ್ರಂಥನಾಮವಿದ್ದರೂ ಪಂಪರಾಮಾಯಣವೆಂದೇ ಪ್ರಸಿದ್ಧವಾಗಿದ್ದುದು ನಾಗಚಂದ್ರನು ಅಭಿನವಪಂಪನೆಂಬ ಪ್ರಖ್ಯಾತಿಗೆ ಪಾತ್ರನಾಗಿದ್ದುದೆ ಕಾರಣವಷ್ಟೆ. ಆ ಗ್ರಂಥದಲ್ಲಿ ನನಗೆ ಹೆಚ್ಚು ಪ್ರವೇಶವಾಗುವ ಒಂದು ಸಂದರ್ಭ ಒದಗಿ ಬಂದ ಪುಣ್ಯವಿಶೇಷವನ್ನು ಸ್ಮರಿಸುವುದು ನನ್ನ ಕರ್ತವ್ಯವೆಂದೇ ಭಾವಿಸಿ ಅದನ್ನು ಇಲ್ಲಿ ಸೂಚಿಸಬಯಸುತ್ತೇನೆ.

ಸೋಸಲೆ ರಾಮದಾಸರೆಂದರೆ ತಾಳಬ್ರಹ್ಮ, ಘಟಬ್ರಹ್ಮ ಎಂದೇ ಹೆಸರಾಂತು ಕಂಜರಿ ಬಾರಿಸುವುದರಲ್ಲಿ ಅದ್ವಿತೀಯ ವಾದನಕಲಾಕೌಶಲವನ್ನು ಪಡೆದಿದ್ದವರು. ಅವರು ಹಳಗನ್ನಡ ಕಾವ್ಯಗಳ ಆಳವಾದ ಪಾಂಡಿತ್ಯದ ಬಲದಿಂದ ಶಿವಕಥೆ ಹರಿಕಥೆಗಳನ್ನು ನಡೆಸುತ್ತಿದ್ದ ದಾಸಶ್ರೇಷ್ಠರು. ಅವರು ಹಳೇಸೋಸಲೆಯ ಶ್ರೀವ್ಯಾಸರಾಜಮಠದ ನಮ್ಮ ಬೀದಿಯಲ್ಲಿಯೇ ವಾಸಮಾಡಿಕೊಂಡಿದ್ದರು. ನಮ್ಮ ತಂದೆ ಎಸ್.ಜಿ. ಚನ್ನಬಸವಪ್ಪನವರ ಆಪ್ತಮಿತ್ರರೂ

ಆಗಿದ್ದರು. ನಾನು ಜೂನಿಯರ್ ಇಂಟರ್ ತರಗತಿಯ ಪರೀಕ್ಷೆಯಾದ ಬಳಿಕ ಬೇಸಿಗೆ ರಜದಲ್ಲಿ ನಮ್ಮ ತಂದೆಯವರ ಕೋರಿಕೆ ಮೇರೆಗೆ ನನಗೆ ಪಂಪರಾಮಾಯಣದ ಅಭ್ಯಾಸದಲ್ಲಿ ಮಾರ್ಗದರ್ಶನವಾಗಿದ್ದರಿಂದ, ಮುಂದಿನ ತರಗತಿಗೆ ಹೋದಾಗ ಗುರುವರ್ಯರಾದ ಅನಂತರಂಗಾಚಾರ್ಯರ ಪಾಠ ಕೇಳಿ ಆ ಕಾವ್ಯಾನಂದದಲ್ಲಿ ತಲ್ಲೀನವಾಗುವ ಒಳ್ಳೆಯ ಅವಕಾಶ ಲಭ್ಯವಾಗುವಂತಾಯಿತು. ವರ್ಷಾಂತ್ಯದಲ್ಲಿ ವಿದ್ಯಾರ್ಥಿಗಳಿಂದ ಏರ್ಪಡಿಸಿದ್ದ ಪ್ರಬಂಧವಾಚನದ ಸಂದರ್ಭದಲ್ಲಿ ನಾನು ಮಂಡಿಸಿದ 'ರಾವಣನ ಪಾತ್ರ'ವನ್ನು ಕುರಿತ ಲೇಖನ ಪೂಜ್ಯ ಗುರುಗಳಾದ ಡಿ.ಎಲ್. ನರಸಿಂಹಾಚಾರ್ ಮತ್ತು ಎಸ್. ಅನಂತರಂಗಾಚಾರ್ ಅವರುಗಳ ಮೆಚ್ಚುಗೆಗೆ ಪಾತ್ರವಾಯಿತು. ಆ ವೇಳೆಯಲ್ಲಿಯೂ ಎಸ್. ಅನಂತರಂಗಾಚಾರ್ಯರು ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರದವರೆಂಬುದು ನನಗೆ ತಿಳಿದಿರಲಿಲ್ಲ. ನಮ್ಮ ಊರಾದ ಹಳೇಸೋಸಲೆಗೂ ತಿ. ನರಸೀಪುರಕ್ಕೂ ಇದ್ದ ದೂರ ಕೇವಲ ಎರಡು-ಎರಡೂವರೆ ಮೈಲಿ ಮಾತ್ರವಾದರೂ ಅವರು ನನಗೆ ಪರಿಚಯವಾದದ್ದು ಯುವರಾಜಾ ಕಾಲೇಜಿನಲ್ಲಿ ಕನ್ನಡ ಉಪಾಧ್ಯಾಯರಾಗಿ ಮಾತ್ರ.

ಕನ್ನಡ ಆನರ್ಸ್ ತರಗತಿಗೆ ಸೇರಲು ಕನ್ನಡ ವಿಷಯದಲ್ಲಿ ಹೇಗೆ ಹೆಚ್ಚು ಅಂಕಗಳನ್ನು ಪಡೆದಿದ್ದೆನೋ ಅದರಂತೆ ತತ್ತ್ವಶಾಸ್ತ್ರವಲ್ಲದೆ ಅರ್ಥಶಾಸ್ತ್ರದಲ್ಲಿಯೂ ಆಯಾ ವಿಭಾಗಗಳಿಗೆ ಸೇರಲು ಬೇಕಾದ ಅಂಕಗಳನ್ನು ಹೊಂದಿದ್ದ ಕಾರಣ ಅವುಗಳಲ್ಲಿ ಅವಕಾಶವಿದ್ದರೂ ನಾನು ಕನ್ನಡವನ್ನೇ ಆರಿಸಿಕೊಳ್ಳಲು ಬಯಸಿದೆನು. ಹಣ ಬೇಕೆಂದರೆ ರೆವೆನ್ಯು ಇಲಾಖೆಗೆ ಸೇರಲು ತಕ್ಕ ವಿಷಯಗಳನ್ನು ಆರಿಸಿಕೋ, ಹಾಗಲ್ಲವೆನಿಸಿದರೆ ನೀನು ಇಷ್ಟಪಟ್ಟ ಕನ್ನಡವನ್ನೇ ತೆಗೆದುಕೊಳ್ಳುವುದೇ ಸರಿ ಎಂದು ಬುದ್ಧಿ ಹೇಳಿದ ಬಂಧುಗಳು ಇಂದೂ ನಮ್ಮ ಮಧ್ಯೆ ಇದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು. ಅಲ್ಲದೆ ಆ ಕಾಲದಲ್ಲಿ ಕನ್ನಡ ವಿಭಾಗಕ್ಕೆ, ಇತರ ವಿಷಯಗಳನ್ನು ಬಿಟ್ಟು ಏಕೆ ಸೇರಿದೆ ಎಂದು ಕೇಳುವವರೇ ಬಹಳ ಮಂದಿ. ಅಷ್ಟಾದರೂ ಕನ್ನಡ ವಿಭಾಗಕ್ಕೂ ಸುಲಭವಾಗಿ ಪ್ರವೇಶ ದೊರೆಯುವಂತಿಲ್ಲ. ಪೂಜ್ಯ ಶ್ರೀ ಎ.ಆರ್. ಕೃಷ್ಣಶಾಸ್ತ್ರಿಗಳ ಬಳಿಗೆ ನನ್ನನ್ನು ಕರೆದುಕೊಂಡು ಹೋಗಿ ನನಗೆ ಆನರ್ಸ್ ತರಗತಿಗೆ ಸೇರಲು ಅವಕಾಶ ಮಾಡಿಕೊಡಿ ಎಂದು ಆಚಾರ್ಯರು ಕೋರಿದ ಫಲವಾಗಿ ನನ್ನ ಆಸೆ ಕೈಗೂಡಿತು. ಅವರ ಉಪಕಾರವನ್ನು ಎಂದೆಂದಿಗೂ ನಾನು ಮರೆಯಲಾರೆ. ನನ್ನೊಡನೆ ತರಗತಿಯಲ್ಲಿ ಇದ್ದವರಲ್ಲಿ ಒಬ್ಬರು ಶ್ರೀ ದೇವುಡು ನರಸಿಂಹಶಾಸ್ತ್ರಿಗಳ ಮಕ್ಕಳು ಡಿ.ಎನ್. ರಾಮು. ಮತ್ತೊಬ್ಬರು ಕುಮಾರಿ ಚಂದ್ರಾಬಾಯಿ ಮಾತ್ರ.

ಮಹಾರಾಜಾ ಕಾಲೇಜಿಗೆ ಸೇರಿದ ಗರಡಿಮನೆಯಲ್ಲಿ ಕುಸ್ತಿ ಕಲಿಸುತ್ತಿದ್ದವರು ರಾಜು ...ಯವರು ಯುವರಾಜಕಾಲೇಜಿನ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದವರು. ನನಗೂ ಅವರು ... ತರಬೇತಿ ನೀಡಿದರು. ಶ್ರೀ ಅನಂತರಂಗಾಚಾರ್ಯರು ಕೂಡ ಆಗಾಗ್ಗೆ ಗರಡಿಮನೆಗೆ ಬಂದು ...ಧನೆ ಮಾಡುತ್ತಿದ್ದು ನಮಗೆಲ್ಲ ಮಾರ್ಗದರ್ಶನ ಮಾಡುತ್ತಿದ್ದರು. ಅವರ

ದೃಢಕಾಯವಾದರೋ ಗರಡಿಯಲ್ಲಿ ಸಾಮು ಮಾಡುತ್ತಿದ್ದ ವಿದ್ಯಾರ್ಥಿಗಳಿಗೆಲ್ಲ ಹುರುಪು ಹುಟ್ಟಿಸುತ್ತಿತ್ತು. ಅವರಿಗೆ ಮೈಗೂಡಿದ್ದ ಕಷ್ಟಸಹಿಷ್ಣುತೆ ಅಂಗಸಾಧನೆಗೆ ಮಾತ್ರ ಸೀಮಿತವಾಗಿರದೆ ಸಾಹಿತ್ಯ ಸಂಶೋಧನೆಯ ಕ್ಷೇತ್ರದಲ್ಲಿಯೂ ಮೈದೋರಿದ್ದಿತು ಎಂಬುದಕ್ಕೆ ಅವರು ಸಂಪಾದಿಸಿರುವ ಬೃಹತ್ ಸಂಕಲನಗ್ರಂಥಗಳ ಮೊದಲಾದ ಅಮೂಲ್ಯ ಪ್ರಕಟನೆಗಳೇ ಸಾಕ್ಷಿ.

ನಾನು ಕನ್ನಡ ಉಪನ್ಯಾಸಕರಾಗಿ ತುಮಕೂರಿನ ಕಾಲೇಜಿನಿಂದ ವರ್ಗವಾಗಿ ಮೈಸೂರಿನ ಯುವರಾಜ ಹಾಗೂ ಮಹಾರಾಜಾ ಕಾಲೇಜುಗಳಲ್ಲಿ ಸೇವೆ ಸಲ್ಲಿಸುವ ವೇಳೆಯಲ್ಲಿ ಶ್ರೀ ಅನಂತರಂಗಾಚಾರ್ಯರು ಗ್ರಂಥಸಂಪಾದನಕಾರ್ಯದಲ್ಲಿ ನಿರತರಾಗಿದ್ದಾಗ, ಸಹ ಅಧ್ಯಾಪಕನಾಗಿ ನಾನು ಅವರ ಕಾರ್ಯದಲ್ಲಿ ಭಾಗಿಯಾಗಿ ನನ್ನ ಗುರುಭಕ್ತಿಯನ್ನು ಸಲ್ಲಿಸಿದ ದಿವಸಗಳನ್ನು ಹೆಮ್ಮೆಯಿಂದ ಸ್ಮರಿಸುತ್ತೇನೆ. ಶಿರೋವೇಷ್ಟನದಿಂದ ಆಕರ್ಷಕವಾದ ತೇಜೋನ್ವಿತ ರೂಪಾಕೃತಿ; ಸರಳ ಸಜ್ಜನಸ್ವಭಾವ; ಮನಸೆಳೆವ ಮಾತಿನ ಗತ್ತು; ಚೈತನ್ಯಮಯ ಅಧ್ಯಾಪನದ ಜೀವಂತಿಕೆಯ ವಾಗ್ವೈಶಿಷ್ಟ್ಯ; ಕನ್ನಡ ಭಾಷಾಸಾಹಿತ್ಯಸೇವಾತತ್ಪರತೆ ಇವೆಲ್ಲವೂ ಇಂದೂ ಅವರ ಶಿಷ್ಯವೃಂದದ ಮನದಲ್ಲಿ ನಾಟಿ ತಿರುವುದು ಚಿರಸ್ಮರಣೀಯ.

ಶ್ರೀ ಅನಂತರಂಗಾಚಾರ್ಯರು ಪಾಠ ಮಾಡುತ್ತಿದ್ದಾರೆ ಎಂಬುದು ತರಗತಿಗಳಿಗೆ ಹೋಗುತ್ತಿದ್ದವರಿಗೆಲ್ಲ ದೂರದಿಂದಲೆ, ಕೇಳಿಬರುತ್ತಿದ್ದಿತು ಎಂದರೆ ಅವರ ಶ್ರೀಕಂಠದ ನಾದಸೌಖ್ಯ ಹಾಗೂ ಉಲ್ಲಾಸದ ಸೊಬಗಿನ ಬೋಧನಾರೀತಿಯ ವೈಶಿಷ್ಟ್ಯ ಏನೆಂಬುದನ್ನು ಎಷ್ಟೂ ಹೇಳಿದರೂ ಸಾಲದು.



# ಕನ್ನಡದ ದಿಗ್ಗಜ

ಜಿ. ಬ್ರಹ್ಮಪ್ಪ

೧೯೩೨ರಲ್ಲಿ ಕನ್ನಡ ಎಂ.ಎ. ತರಗತಿಯ ಮೊದಲ ಜೋಡಿನ ದಿಗ್ಗಜರಾದ ಪರಮಪೂಜ್ಯ ಕುವೆಂಪು, ಡಿ. ಎಲ್. ನರಸಿಂಹಾಚಾರ್, ಕೆ. ವೆಂಕಟರಾಮಪ್ಪ, ಡಿ. ಕೆ. ಭೀಮಸೇನರಾವ್ ಅವರು ಮೈಸೂರಿನಲ್ಲಿ ಉದ್ಭವ ದೇವತೆಗಳಂತೆ ಕನ್ನಡದ ಕೈಂಕರ್ಯಕ್ಕೆ ಮೀಸಲಾಗಿ ಬಂದರು. ಇವರಲ್ಲಿ ಅನಂತರಂಗಾಚಾರ್‌ರವರು ವಿಶಿಷ್ಟವಾದ ವ್ಯಕ್ತಿತ್ವ ಪಡೆದವರು. ಇವರು ಸಂಸ್ಕೃತ, ಕನ್ನಡ, ತಮಿಳು ಮತ್ತು ಇಂಗ್ಲಿಷ್ ಭಾಷಾಚತುರರು. ಸಂಸ್ಕೃತವೇ ನಮ್ಮ ಮನೆಯ ಮಾತು ಎಂದು ಆಗಾಗ ನನ್ನೊಡನೆ ಹೇಳುತ್ತಿದ್ದರು. ನಾನು ೧೯೪೪-೪೫ರಲ್ಲಿ ಇಂಟರ್ ಕೊನೆಯ ವರ್ಷದಲ್ಲಿ ತುಮಕೂರಿನಲ್ಲಿ ಇವರ ಶಿಷ್ಯನಾಗಿದ್ದೆನು. ಆಮೇಲೆ ೧೯೪೭-೪೯ರಲ್ಲಿ ಬಿ.ಎ. ಆನರ್ಸಿನಲ್ಲೂ ಇವರ ವಿದ್ಯಾರ್ಥಿಯಾಗಿದ್ದೆನು. ಆಗ ಸಾಹಿತ್ಯ ಚರಿತ್ರೆಯನ್ನು ಇವರು ನಮಗೆ ಬೋಧಿಸಿದರು. ಪ್ರತಿಯೊಂದು ತರಗತಿಯಲ್ಲೂ ಹತ್ತಾರು ಸಂಸ್ಕೃತಶ್ಲೋಕವನ್ನು ತಪ್ಪದೆ ಇವರು ಹೇಳುತ್ತಿದ್ದರು. ಕೆಲವೊಮ್ಮೆ ಇವರ ಗಮನವನ್ನು ನಾನು ಕುಪ್ಪಿಮಾತ್ರೆ ಅಥವಾ ಶುಕ್ರನಾಡಿ ಜೋತಿಷ್ಕರ ಕಡೆ ಉದ್ದೇಶಪೂರ್ವಕವಾಗೇ ಸೆಳೆಯುತ್ತಿದ್ದೆನು. ಅಂದು ಇವರು ಸಾಹಿತ್ಯ ಚರಿತ್ರೆ ಮರೆತು ಕುಪ್ಪಿಮಾತ್ರೆ ಕಡೆ ಅಥವಾ ಶುಕ್ರನಾಡಿ ಜ್ಯೋತಿಷ್ಯದ ಕಡೆ ತಿರುಗಿಸಿ ಕೇಳುಗರು ಬೆರಗಾಗುವಂತೆ ಬಣ್ಣಿಸುತ್ತಿದ್ದರು. ಗುರುಗಳನ್ನು ಮುಂದೆ ಹೊಗಳಬೇಕು ಎಂದು ಪಂಚತಂತ್ರದಲ್ಲಿ ಹೇಳಿದೆ. ಇದೇ ರೀತಿ ಆಗಾಗ ನಾನು ಇವರನ್ನು ಹೊಗಳಿ ಉಬ್ಬಿಸಿ ಮೈಮರೆಯುವಂತೆ ಮಾಡುತ್ತಿದ್ದೆನು.

ಇವರು ನೂರಾರು ಓಲೆಗ್ರಂಥಗಳನ್ನು ಸಂಗ್ರಹಿಸಿ ಪ್ರಾಚ್ಯವಿದ್ಯಾಸಂಶೋಧನಾ ಕೇಂದ್ರದ ಸಂಪತ್ತನ್ನು ಹೆಚ್ಚಿಸಿದರು. ಹಳಗನ್ನಡವೆಂದರೆ ಇವರಿಗೆ ಪಂಚಪ್ರಾಣ. ತಮಿಳು ಇವರ ಮನೆಮಾತಾಗಿದ್ದುದರಿಂದ ಹಳಗನ್ನಡ ಇವರಿಗೆ ನೀರು ಕುಡಿದಷ್ಟು ಸುಲಭವಾಗಿತ್ತು. ಚಂಪೂ ಕಾವ್ಯಗಳ ಸಮೂಹದ ಅಕಾರಾದಿ ಗ್ರಂಥವನ್ನು ಇವರು ಸಿದ್ಧಪಡಿಸಿ ಕನ್ನಡಕ್ಕೆ ಕಾಣಿಕೆ ಕೊಟ್ಟಿರುವರು.

ಭಾಷಣಕ್ಕೆ ಕರೆದರೆ ಇವರಿಗೆ ಅದೇ ಒಂದು ಹಬ್ಬವಾಗುತ್ತಿತ್ತು. ವೇದಿಕೆ ಮೇಲೆ ನಿಂತು ಜನ ತಲೆದೂಗುವಂತೆ ತಮ್ಮ ಅನುಭವವನ್ನು ಬಿಚ್ಚಿಡುತ್ತಿದ್ದರು. ಕನ್ನಡದ ಹಣ್ಣು ತೋಟದಲ್ಲಿ ಇವರು ಒಂದು ಹಲಸಿನ ಹಣ್ಣಾಗಿದ್ದರು. ಬಿಚ್ಚಿದಷ್ಟೂ ರಾಶಿ ರಾಶಿ ತೊಳೆಯನ್ನು ಇವರು ಬೇಸರವಿಲ್ಲದೆ ನೀಡುತ್ತಿದ್ದರು. ಇವರು ಎಲ್ಲೋ ಕೈಹಾಕಲಿ ಹನುಮಂತನಂತೆ ಸಂಜೀವಿನೀ ಪರ್ವತವನ್ನು ಕಿತ್ತು ತರುವ ಮಹಾಸಾಹಸಿಯಾಗಿದ್ದರು. ಇವರು ರಚಿಸಿದ ಸಾಹಿತ್ಯಭಾರತಿಯಂಥ ಮೇರುಕೃತಿ ಭಾರತದ ಯಾವ ಭಾಷೆಯಲ್ಲೂ ಇಲ್ಲ. ಭಾರತದ ನಾನಾ ಭಾಷೆಗಳ ಸಾಹಿತ್ಯ ಸುಧೆಯನ್ನು ಈ ಕೃತಿಯಲ್ಲಿ ಇವರು ಭಟ್ಟಿ ಇಳಿಸಿರುವರು.

ರನ್ನನ ಗದಾಯುದ್ಧ ಇವರಿಗೆ ಗಾಯತ್ರಿಯಷ್ಟೇ ಪ್ರಿಯವಾದುದು. ಗದಾಯುದ್ಧ ನಾಟಕದಲ್ಲಿ ಇವರು ಪಾತ್ರಧಾರಿಯಾಗಿ ನಿಂತಾಗ ಬೆಟ್ಟ ಬೆಟ್ಟಗಳು ಹಣಾಹಣಿಯಾಡುವಂತೆ ಭಾಸವಾಗುತ್ತಿತ್ತು. ಮನೆಯಲ್ಲಿ ಯಾರೇ ರೋಗಗ್ರಸ್ತವಾಗಿರಲಿ ಅಥವಾ ಯಾರದೇ ಪ್ರಾಣ ಕಂಠಗತವಾಗಿರಲಿ ಇವರು ಮೈಮರೆತು ತಮ್ಮ ಪಾತ್ರವನ್ನು ನಿರ್ವಹಿಸುತ್ತಿದ್ದರು.

ಅನಂತರಂಗಾಚಾರ್ಯರು ಮಣ್ಣಿನ ಮಗನೂ ಅಹುದು. ಇವರು ಟಿ. ನರಸೀಪುರದ ಬಳಿ ಹತ್ತಾರು ಎಕರೆ ಗದ್ದೆಮಾಡಿ ಭತ್ತ ಬೆಳೆಯುತ್ತಿದ್ದರು. ಮೈಸೂರು ಬಳಿ ಬಂಜರು ಭೂಮಿಕೊಂಡು ನೆಲಗಡಲೆ ಬೆಳೆಯುತ್ತಿದ್ದರು. ಬೆಳೆ ನೋಡಿ ಇಳುವರಿ ಇಷ್ಟೇ ಬರುವುದು ಎಂದು ಇವರು ನಿರ್ಧರಿಸುತ್ತಿದ್ದರು. ಎಂದೂ ಇವರ ನಿರ್ಧಾರ ತಪ್ಪಾಗಲಿಲ್ಲ. ಇವರ ಕಣ್ಣಿಗೆ ಮಣ್ಣೆರಚಲು ಯಾವ ರೈತನ ಕೈಲೂ ಸಾಧ್ಯವಾಗುತ್ತಿರಲಿಲ್ಲ. ಆಗಾಗ ಇವರು ಮಣಗಟ್ಟಲೆ ಕಡಲೆಕಾಯಿ ಹುರಿಸಿ ಯುವರಾಜ ಕಾಲೇಜಿಗೆ ತಂದು ಎಲ್ಲ ಉಪಾಧ್ಯಾಯರಿಗೂ ಹಂಚುತ್ತಿದ್ದರು. ಕಡಲೆಕಾಯಿ ತಿಂದವರಲ್ಲಿ ಕೆಲವರು, "ಇವರಿಗೆ ಭೂಮಿ ಮೇಲೆ ಇರುವ ಮುತುವರ್ಜಿ ಪಾಠಪ್ರವಚನದ ಮೇಲೆ ಇಲ್ಲ" ಎಂದು ಪ್ರಿನ್ಸಿಪಾಲರಿಗೆ ತಿಳಿಸಿದ್ದೂ ಉಂಟು. ಆಗ ಇವರು ನೊಂದುಕೊಂಡು "ಚಾಡಿಕೋರರ ಬಗ್ಗೆ ಎಚ್ಚರವಾಗಿರು" ಎಂದು ನನಗೆ ಬುದ್ಧಿ ಹೇಳುತ್ತಿದ್ದರು. ನಾನೂ ಆಗ ಅಧ್ಯಾಪಕನಾಗಿದ್ದೆನು.

ಇವರು ತುಂಬ ಸಂಪ್ರದಾಯಸ್ಥರು. ರೈಲಿನಲ್ಲಿ ಎರಡು ಮೂರು ದಿನ ಪ್ರಯಾಣ ಮಾಡುವಾಗ ಪೂರ್ತಿ ಉಪವಾಸವಿರುತ್ತಿದ್ದರು. ಹಠಕಟ್ಟಿದರೆ ಮೂರು ದಿವಸದ ಊಟವನ್ನು ಒಂದೇ ಬಾರಿಗೆ ಮಾಡಿ ತೀರಿಕೊಳ್ಳುತ್ತಿದ್ದರು. ಇವರು ವ್ಯಾಯಾಮಮಾಡಿ ದೇಹವನ್ನು ಉಕ್ಕಿನ ದೇಹ ಮಾಡಿಕೊಂಡಿದ್ದರು. ಇವರ ಸಹಪಾಠಿಗಳಲ್ಲಿ ಯಾರೊಬ್ಬರೂ ಕುಸ್ತಿಯಲ್ಲಿ ಇವರನ್ನು ಸೋಲಿಸಲು ಸಾಧ್ಯವೇ ಆಗುತ್ತಿರಲಿಲ್ಲ.

ಇವರು ಕಚ್ಚೆಪಂಚೆ ಉಟ್ಟು, ಕಾಲರ್ ಇಲ್ಲದ ಕೋಟು ತೊಟ್ಟು, ಹಣೆಯಲ್ಲಿ ಎದ್ದು ಕಾಣುವಂತೆ ಎರಡು ಬಿಳಿನಾಮದ ನಡುವೆ ಒಂದು ಕೆಂಪು ನಾಮ ಹಾಕಿಕೊಂಡು ಮೈಸೂರು ಪೇಟ ಧರಿಸಿ ಕ್ಲಾಸಿಗೆ ಬಂದರೆ ತಿರುಪತಿ ವೆಂಕಟರಮಣನೇ ಬಂದಂತೆ ಶೋಭಾಯಮಾನ ವಾಗುತ್ತಿತ್ತು!

ಬಿದ್ವತ್ತಿನಲ್ಲೂ ಇವರು ಯಾರಿಗೂ ಕಡಿಮೆಯಿರಲಿಲ್ಲ. ವ್ಯಾಕರಣ ಛಂದಸ್ಸು ಇವರಿಗೆ ಅನ್ನನಾಳ ಶ್ವಾಸನಾಳಗಳಾಗಿದ್ದುವು. ಸಾಹಿತ್ಯಚರಿತ್ರೆ ಇವರಿಗೆ ಹೃದಯವಾಗಿದ್ದಿತು.

ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ೧೯೪೬ರಲ್ಲಿ ನಿವೃತ್ತರಾದರು. ಇವರನ್ನು ಬೀಳ್ಕೊಡುವ ಸಭಾರಂಭದಲ್ಲಿ ಒಂದು ಔತಣಕೂಟವಿದ್ದಿತು. ಪಾಕಶಾಸ್ತ್ರಪ್ರವೀಣರಾದ ಅನಂತ ರಂಗಾಚಾರ್ ಅವರೇ ಬಗೆ ಬಗೆ ಭಕ್ಷ್ಯಗಳನ್ನು ಸಿದ್ಧಮಾಡಿದರು. ಔತಣಕೂಟ ಮುಗಿದ ಮೇಲೆ "ಕ್ರಮವಾಗಿ ಭಕ್ಷ್ಯಗಳ ಹೆಸರನ್ನು ಯಾರಾದರೂ ಹೇಳಬಲ್ಲಿರಾ" ಎಂದು ಶಾಸ್ತ್ರಿಗಳು ವಿನೋದವಾಗಿ ಕೇಳಿದರು. ಕುವೆಂಪು ಅವರೂ ಅಲ್ಲಿದ್ದರು. ಅವರಲ್ಲಿ ಯಾರಿಗೂ ಹೇಳಲು ಸಾಧ್ಯವಾಗಲಿಲ್ಲ. ಉಳಿದ ಉಪಾಧ್ಯಾಯರೂ ಕಣ್‌ಬಾಯಿ ಬಿಟ್ಟರು. ಆಗ ಅನಂತರಂಗಾಚಾರ್ ಅವರು ೨೪ ಬಗೆ ಭಕ್ಷ್ಯಗಳನ್ನು ಬಡಿಸಿದ ಕ್ರಮದಲ್ಲೇ ಹೇಳಿ ಬಹುಮಾನಗಿಟ್ಟಿಸಿದರು. ಅವರ ಸ್ಮರಣಶಕ್ತಿಗೆ ಸರಿಸಾಟಿಯೆಂದರೆ ಪ್ರೊ. ಡಿ. ಎಲ್. ನರಸಿಂಹಾಚಾರ್ ಒಬ್ಬರೇ.

ಒಮ್ಮೆ ಅನಂತರಂಗಾಚಾರ್ಯರನ್ನು ಜೈನ ಅತಿಶಯಕ್ಷೇತ್ರವಾದ ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೋಕು ಹುಂಚದ ಸಾಹಿತ್ಯಸಮ್ಮೇಳನಕ್ಕೆ ಆಹ್ವಾನಿಸಿದರು. ನಾನು ಪ್ರತಿವರ್ಷ ಅಲ್ಲಿಗೆ ಹೋಗುತ್ತಿದ್ದೆನು. ೧೯೬೦ರಲ್ಲಿ ಅಲ್ಲಿ ನಾನೂ ಅನಂತರಂಗಾಚಾರ್ಯರೂ ಕಲೆತೆವು "ಬ್ರಹ್ಮಪ್ಪ, ನಾನು ಬೇರೆ ಆಹಾರ ತೆಗೆದುಕೊಳ್ಳುವುದಿಲ್ಲ. ಹಾಲು ಹಣ್ಣಿಗೆ ನೀನೇ ಸ್ವಾಮಿಗಳಿಗೆ ಹೇಳಿ ಏರ್ಪಾಟುಮಾಡು. ಒಂದು ಗೊನೆ ಬಾಳೆಹಣ್ಣು, ೧೨ ಕಿತ್ತಳೆ ಹಣ್ಣು, ೪ ಪೌಂಡ್ ಸೇಬು, ಒಂದು ಬೊಗಸೆ ಬಾದಾಮಿ, ಒಂದು ಬೊಗಸೆ ಒಣದ್ರಾಕ್ಷಿ, ಒಮ್ಮೆಗೆ ಒಂದು ಸೇರು ಹಾಲು ಇಷ್ಟಾದರೆ ಸಾಕು" ಎಂದು ನನಗೆ ಹೇಳಿದರು. ನಾನು ಈ ಮಾತನ್ನು ಅಲ್ಲಿನ ಸ್ವಾಮಿಗಳಿಗೆ (ಅರಹದ್ದಾಸರು) ತಿಳಿಸಿದೆನು. ಅವರು ನಗುತ್ತಾ ಅಷ್ಟನ್ನೂ ಅನಂತರಂಗಾಚಾರ್ಯರ ಬಳಿಗೆ ಕಳುಹಿಸಿಕೊಟ್ಟರು. "ನಾಳೆ ಬೆಳಿಗ್ಗೆಯೂ ಇಷ್ಟನ್ನು ಕಳಿಸಿಕೊಡುವರು' ಎಂದು ನೀನೇ ಹೇಳಿ ಬಿಡು" ಎಂದು ನನಗೆ ತಿಳಿಸಿ ಆಮೇಲೆ ಹತ್ತಿರಕ್ಕೆ ಕರೆದು "ಬ್ರಹ್ಮಪ್ಪ ಒಂದು ಆನೆಯನ್ನು ಮಠಕ್ಕೆ ತರುವ ಆಶೆಯಿದೆ. ನಿಮ್ಮ ಮೇಷ್ಟರು ಇಲ್ಲೇ ಇದ್ದು ಸಾಹಿತ್ಯ ಸಂಶೋಧನೆ ಎಸಗುವಂತಿದ್ದರೆ ನಾನು ಆನೆಯ ತಂಟೆಗೇ ಹೋಗುವುದಿಲ್ಲ . ಇವರಿದ್ದರೆ ಆನೆ ಇದ್ದಂತೆಯೇ!" ಎಂದು ನಕ್ಕರು. "ಸ್ವಾಮಿ ನೀವು ಆನೆ ತಂದರೆ ಲದ್ದಿ ಹಾಕುವುದಷ್ಟೇ. ಕನ್ನಡದ ದಿಗ್ಗಜವಾದ ಇವರು ಇಲ್ಲೇ ನಿಂತರೆ ನಿಮ್ಮಲ್ಲಿರುವ ಓಲೆಗ್ರಂಥದ ರಾಶಿಯನ್ನೆಲ್ಲ ಸಂಶೋಧನೆಮಾಡಿ ಅಪೂರ್ವಕೃತಿಗಳನ್ನು ರಚಿಸುವರು. ಇವರು ಕನ್ನಡದ ದಿಗ್ಗಜವೇ ಹೊರತು ಲದ್ದಿ ಹಾಕುವ ಆನೆಯಲ್ಲ. ನೀವು ತರುವ ಆನೆಯಿಂದ ಯಾರಿಗೂ ಪ್ರಯೋಜನವಾಗದು. ಈ ದಿಗ್ಗಜರನ್ನು ತಾವು ಒಲಿಸಿಕೊಂಡರೆ. ನಿಮ್ಮ ಕೀರ್ತಿ ಅಜರಾಮರವಾಗುವುದು" ಎಂದು ನಾನು ತಿಳಿಸಿದಾಗ "ಬ್ರಹ್ಮಪ್ಪ, ಸಾಮಾನ್ಯ ಆನೆಯಾದರೆ ಸೊಪ್ಪು ಸದೆ ತಿಂದು ಮದ್ದಿಲ್ಲದೆ ನಮಗೆ ಸಿಗುವುದು. ಆದರೆ ನಿಮ್ಮ ದಿಗ್ಗಜಕ್ಕೆ ಹಣ್ಣುಹಂಪಲು - ದ್ರಾಕ್ಷಿ-ಬಾದಾಮಿಯನ್ನು ನಾನು ಒದಗಿಸಲಾರೆ" ಎಂದು ಸ್ವಾಮಿಗಳು ಮುಗುಳ್ನಕ್ಕರು. ❐

# ಗೋಕುಲಾಷ್ಟಮಿಯ ಗುರು

**ಎನ್. ಬಸವಾರಾಧ್ಯ**

ಸರ್ವೋದಯ ಕನ್ನಡ ಸಾಹಿತ್ಯ ಕಂಡರಿಯದ ವಿಶಿಷ್ಟ ಕನ್ನಡ ಪ್ರಾಧ್ಯಾಪಕರಾಗಿದ್ದ ಕೀರ್ತಿಶೇಷರಾದ ಡಾ|| ಎಸ್. ಅನಂತರಂಗಾಚಾರ್ ಅವರು ನನ್ನ ಪರಮಪೂಜ್ಯ ವಿದ್ಯಾಗುರುಗಳು. ಅಂದಿನ ಕೆಲವು ಸ್ಮರಣೀಯ ಘಟನೆಗಳು ನನ್ನ ಸ್ಮೃತಿಪಟಲದಲ್ಲಿ ಅಚ್ಚಳಿಯದೆ ಉಳಿದುಕೊಂಡಿವೆ.

ಬೆಂಗಳೂರಿನ ಸರ್ಕಾರಿ ಕಲಾಕಾಲೇಜಿನಲ್ಲಿ ಇಂಟರ್‌ಮೀಡಿಯೇಟ್ ಮುಗಿಸಿ ಎಂ.ಎ. ವ್ಯಾಸಂಗ ಮಾಡಲು ಮೈಸೂರಿನ ಮಹಾರಾಜಾ ಕಾಲೇಜಿಗೆ ೧೯೪೫ರಲ್ಲಿ ನಾನು ಹೋದೆ. ಕನ್ನಡ ಎಂ.ಎ. ಮತ್ತು ಸೈಕಾಲಜಿ ಎಂ.ಎ. ಎರಡಕ್ಕೂ ಅರ್ಜಿ ಸಲ್ಲಿಸಿದೆ. ಇವು ಎರಡರಲ್ಲೂ ಸೀಟು ಸಿಕ್ಕಿತು. ನಾನು ಕನ್ನಡವನ್ನು ಆರಿಸಿಕೊಂಡೆ. ಆಗ ಕನ್ನಡದ ಪ್ರಾಧ್ಯಾಪಕರಾಗಿದ್ದವರು ಡಾ. ಎ. ಆರ್. ಕೃಷ್ಣಶಾಸ್ತ್ರಿಗಳು. ತರಗತಿಗಳು ಪ್ರಾರಂಭವಾಗುವ ವೇಳೆಗೆ ಕೃಷ್ಣಶಾಸ್ತ್ರಿಗಳು ನಿವೃತ್ತರಾಗಿ ಡಾ. ಕೆ.ವಿ. ಪುಟ್ಟಪ್ಪನವರು ಪ್ರಾಧ್ಯಾಪಕರಾಗಿ ಬಂದರು. ಅವರು ಅಧಿಕಾರ ವಹಿಸಿಕೊಂಡ ಕೆಲವು ದಿನಗಳ ಮೇಲೆ ಕೃಷ್ಣಶಾಸ್ತ್ರಿಗಳಿಗೆ ಒಂದು ಬೀಳ್ಕೊಡುಗೆ ಸಮಾರಂಭವನ್ನು ಏರ್ಪಡಿಸಿದರು. ಇದರ ಮೇಲ್ವಿಚಾರಣೆಯನ್ನೆಲ್ಲ ಅನಂತರಂಗಾಚಾಯರೇ ನಿರ್ವಹಿಸಿದರು. ಮೈಸೂರಿನ ಸರಸ್ವತಿಪುರದ ಈಜುಕೊಳದ ಸಮೀಪದ ಒಂದು ಭವನದಲ್ಲಿ ಕಾರ್ಯಕ್ರಮ ನಡೆಯಿತು. ಅಂದಿನ ಉಪಾಹಾರದ ವ್ಯವಸ್ಥೆಯಿಂದ ಎಲ್ಲ ಕಾರ್ಯಗಳನ್ನೂ ನನ್ನ ಈ ಗುರುಗಳೇ ವ್ಯವಸ್ಥಿತವಾಗಿ ನೆರವೇರಿಸಿದರು. ನಾನು ಅವರಿಗೆ ಸಹಾಯಕನಾಗಿದ್ದೆ.

ಮಹಾರಾಜಾ ಕಾಲೇಜಿನಲ್ಲಿ ನಾನು ನನ್ನ ಗುರುಗಳ ಪಾಠಪ್ರವಚನಗಳನ್ನು ಕೇಳಿ ಆನಂದಿಸಿದ್ದೇನೆ. ಪ್ರಾಚೀನ ಕಾವ್ಯಗಳನ್ನು ಅವರು ತರಗತಿಗಳಲ್ಲಿ ಸುಶ್ರಾವ್ಯವಾಗಿ ಹಾಡುತ್ತಿದ್ದುದು ಈಗಲೂ ನನ್ನ ನೆನಪಿನಲ್ಲಿ ಉಳಿದಿದೆ. ಅದೊಂದು ಅತ್ಯಂತ ವಿಶಿಷ್ಟವಾದ ಅಪರೂಪದ

ರಸಾನುಭವ. ಸೀತಾಪರಿಚ್ಛೇದದ ಪ್ರಸಂಗವಂತೂ ಅವರ ವಾಚನದಿಂದ ಕಣ್ಣೀರು ತರಿಸುತ್ತಿತ್ತು. ಯಾವುದೇ ಪ್ರಾಚೀನ ಕಾವ್ಯವಾಗಲಿ, ಅದು ಯಾವುದೇ ಪ್ರಕಾರದ್ದಾಗಲಿ ಅವುಗಳಿಗನುಗುಣವಾಗಿ ಸುಶ್ರಾವ್ಯವಾಗಿ ವಾಚನ ಮಾಡುವ ಕಲೆ ನನ್ನ ಗುರುಗಳಿಗೆ ಕರಗತವಾಗಿತ್ತು. ಅವರ ಈ ಹಾಡುಗಾರಿಕೆಯಿಂದ ಇತರ ತರಗತಿಗಳಿಗೆ ತೊಂದರೆಯಾಗುತ್ತಿದೆ ಎಂಬ ದೂರುಗಳೂ ಬರುತ್ತಿದ್ದವು.

ಪರಮದೈವಭಕ್ತರಾದ ನನ್ನ ಗುರುಗಳು ಶ್ರೀ ವೈಷ್ಣವ ಧರ್ಮಕ್ಕೆ ಸೇರಿದವರು. ಪ್ರತಿವರ್ಷ ಗೋಕುಲಾಷ್ಟಮಿಯನ್ನು ಅತ್ಯಂತ ಭಕ್ತಿ ಶ್ರದ್ಧೆ ನಿಷ್ಠೆ ವೈಭವಗಳಿಂದ ಆಚರಿಸುತ್ತಿದ್ದರು. ಜೊತೆಗೆ ಒಂದು ಸರಸ ಸಾಹಿತ್ಯಗೋಷ್ಠಿಯನ್ನು ಏರ್ಪಡಿಸುತ್ತಿದ್ದರು. ಈ ಪವಿತ್ರಹಬ್ಬಕ್ಕೆ ಬಂಧು ಬಾಂಧವರ ಜೊತೆಗೆ ತಮ್ಮ ವಿದ್ಯಾರ್ಥಿಗಳನ್ನು ತಪ್ಪದೇ ಪ್ರೋತ್ಸಾಹಿಸುತ್ತಿದ್ದರು. ವಿಧವಿಧವಾದ ಭಕ್ಷ್ಯ ಭೋಜ್ಯಗಳಿಂದ ಸಂತೃಪ್ತಪಡಿಸುತ್ತಿದ್ದುದೇ ಅಲ್ಲದೆ ತಿಂಡಿ ತಿನಿಸುಗಳನ್ನು ಮನೆಗೆ ಒಯ್ಯಲೂ ಕೊಡುತ್ತಿದ್ದರು. ಇದು ನಮ್ಮ ಜೀವನದಲ್ಲಿ ಮರೆಯಲಾರದ ಸುದಿನ.

ನಾನು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಉಪನಿರ್ದೇಶಕನಾಗಿದ್ದಾಗ ನನ್ನ ಗುರುಗಳ ಜೊತೆಯಲ್ಲಿ ಪ್ರಚಾರೋಪನ್ಯಾಸ ಮಾಲೆಯಲ್ಲಿ ಉಪನ್ಯಾಸವನ್ನು ಬೇರೊಂದು ಊರಲ್ಲಿ ನೀಡುವ ಕಾರ್ಯಕ್ರಮ ಏರ್ಪಾಟಾಗಿತ್ತು. ನಾವಿಬ್ಬರೂ ಜೊತೆಯಲ್ಲಿಯೇ ಪ್ರಯಾಣ ಮಾಡಿದೆವು. ಆಚಾರನಿಷ್ಠರಾಗಿದ್ದ ನನ್ನ ಗುರುಗಳು ಒಂದು ದೊಡ್ಡ ಬೆಳ್ಳಿ ಚೆಂಬಿನಲ್ಲಿ ನೀರನ್ನು ಮನೆಯಿಂದಲೇ ತಂದಿದ್ದರು. ಮೈಸೂರಿಗೆ ಹಿಂತಿರುಗುವ ವರೆಗೂ ಬೇರೆ ನೀರನ್ನು ಅವರು ಬಳಸಲೇ ಇಲ್ಲ. ಇದು ನನಗೆ ತುಂಬ ಸೋಜಿಗವನ್ನೂ ನನ್ನ ಗುರುಗಳ ಸಂಯಮದ ಬಗೆಗೆ ಅಪಾರ ಗೌರವವನ್ನೂ ಉಂಟುಮಾಡಿತು.

ಸೇವೆಯಿಂದ ನಿವೃತ್ತರಾದ ಮೇಲೆ ನನ್ನ ಗುರುಗಳು ವ್ಯಾಧಿಗ್ರಸ್ತರಾದರು. ಅವರ ಸಕ್ಕರೆರೋಗ ಉಲ್ಬಣಿಸಿತು. ಕ್ರಮೇಣ ಅದು ಗ್ಯಾಂಗರಿನ್‌ಗೆ ತಿರುಗಿತು. ಆ ಸ್ಥಿತಿಯಲ್ಲಿ ಅವರನ್ನು ಸರಸ್ವತಿಪುರದ ಕಾಮಾಕ್ಷಿ ಆಸ್ಪತ್ರೆಗೆ ದಾಖಲು ಮಾಡಲಾಯಿತು. ಸರಸ್ವತೀಪುರದಲ್ಲೇ ವಾಸವಿದ್ದ ನಾನು ಪ್ರತಿನಿತ್ಯ ಆಸ್ಪತ್ರೆಗೆ ಹೋಗಿಬರುತ್ತಿದ್ದೆ. ನನ್ನ ಗುರುಗಳನ್ನು ತಪಾಸಣೆ ಮಾಡಿದ ವೈದ್ಯರು ಅವರ ಕಾಲಿನ ಬೆರಳುಗಳನ್ನು ಕತ್ತರಿಸಿ ತೆಗೆಯಬೇಕೆಂದು ಹೇಳಿದರು. ಅದನ್ನು ಕೇಳಿದ ನನ್ನ ಗುರುಗಳು ಚಿಂತಾಕ್ರಾಂತರಾದರು. ಅಲ್ಲೇ ಇದ್ದ ನನ್ನೊಡನೆ 'ಏನಯ್ಯಾ ಕಾಲುಬೆರಳುಗಳನ್ನು ತೆಗೆಯಬೇಕು ಎನ್ನುತ್ತಿದ್ದಾರೆ. ನಮ್ಮ ಧರ್ಮದಂತೆ ಅಂಗಹೀನನಾಗುವುದು ನನಗೆ ಇಷ್ಟವಿಲ್ಲ ಏನು ಮಾಡುವುದು? ಎಂದು ತಮ್ಮ ದುಃಖವನ್ನು ತೋಡಿಕೊಂಡರು. ಆಗ ನಾನು 'ಸಾರ್ ಪ್ರಾಣ ಉಳಿಯಬೇಕಾದರೆ ಈ ಶಸ್ತ್ರಕ್ರಿಯೆ ಮಾಡಿಸಿಕೊಳ್ಳಲೇಬೇಕು. ತಾವು ಬದುಕಿರುವುದು ಮುಖ್ಯ. ತಾವು ಧೈರ್ಯ ಮಾಡಿಕೊಂಡು ಈ ಚಿಕಿತ್ಸೆಗೆ ಒಪ್ಪುವುದು ಒಳ್ಳೆಯದಲ್ಲವೆ? ಎಂದು ಹೇಳಿದೆ. 'ಆಗಲಿ, ನೋಡೋಣ" ಎಂದು ಹೇಳಿ ಸುಮ್ಮನಾದರು. ಅವರಿದ್ದ ಆಸ್ಪತ್ರೆಯಲ್ಲಿ

ಯಾವ ಪ್ರಯೋಜನವೂ ಆಗದಿದ್ದುದರಿಂದ ಮೈಸೂರಿನ ಕೆ.ಆರ್. ಆಸ್ಪತ್ರೆಗೆ ಸೇರಿಸಲಾಯಿತು. ನಾನು ಆ ಆಸ್ಪತ್ರೆಗೂ ಹೋಗಿ ಬರುತ್ತಿದ್ದೆ. ಕೆ.ಆರ್. ಆಸ್ಪತ್ರೆಯ ಯಾವ ಚಿಕಿತ್ಸೆಯೂ ಫಲಕಾರಿಯಾಗಲಿಲ್ಲ. ಅವರ ಆರೋಗ್ಯ ತೀರ ಹದಗೆಟ್ಟಿತು. ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಲಾಗದ ಪರಿಸ್ಥಿತಿಗೆ ತಲಪಿದರು. ಆಜಾನುಬಾಹುವೂ ದೃಢಕಾಯರೂ ಆಗಿದ್ದ ನನ್ನ ಗುರುಗಳು ಅತ್ಯಂತ ಕೃಶರಾಗಿ ಬಿಟ್ಟರು. ಆ ಸ್ಥಿತಿಯಲ್ಲಿ ಅವರನ್ನು ಆಸ್ಪತ್ರೆಯಿಂದ ಮನೆಗೆ ಕರೆತಂದದ್ದಾಯಿತು.

ಮೈಸೂರಿನ ಉಷಾ ಸಾಹಿತ್ಯ ಮಾಲೆಯ ಒಡೆಯರಾದ ಶ್ರೀ ರಾ. ಸಾ. ಹಬ್ಬು ಅವರು ನನ್ನ ಗುರುಗಳಿಗೆ ಚಿರಪರಿಚಿತರು. ಅವರೂ ಆಗಾಗ ಬಂದು ನನ್ನ ಗುರುಗಳ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದರು. ಈ ಸಮಯದಲ್ಲಿ ಮೈಸೂರಿನ ಕೆ.ಆರ್. ಆಸ್ಪತ್ರೆಗೆ ಡಾಕ್ಟರ್ ಕವಲ್ಗೊಡ್ ಎಂಬ ಪ್ರಖ್ಯಾತ ಶಸ್ತ್ರಚಿಕಿತ್ಸಾ ತಜ್ಞರು ಬಂದರು. ಹಬ್ಬು ಅವರಿಗೆ ಡಾಕ್ಟರ್ ಕವಲ್ಗೊಡ್ ತೀರ ಪರಿಚಿತರು. ನನ್ನ ಗುರುಗಳ ವಿಷಯವನ್ನು ಹಬ್ಬು ಅವರು ಡಾ|| ಕವಲ್ಗೊಡ್ ಅವರಿಗೆ ತಿಳಿಸಿ ನನ್ನ ಗುರುಗಳ ಮನೆಗೆ ಕರೆದುಕೊಂಡು ಹೋಗಿ ಅವರನ್ನು ತೋರಿಸಿ ಅವರಿಗೆ ನೀಡಿದ ಚಿಕಿತ್ಸೆಯ ವಿವರಗಳನ್ನೆಲ್ಲ ತಿಳಿಸಿದರು. ಸೂಕ್ಷ್ಮಮತಿಗಳಾದ ಡಾ|| ಕವಲ್ಗೊಡ್ ರೋಗಿಯನ್ನು ಚೆನ್ನಾಗಿ ಪರೀಕ್ಷಿಸಿ ಚಿಕಿತ್ಸೆ ನೀಡುವುದಾಗಿ ಹೇಳಿ ಹೋದರು. ಆ ವೇಳೆಗೆ ಗ್ಯಾಂಗರಿನ್ ಪಾದವನ್ನೆಲ್ಲಾ ಆವರಿಸಿಬಿಟ್ಟಿತ್ತು.

ನನ್ನ ಗುರುಗಳ ವ್ಯಾಧಿಯ ಹಿನ್ನೆಲೆಯನ್ನೆಲ್ಲ ಕೂಲಂಕಷವಾಗಿ ವಿಶ್ಲೇಷಿಸಿ ಚಿಕಿತ್ಸೆಗೆ ಸಿದ್ಧವಾಗಿದ್ದ ಡಾ|| ಕವಲ್ಗೊಡ್ ಅವರು ಒಂದು ದಿನ ಬೆಳಿಗ್ಗೆ ಅವರ ಮನೆಗೆ ಹೋದರು. ತಾವು ಮಾಡಬೇಕಿದ್ದ ಚಿಕಿತ್ಸೆಯ ಸಂಪೂರ್ಣಚಿತ್ರಣ ಅವರ ಮನಸ್ಸಿನಲ್ಲಿ ಮನೆಮಾಡಿತ್ತು. ಮನೆಯಲ್ಲಿದ್ದ ಅಸ್ತ್ರ ಶಸ್ತ್ರಗಳನ್ನೆ ತರಿಸಿ ಸಿದ್ಧಮಾಡಿಕೊಂಡು ರೋಗಿಯ ಪಾದವನ್ನು ಸ್ವಲ್ಪ ಕಾಲ ಬಿಸಿನೀರಿನಲ್ಲಿರಿಸಿ ಯಾರಿಗೂ ಅರಿವಾಗದಂತೆ ತಮ್ಮ ಹಸ್ತನೈಪುಣ್ಯದಿಂದ ಕಾಲಿನಿಂದ ಪಾದವನ್ನೇ ಬೇರ್ಪಡಿಸಿಬಿಟ್ಟರು. ಆಮೇಲೆ ಗಾಯಕ್ಕೆ ಪಟ್ಟಿಯನ್ನು ಕಟ್ಟಿಬಿಟ್ಟರು. ಇದು ಒಂದು ಪವಾಡವೆಂದು ಎಲ್ಲರೂ ಚಕ್ಕಸಬೆರಗಾದರು. ಆದರೆ ಇದು ಪೂರ್ವಾರ್ಜಿತ ಪುಣ್ಯವಿಶೇಷವೆಂದು ನಾನಾದರೂ ಭಾವಿಸಿದ್ದೇನೆ. ನನ್ನ ಗುರುಗಳನ್ನು ಮೃತ್ಯುವಿನಿಂದ ಪಾರು ಮಾಡಿದ ಆ ವೈದ್ಯಬ್ರಹ್ಮನನ್ನು ನಾನು ಕಾಯಾ ವಾಚಾ ಮನಸಾ ಅಭಿವಂದಿಸುತ್ತೇನೆ. ನನ್ನ ಗುರುಗಳು ಕ್ರಮೇಣ ಚೇತರಿಸಿಕೊಂಡುಬಿಟ್ಟರು. ಅವರಿಗೆ ಮರುಜನ್ಮ ಪ್ರಾಪ್ತವಾದಂತಾಯಿತು. ನನಗಾದರೋ ಅಪಾರ ಸಂತೋಷವಾಯಿತು.

ಕನ್ನಡ ಸಾಹಿತ್ಯಕ್ಕೆ ಡಾ|| ಎನ್. ಅನಂತರಂಗಾಚಾರ್ಯರು ಸಲ್ಲಿಸಿರುವ ಸೇವೆ ಅಪಾರವಾದುದು, ಅನುಪಮವಾದುದು. ಲೇಖನಿ ಹಿಡಿದರೆ ಸಾಹಿತಿಯೂ ಆಯುಧ ಹಿಡಿದರೆ ಕಲಿಯೂ ಆಗಿ ವ್ಯಕ್ತಿತ್ವವನ್ನು ರೂಪಿಸಿಕೊಂಡವರು. ಶ್ರೀಯುತರು ಕೃಷಿಕರೂ ಕುಸ್ತಿಪಟುವೂ ಆಗಿದ್ದುದೇ ಇದಕ್ಕೆ ಜೀವಂತ ಸಾಕ್ಷಿಯಾಗಿದೆ. ಡಾ|| ಅನಂತರಂಗಾಚಾರ್ ಅವರದು ದ್ವೈತ್ಯಪ್ರತಿಭೆ,

ವೈತ್ರಶಕ್ತಿ. ಅದಕ್ಕೆ ಅವರು ಮಾಡಿರುವ "ಚಂಪೂಕಾವ್ಯಗಳ ಪದ್ಯಾನುಕ್ರಮಣಿಕೆ", 'ಪ್ರಬುದ್ಧ ಕರ್ಣಾಟಕ ಅಕಾರಾದಿ ಕವಿಕಾವ್ಯಸೂಚಿ", ಡಿ.ಲಿಟ್ ಪದವಿಯನ್ನು ದೊರಕಿಸಿಕೊಟ್ಟ 'ಸಾಹಿತ್ಯಭಾರತೀ" ಇವು ಜ್ವಲಂತ ನಿದರ್ಶನವಾಗಿವೆ. ಶ್ರೀಯುತರು ಸಂಸ್ಕೃತ, ತಮಿಳು, ಕನ್ನಡ ಮತ್ತು ಇಂಗ್ಲಿಷ್ ಬಲ್ಲ ಚತುರ್ಭಾಷಾ ವಿದ್ವಾಂಸರೆನಿಸಿಕೊಂಡಿದ್ದರು.

ಮೈಸೂರಿನ ಪ್ರಾಚ್ಯ ವಿದ್ಯಾ ಸಂಶೋಧನಾಲಯದಲ್ಲಿ ಪಂಡಿತರಾಗಿ ನೇಮಕಗೊಂಡರು. ಈ ಅವಧಿಯಲ್ಲಿ ನಾಡಿನ ಹಲವಾರು ಭಾಗಗಳಲ್ಲಿ ಸಂಚರಿಸಿ ಅತ್ಯಮೂಲ್ಯವಾದ ಹಸ್ತಪ್ರತಿಗಳನ್ನು ಸಂಗ್ರಹಿಸಿಕೊಂಡು ಬಂದಿರುವುದು ಅತ್ಯಂತ ಮಹತ್ತರವಾದ ಕಾರ್ಯ. ಅದಾದ ಮೇಲೆ ಕನ್ನಡ ಅಧ್ಯಾಪಕ ಪ್ರಾಧ್ಯಾಪಕರಾಗಿ ಸೇವೆಯನ್ನು ಸಲ್ಲಿಸಿ ನಿವೃತ್ತರಾದರು. ಅವರ ಪಾಠಪ್ರವಚನಗಳನ್ನು ಕೇಳಿದ ಸಹಸ್ರಾರು ವಿದ್ಯಾರ್ಥಿಗಳು ಅವರ ಪಾಂಡಿತ್ಯ, ವಿನೋದಶೀಲತೆ, ವ್ಯಾಸಂಗವಿಧಾನವನ್ನು ವೈಖರಿಯನ್ನೂ ಇಂದಿಗೂ ನೆನಪಿಸಿಕೊಳ್ಳುತ್ತಿದ್ದಾರೆ. ಅಂತಹವರಲ್ಲಿ ನಾನೂ ಒಬ್ಬ. ವಿದ್ಯಾರ್ಥಿಗಳಲ್ಲಿ ಅಪಾರ ಪ್ರೀತಿ ವಾತ್ಸಲ್ಯಗಳನ್ನು ಹೊಂದಿದ್ದ ಡಾ|| ಅನಂತರಂಗಾಚಾರ್ಯರು ವಿದ್ಯಾರ್ಥಿಗಳನ್ನು ಪ್ರೇಕ್ಷಣೀಯ ಸ್ಥಳಗಳಿಗೆ ಶೈಕ್ಷಣಿಕ ಪ್ರವಾಸಕ್ಕೆ ಕರೆದುಕೊಂಡು ಹೋಗಿ ನಾಡು ನುಡಿಗಳ ಬಗೆಗೆ ಅಪಾರ ಮಾಹಿತಿಯನ್ನು ತಿಳುವಳಿಕೆಯನ್ನೂ ನೀಡಿದ್ದಾರೆ. ಅನೇಕ ವಿದ್ಯಾರ್ಥಿಗಳಿಗೆ ಅವರ ಕಷ್ಟದ ಸಂದರ್ಭದಲ್ಲಿ ಸಹಾಯವನ್ನು ಮಾಡಿದ್ದಾರೆ. ಡಾ|| ಅನಂತರಂಗಾಚಾರ್ಯರು ತಮ್ಮ ವಿದ್ಯಾರ್ಥಿಗಳ ಯೋಗಕ್ಷೇಮವನ್ನು ಅತ್ಯಂತ ಆಸ್ಥೆ ಅಕ್ಕರೆಗಳಿಂದ ನೋಡಿಕೊಳ್ಳುತ್ತಿದ್ದರು. ಅನೇಕ ವಿದ್ಯಾರ್ಥಿಗಳು ಅವರ ಮಾಡಿದ ಸಹಾಯವನ್ನು ಇಂದಿಗೂ ನೆನಸಿಕೊಳ್ಳುತ್ತಿದ್ದಾರೆ. ಡಾ|| ಅನಂತರಂಗಾಚಾರ್ಯರು ಕೆಲವಾರು ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಸಂಘ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದ್ದಾರೆ. ವಯಸ್ಕರ ಶಿಕ್ಷಣಕ್ಕಾಗಿ ಪುಸ್ತಕ ಭಂಡಾರಗಳನ್ನು ಅಣಿಗೊಳಿಸಿದ್ದು ಒಂದು ಉತ್ತಮ ಸಾಧನೆ ಎನಿಸಿದೆ.

ಚತುರ್ಭಾಷಾಪಂಡಿತರಾಗಿದ್ದ ಎನ್. ಅನಂತರಂಗಾಚಾರ್ಯರು ಸಾಹಿತ್ಯ ಚರಿತ್ರೆ, ಗ್ರಂಥ ಸಂಪಾದನೆ, ಧಾರ್ಮಿಕಸಾಹಿತ್ಯ, ರಾಮಾಯಣ ಅಧ್ಯಯನಗಳು, ಕರ್ಣಾಟಕ ಲಲಿತ ಕಲೆಗಳು, ಇತಿಹಾಸ ಪುರಾತತ್ವ ವಿಷಯಗಳು –ಇವೇ ಮೊದಲಾದ ಕ್ಷೇತ್ರಗಳಿಗೆ ಅಪಾರವಾದ ಸೇವೆಯನ್ನು ಸಲ್ಲಿಸಿದ್ದಾರೆ. ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವ, ಕವಿಮಲ್ಲನ ಕಾವ್ಯಸಾರ, ಕುಮಾರವ್ಯಾಸ ಭಾರತದ ದ್ರೋಣಪರ್ವ, ಕರ್ಣಪರ್ವ, ಶಲ್ಯ ಗದಾಪರ್ವಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿಕೊಟ್ಟಿದ್ದಾರೆ. ಪಂಪಭಾರತ ಗದ್ಯಾನುವಾದ, ಚಂಪೂಕಾವ್ಯಗಳ ಪದ್ಯಾನುಕ್ರಮಣಿಕೆ, ಪ್ರಬುದ್ಧ ಕರ್ಣಾಟಕದ ಅಕಾರಾದಿ ಕವಿಕಾವ್ಯಸೂಚಿ. ಭಾರತೀಯ ತೀರ್ಥಕಲಾಕ್ಷೇತ್ರ ಸಂದರ್ಶನೀ ಮುಂತಾದುವು ಅವರ ಇತರ ಕೃತಿಗಳು. ಅಪಾರ ಪರಿಶ್ರಮದಿಂದ ಹಲವಾರು ಆಕರ ಪರಿಕರಗಳಿಂದ ಕೆಲವಾರು ವರ್ಷಗಳ ನಿರಂತರ ಅವಿರತ ಪ್ರಯತ್ನಗಳಿಂದ ಹೊರತಂದಿರುವ ಭಾರತೀಯ ಭಾಷೆಗಳಲ್ಲೇ ಪ್ರಪ್ರಥಮವೆಂದು ಪರಿಗಣಿತವಾಗಿರುವ ಸಾಹಿತ್ಯ ಭಾರತಿ' ಅವರ ಆಳವಾದ ಅಧ್ಯಯನದ ಪಾಂಡಿತ್ಯ ಪ್ರತಿಭೆಗಳ ಪ್ರತಿಫಲವಾಗಿ ಹೊರಬಂದಿದೆ. ಡಾ|| ಅನಂತರಂಗಾಚಾರ್ಯರ

ಸಾಹಿತ್ಯಸೌಧಕ್ಕೆ ಸುವರ್ಣ ಕಲಶಪ್ರಾಯವಾದುದೂ ಅವರಿಗೆ ಡಿ.ಲಿಟ್ ಮಹೋನ್ನತ ಪದವಿಯನ್ನು ತಂದುಕೊಟ್ಟ, ಅವರ ಮೇರುಕೃತಿ ಸಾಹಿತ್ಯಭಾರತಿ ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ೧೯೭೦ರಲ್ಲಿ ಪ್ರಕಟವಾಗಿದೆ. ಈ ಬೃಹದ್ಗ್ರಂಥಕ್ಕೆ ಪ್ರಸಾರಾಂಗದ ಪ್ರಕಟಣೆಗಳ ಪ್ರಧಾನ ಸಂಪಾದಕರಾಗಿದ್ದ ಡಾ|| ಕುವೆಂಪು ಅವರು ಬರೆದಿರುವ ಮುನ್ನುಡಿಯಲ್ಲಿ 'ಶ್ರೀಮಾನ್ ಎನ್. ಅನಂತರಂಗಾಚಾರ್ಯರ ಸಾಹಿತ್ಯ ಭಾರತೀ' ಒಂದು ಅಪೂರ್ವ ಕೃತಿ. ಏಕೆಂದರೆ ಮೊಟ್ಟಮೊದಲ ಬಾರಿಗೆ ಭರತಖಂಡದ ಹತ್ತೊಂಬತ್ತು ಅಧಿಕೃತ ಭಾಷೆಗಳ ಸಾಹಿತ್ಯ ಚರಿತ್ರೆಯು ಜೊತೆಗೆ ಇಲ್ಲಿ ಬಾರತೀಯರಿಂದ ರಚಿತವಾಗುತ್ತಿರುವ ಇಂಗ್ಲಿಷ್ ಸಾಹಿತ್ಯದ ಚರಿತ್ರೆಯೂ ರೂಪುಗೊಂಡಿದೆ. ನಮಗೆ ತಿಳಿದಂತೆ ಇಂಗ್ಲಿಷ್ ಭಾಷೆಯಲ್ಲಾಗಲಿ, ಭರತಖಂಡದ ಬೇರೆ ಭಾಷೆಗಳಲ್ಲಿಯಾಗಲಿ ಇಪ್ಪತ್ತು ಭಾಷಾಸಾಹಿತ್ಯ ಚರಿತ್ರೆಗಳನ್ನು ಉಗಮದಿಂದ ಇಂದಿನವರೆಗೆ ಸಮೀಕ್ಷಿಸಿರುವ ಮತ್ತೊಂದು ಗ್ರಂಥ ಇಲ್ಲ." ಎಂದು ಹೇಳಿರುವ ಮಾತುಗಳು ಈ ಗ್ರಂಥದ ಮಹತ್ವಕ್ಕೆ ಹಿಡಿದ ಕೈಗನ್ನಡಿಯಂತಿದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಡಾ|| ಎನ್. ಅನಂತರಂಗಾಚಾರ್ಯರ ಹೆಸರು ಹಲವಾರು ಕಾರಣಗಳಿಂದ ಚಿರಸ್ಥಾಯಿಯಾಗಿ ಉಳಿಯುವಂತಹುದು. ಶ್ರೇಷ್ಠ ಅಧ್ಯಾಪಕರಾಗಿ ಉಜ್ವಲವಾಗ್ಮಿಗಳಾಗಿ ಧಾರ್ಮಿಕಪರಂಪರೆಯ ಪ್ರತಿನಿಧಿಯಾಗಿ ಮಹೋನ್ನತ ಕೃತಿಗಳ ಸಂಪಾದಕರಾಗಿ, ದೈತ್ಯ ಪ್ರತಿಭೆಯ ದೈತ್ಯಶಕ್ತಿಯ ಪ್ರತೀಕವಾಗಿ ಬಾಳಿ ಬೆಳಗಿದ ಮಹಾನ್ ಚೇತನಕ್ಕೆ ನನ್ನ ಅನಂತ ನಮನಗಳನ್ನು ಭಕ್ತಿಪೂರ್ವಕವಾಗಿ ಸಲ್ಲಿಸುತ್ತೇನೆ.



# ಪ್ರೀತಿಯ ಗುರು

ಎಂ. ಚಿದಾನಂದ ಮೂರ್ತಿ

ಶಿವಮೊಗ್ಗ ಜಿಲ್ಲೆಯ (ಈಗ ದಾವಣಗೆರೆ ಜಿಲ್ಲೆಯ) ಚನ್ನಗಿರಿ ತಾಲ್ಲೂಕಿನ ಹಳ್ಳಿಯೊಂದರಲ್ಲಿ ಹುಟ್ಟಿ ಬೆಳೆದು, ದಾವಣಗೆರೆಯಲ್ಲಿ ಇಂಟರ್‌ಮೀಡಿಯೇಟ್ ಮುಗಿಸಿ ೧೯೫೦ರಲ್ಲಿ ಮೈಸೂರು ಮಹಾರಾಜಾ ಕಾಲೇಜಿಗೆ ಕನ್ನಡ ಆನರ್ಸ್ ಓದಲು ಬಂದಾಗ ನನಗೆ ಮೈಸೂರು ಸ್ವರ್ಗದ ಒಂದು ಭಾಗವಾಗಿ ಅಥವಾ ಸ್ವರ್ಗವೇ ಎಂಬಂತೆ ಕಾಣಿಸುತ್ತಿತ್ತು. ಮೊತ್ತ ಮೊದಲು ದಾವಣಗೆರೆಯಿಂದ ಬಂದು ಮೈಸೂರಲ್ಲಿ ರೈಲಿನಿಂದ ಇಳಿದು ಹೊರಗೆ ಬರುತ್ತಿದ್ದಂತೆ ಎಡಕ್ಕೆ ಕಾಣಿಸಿದ ರೈಲ್ವೆ ಕಚೇರಿಯ ಬೃಹತ್ ಕಟ್ಟಡವೇ ಮಹಾರಾಜರ ಅರಮನೆಯೆಂದು ತಿಳಿದು ಕೆಲವು ನಿಮಿಷ ನಿಂತು ಅದನ್ನೇ ದಿಟ್ಟಿಸಿ ನೋಡಿದ್ದುಂಟು. ಮಹಾರಾಜಾ ಕಾಲೇಜು ಕಟ್ಟಡ ನನಗೆ ಸರಸ್ವತಿಯ ದೇವಾಲಯವಾಗಿ ಕಂಡಿತ್ತು. ಆ ಭಾವನೆ ಇಂದಿಗೂ ನನ್ನ ಮನಸ್ಸಿನಿಂದ ಹೋಗಿಲ್ಲ.

ಆಗಿನ ಮಹಾರಾಜಾ ಕಾಲೇಜು ಶ್ರೇಷ್ಠ ಪ್ರಾಧ್ಯಾಪಕರೂ ವಾಗ್ಮಿಗಳೂ ಇದ್ದ ಒಂದು ರಾಷ್ಟ್ರ ಮಟ್ಟದ ವಿದ್ಯಾಕೇಂದ್ರವಾಗಿತ್ತು. ಇತಿಹಾಸ, ಇಂಗ್ಲಿಷ್, ಸಂಸ್ಕೃತ, ತತ್ವಶಾಸ್ತ್ರ, ರಾಜ್ಯಶಾಸ್ತ್ರ, ಮನೋವಿಜ್ಞಾನ - ಈ ವಿಭಾಗಗಳಲ್ಲಿನ ಪ್ರಾಧ್ಯಾಪಕರು ಅಧ್ಯಯನಕ್ಕೆ ತಮ್ಮನ್ನು ತಾವು ಸಂಪೂರ್ಣ ಸಮರ್ಪಿಸಿಕೊಂಡು ವಿದ್ಯಾರ್ಥಿಗಳಿಗೆ ದೊಡ್ಡ ಸ್ಫೂರ್ತಿಯಾಗಿದ್ದರು. ಅರ್ಥವಾಗಲಿ ಬಿಡಲಿ, ಅವರ ಸಾರ್ವಜನಿಕ ಉಪನ್ಯಾಸಗಳಿಗೆ ಹೋಗುತ್ತಿದ್ದೆವು. ಪ್ರೊ. ಡಿ. ಎಲ್. ನರಸಿಂಹಾಚಾರ್ಯರು ನಮಗೆ ಹೇಳಿದ್ದು - " ನಿಮಗೆ ಅರ್ಥವಾಗಲಿ ಬಿಡಲಿ, ಅಂತಹ ಉಪನ್ಯಾಸಗಳನ್ನು ನೀವು ಕೇಳಿ". ಕಲ್ಕತ್ತ, ಮದ್ರಾಸ್ ಇತ್ಯಾದಿ ಕಡೆಗಳಿಂದ ಬಂದು ವಿಶೇಷ ಉಪನ್ಯಾಸಗಳನ್ನು ನೀಡುತ್ತಿದ್ದ ಆ ಮಹನೀಯರ ಒಂದು ಗಂಟೆ ಉಪನ್ಯಾಸದಲ್ಲಿ ನನಗೆ ಏನೂ ಅರ್ಥವಾಗದಿದ್ದರೂ, ಅವರಂತೆ ನನ್ನ ಕ್ಷೇತ್ರದಲ್ಲಿ ನಾನೂ ಬೆಳೆಯಬೇಕು. ಎಂಬ ಹಂಬಲವು ಮೊಳೆಯುತ್ತಿತ್ತು : ಡಿ. ಎಲ್. ಎನ್. ಆಶಯವೂ ಅದೇ ಆಗಿತ್ತು.

ನಾನು ವಿದ್ಯಾರ್ಥಿಯಾಗಿದ್ದ ಕನ್ನಡ ವಿಭಾಗಕ್ಕೆ ಈಗ ಬರುತ್ತೇನೆ. ಕುವೆಂಪು, ಡಿ.ಎಲ್. ನರಸಿಂಹಾಚಾರ್, ಕ. ವೆಂ. ರಾಘವಾಚಾರ್, ಎಸ್.ವಿ. ಪರಮೇಶ್ವರ ಭಟ್ಟ, ಸಿ. ಮಹಾದೇವಪ್ಪ ಇವರು ಮಹಾರಾಜಾ ಕಾಲೇಜಿನ ಉಪಾಧ್ಯಾಯ ವರ್ಗವಾದರೆ, ಪಕ್ಕದ ಯುವರಾಜಾ ಕಾಲೇಜಿನಿಂದ ಎನ್. ಅನಂತರಂಗಾಚಾರ್, ತ. ಸು. ಶಾಮರಾವ್ ಬಂದು ನಮಗೆ ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದರು. ಇನ್ನು ಕರ್ನಾಟಕದ ಸಾಂಸ್ಕೃತಿಕ ರಾಜಕೀಯ ಚರಿತ್ರೆ, ಸಂಸ್ಕೃತ, ತಮಿಳುಗಳಿಗೆ ಎಸ್. ಶ್ರೀಕಂಠಶಾಸ್ತ್ರಿ, ನಂ. ಶಿವರಾಮ ಶಾಸ್ತ್ರೀ, ಚಂಗಲವರಾಯನ್ ಇವರು ಮತ್ತು ಇನ್ನೂ ಒಂದಿಬ್ಬರು ಉಪಾಧ್ಯಾಯರು. ಅವರೆಲ್ಲರೂ ಆಯಾ ಕ್ಷೇತ್ರದಲ್ಲಿ ಶ್ರದ್ಧೆಯಿಂದ ಓದಿಕೊಂಡು ಪಾಂಡಿತ್ಯವನ್ನು ಗಳಿಸಿ ತನ್ಮಯತೆಯಿಂದ ಪಾಠ ಹೇಳುತ್ತಿದ್ದರವರು. ಅವರಲ್ಲಿ ಒಬ್ಬೊಬ್ಬರ ಬಗ್ಗೆಯೂ ಬರೆಯುವುದು ಸಾಕಷ್ಟಿದೆ.

ಪ್ರೊ. ಎನ್. ಅನಂತರಂಗಾಚಾರ್ ಮಹಾರಾಜಾ ಕಾಲೇಜು ಪಕ್ಕದ ಯುವರಾಜಾ ಕಾಲೇಜಿನಿಂದ ಬಂದು ಪಾಠ ಹೇಳುತ್ತಿದ್ದರು ಎಂದು ಮೇಲೆ ಹೇಳಿದೆ ತಾನೇ! ಅವರು ನಮಗೆ ತೆಗೆದುಕೊಳ್ಳುತ್ತಿದ್ದ ಪಾಠ ಕೇಶಿರಾಜನ 'ಶಬ್ದಮಣಿದರ್ಪಣ'. ಸಾದಾ ಎತ್ತರದ, ಆದರೆ ಒಳ್ಳೆಯ ಮೈಕಟ್ಟಿನ, ಜಟ್ಟಿ ಆಕೃತಿಯ ಅವರು ಪಂಚೆ ಉಟ್ಟು, ಮುಚ್ಚುವ ಕೋಟು, ತಲೆಗೆ ಪೇಟ ಧರಿಸಿ ಹಣೆಗೆ ಢಾಳವಾಗಿ ನಾಮ ಧರಿಸಿ ತರಗತಿಗೆ ಬರುತ್ತಿದ್ದರು. ಅವರು ಪಾಠ ಮಾಡುತ್ತಿದ್ದುದು ಹಳಗನ್ನಡ ಪದ್ಯಗಳಲ್ಲಿದ್ದ ಅದೇ ಹಳೆಗನ್ನಡ ಭಾಷೆಯ ವ್ಯಾಕರಣಗ್ರಂಥ ಕೇಶಿರಾಜನ 'ಶಬ್ದಮಣಿ ದರ್ಪಣ'ವನ್ನು. ಅವರ ಮೊದಲ ತರಗತಿ ನನ್ನ ನೆನಪಿನಿಂದ ಹಾರಿದೆ. ಪಕ್ಕದ ಕಾಲೇಜಿನಲ್ಲಿ ಪಾಠ ಮುಗಿಸಿಕೊಂಡು ಬರಬೇಕಾಗಿದ್ದುದರಿಂದ ಎಷ್ಟೋ ಸಾರಿ ಐದು ಹತ್ತು ನಿಮಿಷ ತಡವಾಗಿ ಬಂದುದೇ ಹೆಚ್ಚು. ಸಾಂಪ್ರದಾಯಿಕ ಹಳಗನ್ನಡ ಪರಂಪರೆಯನ್ನು ಆಮೂಲಾಗ್ರವಾಗಿ ಓದಿಕೊಂಡಿದ್ದವರು. ಸಂಸ್ಕೃತದಲ್ಲೂ ಅಷ್ಟೇ ಪಾಂಡಿತ್ಯ. ಕನ್ನಡ ವ್ಯಾಕರಣಕಾರರಾದ ನಾಗವರ್ಮ, ಕೇಶಿರಾಜ, ಭಟ್ಟಾಕಳಂಕ ಇವರ ಕೃತಿಗಳ ಪ್ರತಿಯೊಂದು ಅಂಶವೂ ಅವರ ನೆನಪಿನ ಭಾಗವಾಗಿತ್ತು. ಹಳಗನ್ನಡದಲ್ಲಿ ಅಗಾಧವಾದ ಪಾಂಡಿತ್ಯ. ಹಲವು ಹಳಗನ್ನಡ ಕೃತಿಗಳನ್ನು ಅವರು ಶಾಸ್ತ್ರೋಕ್ತವಾಗಿ ಸಂಪಾದಿಸಿ ಕನ್ನಡ ಸಾರಸ್ವತ ಲೋಕಕ್ಕೆ ನೀಡಿದ್ದರು. ಜೊತೆಗೆ, ಬತ್ತದ ಉತ್ಸಾಹ. ಯುವರಾಜಾ ಕಾಲೇಜಿನಲ್ಲಿ ಅವರು ಇಂಟರ್‌ಮೀಡಿಯೆಟ್ ಬಿಎಸ್‌ಸಿ ವಿದ್ಯಾರ್ಥಿಗಳಿಗೆ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಬೋಧಿಸುತ್ತಿದ್ದುದರಿಂದ ಅಲ್ಲಿ ಅವರ ಪಿಪ್ವತ್ತಿನ ಪ್ರಕಾಶನಕ್ಕೆ, ಸಂವಹನಕ್ಕೆ ಇಲ್ಲದಿದ್ದ ಅವಕಾಶವನ್ನು ಆನರ್ಸ್ ವಿದ್ಯಾರ್ಥಿಗಳ ನಮ್ಮ ತರಗತಿ ಅವರಿಗೆ ಒದಗಿಸುತ್ತಿತ್ತು. ತರಗತಿಗೆ ಬಂದು ನಗುಮುಖದಿಂದ ವ್ಯಾಕರಣಪುಸ್ತಕವನ್ನು ತೆರೆದು ತಮ್ಮ ಮುಂದಿಟ್ಟುಕೊಂಡು ಮಾತನಾಡಲು ಆರಂಭಿಸುತ್ತಿದ್ದುದು ಬಹು ಸಾರಿ ಊಟ ತಿಂಡಿಗಳ ವಿಷಯದಿಂದ. ತಮ್ಮ ಪ್ರವಾಸದ ಅನುಭವಗಳು, ಟಿ. ಎಸ್. ವೆಂಕಣ್ಣಯ್ಯ, ಬಿ.ಎಂ.ಶ್ರೀ., ಎ. ಆರ್. ಕೃಷ್ಣಶಾಸ್ತ್ರಿಗಳ ಒಡನಾಟ, ಆ ನಗುವಿನ ದಿನಗಳು, ಸವಿದ ತಿಂಡಿಗಳು, ಭಕ್ಷ್ಯ ಭೋಜ್ಯಗಳು, ಅವುಗಳನ್ನು ಮಾಡುವ ರೀತಿ, ಶ್ರೀರಂಗಪಟ್ಟಣದ ಪಕ್ಕದ ಕರಿಘಟ್ಟದ ಜಾತ್ರೆ

ಇತ್ಯಾದಿ ವಿಷಯಗಳನ್ನು ಪ್ರಸ್ತಾಪಿಸಿ ಆದ ಮೇಲೆ ಕೇಶಿರಾಜನ ವ್ಯಾಕರಣಕ್ಕೆ ಬರುತ್ತಿದ್ದರು. ಒಂದೊಂದು ಸೂತ್ರವನ್ನೂ ಓದಿ, ಕೇಶಿರಾಜನು ಹಳಗನ್ನಡ ಭಾಷೆಯನ್ನು ಶಾಸ್ತ್ರೋಕ್ತವಾಗಿ ವಿಶ್ಲೇಷಿಸಿರುವುದನ್ನು ವಿವರಿಸುತ್ತಿದ್ದರು. ಶುಭ್ರ ಮನಸ್ಸಿನ ಅವರ ರಸಿಕಮಾತುಗಳಲ್ಲಿ ಅಶ್ಲೀಲತೆಯ ಸೋಂಕೂ ಇರುತ್ತಿರಲಿಲ್ಲ. ಅವರ ಆ ರಸಿಕತೆಯ ಮಾತುಗಳ ಮೂಲಕ ಶಾಸ್ತ್ರಕಾರ ಕೇಶಿರಾಜ ನಮಗೆ ಪ್ರತ್ಯಕ್ಷವಾಗಿ ಪ್ರಿಯನಾದನೆಂದೇ ಹೇಳಬೇಕು.

ಮಹಾರಾಜಾ ಕಾಲೇಜಿಗೆ ಸಮೀಪದಲ್ಲಿ ಸರಸ್ವತಿಪುರದ ಮುಖ್ಯರಸ್ತೆಯಲ್ಲಿ ಅವರ ಮನೆ, ಸರಸ್ವತಿಪುರದ ಒಂದು ಅಂಚಿನಲ್ಲಿ ಕನ್ನೇಗೌಡನ ಕೊಪ್ಪಲಿಗೆ ಅಂಟಿಕೊಂಡಂತೆ ಡಿ.ಎಲ್.ಎನ್. ಮನೆ; ಹೆಚ್ಚು ಕಡಮೆ ಇನ್ನೊಂದು ಅಂಚಿನಲ್ಲಿ, ಫೈರ್ ಬ್ರಿಗೇಡ್ ಹಿಂಭಾಗದಲ್ಲಿ ಕ. ವೆಂ. ರಾಘವಾಚಾರ್ಯರ ಮನೆ; ಸರಿಯಾಗಿ ಇವುಗಳ ಮಧ್ಯೆ ಎಸ್. ಅನಂತರಂಗಾಚಾರ್ಯರ ಮನೆ. ಡಿ.ಎಲ್. ಎನ್. ನಮ್ಮನ್ನು ಮಾತನಾಡಿಸುತ್ತಿದ್ದರು, ವಿಕಸನಚದಲ್ಲಿ ; ಅದೇ ನಮಗೆ ಅಪ್ಯಾಯಮಾನ. ಕ. ವೆಂ. ರಾಘವಾಚಾರ್ಯರನ್ನು ನಾವು 'ದೂರ್ವಾಸ' ಎಂದು ಕರೆಯುತ್ತಿದ್ದೆವು. ಸ್ವಲ್ಪ ಸಿಡುಕು ಸ್ವಭಾವ; ಮುಖವೂ ಸಿಡುಕಿನದೇ. ನನಗೆ ಓದಲು ಬೇಕಾದ ಪುಸ್ತಕ ಗ್ರಂಥಾಲಯದಲ್ಲಿ ದೊರಕದಿದ್ದರೆ ಅವರ ಮನೆಗೆ ಸ್ವಲ್ಪ ನಡುಗುತ್ತಲೇ ಹೋಗುತ್ತಿದ್ದೆ. ಅವರು 'ಏನು ಬಂದೆ?' ಎಂದು ಸಹಜವಾಗಿಯೇ ಕೇಳಿದರೂ, ಅದು ಸಿಡುಕಿನ ಮಾತು ಎಂಬ ಭ್ರಮೆ ನನ್ನದು. ಪುಸ್ತಕದ ಹೆಸರು ಹೇಳುತ್ತಿದ್ದಂತೆ, 'ಕೂತ್ಕೋ' ಎಂದು ಹೇಳಿ ಒಳಕ್ಕೆ ಹೋಗಿ ಚಕ್ಕುಲಿ, ಕೋಡುಬಳೆ, ರವೆ ಉಂಡೆ, ದೋಸೆ, ಉಪ್ಪಿಟ್ಟು ಹೀಗೆ ತಿಂಡಿ ಕೊಟ್ಟು 'ತಿನ್ನು' ಎನ್ನುತ್ತಿದ್ದರು. ಆ ಸಿಹಿ (ಅಥವಾ ಪ್ರಿಯ) ಆಜ್ಞೆಯನ್ನು ಪರಿಪಾಲಿಸದಿರಲು ಸಾಧ್ಯವೇ? ತಿಂಡಿ ತಿಂದು ನೀರನ್ನೋ ಕಾಫಿಯನ್ನೋ ಕುಡಿಯುತ್ತಿದ್ದೆ; ಪುಸ್ತಕ ನನ್ನ ಕೈಗೆ ಬರುತ್ತಿತ್ತು. ಆ ಹೊರ ದೂರ್ವಾಸ ಒಳಗೆ ಪ್ರೀತಿಯ ವಾಸದ ಮನೆಯಾಗಿದ್ದರು. ಭೋಜನಪ್ರಿಯರಾದ ಎಸ್. ಅನಂತರಂಗಾಚಾರ್ಯರ ಮನೆಗೂ ಅದೇ ಪುಸ್ತಕ ಕಾರಣವಾಗಿ ಹೋಗುತ್ತಿದ್ದೆ. ಅವರದು ಕ. ವೆಂ. ರಾ. ಅವರಿಗಿಂತ ಭಿನ್ನ ನೋಟ ನಗುನಗುತ್ತ, ಪ್ರೀತಿಯಿಂದ ಮಾತನಾಡಿಸಿ ಕುಳ್ಳಿರಿಸಿ, ನಿಧಾನ ಆರೋಗ್ಯ ಇತ್ಯಾದಿ ಎಲ್ಲ ವಿಚಾರಿಸಿ ಹೆಚ್ಚು ಉದಾರವಾಗಿ ಪುಷ್ಕಳ ತಿಂಡಿ ಕೊಟ್ಟು, ಜೊತೆಗೆ ಪುಸ್ತಕ ಕೊಟ್ಟು ಕಳುಹಿಸುತ್ತಿದ್ದರು. ಒಂದು ವಿಶೇಷವೆಂದರೆ, ಗೋಕುಲಾಷ್ಟಮಿಯಂತಹ ಶ್ರೀ ವೈಷ್ಣವರ ಹಬ್ಬಗಳಿಗೆ ವಿದ್ಯಾರ್ಥಿಗಳನ್ನು ಮರೆಯದೆ ಮನೆಗೆ ಕರೆದು ಪುಳಿಯೋಗರೆ ಇತ್ಯಾದಿ ತಿಂಡಿ ತಿನ್ನಿಸಿ, ತಾವೂ ಜೊತೆಯಲ್ಲಿ ತಿಂದು ನಗಿಸಿ ಕಳುಹಿಸುತ್ತಿದ್ದರು. ಡಿ. ಎಲ್. ಎನ್. ಮನೆಯಲ್ಲೂ ವಿರಳವಾಗಿ ತಿಂಡಿ ದೊರಕುತ್ತಿತ್ತು. ಆಕಸ್ಮಿಕ ಸಂಗತಿಯೆಂದರೆ ಮೂವರೂ ಶ್ರೀ ವೈಷ್ಣವ ಅಯ್ಯಂಗಾರರೇ. ವೀರಶೈವರಲ್ಲಿ ಅಯ್ಯನೋರು(ಅಯ್ಯನವರು) ಎಂದು ಕರೆಯುವ ಜಂಗಮವರ್ಗದ ನನಗೆ ಆ ಅಯ್ಯಂಗಾರರಲ್ಲದೆ ಮುಂದೆ ಪು.ತಿ.ನ., ಗೊರೂರು ರಾಮಸ್ವಾಮಿ ಅಯ್ಯಂಗಾರರಂತಹ ಅಯ್ಯಂಗಾರರ ಜೊತೆ ನಿಕಟಸಂಪರ್ಕ ಬಂದುದು ಅವರೆಲ್ಲರೂ ನನ್ನನ್ನು ಬಹು ವಾತ್ಸಲ್ಯದಿಂದ ಕಂಡುದು ಆಕಸ್ಮಿಕವೇ. ಆಕಸ್ಮಿಕ ಹೌದು; ಏನಾದರೂ ಬೇರೆ ಕಾರಣ

ಇದೆಯೋ ಎಂಬ ನಿಜವಲ್ಲದ ಗುಮಾನಿ ಬರುತ್ತದೆ. ಇಷ್ಟಾಂತೂ ನಿಜ : ಇರ್ಡೀ ಜಗತ್ತಿನಲ್ಲಿ ಅಯ್ಯಂಗಾರರ ಮನೆಗಳಲ್ಲಿ ಮಾಡುವ ಪುಳಿಯೋಗರೆಗಳಿಗೆ ಸಮನಾದ ಭಕ್ಷ್ಯವೆಂದರೆ ನನ್ನ ಹಳ್ಳಿಯಲ್ಲಿ ಮಾಡುತ್ತಿದ್ದ ಒಬ್ಬಟ್ಟು ಮತ್ತು ಮಾವಿನ ಹಣ್ಣಿನ ಸೀಕರಣೆ: ಇವುಗಳಲ್ಲಿ ಪುಳಿಯೋಗರೆಗೆ ಎರಡನೆಯ ಸ್ಥಾನ - ಆ - ಮಾತು ಬೇರೆ. ಬಹು ಒಳ್ಳೆಯ ಕಲಾವಿದರಾಗಿದ್ದ ಆಚಾರ್ಯರು ಬಿ. ಎಂ. ಶ್ರೀಯವರ ಗದಾಯುದ್ಧ ನಾಟಕದಲ್ಲಿ ದುರ್ಯೋಧನನ ಪಾತ್ರವನ್ನು ಹಲವು ಬಾರಿ ಅಭಿನಯಿಸಿ ಅನೇಕರ ಮೆಚ್ಚುಗೆಗೆ ಪಾತ್ರವಾಗಿದ್ದರಂತೆ. ಅವರು ನಾಟಕದಲ್ಲಿ ಭಾಗವಹಿಸಿದುದನ್ನು ನೋಡುವ ಸೌಭಾಗ್ಯ ನನ್ನದಾಗಲಿಲ್ಲ.

ಮುಂದೆ ೧೯೫೭-೫೮ರಲ್ಲಿ ನನಗೆ ಕೋಲಾರದಿಂದ ಯುವರಾಜಾ ಕಾಲೇಜಿಗೆ ವರ್ಗವಾದಾಗ ಗುರುಗಳಾದ ಅನಂತರಂಗಾಚಾರ್ಯರು ತಮ್ಮ ಶಿಷ್ಯ-ಸಹೋದ್ಯೋಗಿಗೆ ಬಹು ಪ್ರೋತ್ಸಾಹವನ್ನು ನೀಡಿದರು. ಅದೇ ಶಿಷ್ಯವಾತ್ಸಲ್ಯ ಮುಂದುವರಿಯಿತು. ಪಿಎಚ್.ಡಿ. ಪದವಿಗಾಗಿ ಅಧ್ಯಯನ ನಡೆಸುತ್ತಿದ್ದ ನನಗೆ ಅವರ ನಿರಂತರ ಪ್ರೋತ್ಸಾಹವೂ ಇದ್ದಿತು. ಅವರ ಸರಸ್ವತೀಪುರದ ಮನೆಗೆ ಸಮೀಪವೇ ನಾನು ನನ್ನ ತಂದೆ ತಾಯಂದಿರ ಜೊತೆ ಬಾಡಿಗೆ ಮನೆಯಲ್ಲಿದ್ದೆ. "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ನಿಬಂಧಕ್ಕೆ ನನಗೆ ಮೈಸೂರು ವಿಶ್ವವಿದ್ಯಾಲಯದಿಂದ ಪಿಎಚ್.ಡಿ.ಪದವಿಯೂ ದೊರಕಿತು.

೧೯೫೯ರಲ್ಲಿ ಮೈಸೂರಿನಿಂದ ಬೆಂಗಳೂರಿಗೆ ಬಂದ ಮೇಲೆ ಅವರ ಸಂಪರ್ಕ ತಪ್ಪಿತಾದರೂ ಅಂತಹ ಗುರುಗಳ ನೆನಪೇ ಅಂದೂ ಇಂದೂ ಕೂಡ ನನಗೆ ಸ್ಫೂರ್ತಿ. ಮೈಸೂರಿಗೆ ಯಾವುದೋ ಸಭೆಯ ನಿಮಿತ್ತ ಹೋದಾಗ, ಅನಂತರಂಗಾಚಾರ್ಯರನ್ನು ತೀವ್ರ ಅನಾರೋಗ್ಯನಿಮಿತ್ತ ಕೃಷ್ಣರಾಜೇಂದ್ರ ಆಸ್ಪತ್ರೆಗೆ ಸೇರಿಸಿದ ವಿಷಯ ತಿಳಿದು ಅವರನ್ನು ನೋಡಿಕೊಂಡು ಬರಲು ಅಲ್ಲಿಗೆ ಹೋದಾಗ ಕಂಡ ದೃಶ್ಯ ತೀರ ನೋವಿನದಾಗಿತ್ತು. ದೈತ್ಯದೇಹದ ಅವರ ಕೃಶಶರೀರ ಹಾಸಿಗೆಯ ಮೇಲೆ ಮಲಗಿ ಕಣ್ಣು ಬಿಟ್ಟಿದೆ ಅಷ್ಟೇ. ಹೋಗಿ ಮಾತನಾಡಿಸಿದಾಗ ಅವರಿಂದ ಪ್ರತಿಕ್ರಿಯೆ ಇಲ್ಲ; ಸುಮ್ಮನೆ ನನ್ನನ್ನು ನೋಡುತ್ತಿದ್ದರು. ಅವರಿಗೆ ಎಲ್ಲ ಬಗೆಯ ಜ್ಞಾಪಕಶಕ್ತಿ ಹೊರಟುಹೋಗಿತ್ತು. ಅವರ ಮಗ ಅವರನ್ನು ಗಟ್ಟಿಯಾಗಿ ಮಾತನಾಡಿಸಲು ಸೂಚಿಸಿದರು. ನಾನು ಅವರ ಕಿವಿ ಬಳಿ "ಸಾರ್, ನಾನು ಯಾರು ಸಾರ್? ಹೇಳಿ ಸಾರ್?' ಎಂದೆ. ಅವರು ನನ್ನನ್ನು ಪಿಳಿಪಿಳಿ ದೃಷ್ಟಿಸಿ ನೋಡಿ, ಎರಡು ನಿಮಿಷ ಬಿಟ್ಟು, 'ಶಾಸನ' ಎಂದರು. ನನಗೆ ಒಂದು ಕ್ಷಣ ಸಂತೋಷವೂ ಆಯ್ತು; ಅಂತೆಯೇ ದುಃಖ ಉಮ್ಮಳಿಸಿ ಬಂತು. ಅವರು ಗುರುತಿಸಿದ್ದು,ಚಿದಾನಂದ ಮೂರ್ತಿಯನ್ನಲ್ಲ; ಶಾಸನಗಳ ಬಗ್ಗೆ ಕಿರು ಸಂಶೋಧನೆ ಮಾಡಿದ್ದ ಸಂಶೋಧಕನನ್ನು.

ಮೇಲಿನ ಘಟನೆ ನನ್ನ ಮನಸ್ಸೆಂಬ ಶಿಲಾಫಲಕದ ಮೇಲೆ ಕೆತ್ತಿದ ಶಾಸನದಂತೆ ಅಚ್ಚಳಿಯದೆ ನಿಂತಿದೆ. ಅಂದಿನ ಪ್ರಾಧ್ಯಾಪಕರಿಗೆ ವಿದ್ಯಾರ್ಥಿಯ ಹಿನ್ನೆಲೆ ಇತ್ಯಾದಿಗಳು

ಮುಖ್ಯವಾಗದೆ ಅವರಲ್ಲಿದ್ದ ಗುಣ ಮುಖ್ಯವಾಗಿ ತೋರುತ್ತಿತ್ತು. ನಿಷ್ಕಲ್ಮಷ ಮನಸ್ಸಿನ ಅವರಂತಹ ಹಲವರು ಗುರುಗಳು ನನ್ನ ವಿದ್ಯಾರ್ಥಿಜೀವನದಲ್ಲಿ ನನಗೆ ಲಭ್ಯವಾಗಿದ್ದುದು ನನ್ನ ವಿಶೇಷ ಪುಣ್ಯ. ಅನೇಕರ ಜೊತೆ ಹೇಳಿಕೊಂಡಿದ್ದೇನೆ. ನನ್ನ ಬಳಿ ಇತರರು ಅಸೂಯೆ ಪಡುವಂತಹುದು ಏನೂ ಇಲ್ಲ. ಆದರೆ ಒಂದು ವಿಷಯದಲ್ಲಿ ಸಾತ್ವಿಕ ಅಸೂಯೆ ಪಡುವಂತಹ ಒಂದು ಅಂಶ ನನ್ನ ಬಳಿ ಇದೆ: ನನಗೆ ವಿದ್ಯಾರ್ಥಿಜೀವನದಲ್ಲಿ ಹಾಗೂ ಮುಂದೆ ದೊರೆತ ಶ್ರೇಷ್ಠ ಗುರುಗಳೂ ಗುರುಸಮಾನರೂ ಬಹಳ ಜನಕ್ಕೆ ದೊರಕಿರಲಾರರು.



## 'ಸವ್ಯಸಾಚಿ'

ಹಂಪ ನಾಗರಾಜಯ್ಯ

ನಾನು ಬಿ. ಎ. (ಆನರ್ಸ್) ಮತ್ತು ಎಂ. ಎ. ವಿದ್ಯಾರ್ಥಿಯಾಗಿ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಓದುತ್ತಿದ್ದ ದಿನಗಳಿಂದ, ಅಂದರೆ ೧೯೫೫-೫೮ರಿಂದ ಮಾನ್ಯ ಪ್ರೊ. ಎಸ್. ಅನಂತರಂಗಾಚಾರ್ ಅವರನ್ನು ಬಲ್ಲೆ. ಹಾಗೆ ನೋಡುವುದಾದರೆ, ಕನ್ನಡವನ್ನು ವಿಶೇಷ ಅಧ್ಯಯನ ವಿಷಯವನ್ನಾಗಿ ಆರಿಸಿಕೊಂಡವರಿಗೆ ಅವರ ಹೆಸರು, ಕೃತಿ ಅಪರಿಚಿತವಾಗಿ ಉಳಿಯುವುದಿಲ್ಲ. ಆದರೆ ವೈಯಕ್ತಿಕವಾಗಿಯೂ ಅವರ ಒಡನಾಟ ಸಲೀಸುಗೊಳ್ಳಲು ಹೆಚ್ಚಿನ ಬೇರೆ ಕಾರಣಗಳಿದ್ದುವು. ಅವರಿಗೂ ನನ್ನ ಅಕ್ಕರೆಯ ಗುರುದ್ವಯರಾದ ಡಿ. ಎಲ್. ನರಸಿಂಹಾಚಾರ್ಯ ಮತ್ತು ತೀ. ನಂ. ಶ್ರೀಕಂಠಯ್ಯನವರಿಗೂ ಗಳಸ್ಯ ಕಂಠಸ್ಯವಿತ್ತು. ಮಿಗಿಲಾಗಿ ಅವರೂ ಡಿಎಲ್‌ಎನ್ ಅವರೂ ಸಹಪಾಠಿಗಳಾಗಿದ್ದವರು; ಒಡನಾಡಿ ಒಡನೋದಿ ಒಡವಳಿದ ಸಹಪಾಂಸು ಕ್ರೀಡಿತರು. ಏಕವಚನದಲ್ಲಿ ಮಾತನಾಡಿಕೊಳ್ಳುವ ಅಕ್ಕರೆಯ ಓರಗೆಯವರು.

ಇಲ್ಲಿಯೇ ಹೇಳಬೇಕಾದ ಒಕ್ಕಣೆಯೊಂದಿದೆ. ನನಗಿಂತ ಹಿಂದಣ ಕೆಲವು ಕನ್ನಡ ಆನರ್ಸ್ ಮತ್ತು ಎಂ. ಎ. ವಿದ್ಯಾರ್ಥಿಗಳಿಗೆ ಡಿಎಲ್‌ಎನ್ ಮತ್ತು ತೀ. ನಂ.ಶ್ರೀಯವರ ಪಾಠ ಸವಿಯುವ ಸೌಲಭ್ಯ ಸಿಕ್ಕಿರಲಿಲ್ಲ. ಎರವಲುಸೇವೆಯ ಮೇರೆಗೆ ಡಿಎಲ್‌ಎನ್ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಸಿದ್ಧವಾಗುತ್ತಿದ್ದ ಕನ್ನಡ-ಕನ್ನಡ ನಿಘಂಟು ಸಂಪಾದಕರಾಗಿ ನಿಯೋಜಿತರಾಗಿದ್ದರು. ತೀನಂಶ್ರೀಯವರು ಕರ್ನಾಟಕ ವಿಶ್ವವಿದ್ಯಾಲಯ ಕನ್ನಡವಿಭಾಗ ಮುಖ್ಯಸ್ಥರಾಗಿ ಧಾರವಾಡಕ್ಕೆ ಹೋಗಿದ್ದರು. ಆದರೆ ಪಾಂಡಿತ್ಯದ ಈ ಮೇರುಮಂದರಗಳೆರಡೂ ಒಟ್ಟಿಗೆ ಮತ್ತೆ ನಾನು ಕಲಿಯುತ್ತಿದ್ದ ಅವಧಿಯಲ್ಲಿಯೇ ಮೈಸೂರು ಮಹಾರಾಜಾ ಕಾಲೇಜಿಗೆ

ಮರ್ಶಿದರು. ಈ ಗುರುಗಳ ಮನೆಗೇಗೆ ಆಗಾಗ ಹೋಗಿ ಬರುವ ಪರಿಪಾಟಯಿತ್ತು. ಒಮ್ಮೊಮ್ಮೆ ಅನಾಯಾಸವಾಗಿ ಎಸ್. ಅನಂತರಂಗಾಚಾರ್ಯರೂ ಅಲ್ಲಿರುತ್ತಿದ್ದರು. ಅವರಲ್ಲಿಯೂ ಡಿಎಲ್‌ಎನ್ ಮನೆಯಲ್ಲಿ. ಘನವಿದ್ವಾಂಸರಾದ ಅವರನ್ನು ನಾನು ಗುರುಗೌರವದಿಂದಲೇ ಕಾಣುತ್ತಿದ್ದುದು ಪ್ರಾಯಃ ಅವರಿಗೆ ಇಷ್ಟವಾಗಿದ್ದಿರಬೇಕು.

ಅವರನ್ನು ಒಮ್ಮೆ ನೋಡಿದವರು, ಅವರೊಡನೆ ಸ್ವಲ್ಪವೇ ಆದರೂ ಮಾತುಕತೆ ನಡಸಿದವರು ಇನ್ನು ಆಜನ್ಮಪರ್ಯಂತ ಎಂದೂ ಮರೆಯಲಾರರು. ಅಂಥ ಅಯಸ್ಕಾಂತವ್ಯಕ್ತಿತ್ವ ಅವರದು. ಸ್ವಾಭಿಮಾನಜಾಗೃತರೂ ಆತ್ಮಪ್ರತ್ಯಯಪ್ರಸನ್ನರೂ ಸದೃಢ ಆರೋಗ್ಯ ಭಾಗ್ಯವಂತರೂ ಆದ ಅವರ ನೆನಪು ಈಗಲೂ ಹಸಿರಾಗಿದೆ. ಜತೆಗೆ ಸ್ವಧರ್ಮಸಂಸ್ಕಾರ ಪರಿಪಾಲನೆಯ ಒಂದಂಶವಾಗಿ ಅವರ ವಿಶಾಲವಾದ ಹಣೆಯಲ್ಲಿ ಯಾವತ್ತೂ ಅಚ್ಚೊತ್ತಿ ಸುಶೋಭಿತವಾಗಿ ಎದ್ದು ಕಾಣುತ್ತಿದ್ದ ಶ್ರೀ ವೈಷ್ಣವಲಾಂಛನವಾದ ಮೂರುನಾಮದ ಅಂಕಿತ ಅವಿಸ್ಮರಣೀಯ. "ಲಾಂಛನಕ್ಕೆ ಶರಣೆಂಬೆನಯ್ಯಾ" - ಎಂಬ ಅಣ್ಣ ಬಸವಣ್ಣನವರ ಸೂಳ್ನುಡಿಯಂತೆ ನಾನು ಅವರು ತಿರುನಾಮಧಾರಣೆ ಮಾಡಿದ ವಿದ್ವದ್ಗಾಂಭೀರ್ಯಸಮ್ಮಿಶ್ರಹಿರಿತನಕ್ಕೆ ಕೈಮುಗಿಯುತ್ತಿದ್ದೆ.

ನನ್ನ ವಿದ್ಯಾಗುರುಗಳಿಗಿಂತ ಮಿಗಿಲಾಗಿ, ಸಲೀಸಾಗಿ ಅವರು ನನ್ನನ್ನು ಏಕವಚನದಲ್ಲೇ ಮಾತನಾಡಿಸುತ್ತಿದ್ದರು. ಅವರ ಕಂಠ ಸ್ವಲ್ಪ ಬಿರುಸು. ಅದರಿಂದ ಅವರ ಸಹಜವಾಗಿಯೇ ಮಾತನಾಡುತ್ತಿದ್ದರೂ ಗತ್ತಿನಿಂದ ಮಾಡನಾಡುತ್ತಿರಬೇಕೆಂಬ ಗುಮಾನಿ ಬೇರೆ ದೂರದ ಕೇಳುಗರಿಗೆ ಬರಬಹುದಾಗಿತ್ತಾದರೂ ವಾಸ್ತವದಲ್ಲಿ ಅವರು ದರ್ಪ ತೋರಿ ಮಾತಾಡುತ್ತಿರಲಿಲ್ಲ. ನಾನು ಜೈನಧರ್ಮದಿಂದ ಬಂದವನೆಂಬ ಕಾರಣದಿಂದಾಗಿ ಅವರು ತಮಗೆ ಜೈನಧರ್ಮ ಮತ್ತು ಸಾಹಿತ್ಯದಲ್ಲಿ ಇದ್ದ ಪರಿಶ್ರಮ ಮತ್ತು ಪ್ರೇಮವನ್ನು ಸಂದರ್ಭವಶಾತ್ ಬಿಚ್ಚಳಿಸುತ್ತಿದ್ದರು. ಶ್ರವಣಬೆಳಗೊಳ, ಮೂಡಬಿದರೆ ಜೈನ ಶ್ರುತಭಂಡಾರಗಳ ಮಹತ್ವವನ್ನು ಹೇಳಿ 'ಅಲ್ಲೆಲ್ಲ ಪೋಗಿ ಹಸ್ತಪ್ರತಿಗಳನ್ನು ಜಾಲಾಡಬೇಕಯ್ಯಾ' ಎಂದು ಹುರಿದುಂಬಿಸುತ್ತಿದ್ದರು. ಅವರು ಉತ್ಸಾಹದ ಬುಗ್ಗೆಯಾಗುತ್ತಿದ್ದರು. ಅಲ್ಲದೆ ಮಹಾಸರಸಿ; ನಿಸ್ಸಂಕೋಚದಿಂದ ಶೃಂಗಾರಭಾವಸಂಬಂಧವಾದ ಮಾತುಗಳನ್ನು ಬಳಸುತ್ತಿದ್ದರು. ಡಿಎಲ್‌ಎನ್ ಹೇಳಿದ್ದುಂಟು: "ಭೀಮಪಾಕ ನಳಪಾಕಕ್ಕಿಂತ ಅನಂತರಂಗಾಚಾರ್ ಮನೆಯ ಅಡುಗೆಯ ರುಚಿಯೇ ಮಿಗಿಲು. ಲೇಖಣಿ-ಸೌಟು ಎರಡನ್ನೂ ಸಮನಾಗಿ ಬಳಸಿದ ಸವ್ಯಸಾಚಿ ಎಂದರೆ ಅನಂತರಂಗಾಚಾರ್!"

ಅವರು ಸಂಪಾದಿಸಿದ ಗ್ರಂಥಗಳಲ್ಲಿ ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ' ಮೂರ್ಧನ್ಯಪ್ರಾಯವಾದುದು. ಗ್ರಂಥ ಸಂಪಾದನ ಶಾಸ್ತ್ರಕ್ಷೇತ್ರದಲ್ಲಿ ಅವರ ಶ್ರಮ, ವಿದ್ವತ್ತು ಎಷ್ಟು ಗಹನವಾಗಿತ್ತೆಂಬುದಕ್ಕೆ ಈ ಗ್ರಂಥವೇ ಸಾಕ್ಷಿ. ಜತೆಗೆ ಅದಕ್ಕೆ ಅಳವಡಿಸಿರುವ ಅನುಬಂಧಗಳು ಹಳಗನ್ನಡ ವಾಙ್ಮಯದಲ್ಲಿ ಅವರು ಗಳಿಸಿದ್ದ ಪ್ರಭುತ್ವವನ್ನು ಬಿಂಬಿಸಿವೆ. ಸೂಕ್ತಿಸುಧಾರ್ಣವದ ಸಂಪಾದನಾಕಾರ್ಯ ಮಹತ್ವದ್ದು ಹಾಗೂ ಶ್ಲಾಘ್ಯವಾದದ್ದು ಎಂದು ಅವರಿಗೆ ನಾನು ಎದುರಾದಾಗಲೆಲ್ಲಾ - ಪ್ಪದೆ ಹೇಳುತ್ತಿದ್ದೆ.

ಅವರು ಬೆಂಗಳೂರು ಮಹಾರಾಣಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಅಲ್ಲಿಯೇ ನಿವೃತ್ತರಾದರು. ನಾನು ೧೯೫೯ರ ಸೆಪ್ಟಂಬರ್ ಮೊದಲ ವಾರ ಮೈಸೂರು ಮಹಾರಾಣಿ ಕಾಲೇಜಿನಲ್ಲಿ ಅಧ್ಯಾಪಕನಾಗಿ ಕನ್ನಡ ವಿಭಾಗಕ್ಕೆ ಸೇರ್ಪಡೆಯಾದೆ. ನನ್ನ ಸಹಪಾಠಿ ಗೆಳತಿ ಸಿ. ಆರ್. ಕಮಲಮ್ಮ (ಮುಂದೆ ನನ್ನ ಮಡದಿ ಕಮಲಾಹಂಪನಾ ಆದಳು) ಬೆಂಗಳೂರು ಮಹಾರಾಣಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕಿಯಾಗಿ ನೇಮಕವಾದರು. ಆಗ ಆಕೆಗೆ ಅನಂತರಂಗಾಚಾರ್ಯರು ಹಿರಿಯ ಸಹೋದ್ಯೋಗಿಯಾದರು.

ಡಾ. ಎನ್. ಅನಂತರಂಗಾಚಾರ್ಯರ ಸುಹೃದ್‌ಭಾಗ್ಯವನ್ನು ಅನುಭವಿಸುವ ಅವಕಾಶ ಮತ್ತೆ ದೊರೆತದ್ದು ಅದೂ ಯೋಗಾಯೋಗವೇ ಎನ್ನಬೇಕು. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಐದಾರು ಸಲ ಕಾಣಲು ಸಾಧ್ಯವಾದದ್ದು ಒಂದು ವಿಶೇಷ ಯೋಜನೆಯ ಸಂದರ್ಭದಲ್ಲಿ ಜಿ. ನಾರಾಯಣ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಅವರೊಂದಿಗೆ ನಾಲ್ಕು ವರ್ಷ ಗೌರವ ಕಾರ್ಯದರ್ಶಿ ಆಗಿದ್ದೆ. ಆಗ ಪರಿಷತ್ತಿನ ವತಿಯಿಂದ ಕೆಲವು ಮುಖ್ಯ ಹಾಗೂ ಮಹತ್ವದ ಪ್ರಾಚೀನ ಕಾವ್ಯಗಳನ್ನು ಗದ್ಯಾನುವಾದ ಸಹಿತ ಹೊರತರುವ ಯೋಜನೆಯನ್ನು ಕೈಗೆತ್ತಿಕೊಂಡೆವು. ವಾಸ್ತವವಾಗಿ ಇಂಥದೊಂದು ಕೆಲಸದ ಅಗತ್ಯವನ್ನು ಮನಗಂಡು, ಗದ್ಯಾನುವಾದಸಹಿತ ಹಳಗನ್ನಡ ಚಂಪೂ ಕಾವ್ಯಗಳನ್ನು ಪ್ರಕಟಿಸಲು ಹೊರಟವರು ಡಾ. ಆ. ನೇ. ಉಪಾಧ್ಯೆಯವರ ಮೇಲಾಳಿಕೆಯ ಭಾರತೀಯ ಜ್ಞಾನಪೀಠ. ಆದರೆ ಅವರು ಹಮ್ಮಿಕೊಂಡ ಯೋಜನೆಗೆ ನಿರೀಕ್ಷಿತ ಪ್ರೋತ್ಸಾಹ ಕನ್ನಡ ವಿದ್ವಾಂಸರಿಂದ ಸಿಗಲಿಲ್ಲ. ಕಡೆಗೆ ಜ್ಞಾನಪೀಠದ ಈ ಕನ್ನಡ ಯೋಜನೆ ಸಾಹಿತ್ಯ ಪರಿಷತ್ತಿನ ಮಡಿಲಿಗೆ ಬಿದ್ದಿತು.

ವಿದ್ವಜ್ಜನರ ಸಭೆಗಳನ್ನು ಪರಿಷತ್ತು ಏರ್ಪಡಿಸಿದಾಗಲೆಲ್ಲ ಅನಂತರಂಗಾಚಾರರು ಉಪಸ್ಥಿತರಿದ್ದು ಅನುವಾದ ಕಾರ್ಯಕ್ಕೆ ಬೆಂಬಲ ದೊರಕಿಸಿಕೊಟ್ಟರು; ಈ ಕೆಲಸ ಬೇಡವೆಂಬ ಅಪಸ್ವರವನ್ನು ಅವರು ಬಗ್ಗುಬಡಿದರು. ಹೊಸಗನ್ನಡ ಅನುವಾದಕ್ಕೆ ಬಲ್ಲಿದರ ಪಡೆ ಅಣಿಯಾಯಿತು. ತುಂಬ ಬಿರುಸಿನಿಂದ ಕಾರ್ಯವನ್ನು ನಡೆಸಿಕೊಟ್ಟವರಲ್ಲಿ ಅನಂತ ರಂಗಾಚಾರ್ಯರ ಹೆಸರು ಮುಂಚೂಣಿಯಲ್ಲಿ ನಿಲ್ಲಬೇಕು. ಅವರು ಆರಿಸಿಕೊಂಡ ಕಾವ್ಯ ಪಂಪನ ವಿಕ್ರಮಾರ್ಜುನ ವಿಜಯ! ಅದು ಅವರ ವಿದ್ವತ್ತಿನ ಖ್ಯಾತಿಗೆ ತಕ್ಕುದ್ದಾಗಿತ್ತು. ಅಗಾಧವಾದ ಈ ಗದ್ಯಾನುವಾದ ಕಾರ್ಯವನ್ನು ಒಪ್ಪಿಕೊಂಡು ಅವಧಿಗೆ ಅವಲೀಲೆಯಿಂದೆಂಬಂತೆ ಪೂರೈಸಿಕೊಟ್ಟರು. ಈಗ ಗದ್ಯಾನುವಾದ ಸಹಿತ ಪಂಪಭಾರತ ಸಮಗ್ರಕಾವ್ಯ ಓದುಗರಿಗೆ ಲಭ್ಯವಾಗುವಂತೆ ಮಾಡಿರುವುದು ದೊಡ್ಡ ಉಪಕಾರ. ಅದು ಅನಂತರಂಗಾಚಾರ್ಯರ ಮುಡಿಯ ಮಾಣಿಕ್ಯವಾಗಿ ಬಹುಕಾಲ ನಿಲ್ಲುವ ವಿದ್ವತ್ಕಾರ್ಯ.

❒




# ಸಿರಿಕಂಠದ ವಿದ್ವದ್ವರೇಣ್ಯರು

**ಕಮಲಾ ಹಂಪನಾ**

ನನ್ನ ಬದುಕಿನಲ್ಲಿ ಅದೊಂದು ಸುದಿನ. ಕನಸು ನನಸಾದ ದಿನ. ಬಾಳಿಗೆ ಒಂದು ತಿರುವು ನೀಡಿದ ದಿನ. ಆ ದಿನಕ್ಕೆ, ಆ ಅಮೃತಘಳಿಗೆಗೆ ಪರೋಕ್ಷವಾಗಿ ಸಹಾಯ ಮಾಡಿದವರು ಪ್ರೊಫೆಸರ್ ಎನ್. ಅಂತರಂಗಾಚಾರ್ಯರು. ಅವರಿಂದ ನನಗಾದ ಉಪಕಾರದ ಅರಿವು ಅಂದು ಅವರಿಗೆ ಬಹುಶಃ ತಿಳಿದಿರಲಿಲ್ಲವೆಂದು ಭಾವಿಸುವೆ. ಎರಡು ತಿಂಗಳುಗಳ ನಂತರ ನಾನು ತಿಳಿಸಿದಾಗಲೇ ಅವರಿಗೆ ಆಶ್ಚರ್ಯ ಹಾಗೂ ಸಂತೋಷ ಮಿಶ್ರಿತ ಭಾವಗಳು ಮೂಡಿದವು. 'ನೀನು ನಮ್ಮ ವಿಭಾಗಕ್ಕೆ ಬಂದದ್ದು ತುಂಬಾ ಸಂತೋಷ ಆಯಿತಮ್ಮ, ಒಳ್ಳೆಯದಾಗಲಿ' ಎಂದು ಹರಸಿ ಸಂತೋಷ ವ್ಯಕ್ತಪಡಿಸಿದ್ದರು.

೧೯೫೫ನೇ ಇಸವಿ, ಸೆಪ್ಟೆಂಬರ್ ತಿಂಗಳು, ಆಗ ತಾನೆ ಎಂ.ಎ. ಪರೀಕ್ಷೆ ತೆಗೆದುಕೊಂಡವರ ಫಲಿತಾಂಶ ಹೊರಬಿದ್ದಿತ್ತು. ಹಾಗೆ ಎಂ.ಎ. ಪರೀಕ್ಷೆ ತೆಗೆದುಕೊಂಡವರಲ್ಲಿ ನಾನು ಒಬ್ಬಳಾಗಿದ್ದೆ. ಫಲಿತಾಂಶ ಬಂದ ಎರಡು-ಮೂರು ದಿವಸಗಳ ನಂತರ ಅಂಕಪಟ್ಟಿ ಪಡೆಯಲು ಮೈಸೂರು ವಿಶ್ವವಿದ್ಯಾನಿಲಯದ ಕ್ರಾಫರ್ಡ್ ಭವನಕ್ಕೆ ಹೋಗಲು ಸಿದ್ಧಳಾದೆ. ಅದಕ್ಕೆ ಮೊದಲು ವಿಶ್ವವಿದ್ಯಾನಿಲಯದ ಪರೀಕ್ಷಾನಿಯಂತ್ರಣಾಧಿಕಾರಿಗಳೂ ನನ್ನ ಗುರುಗಳೂ ಆಗಿದ್ದ ದೇ. ಜವರೇಗೌಡರನ್ನು ಕಾಣುವುದೆಂದು ನಿರ್ಧರಿಸಿ ಅವರ ಮನೆಯ ಬಳಿಗೆ ಹೋದೆನು. ಗೇಟು ದಾಟಿ ಮನೆ ಒಳಗೆ ಹೋಗಬೇಕು, ಅಷ್ಟರಲ್ಲಿ ಗುರುಗಳೇ ನನ್ನ ಬಳಿಗೆ ಬಂದು, 'ಏನ್ರಿ ಇನ್ನೂ ಬೆಂಗಳೂರಿಗೆ ಹೋಗಲಿಲ್ವೆ? ನಿಮಗೆ ಬೆಂಗಳೂರು ಮಹಾರಾಣಿ ಕಾಲೇಜಿಗೆ ಅಧ್ಯಾಪಕಿಯಾದ ಆದೇಶಪತ್ರ ನಿಮ್ಮ ವಿಳಾಸಕ್ಕೆ ರವಾನಿಸಿದೆ. ನಾಳೆಯೇ ಹೋಗಿ ಕೆಲಸಕ್ಕೆ ಸೇರಿಕೊಳ್ಳಿ., ಸೀನಿಯಾರಿಟಿಗೆ ಸಹಾಯ ಆಗುತ್ತೆ. ತಡ ಮಾಡಬೇಡಿ' - ಎಂದು ಒಂದೇ ಉಸಿರಿಗೆ ಹೇಳಿ ಮನೆ ಒಳಗೆ ಹೋದರು. 'ಇದೆಲ್ಲ ಕನಸೇ' ಎನ್ನುವ ವಿಭ್ರಮೆಯಲ್ಲಿ ಅರ್ಧನಿಮಿಷ ಅಲ್ಲೆ ನಿಂತಿದ್ದು, ಅನಂತರ ವಾಸ್ತವ ಬದುಕಿಗೆ ಇಳಿದು ಸಂತೋಷದಿಂದ ಕ್ರಾಫರ್ಡ್ ಹಾಲಿಗೆ ಬಂದು ಅಂಕಪಟ್ಟಿ

ಪಡೆದು ಮನೆ ಸೇರಿದರೆ, ಕೆಲಸದ ಆದೇಶಪತ್ರ, ನನ್ನ ಗುರುಗಳು ಹೇಳಿದಂತೆ ನನಗಾಗಿ-ಕಾಯುತ್ತಿತ್ತು. ಅಂದೇ ರಾತ್ರಿ ಬೆಂಗಳೂರಿಗೆ ಹೊರಟು, ಮುಂಜಾನೆ ಮಹಾರಾಣಿ ಕಾಲೇಜಿಗೆ ಹೋಗಿ ಕೆಲಸಕ್ಕೆ ಹಾಜರಾದೆ. ಮೈಸೂರಿನಲ್ಲಿ ಜವರೇಗೌಡರ ಮಾತು ಕೇಳಿ ಸ್ವರ್ಗಕ್ಕೆ ಹಾರಿದ್ದ ನಾನು, ಕೆಲಸದ ಆದೇಶಪತ್ರ ನೋಡಿ ಹಾವು ಏಣಿ ಆಟದಂತೆ ತಲೆಯಿಂದ ಬಾಲ ಮುಟ್ಟಿದ್ದೆ. ಕೆಲಸ ಸಿಕ್ಕಿದ ಆನಂದ ಜರ್‍ರನೆ ಜಾರಿತ್ತು. ಕಾರಣ, ಆ ಆದೇಶ ಪತ್ರದಲ್ಲಿ ಎಸ್. ಅನಂತರಂಗಾಚಾರ್‍ಯರ ಎರಡು ತಿಂಗಳ ರಜೆಯ ಸ್ಥಾನದಲ್ಲಿ ನನಗೆ ಕೆಲಸ ದೊರೆತಿತ್ತು. ಎರಡು ತಿಂಗಳು ಆದ ಒಡನೆ, ಅನಂತರಂಗಾಚಾರ್‍ಯರು ಕೆಲಸಕ್ಕೆ ಹಾಜರಾಗುತ್ತಿದ್ದಂತೆಯೇ ನನ್ನ ಕೆಲಸ ಮುಗಿಯುವುದಿತ್ತು. ಆ ನೋವು- ವಿಷಾದ - ಆನಂದದಲ್ಲಿಯೇ ಕೆಲಸಕ್ಕೆ ಹಾಜರಾಗಿ ವಿಭಾಗಕ್ಕೆ ಬಂದೆ. ಅಲ್ಲಿ ಟಿ.ವಿ., ರತ್ನಮ್ಮ, ನನಗಿಂತ ಎಂ.ಎ. ತರಗತಿಯಲ್ಲಿ ಒಂದು ವರ್ಷ ಹಿರಿಯರಾಗಿದ್ದವರು, ಆಗಲೇ ಅಧ್ಯಾಪಕಿಯಾಗಿ ಅಲ್ಲಿ ಸೇರಿದ್ದರು. ವಿಭಾಗದಲ್ಲಿ ಇದ್ದವರು ಮೂವರು, ಶ್ರೀಮತಿ ವೈ. ಕಮಲಮ್ಮ, ಶ್ರೀ ಎಸ್. ಅನಂತರಂಗಾಚಾರ್‍ಯರು, ಹೊಸದಾಗಿ ಕೆಲಸಕ್ಕೆ ಸೇರಿದ್ದ ರತ್ನಮ್ಮ ಟಿ.ವಿ. ಅವರು. ವೈ. ಕಮಲಮ್ಮ ಅದೇ ವರುಷ ನಿವೃತ್ತರಾಗಿದ್ದರು. ನಿವೃತ್ತಿಯ ಅಂಚಿನಲ್ಲಿದ್ದ ಎಸ್. ಅನಂತರಂಗಾಚಾರ್‍ಯರು, ನಿವೃತ್ತಿಯ ಮುಂಚಿನ ರಜೆ ಉಪಯೋಗಿಸಿಕೊಳ್ಳಲು ಆಗಾಗ ರಜೆ ಹಾಕುತ್ತಿದ್ದರು. ಅಂಥ ಒಂದು ಸಂದರ್ಭದಲ್ಲಿ ನನಗೆ ಎರಡು ತಿಂಗಳ ಕೆಲಸ ಸಿಕ್ಕಿತು, ಅದೂ ಅನಂತರಂಗಾಚಾರ್‍ಯರು ರಜೆ ಹಾಕಿದ್ದರಿಂದ, ನನಗೆ ಅವರು ಪರೋಕ್ಷವಾಗಿ ಸಹಾಯ ಮಾಡಿದ್ದರು, ಅನಂತರಂಗಾಚಾರ್‍ಯರು ಮಾಡುತಿದ್ದ ತರಗತಿಗಳೆಲ್ಲ ನನ್ನ ಪಾಲಿಗೆ ಬಂದುವು. ಅದರಲ್ಲಿ ಆಸ್ಥಾನ ವಿದ್ವಾಂಸರಾಗಿದ್ದ ಬಸವಪ್ಪ ಶಾಸ್ತ್ರಿಗಳ ಕನ್ನಡ ಅನುವಾದ 'ಅಭಿಜ್ಞಾನ ಶಾಕುಂತಲ' ನಾಟಕವೂ ಒಂದಾಗಿತ್ತು. ಆ ಪಠ್ಯವನ್ನು ಪಾಠ ಮಾಡಲು ನಾನು ತುಂಬಾ ಶ್ರಮಪಟ್ಟು, ಸಿದ್ಧತೆ ಮಾಡಿಕೊಳ್ಳಬೇಕಿತ್ತು. ಜೊತೆಗೆ ಮೂರು ಸೆಕ್ಷನ್‌ಗಳು ಒಟ್ಟು ಸೇರುತ್ತಿದ್ದ ದೊಡ್ಡ ತರಗತಿಯೂ ಅದಾಗಿತ್ತು. ಸೀನಿಯರ್ ಬಿ.ಎ., ಬಿಎಸ್ಸಿ ಹಾಗೂ ಹೋಂ ಸೈನ್ಸ್ ಬಿಎಸ್ಸಿ - ಹೀಗೆ ಮೂರು ತರಗತಿಗಳೂ ಕನ್ನಡ ತರಗತಿಯಲ್ಲಿ ಒಂದಾಗುತ್ತಿದ್ದವು. ಆ ತರಗತಿಯಲ್ಲಿ ಹಲವರು ನನಗಿಂತ ವಯಸ್ಸಾದ ವಿದ್ಯಾರ್ಥಿನಿಯರಿದ್ದರು. 'Do not enter the classroom without preparation' - ಎಂದು ಬುದ್ಧಿವಾದ ಹೇಳಿ ಕಳುಹಿಸಿದ್ದ ನನ್ನ ಗುರುಗಳಾಗಿದ್ದ ಪೂಜ್ಯ ತೀ. ನಂ. ಶ್ರೀಯವರ ಮಾತುಗಳು ನನಗೆ ವೇದಮಂತ್ರಗಳಾಗಿದ್ದುವು. ಅಂದಿಗೂ, ಇಂದಿಗೂ, ಎಂದೆಂದಿಗೂ ಅದನ್ನು ನಾನು ಪಾಲಿಸುತ್ತಲೇ ಬಂದಿದ್ದೇನೆ. 'ಅಭಿಜ್ಞಾನ ಶಾಕುಂತಲ ನಾಟಕ' ಮಾಡುವಾಗ ಗುರುಗಳ ಮಾತನ್ನು ನಾನು ಶ್ರದ್ಧೆಯಿಂದ ಅಂದು ಪಾಲಿಸಿದ್ದೆ. ಒಂದು ದಿವಸದ ಬೇರೆ ಬೇರೆ ಮೂರು ತರಗತಿಗಳ ಪಾಠದಿಂದ 'ಹೊಸ ಮೇಡಂ ಕಮಲಮ್ಮ ತುಂಬಾ ಚೆನ್ನಾಗಿ ಪಾಠ ಮಾಡುತ್ತಾರೆ' - ಎನ್ನುವ ಹೆಗ್ಗಳಿಕೆಗೆ ನಾನು ಒಂದೇ ದಿವಸದಲ್ಲಿ ಪಾತ್ರಳಾಗಿದ್ದೆ.

ಎರಡು ತಿಂಗಳು ಬಹು ಬೇಗ ಕಳೆಯಿತು. ಎನ್. ಅನಂತರಂಗಾಚಾರ್ಯರು ಕರ್ತವ್ಯಕ್ಕೆ ಹಾಜರಾಗಲು ಕೇವಲ ಒಂದೇ ಒಂದು ದಿವಸ ಉಳಿದಿತ್ತು. ನನಗೆ ಮುಂದೆ ಏನು ಮಾಡಲು ತೋಚದೆ ಮನಸ್ಸಿನಲ್ಲಿಯೇ ನೋವು ಅನುಭವಿಸುತ್ತಿದ್ದೆ. ಅದೇ ವೇಳೆಗೆ ಸೆಂಟ್ರಲ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಶ್ರೀ ಬಿ. ಎಸ್. ಶಾಸ್ತ್ರಿ ನಮ್ಮ ವಿಭಾಗಕ್ಕೆ ಬಂದರು. ಲೋಕಾಭಿರಾಮದ ಎರಡು ಮಾತಿನ ನಂತರ ಶಾಸ್ತ್ರಿಗಳು, ' ನಾಡಿದ್ದು ಅನಂತರಂಗಾಚಾರ್ಯರು ಬರುತ್ತಾರೆ, ಈ ವರ್ಷ ನಿವೃತ್ತರಾದ ವೈ. ಕಮಲಮ್ಮನವರ ಜಾಗ ಖಾಲಿ ಇದೆ. ನೀವು ಏಕೆ ಆ ಜಾಗಕ್ಕೆ ಪ್ರಯತ್ನಿಸಬಾರದು' ಎಂದು ಸೂಚಿಸಿದರು. 'ಬದುಕಿದೆಯಾ ಬಡಜೀವವೇ' - ಎಂದು ಮಾರನೆಯ ಒಂದು ದಿವಸಕ್ಕೆ ರಜೆ ಹಾಕಿ ಮೈಸೂರಿಗೆ ಓಡಿದೆ. ಮರುದಿವಸ ಬೆಳಿಗ್ಗೆ ರಿಜಿಸ್ಟ್ರಾರ್ ಆಗಿದ್ದ ಪಿ. ಮಲ್ಲಿಕಾರ್ಜುನಪ್ಪನವರನ್ನು ನೋಡಿ ನನ್ನ ಮನವಿ ಪತ್ರ ಸಲ್ಲಿಸಿದೆ. ಅವರು ನನಗೆ ಕುಳಿತುಕೊಳ್ಳಲು ಹೇಳಿದರು.

ಮಲ್ಲಿಕಾರ್ಜುನಪ್ಪನವರು ಒಂದು ನಿಮಿಷವೂ ತಡ ಮಾಡಲಿಲ್ಲ, ಸಂಬಂಧಪಟ್ಟ ಗುಮಾಸ್ತೆಯನ್ನು ಕರೆಸಿ ವಿಷಯಪರಿಷ್ಕಾರ ಆದಷ್ಟೇ ತಡ ಆದೇಶ ಸಿದ್ಧಪಡಿಸಿಕೊಂಡು ಬರಲು ಗುಮಾಸ್ತೆಗೆ ಹೇಳಿದರು. ನನಗೆ ಹತ್ತು ನಿಮಿಷ ಇರಿ' ಎಂದರು. ಹೊರಗಡೆ ಕೊಠಡಿಯಲ್ಲಿ ಕಾಯೋಣವೆಂದು ಎದ್ದು ನಿಂತೆ. ಇಲ್ಲೆ ಕುಳಿತುಕೊಳ್ಳಿ, ಒಟ್ಟಿಗೆ ಆದೇಶ ತೆಗೆದುಕೊಂಡು ಹೋಗಿ' ಎಂದು ಹೇಳಿದ್ದಲ್ಲದೆ, ನಾಲ್ಕಾರು ಹಿತವಚನಗಳನ್ನೂ ನನ್ನ ಕೆಲಸಕ್ಕೆ ಸಂಬಂಧಿಸಿದಂತೆ ಹೇಳಿದರು. ನನಗೆ ಕೆಲಸ ಕೊಡುತ್ತಿರುವುದು ಮಾತ್ರವಲ್ಲದೆ ಅವರ ಧೈರ್ಯತುಂಬುವ ಮಾತುಗಳಿಂದ ಆ ಕ್ಷಣ ನನಗೆ ಅವರು ಒಬ್ಬ ದೇವತಾಪುರುಷನಂತೆ ಕಂಡಿದ್ದರೆ ಆಶ್ಚರ್ಯವಿಲ್ಲ. ನನ್ನ ಆದೇಶದ ಪ್ರತಿಯನ್ನೂ ಪ್ರಿನ್ಸಿಪಾಲರಿಗೆ ತಲುಪಿಸಬೇಕಾದ ಪ್ರತಿಯನ್ನೂ ನನ್ನ ಕೈಗೆ ಕೊಟ್ಟು ಅಭಿನಂದಿಸಿ ಕಳುಹಿಸಿದರು ಮಲ್ಲಿಕಾರ್ಜುನಪ್ಪನವರು.

ಮೂರನೆಯ ಬೆಳಿಗ್ಗೆ ೧೦ ಗಂಟೆಗೆಲ್ಲಾ ನಾನು ಬೆಂಗಳೂರು ಮಹಾರಾಣಿ ಕಾಲೇಜಿನ ಪ್ರಿನ್ಸಿಪಾಲರ ಕೊಠಡಿಯಲ್ಲಿ ಆದೇಶಪತ್ರ ಹಿಡಿದು ಕುಳಿತಿದ್ದೆ. ಎನ್. ಅನಂತರಂಗಾಚಾರ್ಯರೂ ಅದೇ ವೇಳೆಗೆ ಅಲ್ಲಿಗೆ ಕರ್ತವ್ಯಕ್ಕೆ ಹಾಜರಾಗಲು ಬಂದರು. ನನ್ನ ಸೇವೆಯಲ್ಲಿ ಎರಡು ತಿಂಗಳ ನಂತರದ ಯಾವುದೇ ಬ್ರೇಕ್ ಇಲ್ಲದೆ, ನಾನು ಪಿ. ಆರ್. ಕಮಲಮ್ಮ, ವೈ. ಕಮಲಮ್ಮನವರಿಂದ ಖಾಲಿ ಆಗಿದ್ದ ಜಾಗಕ್ಕೆ ಖಾಯಂ ಅಧ್ಯಾಪಕಿಯಾಗಿ ಕರ್ತವ್ಯಕ್ಕೆ ಹಾಜರಾಗಿದ್ದೆ. ಅನಂತರ ನಾನೂ ಅನಂತರಂಗಾಚಾರ್ಯರೂ ಇಬ್ಬರೂ ನಮ್ಮ ವಿಭಾಗದ ಕೊಠಡಿಗೆ ಆನಂದದಿಂದ ಪ್ರವೇಶಿಸಿದೆವು.

ಮಹಾರಾಜಾ ಕಾಲೇಜಿನಲ್ಲಿ ನಾನು ಬಿ.ಎ. ಆನರ್ಸ್ ಹಾಗೂ ಎಂ.ಎ. ವಿದ್ಯಾರ್ಥಿನಿಯಾಗಿದ್ದಾಗ (೧೯೫೫-೧೯೫೮, ೧೯೫೮-೧೯೬೦) ಅನಂತರಂಗಾಚಾರ್ಯರು ನನಗೆ ನೇರವಾಗಿ ಗುರುಗಳಾಗಿರಲಿಲ್ಲ. ಆದರೆ ಅವರು ಸಂಪಾದಿಸಿದ್ದ 'ಸೂಕ್ತಿಸುಧಾರ್ಣವ' ನಮಗೆ ಪಠ್ಯವಾಗಿತ್ತು. ನನ್ನ ಪೂಜ್ಯ ವಿದ್ಯಾಗುರುಗಳಾಗಿದ್ದ ಡಿ.ಎಲ್. ನರಸಿಂಹಾಚಾರ್ಯರು ನಮಗೆ ಆ ಪಠ್ಯವನ್ನು ಪಾಠ ಮಾಡುತ್ತಿದ್ದರು. ಅದರ ಸಂಪಾದಕರ ಇತರ ಕೆಲವು ಕೃತಿಗಳನ್ನೂ ಪ್ರಬುದ್ಧ

ಕರ್ನಾಟಕ ಮೊದಲಾದ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಅವರ ಲೇಖನಗಳನ್ನು ಓದುತ್ತಾ ಅವರ ಪಾಂಡಿತ್ಯ, ಪ್ರತಿಭೆಗೆ ಗೌರವ ಸೂಚಿಸುತ್ತಾ ಪರೋಕ್ಷವಾಗಿ ನಾನು ಅನಂತರಂಗಾಚಾರ್ಯರ ವಿದ್ಯಾರ್ಥಿನಿಯಾಗಿದ್ದೆ. ಆಗಾಗ ಅವರು ಮಹಾರಾಜಾ ಕಾಲೇಜಿನ ಕಾರಿಡಾರಿನಲ್ಲಿ ಪ್ರತ್ಯಕ್ಷರಾಗುತ್ತಿದ್ದರು. ನಾನು ಇತರ ನನ್ನ ಗುರುಗಳಿಗೆ ವಂದಿಸುತ್ತಿದ್ದಂತೆ ಅಷ್ಟೇ ಭಯ - ಭಕ್ತಿಗಳಿಂದ ಅವರಿಗೂ ವಂದಿಸುತ್ತಿದ್ದೆನು.

ಕಚ್ಚೆಪಂಚೆ, ಉದ್ದನೆಯ ಮುಚ್ಚುಕೋಟು ಅಂದಿನ ಅನೇಕ ಕನ್ನಡ ಅಧ್ಯಾಪಕರ ಉಡುಪಾಗಿತ್ತು. ಆ ಉಡುಪಿನಲ್ಲಿ ಪ್ರೊ. ಅನಂತರಂಗಾಚಾರ್ಯರನ್ನು ಕಾಣುವುದು ನನಗೇನೂ ಆಶ್ಚರ್ಯದ ಸಂಗತಿಯಾಗಿರಲಿಲ್ಲ. ಆದರೆ ಅವರ ಹಣೆಯ ಮೇಲೆ ರಾರಾಜಿಸುತ್ತಿದ್ದ ಅಗಲವಾದ ಎರಡು ಬಿಳಿಯ ನಾಮಗಳ ಮಧ್ಯೆ ಇದ್ದ ಕೆಂಪುನಾಮದಿಂದ ಅವರು ವಿಶೇಷವಾಗಿ ಹಲವರ ಗಮನ ಸೆಳೆಯುತ್ತಿದ್ದರು.

ಅಂಥ ಅನಂತರಂಗಾಚಾರ್ಯರು ವಿಭಾಗದ ಮುಖ್ಯಸ್ಥರಾಗಿರುವಾಗ ನಾನು ಅವರ ಕಿರಿಯ ಸಹೋದ್ಯೋಗಿಯಾಗಿ ಕಲಿತದ್ದು ಸಾಕಷ್ಟಿದೆ. ತರಗತಿಗೆ ಅವರು ಕಾಲಿಟ್ಟ ಒಡನೆಯೇ ನಿಶ್ಶಬ್ದ ಆವರಿಸುತ್ತಿತ್ತು. ಅವರ ಕಂಚು ಕಂಠಶ್ರೀ ದೊಡ್ಡ ಕೊಠಡಿ ತುಂಬಿ ಹೊರ ಚೆಲ್ಲುತ್ತಿತ್ತು. ನೆಚ್ಚಿನ ಪ್ರಾಧ್ಯಾಪಕರಾಗಿ, ಸಾವಿರಾರು ಸಂಖ್ಯೆಯ ಆತ್ಮೀಯ ವಿದ್ಯಾರ್ಥಿಗಳ ಮನ ತುಂಬಿದ್ದರವರು. ನನಗೆ ಪಠ್ಯವಿಷಯದಲ್ಲಿ ಸಂಶಯವೇನಾದರೂ ಉಂಟಾದರೆ, ನನ್ನ ಸಂಶಯ ಪರಿಹಾರಕ್ಕೆ ಆಗ ಅವರು ಗುರುಗಳಾಗುತ್ತಿದ್ದರು, ನಾನು ಶಿಷ್ಯೆಯಾಗುತ್ತಿದ್ದೆ, ಅಂಥ ಸಂದರ್ಭದಲ್ಲೆಲ್ಲಾ ನಾನು, ಇಂಥವರ ನೇರ ಶಿಷ್ಯಳಾಗಲಿಲ್ಲವಲ್ಲ ಎಂದು ಮನಸ್ಸಿನಲ್ಲಿಯೇ ಪರಿತಪಿಸಿದ್ದುಂಟು.

ಎನ್. ಅನಂತರಂಗಾಚಾರ್ಯರದು ತುಂಬ ಶಿಸ್ತುಬದ್ಧ ಅಚ್ಚುಕಟ್ಟು ಜೀವನ. ಅವರು ಸ್ವಯಂಪಾಕಿಗಳು, ಹೋಂ ಸೈನ್ಸ್ ಕಾಲೇಜಿನ ಸಣ್ಣದೊಂದು ಕೊಠಡಿ ಅವರ ವಾಸಸ್ಥಾನವಾಗಿತ್ತು. ಆ ಕೊಠಡಿಗೆ ಯಾರ ಪ್ರವೇಶವೂ ಇರಲಿಲ್ಲ. ಅವರೇ ಆ ಕೊಠಡಿಯ ಕಸಗುಡಿಸಿಕೊಳ್ಳುತ್ತಿದ್ದರು. ಅಡಿಗೆ ಮಾಡಿಕೊಂಡು ಊಟ ಮುಗಿಸಿ ಶಿಸ್ತಾಗಿ ತಮ್ಮ ಶುಚಿರ್ಭೂತ ಉಡುಗೆ, ನಾಮಗಳಿಂದ ತರಗತಿಗಳಿಗೆ ಹಾಜರಾಗುತ್ತಿದ್ದರು.

ಅನಂತರಂಗಾಚಾರ್ಯರ ಕುಟುಂಬ ಹಾಗೂ ಮಕ್ಕಳದು ಮೈಸೂರಿನಲ್ಲಿ ವಾಸ. ಅನಂತರಂಗಾಚಾರ್ಯರು ಮೈಸೂರಿನಿಂದ ಬೆಂಗಳೂರಿಗೆ ಬಂದ ದಿವಸ ಪ್ರಿನ್ಸಿಪಾಲರಾದಿಯಾಗಿ, ಅನೇಕರಿಗೆ ಪುಳಿಯೋಗರೆ, ಸಿಹಿಪೊಂಗಲ್ ಹಾಗೂ ಮೊಸರನ್ನದ ಸಮಾರಾಧನೆಯಾಗಲೇಬೇಕು. ಅಂದಿನ ದಿವಸಗಳಲ್ಲಿ (೧೯೫೫) ಮೂರು ದೊಡ್ಡ ದೊಡ್ಡ ಭರಣಿಗಳನ್ನು, ಅದೂ ಬಸ್ಸಿನಲ್ಲಿ ಹೇಗೆ ಸಾಗಿಸಿಕೊಂಡು ಮೈಸೂರಿನಿಂದ ಬೆಂಗಳೂರಿಗೆ ಬರುತ್ತಿದ್ದರೋ ಇಂದಿಗೂ ನನಗೆ ಆಶ್ಚರ್ಯವಾಗುತ್ತದೆ. ಆ ನಳಪಾಕ, ಅವರು ದೊನ್ನೆಗಳಲ್ಲಿ ಅವುಗಳನ್ನು ವಿತರಿಸುವಾಗ

ಪಡೆಯುತ್ತಿದ್ದ ಆನಂದ ಅವಿಸ್ಮರಣೀಯವಾದುದು. ಅಂದು ತಿಂದ ಪಾಕರಸ ಈಗಲೂ ನನ್ನ ಬಾಯಲ್ಲಿ ನೀರೂರಿಸುತ್ತದೆ.

ಹೀಗೆ ಕೆಲವು ತಿಂಗಳುಗಳಷ್ಟೇ ನಮ್ಮೊಡನಿದ್ದ ಅನಂತರಂಗಾಚಾರ್ಯರ ನೆನಪು ಒಂದು ಗೌರವಯುತ ಮಧುರಸ್ಮೃತಿ. ನಮ್ಮೊಂದಿಗಿದ್ದ ಅವರು, ಆಗಾಗ ಹೇಳುತ್ತಿದ್ದ ಒಂದು ಮಾತು ಮಾತ್ರ ತುಂಬಾ ಮೌಲಿಕವಾದುದು, ಈಗಲೂ ನೆನಪಾಗುತ್ತಲೇ ಇರುತ್ತದೆ. 'ಪ್ರತಿ ದಿವಸ ತಪ್ಪದಂತೆ ಒಂದೊಂದು ಪದ್ಯವನ್ನು, ಅದು ಕಂದವೋ ವೃತ್ತವೋ, ತ್ರಿಪದಿಯೋ ಚೌಪದಿಯೊ ಷಟ್ಪದಿಯೋ ಅಥವಾ ಸಂಸ್ಕೃತ ಶ್ಲೋಕ, ಮುಕ್ತಕಗಳೋ -ಯಾವುದಾದರೂ ಒಂದನ್ನು ಕಂಠಪಾಠ ಮಾಡಿಕೊಳ್ಳಿ, ವರ್ಷಕ್ಕೆ ೩೬೫ ಪದ್ಯಗಳು ನಿರರ್ಗಳವಾಗಿ ನಿಮ್ಮ ನಾಲಗೆಯ ಮೇಲೆ ಶಿಲಾಲಿಪಿಯಂತೆ ನಿಲ್ಲುತ್ತವೆ. ಪಾಠ ಮಾಡಲು, ಉಪನ್ಯಾಸ ಮಾಡಲು, ಭಾಷಣಗಳಿಗೂ ಅವುಗಳಿಂದ ಮೆರಗು ಮೂಡುತ್ತದೆ" ಎಂದು ಹೇಳುತ್ತಿದ್ದರು.

ನಾನು ಕೆಲಸಕ್ಕೆ ಸೇರಿದ ವರುಷವೇ ಅವರು ನಿವೃತ್ತರಾದರು. ಬೀಳ್ಕೊಡಿಗೆ ಸಮಾರಂಭದಲ್ಲಿ ನಾನೇ ಅವರ ಬಗೆಗೆ ಚಿಕ್ಕ-ಚೊಕ್ಕ ಭಾಷಣ ಒಂದನ್ನು ಮಾಡಿದ್ದೆ. ಆ ನೆನಪಿನ ಉಗ್ರಾಣದಿಂದ ದೊರಕಿದ ಸರಕು ಈ ನನ್ನ ಪುಟ್ಟ ಲೇಖನ. ಅವರ ಮರೆಯಲಾರದ ವ್ಯಕ್ತಿತ್ವಕ್ಕೆ ಹೀಗೊಂದು ನಮನ.



# 'ಆಚಾರ್ಯರ್ ನಡೆದುದೆ ಮಾರ್ಗಂ'

ಎಸ್. ಶ್ರೀನಿವಾಸನ್

ಪ್ರಾತಃಸ್ಮರಣೀಯ ಗುರುವರ್ಯ ಡಾ। ಎನ್. ಅನಂತರಂಗಾಚಾರ್ ಎಂದೊಡನೆ ತಿರುಮಕೂಡಲು ನರಸೀಪುರ, ಅಲ್ಲಿನ ಅಧಿದೇವತೆ ನರಸಿಂಹಸ್ವಾಮಿಯ ದೇವಾಲಯ, ಮೈಸೂರಿನ ಸರಸ್ವತೀಪುರಂ ಮುಖ್ಯರಸ್ತೆ, ಬೋಗಾದಿಯ ತೋಟ ಹೊಲ ಗದ್ದೆಗಳು, ಪ್ರಾಚ್ಯವಿದ್ಯಾ ಸಂಶೋಧನಾಲಯ, ಯುವರಾಜ ಮತ್ತು ಮಹಾರಾಜಾ ಕಾಲೇಜು, ವೇದಪಾಠಶಾಲೆ, ಕಾಲಕ್ಷೇಪ, ಮದುವೆ, ಉಪನಯನ, ದೇಹಾಂತ್ಯಕರ್ಮಗಳು, ಪೌರಾಣಿಕ ಹಾಗೂ ಹಳಗನ್ನಡ ಚಂಪೂಶೈಲಿಯ ನಾಟಕಗಳು ಚಾಮುಂಡಿ ಬೆಟ್ಟ, ಬಿಳಿಗಿರಿರಂಗನ ಬೆಟ್ಟಗಳ ಸರಮಾಲೆಯೇ ನನ್ನ ನೆನಪಿನಂಗಳದಲ್ಲಿ ಅಚ್ಚಳಿಯದೆ, ಕಣ್ಣಿಗೆ ಕಟ್ಟಿದಂತೆ ಬಂದು ನಿಲ್ಲುತ್ತವೆ. ಈ ಎಲ್ಲದರಲ್ಲಿಯೂ ಆಚಾರ್ಯರು ತಮ್ಮನ್ನು ನಿರಂತರವಾಗಿ ತೊಡಗಿಸಿಕೊಂಡು ಬದುಕಿದವರು.

೧೯೪೮ರಿಂದ ೧೯೫೩ರವರೆಗೆ ಮೈಸೂರಿನ ಯುವರಾಜ ಮತ್ತು ಮಹಾರಾಜಾ ಕಾಲೇಜಿನಲ್ಲಿ ಇಂಟರ್ ಮೀಡಿಯೇಟ್ ಮತ್ತು ಕನ್ನಡ ಬಿ. ಎ. (ಆನರ್ಸ್ ) ತರಗತಿಗಳಲ್ಲಿ ಅವರ ವಿದ್ಯಾರ್ಥಿಯಾಗಿ ನಾನು ಪಠ್ಯ ಹಾಗೂ ಪಠ್ಯೇತರ ಜ್ಞಾನ ಸಂಪಾದನೆ ಮಾಡಿದ್ದೇನೆ.

ದಷ್ಟಪುಷ್ಟ ದೇಹದಾರ್ಢ್ಯ, ಕಚ್ಚೆಪಂಚೆ, ಮೈಸೂರು ಪೇಟ, ಕೆಲವೊಮ್ಮೆ ಹಾಸನದ ಟೋಪಿ, ಕ್ಲೋಸ್ ಕಾಲರ್ ಕೋಟ್ ಧರಿಸಿ ತ್ರಿನಾಮಧಾರಿಗಳಾಗಿ ಬೈಸಿಕಲ್ ಮೇಲೆ ಸವಾರಿ ಮಾಡುತ್ತಾ ಕಾಲೇಜಿಗೆ ಬರುವ ಅವರ ಠೀವಿ ಕವಿ ಕೇಶವ ಹೇಳುವಂತೆ 'ನಡೆದುದೆ ಮಾರ್ಗಂ' ಎನಿಸುತ್ತಿತ್ತು. ಉಡುಪು ಎಷ್ಟು ಥಳಥಳಿಸುತ್ತಿತ್ತೋ ಪಾಠಪ್ರವಚನಗಳೂ ಅಷ್ಟೇ ಅಸ್ಖಲಿತ, ನಿರರ್ಗಳ ಜಲಪಾತ. ಶಿಸ್ತಿನ ಸಿಪಾಯಿ ಆಚಾರ್ಯರು ಇಂಟರ್ ಮೀಡಿಯೇಟ್‌ನಲ್ಲಿ ಪಂಪರಾಮಾಯಣ ಪಾಠ ಮಾಡುವಾಗ ವೃತ್ತ ಕಂದಗಳನ್ನು ರಾಗವಾಗಿ ಪಠಿಸಿ ಸವಿವರವಾಗಿ ಅರ್ಥೈಸುವ ರೀತಿ ಇದು ಗಮಕಕಲೆಯ ತರಗತಿಯೋ ಎಂಬ ಭ್ರಮೆಯುಂಟಾಗುತ್ತಿತ್ತು. ತದೇಕ

ಚಿತ್ತದಿಂದ ಅವರ ಪ್ರವಚನವನ್ನು ಮನಸಾರೆ ಸವಿದು ಆನಂದಿಸಿ ಕೃತಾರ್ಥನಾಗಿದ್ದೇನೆ. ಅವರ ಬೋಧನಾಕ್ರಮ ಬರೀ ಪರೀಕ್ಷಾದೃಷ್ಟಿಯದು ಮಾತ್ರವಾಗಿರಲಿಲ್ಲ. ಸಾಂದರ್ಭಿಕವಾಗಿ ಲೋಕವ್ಯವಹಾರಗಳ ಪ್ರೋಂಛಾವಣೆಯಿಂದ ಕೂಡಿ ಸಹೃದಯ ಹೃದಯಸಂವಾದವೂ ಆಗಿರುತ್ತಿತ್ತು. ಇಂದಿಗೂ ಅವರ ಅನುಭವಾಮೃತ ನನಗೆ ದಾರಿದೀಪವಾಗಿದೆ. ಭಯವೆಂಬುದರ ಅರಿವೇ ಅವರಿಗಿರಲಿಲ್ಲ. ಪಾಠ ಯಾರಾದರೂ ಮಾಡಬಹುದು. ಇಂಥ ವಿಚಾರಗಳನ್ನು ನಿಮಗೆ ಬೇರಾರೂ ತಿಳಿಸಲಾರರು. ಇದರ ಮಹತ್ವ ನಿಮಗೇ ಮುಂದೆ ಅನುಭವವೇದ್ಯವಾಗುತ್ತದೆ ಎಂದು ಮನವರಿಕೆ ಮಾಡಿಕೊಡುತ್ತಿದ್ದರು.

ಬಿ. ಎ. (ಆನರ್ಸ್) ತರಗತಿಯಲ್ಲಿ ಕೇಶಿರಾಜನ ' ಶಬ್ದಮಣಿ ದರ್ಪಣ' ಎಂಬ ಶುಷ್ಕವೂ ಕಬ್ಬಿಣದ ಕಡಲೆಯೂ ಆದ ವ್ಯಾಕರಣಶಾಸ್ತ್ರವನ್ನು ತಮ್ಮ ರಸಭರಿತವ್ಯಾಖ್ಯಾನದ ಮೂಲಕ ' ಇದು ಇಷ್ಟು ಸಲೀಸೇ!' ಎನಿಸುತ್ತಿದ್ದರು. ಸಹಪಾಠಿಗಳಲ್ಲಿ ಕೆಲವರು ಇದಕ್ಕೆ 'ತರ್ಪಣ' ಬಿಡುವುದೇ ಲೇಸು ಎನ್ನುತ್ತಿದ್ದರೆ ನನಗೆ ಹಾಗೂ ನನ್ನ ಸನ್ಮಿತ್ರ ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರಿಗೆ ನಿಜಕ್ಕೂ 'ದರ್ಪಣ'ವೇ ಆಗಿ ಪರಿಣಮಿಸಿದೆ.

ಯಾವಾಗಲೂ ಹಸನ್ಮುಖರಾಗಿ ಎಲ್ಲರನ್ನೂ ಸಂತೋಷದಿಂದ ಮಾತನಾಡಿಸಿ ಮನೆಗೆ ಹೋದಾಗಲೆಲ್ಲ ಮೃಷ್ಟಾನ್ನದ ಅತಿಥಿಸತ್ಕಾರ ನೀಡುತ್ತಿದ್ದರು. ಒಟ್ಟಿಗೆ ಕುಳಿತು ಆತ್ಮೀಯತೆಯಿಂದ ನೀನೇನು ತಿಂದೀಯೆ! ನೋಡು ನನ್ನ ಜೀರ್ಣಶಕ್ತಿಯನ್ನು, ಎಂದು ಇನ್ನೂ ನಾಲ್ಕು ತುತ್ತು ಹೊಟ್ಟೆಗೆ ಇಳಿಯುವಂತೆ ಮಾಡುತ್ತಿದ್ದರು. ಒಂದು ಸತ್ಯಸಂಗತಿಯನ್ನಂತೂ ಆ ಮಹಾನುಭಾವರ ವಿಚಾರದಲ್ಲಿ ನಾನು ಹೇಳಲೇಬೇಕು. ಮದುವೆಮನೆಯೊಂದರಲ್ಲಿ ತೃಪ್ತಿಯಾಗಿ ಊಟಮಾಡಿದ ಮೇಲೆ ಬಾಜಿ ಕಟ್ಟಿಕೊಂಡು ಆರು ಚಿರೋಟಿ ತಿಂದು ಒಂದು ಚೊಂಬು ಬಾದಾಮಿಹಾಲು ಕುಡಿದು ಸ್ವತಃ ಕುಸ್ತಿಪಟುಗಳಾಗಿದ್ದ ಆಚಾರ್ಯರು ಸರಸರನೆ ಚಾಮುಂಡಿಬೆಟ್ಟವನ್ನು ಹತ್ತಿ ಇಳಿದು ಸಲೀಸಾಗಿ ಮನೆಗೆ ಹೋದ ದೀಪ್ತಜಠರಾಗ್ನಿಮಹಾಶನರು. ಇದನ್ನು ಕಂಡಾಗ ' ವಾತಾಪೀ ಜೀರ್ಣೋ ಭವ' ಎಂಬ ವಾಣಿ ಸುಳ್ಳಲ್ಲ ಎನಿಸಿತು.

ಆಚಾರ್ಯರ ಔದಾರ್ಯ, ಖಂಡತುಂಡ ವಾಗ್ವಿಲಾಸ- ಪೆಜಿರೀವುದೇಂ! ಪೆರರ ಮಾಡುವುದೇಂ! ಪೆರರಿಂದಮಪ್ಪುದೇಂ! ಎಂಬ ಈ ಆತ್ಮಪ್ರತ್ಯಯ ಕೆಲವೊಮ್ಮೆ ಅವರಿಗೆ ತೊಂದರೆ ಮಾಡಿದ್ದು ಮಾತ್ರವಲ್ಲದೆ ವಿರೋಧಿಗಳ ಒಂದು ಗುಂಪೇ ಹುಟ್ಟಿಕೊಂಡಿತು. ಆಗಲೂ ಅವರು 'ಎಲ್ಲಿ ಹೋದರೂ ಬೇಳೆ ಬೇಯುತ್ತದೆ, ಕಂಡವರ ಬೆಂಕಿಯಲ್ಲಿ ಎಂದೂ ನಾನು ನನ್ನ ಬೇಳೆ ಬೇಯಿಸಿಲ್ಲ, ಹತ್ತು ಕಡೆ ಮದುವೆ, ಮುಂಜಿ ಎಂಟು ಕಡೆ ಶ್ರಾದ್ಧ - ಅವರ ಕರ್ಮಗಳನ್ನು ಮಾಡಿಸಿದರೆ ಸಾಕು. ಅಧ್ಯಾಪಕನಿಗಿಂತ ನಾಲ್ಕು ಪಟ್ಟು ಹಣ ಸಂಪಾದಿಸುವ ತಾಖತ್ತು ನನಗಿದೆ, ಅದೂ ಅಲ್ಲದೆ ಲೋಕೋಪಕಾರವೂ ಆದೀತು. ಪುಣ್ಯಪ್ರಾಪ್ತಿಯೂ ಆಗುವುದು. ``ಪುಣ್ಯಸ್ಯ ಫಲಮಿಚ್ಛಂತಿ, ಪುಣ್ಯಂ ನೇಚ್ಛಂತಿ ಮಾನವಾಃ'' ಎಂದು ಕಡ್ಡಿ ಮುರಿದಂತೆ ಖೈಡಾಗಿ ನುಡಿಯುತ್ತಿದ್ದರು. ನನಗಂತೂ ಸಿಕ್ಕಿದಾಗಲೆಲ್ಲ ನೀನು ಮುಂದಕ್ಕೆ ಬರಬೇಕಾದವನು. ನಮ್ಮಂತೆ

ಇಕ್ಕಟ್ಟಿಗೊಳಗಾಗಬೇಡ. ಜೀವನದಲ್ಲಿ ಸಾಮರಸ್ಯ-ಹೊಂದಾಣಿಕೆ ಮಾಡಿಕೊಂಡು ಚೆನ್ನಾಗಿರು. ಎಂದು ಕಿವಿ ಮಾತು ಹೇಳುತ್ತಿದ್ದರು.

ವೇದ, ತರ್ಕ, ಮೀಮಾಂಸೆಗಳ ಲೋಕೋತ್ತರವಾದ ಪ್ರವಚನಗಳನ್ನು ನೀಡಿ ಪುನೀತರಾದ ಚತುರ್ಭಾಷಾಪಂಡಿತ, ಉಭಯವೇದಾಂತ ಪ್ರವರ್ತಕರಾದ ಆಚಾರ್ಯರು ಭಕ್ತಿ, ಕರ್ಮ, ಜ್ಞಾನ ಮಾರ್ಗದಲ್ಲಿ ಪ್ರಧಾನರಾದ ನಮ್ಮಾಳ್ವಾರ್ ವಿಚಾರದಲ್ಲಿ ತುಂಬ ಶ್ರದ್ಧೆಯಿಂದ ಕೆಲಸ ಮಾಡಿದ್ದಾರೆ. `ಸಂಭಾವನೆ'ಯಲ್ಲಿನ ಒಂದು ಕಿರುಲೇಖನವನ್ನು ಇಲ್ಲಿ ಹೆಸರಿಸ ಬಯಸುತ್ತೇನೆ.

ತಾಳೆಗರಿ ಗ್ರಂಥಸಂಗ್ರಹಣೆ, ಗ್ರಂಥಸಂಪಾದನೆ, ಸಂಶೋಧನೆ, ಗದ್ಯಾನುವಾದಗಳು-ಇವುಗಳ ಜೊತೆಗೆ ನಿವೃತ್ತಿಯ ನಂತರ ಪೂರ್ಣಾನುಭವದಿಂದ ಬರೆದ ಬರವಣಿಗೆಗಳು ಮೌಲಿಕವಾಗಿವೆ. ಆಚಾರ್ಯರಿಗೆ ಡಿ. ಲಿಟ್ ಪದವಿ ದೊರಕಿಸಿದ ' ಸಾಹಿತ್ಯಭಾರತೀ' ನಮ್ಮ ಸಾಹಿತ್ಯ ಪ್ರಪಂಚದಲ್ಲಿ 'ನ ಭೂತೋ ನ ಭವಿಷ್ಯತಿ'.



# ಸ್ಫೂರ್ತಿ ಶಿಸ್ತುಗಳ ಸಂಗಮ

ಅಮೃತಾ ವಿ.

ಪ್ರಾಚಾರ್ಯ ಪ್ರೊ. ಎನ್. ಅನಂತರಂಗಾಚಾರ್ ಪಾಂಡಿತ್ಯ ಶಿಸ್ತು ಸ್ಫೂರ್ತಿದಾಯಕ ವಿದ್ವಾಂಸರು. ಎಂದರೆ ಶ್ರೇಷ್ಠ ಅಧ್ಯಾಪಕರಿಗೆ ಇರಬೇಕಾದ ಎಲ್ಲ ಗುಣಗಳನ್ನೂ ಒಳಗೊಂಡಿದ್ದ ಪ್ರಭಾವಶಾಲಿ ಬೋಧಕರು.

ನಾನು ಮೊದಲನೆಯ ಕನ್ನಡ ಆನರ್ಸ್ ತರಗತಿಯ ವಿದ್ಯಾರ್ಥಿನಿಯಾಗಿದ್ದಾಗ ನಮಗೆ "ಸೂಕ್ತಿ ಸುಧಾರ್ಣವ" ಸಂಕಲನ ಗ್ರಂಥವನ್ನು ಬೋಧಿಸುತ್ತಿದ್ದರು. ವಿಷಯದ ಖಚಿತತೆ, ಶಬ್ದ ಶ್ರೀಮಂತಿಕೆ, ಸ್ಪಷ್ಟ ಸರಳತೆಗಳಿಂದ ವಿದ್ಯಾರ್ಥಿಗಳಲ್ಲಿ ಓದುವ ಆಸಕ್ತಿಯನ್ನು ಕೆರಳುಸುತ್ತಿದ್ದರು. ಪಾಠದ ಮಧ್ಯೆ ಉಪಕಥೆಗಳು, ಸಂದರ್ಭೋಚಿತ ಜೀವನಾನುಭವಗಳ ಉಲ್ಲೇಖ ಪರಿಣಾಮಕಾರಿಯಾಗಿ ಮನಸ್ಸಿಗೆ ತಟ್ಟುತ್ತಿದ್ದವು. ಅವರದು ಸಂಪ್ರದಾಯಸ್ಥ ವೇಷಭೂಷಣ. ಹಣೆಯಲ್ಲಿ ಮೂರು ನಾಮ - ಶ್ರೀ ವೈಷ್ಣವರ ಹೆಗ್ಗುರುತು, ತೀಡಿದ ಕಚ್ಚೆಪಂಚೆ, ಕೊರಳು ಮುಚ್ಚುವ ಕೋಟು, ಶಿಸ್ತಿನ ನಡೆ ನುಡಿ. ನಮಗೆ ಅವರ ತರಗತಿ ಇದ್ದುದು ೪ರಿಂದ ೫ ಘಂಟೆಯ ವರೆಗೆ, ಮೊದಲನೆ ದಿನ ೪-೫ ಘಂಟೆಯ ತರಗತಿ ಈ ಪೇಟಧರಿಸಿದ ಪಂಡಿತರು ಏನು ಕೊರೆಯುತ್ತಾರೋ ಎಂದು ಆಕಟಿಸುತ್ತಾ ಎದ್ದು ನಿಂತೆವು. ಅವರು ಉಪಸ್ಥಿತರಾದ ತರುವಾಯ ನಾನು ನನ್ನ ಗೆಳತಿಯರು ಕಣ್ಣಲ್ಲೇ ಮಾತನಾಡಿಕೊಳ್ಳುತ್ತಿದ್ದವು. ನಮ್ಮ ಭಾವನೆ ಅವರಿಗೆ ಇದೆಲ್ಲಾ ಗಮನವಿರುವುದಿಲ್ಲಾ ಎಂದು; ಆದರೆ ಅವರು ಈ ವಿಚಾರಗಳಲ್ಲಿ ನುರಿತವರು. ತಿಳಿಹಾಸ್ಯದ ಮೂಲಕ ನಮ್ಮ ಧೋರಣೆಗೆ ಪೆಟ್ಟುಕೊಟ್ಟು ಜಾಗೃತಗೊಳಿಸಿದರು. ಭಯ ಮಿಶ್ರಿತ ಗೌರವ ಮೂಡಿತು. ಚಂದ್ರೋದಯದ ಅಧ್ಯಾಯದ ಒಂದು ಪದ್ಯವನ್ನು ವಿವರಿಸಿದರು. ಅದು ಚಂಪು ಪದ್ಯ. ಅವರ ಕಂಠ, ಓದುವುದರಲ್ಲಿನ ನಿರರ್ಗಳತೆ, ವಿರಾಮ (Pauses) ನಮ್ಮಲ್ಲಿ ಪರಿವರ್ತನೆಯಾಗಿ ಹೋಯಿತು. ಓದುವಾಗಲೇ ಅರ್ಥವಾಗುವ ರೀತಿ, ವಿವರಿಸುವಲ್ಲಿ ಪದ್ಯದಲ್ಲಿ ಅಡಕವಾಗಿದ್ದ ಸೌಂದರ್ಯ ಮೊದಲಾದವುಗಳನ್ನು ವಿವರಿಸಿ ನಮ್ಮ ಅಚ್ಚುಮೆಚ್ಚಿನ ಅಧ್ಯಾಪಕರಾಗಿ

ಬಿಟ್ಟರು. ಓರಿಯಂಟಲ್ ಲೈಬ್ರರಿಯನ್ನು ಉಪಯೋಗಿಸಿಕೊಳ್ಳುವಂತೆ ಪ್ರೇರಣೆ ನೀಡಿದವರು ಅವರೇ.

ವಿದ್ಯಾರ್ಥಿನಿಯರಿಗೆ ತುಂಬಾ ಧೈರ್ಯ ಮತ್ತು ಉತ್ತೇಜನ ನೀಡುತ್ತಿದ್ದರು. ಹತ್ತು ಹಲವು ರೀತಿಯಲ್ಲಿ ಸ್ಫೂರ್ತಿ ಧೈರ್ಯ ತುಂಬುತ್ತಿದ್ದರು. ಒಮ್ಮೆ, ಚರ್ಚಾಕೂಟದಲ್ಲಿ ವಿದ್ಯಾರ್ಥಿನಿಯರು ಭಾಗವಹಿಸಬೇಕೆಂದು ಉತ್ತೇಜಿಸುತ್ತಿದ್ದರು. ನನ್ನ ಪಕ್ಕದಲ್ಲಿದ್ದ ವಿ. ಅನ್ನಪೂರ್ಣಮ್ಮ "ಸಾರ್ ಭಯವಾಗುತ್ತದೆ, Stage ಮೇಲೆ ಮಾತನಾಡಲು ಹೊರಟರೆ ನಾಲಿಗೆಯೇ ಒಣಗಿ ಹೋಗುತ್ತದೆ" ಎಂದಳು. ಕೂಡಲೇ ಅವರು ``ಓಡುತ್ತಿರುವ Trainನ್ನು ಓಡಿಹೋಗುತ್ತಾ ಹತ್ತುತ್ತೀರಲ್ಲಾ; "ಅದಕ್ಕೆ ಭಯವಿಲ್ಲವೆ ಎಂದು ಕೀಟಲೆಯಾಗಿ ಮರು ಪ್ರಶ್ನಿಸಿದರು. ವಿಷಯವೇನೆಂದರೆ ಅನ್ನಮ್ಮ (ಉ. ಕ. ಸುಬ್ರಾಯಚಾರ್ಯರು ಇಟ್ಟ ಹೆಸರು) ನಂಜನಗೂಡಿನಿಂದ ಮೈಸೂರಿಗೆ ಓಡಾಡುತ್ತಿದ್ದರು. ಆದರೆ ಈ ವಿಚಾರ ನಮ್ಮ ಮೇಷ್ಟ್ರಿಗೆ ಯಾವಾಗ ತಿಳಿದಿತ್ತು, ಅನ್ನಪೂರ್ಣಮ್ಮ ಓಡಿ ರೈಲನ್ನು ಹತ್ತಿದ್ದನ್ನು ಯಾವಾಗ ಗಮನಿಸಿದರು ಎಂಬುದು ತಿಳಿಯದು. ತಿಳಿಯಾದ ಹಾಸ್ಯದೊಂದಿಗೆ, ಸತತ ಅಭ್ಯಾಸಬಲದಿಂದ ಏನೆಲ್ಲ ಸಾಧಿಸಬಹುದು ಎಂದು ವಿವರಿಸಿದರು.

ಅವರ ಆಸಕ್ತಿಯ ಹರಹು ವಿಸ್ತಾರವಾದುದು. ಸಂಸ್ಕೃತದಲ್ಲಿ ಘನವಾದ ಪಾಂಡಿತ್ಯ ಮತ್ತು ಶ್ರೀ ವೈಷ್ಣವಮತದಲ್ಲಿ ಶ್ರದ್ಧೆ; ಸಂಪ್ರದಾಯಶ್ರೀಲರು. ಅವರು ತೋಟ ಗದ್ದೆಯ ಕೃಷಿ, ಗರಡಿಯಲ್ಲಿ ಸಾಮು-ಕುಸ್ತಿ, ನಾಟಕ ಕೊನೆಗೆ ಅಡುಗೆ ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ಪರಿಣತಿ, ಆಸಕ್ತಿಯನ್ನು ಹೊಂದಿದ್ದರು.

ತಿರುಮಕೂಡಲು ನರಸೀಪುರದ ಶ್ರೀ ಗುಂಜಾನೃಸಿಂದ ಸ್ವಾಮಿ ದೇವಾಲಯದ ಉತ್ಸವಗಳಲ್ಲಿ ಇವರದೇ ಮೇಲುಗೈ ಯಜಮಾನಿಕೆ. ಅನ್ನದಾನ ವಿದ್ಯಾದಾನ, ಇವರ ನೈಜ ಗುಣ. ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಡಿ.ಲಿಟ್. ಪದವಿಯನ್ನಿತ್ತು ಗೌರವಿಸಿತು. ಅವರ ಬದುಕಿನ ಕೊನೆಯ ದಿನಗಳಲ್ಲಿ, ಮಧುಮೇಹ ಅವರ ಒಂದು ಕಾಲನ್ನು ಆಹುತಿ ತೆಗೆದುಕೊಂಡಿತು. ಆದರೆ ಆಚಾರ್ಯರ ಓದುವ ಬರೆಯುವ ಆಸಕ್ತಿಯನ್ನು ಅಪಹರಿಸಲು ಸಾಧ್ಯವಾಗಲಿಲ್ಲ. ಕುಳಿತಲ್ಲಿಯೇ ಕೃತಿರಚನೆಯಲ್ಲಿ ತೊಡಗುತ್ತಿದ್ದರು. ಗ್ರಂಥಗಳನ್ನು ರಚಿಸಿದರು. ಒಬ್ಬ ಆದರ್ಶ ಅಧ್ಯಾಪಕರ ನೆನಪು ನನಗೆ ಚೈತನ್ಯದಾಯಕವಾದುದು.



# ಆಚಾರ್ಯರ ಗ್ರಂಥಾಲಯದಲ್ಲಿ

ನಾ. ಗೀತಾಚಾರ್ಯ

ಪುಸ್ತಕಂ ವನಿತಾವಿತ್ತಂ ಪರಹಸ್ತ ಗತಂಗತಂ
ಅಥವಾ ಪುನರಾಯಾತಂ ಜೀರ್ಣಂಭ್ರಷ್ಟಾ ಚ ಸರ್ವಶಃ
ಬದ್ಧ ಪೃಷ್ಠ ಕಟಿಗ್ರೀವ ದತ್ತದೃಷ್ಟಿರಧೋಮುಖಂ
ಕಷ್ಟೇನ ಲಿಖಿತಂ ಶಾಸ್ತ್ರಂ ಯತ್ನೇನ ಪರಿಪಾಲಯಾ
ತೈಲಾದ್ರಕ್ಷೇತ್ ಜಲಾದ್ರಕ್ಷೇತ್ ರಕ್ಷೇತ್ ಶಿಥಿಲ ಬಂಧನಾತ್
ಮೂರ್ಖಹಸ್ತೇ ನ ದಾತವ್ಯ ಏವಂ ವದತಿ ಪುಸ್ತಕಂ

ಈ ಶ್ಲೋಕಗಳನ್ನು ಹೇಳುವಾಗಲೆಲ್ಲ ನನಗೆ ಡಾ|| ಅನಂತರಂಗಾಚಾರ್ ಅವರ ನೆನಪಾಗುತ್ತದೆ. ಏಕೆಂದರೆ ಇವುಗಳನ್ನು ನಾನು ಕಲಿತದ್ದು ಅವರಿಂದಲೇ. ೧೯೮೦ರ ನವೆಂಬರ್ ಅಥವಾ ಡಿಸೆಂಬರ್ ತಿಂಗಳಲ್ಲಿ ೫-೬ ದಿನ ನಾನು ಅವರ ಮನೆಯಲ್ಲಿ ಇದ್ದಾಗ. ಪ್ರತಿಷ್ಠಾನಕ್ಕಾಗಿ ಅವರ ಸಂಗ್ರಹದಲ್ಲಿದ್ದ ಕನ್ನಡ ಸಾಹಿತ್ಯ ಪತ್ರಿಕೆಗಳನ್ನೂ ಕೆಲವು ಪುಸ್ತಕಗಳನ್ನೂ ಪಟ್ಟಿ ಮಾಡಿ ಕಟ್ಟಿಕೊಳ್ಳುವುದಕ್ಕಾಗಿ, ಪ್ರತಿಷ್ಠಾನದ ಸಂಸ್ಥಾಪಕರೂ ಪ್ರಸಿದ್ಧ ಸಾಹಿತಿಗಳೂ ಆಗಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯನವರು ಡಾ|| ಎನ್. ಅನಂತರಂಗಾಚಾರ್ ಅವರಿಗೆ ಪತ್ರ ಬರೆದು ಅವರ ಒಪ್ಪಿಗೆ ಪಡೆದು ಅವರ ಸೂಚಿಸಿದ ದಿನಾಂಕದಲ್ಲೇ 'ಪ್ರತಿಷ್ಠಾನದ ಹುಡುಗ' ನಾಗಿ ಹೋಗಿದ್ದೆ. ಆಗ ಅವರೊಂದಿಗೆ ನಾನು ಕಳೆದ ದಿನಗಳು ನನ್ನ ಜೀವನದ ಮಧುರ ಕ್ಷಣಗಳು. ಆ ಸಂದರ್ಭದಲ್ಲಿ ಅವರು ಹೇಳಿದ ಮಾತುಗಳು, ತಿಳಿಸಿದ ವಿಷಯಗಳು, ಪ್ರಾಚೀನ ಹಸ್ತಪ್ರತಿಗಳ ಮಹತ್ವ, ಸಂಘ ಸಂಸ್ಥೆಗಳ ಸಂಗತಿಗಳು ಇವೆಲ್ಲ ಇಂದಿಗೂ ನನ್ನ ನೆನಪಿನಲ್ಲಿ ಅಚ್ಚಳಿಯದೆ ಇವೆ. ಅವರ ಮಾತಿನ ಮತ್ತು ವ್ಯಕ್ತಿತ್ವ ಪ್ರಭಾವದಿಂದಲೇ ಇಂದು ಅವರ ಬಗೆಗೇ ಒಂದು ಲೇಖನ ಬರೆಯಬಲ್ಲಷ್ಟು ಬೆಳೆದಿದ್ದೇನೆಂದರೆ ಅದು ಅತಿಶಯೋಕ್ತಿಯಾಗದು.

ಆಗ ಅವರು ಹೇಳಿಕೊಟ್ಟ ಈ ಶ್ಲೋಕಗಳೇ ಈಗ ನನ್ನನ್ನು ಸಾಹಿತ್ಯಕ್ಷೇತ್ರದಲ್ಲಿ ಗುರುತಿಸುವಂತೆ ಮಾಡಿವೆ. ತಂದೆ ತಾಯಿಗಳು ಸಂಜೆಯಾಯಿತೆಂದರೆ ಮಕ್ಕಳನ್ನು ಕೂಡಿಸಿಕೊಂಡು

ಬಾಯಿಪಾಠ ಹೇಳಿಕೊಡುವಂತೆ ಈ ಶ್ಲೋಕಗಳನ್ನು ನನಗೆ ಹೇಳಿಕೊಟ್ಟಿದ್ದಾರೆ. ಅವರೊಮ್ಮೆ ಹೇಳುವುದು, ಇನ್ನೊಮ್ಮೆ ನನ್ನಿಂದ ಹೇಳಿಸುವುದು, ಅದಕ್ಕೆ ಅರ್ಥ - ವಿವರಣೆ ಹೇಳಿ ಅದರ ಮಹತ್ವ ತಿಳಿಸುವುದು. ಹೀಗೆ ಈ ಶ್ಲೋಕಗಳನ್ನು ನನಗೆ ಪಾಠ ಮಾಡಿ ಗುರುಗಳೂ ಆಗಿದ್ದಾರೆ. ತಮ್ಮಲ್ಲಿದ್ದ ಸೂಕ್ತಿ ಸುಧಾರ್ಣವ ಹಸ್ತಪ್ರತಿಯನ್ನು ತೋರಿಸಿ ನನ್ನಲ್ಲಿ ಬೆರಗು ಮೂಡಿಸಿದ್ದಾರೆ. ಅತ್ಯಂತ ಸಣ್ಣದಾಗಿ ಕೊರೆದಿರುವ ಓಲೆಗರಿಗ್ರಂಥ ಅದು. ಪ್ರತಿಷ್ಠಾನದ ಸಂಗ್ರಹದಲ್ಲಿ ಅದೇ ಅತಿ ಸಣ್ಣಬರಹದ ಹಸ್ತಪ್ರತಿ. ಇಂದು ನಾನು ಏನಾದರೂ ಹಸ್ತಪ್ರತಿ ಕ್ಷೇತ್ರದಲ್ಲಿ ಅಲ್ಪ ಸ್ವಲ್ಪ ಕೆಲಸ ಮಾಡಿದ್ದರೆ ಅದರ ಹಿಂದೆ ಡಾ|| ಎನ್. ಅನಂತರಂಗಾಚಾರ್ ಅವರು ಉಂಟು ಮಾಡಿದ ಆಸಕ್ತಿ, ಕಲಿಸಿಕೊಟ್ಟ ತಿಳುವಳಿಕೆಯಿದೆ. ಅವರು ಓ. ಆರ್. ಐ. ನಲ್ಲಿದ್ದಾಗ ಹಸ್ತಪ್ರತಿ ಸಂರಕ್ಷಣೆ ಹೇಗೆ ಮಾಡಲಾಗುತ್ತಿತ್ತು, ಓಲೆಗರಿಯ ಅಕ್ಷರಗಳನ್ನು ಗುರುತಿಸುವುದು ಹೇಗೆ, ಓದುವುದು ಹೇಗೆ, ಒಂದು ಗ್ರಂಥವನ್ನು ಸಂಪಾದಿಸುವುದು ಹೇಗೆ ಎಂಬ ಹಲವು ವಿಚಾರಗಳನ್ನು ನನಗೆ ತಿಳಿಸಿಕೊಟ್ಟಿದ್ದಾರೆ.

ಪ್ರತಿದಿನ ಬೆಳಗ್ಗೆ ೯.೦೦ ರಿಂದ ಸಂಜೆ ೭ ಗಂಟೆವರೆಗೆ ಅವರ ಮನೆಯಲ್ಲೇ ಇದ್ದು ಅವರು ತೋರಿಸಿದ ಕಡೆಯಲ್ಲಿರುತ್ತಿದ್ದ ಪುಸ್ತಕಗಳನ್ನೆಲ್ಲ ಹೊರಗೆ ತೆಗೆದು ಧೂಳು ತೆಗೆದು, ಒರೆಸಿ ಪಟ್ಟಿ ಮಾಡಿ ಕಟ್ಟಿಡುವುದು ನನ್ನ ಕೆಲಸವಾಗಿತ್ತು. ಅವರ ಮನೆಯಲ್ಲೇ ಬೆಳಗಿನ ತಿಂಡಿ, ಊಟ, ಸಂಜೆ ಕಾಫಿ ಎಲ್ಲವೂ ಆಗುತ್ತಿತ್ತು. ಮನೆಮಂದಿಯೆಲ್ಲ ಅಷ್ಟೂ ದಿನಗಳವರೆಗೆ ನನ್ನನ್ನು ಮನೆಯವನಾಗಿಯೇ ನೋಡಿಕೊಂಡ ಆ ಪ್ರೀತಿ- ವಾತ್ಸಲ್ಯವನ್ನು ನಾನು ಮರೆಯುವಂತೆಯೇ ಇಲ್ಲ. ಡಾ. ಅನಂತರಂಗಾಚಾರ್ ಅವರಿಗೆ ಕಾಲುಗಳ ತೊಂದರೆ ಇತ್ತು. ಸಕ್ಕರೆ ಕಾಯಿಲೆಯಿಂದ ಗ್ಯಾಂಗರೀನ್ ರೋಗಕ್ಕೆ ತುತ್ತಾಗಿದ್ದೆಂದು ಅವರೇ ತಿಳಿಸಿದ್ದ ನೆನಪು. ನಾನು ನೋಡಿದ ದಿನಗಳಲ್ಲಿ ಅವರ ಉಡುಪು ಬಹಳ ಸರಳ. ಒಂದು ಪಟ್ಟೆಯನ್ನು ಸುತ್ತಿರುತ್ತಿದ್ದರು. ಹೆಗಲಲ್ಲಿ ಶಲ್ಯ ಇದ್ದರೆ ಇತ್ತು ಇಲ್ಲದಿದ್ದರಿಲ್ಲ. ಹೊಂಬಣ್ಣದ ಅವರ ಮೈ ಮಿರಿಮಿರಿ ಮಿಂಚುತ್ತಿತ್ತು. ಮುಖ ಸ್ವಲ್ಪವೂ ಕಳೆಗುಂದಿರಲಿಲ್ಲ. ರೋಗಕ್ಕೆ ಜೀವ ಸವೆದಿರಲಿಲ್ಲ. ಸದಾ ನಗೆಮೊಗದಿಂದ ಕಳೆಕಳೆಯಾಗಿರುತ್ತಿದ್ದರು. ಆ ಇಳಿವಯಸ್ಸಿನಲ್ಲೂ ಅವರ ಜೀವನೋಲ್ಲಾಸ ನನ್ನನ್ನು ಆಕರ್ಷಿಸಿತ್ತು. ಮಂಚದಿಂದ ಕುರ್ಚಿಗೆ ಎತ್ತಿ ಕೂಡಿಸಬೇಕಿತ್ತು. ಕುರ್ಚಿಯನ್ನು ಅವರು ಹೇಳಿದ ಕಡೆ ಎತ್ತಿರಿಸಬೇಕಿತ್ತು. ಅವರ ಮನೆಯಲ್ಲಿದ್ದ ಒಂದು ವಾರದ ಮಟ್ಟಿಗಾದರೂ ನಾನೂ ಅವರ ಸೇವೆ ಮಾಡುವ ಭಾಗ್ಯ ಪಡೆದಿದ್ದೇನೆ.

ಇಂತಹ ಪ್ರಾತಃ ಸ್ಮರಣೀಯರ, ಸಾರ್ಥಕ ಪುರುಷರ ಸೇವೆ ಮಾಡುವುದೇ ಒಂದು ಭಾಗ್ಯವೆಂದು ನಾನು ನಂಬಿದ್ದೇನೆ. ಮುಂದೆ ಎಂ.ವಿ. ಸೀತಾರಾಮಯ್ಯನವರನ್ನೂ ಹೀಗೆ ಪ್ರವಾಸ ಕಾಲದಲ್ಲಿ ಮತ್ತು ಸಭೆ ಸಮಾರಂಭಗಳಲ್ಲಿ ಕುರ್ಚಿಯ ಮೇಲೆ ಕೂಡಿಸಿ ಎತ್ತಿಕೊಂಡೊಯ್ಯುವ ಸೇವೆ ಮಾಡುವ ಅವಕಾಶ ಸಿಕ್ಕಿದೆ. ಈಗಲೂ ಶತಾಯುಷಿಗಳಾಗಿರುವ ನಿಟ್ಟೂರು ಶ್ರೀನಿವಾಸರಾಯರನ್ನು ಸಭೆಗಳ ವೇಳೆಯಲ್ಲಿ ಆಗೊಮ್ಮೆ ಈಗೊಮ್ಮೆ ಕುರ್ಚಿಯಲ್ಲಿ

ಎತ್ತಿಕೊಂಡೊಯ್ಯುವುದುಂಟು. ಅದರಿಂದ ನನಗೂ ಒಂದಷ್ಟು ಅವರ ಸದ್ಗುಣದ ಗಾಳಿ ಬೀಸುತ್ತದೇನೋ ಎಂಬ ಹಂಬಲ. ಅಂಥವರ ಸೆರಗಿನಲ್ಲಿರುವುದೇ ಪುಣ್ಯವೆಂದು ನಾವು ಬಾಲ್ಯದಲ್ಲಿ ಕಲಿತ ಒಂದು ಪಾಠ. ಅಂಥವರೊಂದಿಗೆ ಕಲೆತು ಮಾತಾಡುವುದೋ ಒಂದು ಜೀವನ ಪಾಠ. ಎಷ್ಟು ಜನರಿಗೆ ಇಂಥ ಅವಕಾಶ ಲಭ್ಯವಾಗುತ್ತದೆ ಹೇಳಿ.

ಡಾ || ಎಸ್. ಅನಂತರಂಗಾಚಾರ್ ಅವರು ನನಗೆ ಹೇಳಿದ ಹಲವು ಮಾತುಗಳಲ್ಲಿ ಒಂದಂತೂ ನನ್ನ ನೆನಪಿನಲ್ಲಿ ಇನ್ನೂ ಹಸಿರಾಗಿದೆ. ಸೀತಾರಾಮಯ್ಯನವರು ಸಂಸ್ಥೆಯನ್ನು (ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ) ಕಟ್ಟಿ ಇನ್ನೂ ಒಂದು ವರ್ಷ ಮಾತ್ರ ಆಗಿತ್ತು. ಆ ಸಂಸ್ಥೆಯ ಗೌರವ ಸದಸ್ಯರಾಗಿರಲು ಅನಂತರಂಗಾಚಾರ್ಯರೂ ಒಪ್ಪಿ ಪತ್ರ ಬರೆದಿದ್ದರು. ಸೀತಾರಾಮಯ್ಯನವರು ಆಗಾಗ್ಗೆ ಇವರನ್ನು ಸಂಪರ್ಕಿಸಿ ಸಂಸ್ಥೆಯ ಬಗ್ಗೆ ಚರ್ಚಿಸುತ್ತಿದ್ದರು. ಆ ಹಿನ್ನೆಲೆಯಲ್ಲಿ ಇವರ ಮಾತು ಇತ್ತು. ಸಂಸ್ಥೆಯ ಬಗೆಗೆ ಸೀತಾರಾಮಯ್ಯನವರಿಗಿದ್ದ ಬಹುದೊಡ್ಡ ಕನಸನ್ನು ಮೆಚ್ಚುತ್ತಲೇ ಅದನ್ನೆಲ್ಲ ಅವರು ನಡೆಸಲು ಸಾಧ್ಯವೇ ಎಂದು ಆಶ್ಚರ್ಯವನ್ನು ಅನುಮಾನವನ್ನು ವ್ಯಕ್ತಪಡಿಸಿದ್ದರು. ' ಸಂಸ್ಥೆಗಳನ್ನು ಕಟ್ಟುವಾಗ ಇರುವ ಉತ್ಸಾಹ ಅನಂತರ ಇರುವುದಿಲ್ಲ. ಕಟ್ಟುವುದು ಸುಲಭ ಆದರೆ ಅದನ್ನು ಉಳಿಸಿಕೊಂಡು ಹೋಗುವುದು ಕಷ್ಟ. ಸಂಸ್ಥೆಯನ್ನು ಕಟ್ಟುವವರಿಗೆ ಇರುವ ದೂರದೃಷ್ಟಿ - ನಿಷ್ಠೆ - ಶ್ರದ್ಧೆ - ಬದ್ಧತೆ ಅನಂತರ ಬಂದವರಿಗೆ ಇರುವುದಿಲ್ಲ. ಅವರ ಕಣ್ಮುಂದೆಯೇ ಅವರೇ ಕಟ್ಟಿದ ಸಂಸ್ಥೆ ನೆಲಕಚ್ಚುವುದನ್ನು ನೋಡಬೇಕಾದ ಪರಿಸ್ಥಿತಿ ಬರುತ್ತದೆ. ಸೀತಾರಾಮಯ್ಯನಿಗೆ ಏಕೆ ಬೇಕು ಇದೆಲ್ಲ. ನನ್ನಂತೆ ಮೂಲೆ ಸೇರಿರುವವನು ಅವನು. ಅವನಿಗೆ ಏನು ಮಾಡಲು ಸಾಧ್ಯ! ಎಲ್ಲೂ ಓಡಾಡಲಾಗದ ಯಾರನ್ನೂ ಭೇಟಿ ಮಾಡಲಾಗದ ಸೀತಾರಾಮಯ್ಯನಿಂದ ಈ ಕನಸು ನನಸಾಗುತ್ತದೆಯೇ ಅವನಿಗೆಲ್ಲೋ ಭ್ರಮೆ ಎನ್ನುತ್ತ ಅದಕ್ಕೆ ತಾವೇ ಕಟ್ಟಿದ ಒಂದು ಸಂಸ್ಥೆ ತಮ್ಮ ಕಣ್ಣೆದುರೇ ಮುಳುಗಿ ಹೋದ ಘಟನೆಯನ್ನು ನೆನಪಿಸಿಕೊಂಡರು. ಅವರು ಚೆನ್ನಾಗಿದ್ದಾಗ ಉತ್ಸಾಹದಿಂದ ಓಡಾಡಿ ಕಷ್ಟಪಟ್ಟು ಕಟ್ಟಿದ್ದ, ಅವರ ಮನೆಯ ಸಮೀಪದಲ್ಲೇ ಅದಕ್ಕೊಂದು ನಿವೇಶನವನ್ನು ಸಂಪಾದಿಸಿದ್ದ ಆ ಸಂಸ್ಥೆ ಮುಂದೆ ಬೇರೆಯವರ ಕೈಗೆ ಹೋಗಿ ಭಿನ್ನಾಭಿಪ್ರಾಯ ಇತ್ಯಾದಿಗಳಿಗೆ ಒಳಗಾಗಿ ಹಾಗೇ ಕಣ್ಮರೆಯಾದದ್ದನ್ನು ಹೇಳುವಾಗ ಅವರ ಕಣ್ಣು ಮಂಜಾಗಿದ್ದುದನ್ನು ನಾನು ಗಮನಿಸಿದ್ದೆ. ನನ್ನಂಥವನಿಗೇ ಹೀಗಾದಾಗ ಸೀತಾರಾಮಯ್ಯನ ಪಾಡೇನು, ಹೇಗೆ ಮಾಡುತ್ತಾನೆ ಇದನ್ನೆಲ್ಲ ದೇವರೇ ಬಲ್ಲ' ಎಂದು ಉದ್ಗರಿಸಿದ್ದುದು ಇಂದಿಗೂ ನನ್ನ ಕಿವಿಯಲ್ಲಿ ಗುಂಯ್‌ಗುಡುತ್ತಿದೆ. 'ಅವನಿರುವಾಗಲೇ ಅವನಂತೆಯೇ ಸಂಸ್ಥೆಯನ್ನು ಮುನ್ನಡೆಸಿಕೊಂಡು ಹೋಗುವ ಒಬ್ಬ ಸಮರ್ಥನನ್ನು ಹುಡುಕಿ ಅವನನ್ನು ತಯಾರು ಮಾಡುವಂತೆ ತಿಳಿಸು' ಎಂದು ನನಗೆ ಹೇಳುತ್ತಲೇ ಸೀತಾರಾಮಯ್ಯನವರಿಗೂ ದೂರವಾಣಿ / ಪತ್ರ ಮೂಲಕ ತಿಳಿಸಿದ್ದರು. ಪ್ರಾಚೀನ ಓಲೆಗರಿಗ್ರಂಥಗಳನ್ನು ಸಂರಕ್ಷಿಸುವ ಉದ್ದೇಶ ಅತ್ಯಂತ ಮಹತ್ವದ್ದೆಂದೂ ಆ ಸಂಸ್ಥೆ ಸಾರೋದ್ಧಾರವಾಗಿ ನಡೆಯುವಂತಾಗಲೆಂದೂ ನಿಮ್ಮಂತಹ ಯುವಕರೆಲ್ಲ ಉತ್ಸಾಹದಿಂದ ಅವರೊಂದಿಗಿರಬೇಕೆಂದೂ ಹಾರೈಸಿ ೧೮ ಅಮೂಲ್ಯ

ಪುಸ್ತಕಗಳನ್ನು ೬೭೨ ಮೌಲಿಕ ಪತ್ರಿಕೆಗಳನ್ನು ತಮ್ಮ ಬಳಿಯಿದ್ದ 'ಸೂಕ್ತಿ ಸುಧಾರ್ಣವ'ದ ಅಪರೂಪದ ಓಲೆಗಳ ಗ್ರಂಥವನ್ನು ಪ್ರತಿಷ್ಠಾನಕ್ಕೆ ಕೊಟ್ಟು ಬೀಳ್ಕೊಟ್ಟರು.

ಅವರ ಆ ಹಾರೈಕೆಯ ಪುಣ್ಯ ಉದ್ಘಾಟನೆ ಮಾಡಿದ ರಾಷ್ಟ್ರಕವಿ ಕುವೆಂಪು ಅವರ ಪುಣ್ಯ, ಪೋಷಕರಾಗಿ ನಿಂತಿದ್ದ ಮಾಸ್ತಿ ವೆಂಕಟೇಶ ಅಯ್ಯಂಗಾರರ ಪುಣ್ಯ ಈಗಲೂ ಅಧ್ಯಕ್ಷರಾಗಿಯೇ ಸಂಸ್ಥೆಯನ್ನು ಮುನ್ನಡೆಸುತ್ತಿರುವ ಶತಾಯುಷಿ ನಿಟ್ಟೂರು ಶ್ರೀನಿವಾಸ ರಾಯರ ಪುಣ್ಯ ಇವುಗಳೆಲ್ಲ ಸೇರಿ ಸೀತಾರಾಮಯ್ಯನವರ ತನುಮನ ಧನಗಳ ಸಮರ್ಪಣೆಯಿಂದ ಅವರು ಕಟ್ಟಿದ ಆ ಸಂಸ್ಥೆ ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ ಇಂದು ರಜತ ಮಹೋತ್ಸವವನ್ನು ಆಚರಿಸಿಕೊಳ್ಳುತ್ತಿದೆ. ನಾಡಿನಲ್ಲಿ ಒಂದು ಪ್ರತಿಷ್ಠಿತ ಸಂಶೋಧನ ಸಂಸ್ಥೆ ಎನಿಸಿದೆ. ಪ್ರೊ. ಎಲ್. ಎಸ್. ಶೇಷಗಿರಿರಾವ್, ಶ್ರೀ ಎನ್. ಬಸವಾರಾಧ್ಯರ ನಂತರ, ಇದೀಗ ಡಾ. ಬಿ. ವಿ. ವೆಂಕಟಾಚಲ ಶಾಸ್ತ್ರಿಗಳ ಸಾರಥ್ಯದಲ್ಲಿ ಸಮರ್ಥವಾಗಿ ಮುನ್ನಡೆಯುತ್ತಿದೆ. ಇಪ್ಪತ್ತೈದು ಲಕ್ಷ ರೂಗಳ ವೆಚ್ಚದಲ್ಲಿ ಬೆಂಗಳೂರಿನಲ್ಲೊಂದು ಸ್ವಂತ ಕಟ್ಟಡವನ್ನು ಹೊಂದಿ ಶಾಶ್ವತ ಅಸ್ತಿತ್ವವನ್ನು ಪಡೆದಿದೆ. ಕನ್ನಡ ವಿಶ್ವವಿದ್ಯಾನಿಲಯದಿಂದ ಪಿಎಚ್.ಡಿ. ಅಧ್ಯಯನ ಕೇಂದ್ರವಾಗಿ ಮಾನ್ಯತೆ ಪಡೆದು ವಿಶೇಷವಾಗಿ ಹಸ್ತಪ್ರತಿ ಕ್ಷೇತ್ರದಲ್ಲಿ ತನ್ನ ಹೆಜ್ಜೆಗುರುತುಗಳನ್ನು ಮೂಡಿಸಿದೆ. ಡಾ. ಎನ್. ಅನಂತರಂಗಾಚಾರ್ಯರ ಅನುಮಾನಕ್ಕೆ ಎಡೆಯಿಲ್ಲದಂತೆ ಗಟ್ಟಿಯಾಗಿ ನಿಂತಿದ್ದು ಯಾರು ಬಂದು ಏನೇ ಮಾಡಿದರೂ ಅದು ಸಂಸ್ಥೆಯ ಮುನ್ನಡೆಯ ದ್ಯೋತಕವಾಗಬಲ್ಲದೇ ವಿನಾ ಅಳಿವಿನಂಚಿಗೆ ಹೋಗುವುದಿಲ್ಲವೆಂದೇ ನನ್ನ ನಂಬಿಕೆ. ಬೆಳವಣಿಗೆಯಲ್ಲಿ ಏರುಪೇರಾಗಬಹುದು. ಅವರವರ ಶಕ್ತಿ -ಸಾಮರ್ಥ್ಯಕ್ಕೆ ಅನುಗುಣವಾಗಿ ವಿಸ್ತಾರ - ಸಂಕುಚಿತವಾಗಬಹುದು. ಆದರೆ ಸಂಸ್ಥೆಯ ಅಸ್ತಿತ್ವ ಸ್ಥಿರವಾಗಿರುತ್ತದೆ ಎಂದು ಅನಂತರಂಗಾಚಾರ್ಯರಿಗೆ ಮಾತನ್ನು ಶಿರಸಾವಹಿಸಿ, ಎಂ.ವಿ. ಸೀತಾರಾಮಯ್ಯನವರ ಮಾರ್ಗದರ್ಶನ ಮತ್ತು ಆಶಯಗಳಿಗೆ ಅನುಗುಣವಾಗಿ ಕರ್ತವ್ಯದೋಪಾದಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಗೌರವ ಕಾರ್ಯದರ್ಶಿಯಾಗಿ ಮಾತು ಕೊಡಲಿಚ್ಛಿಸುತ್ತೇನೆ.

ಇನ್ನು ನಾನು ವೈಯಕ್ತಿಕವಾಗಿ ಅವರಿಂದ ಕಲಿತದ್ದು ಬಹಳವಿದೆ. ಅವರು ನನಗೆ ಪ್ರೀತಿಯಿಂದ ಕೊಟ್ಟ, ಲೇಖನಗಳ ಪಡಿಯಚ್ಚುಗಳು 'ಭಾರತೀಯ ತೀರ್ಥ ಕಲಾಕ್ಷೇತ್ರ ಸಂದರ್ಶಿನಿ' ಎಂಬ ಅಮೂಲ್ಯ ಪುಸ್ತಕ ಇಂದಿಗೂ ನನ್ನ ಬಳಿಯಿದೆ. ಸಂಶೋಧನ ಕ್ಷೇತ್ರದಲ್ಲಿ ನನ್ನನ್ನು ತೊಡಗಿಸಿಕೊಳ್ಳಲು ಆಚಾರ್ಯರ ಪ್ರೇರಣೆಯೂ ಇದೆ. ಭಾರತೀಯ ತೀರ್ಥ ಕಲಾಕ್ಷೇತ್ರ ಸಂದರ್ಶಿನಿಯ ಪುಟಪುಟವೂ ನನಗೆ ಅನೇಕ ಮಾಹಿತಿಯನ್ನು ಒದಗಿಸಿದೆ. ಅವರು ಕಲಿಸಿದ ಶ್ಲೋಕಗಳ ಆಶಯವೇ ನನ್ನ ಅಧ್ಯಯನದ ಪ್ರಮುಖ ಕ್ಷೇತ್ರವಾಗಿದೆ. ಅವರು ತಿಳಿಸಿದ ಅನೇಕ ಅನುಭವದ ಮಾತುಗಳು ನನ್ನ ಜೀವನಕ್ಕೆ ಮಾರ್ಗದರ್ಶಿಯಾಗಿವೆ. ಅವರ ನೆನಪು ನನ್ನ ಬದುಕಿನುದ್ದಕ್ಕೂ ಹಾಸು ಹೊಕ್ಕಾಗಿರುತ್ತದೆ.

❒

# ಗ್ರಂಥಸಂಪಾದನೆಗೆ ಕೊಡುಗೆ

ಎಸ್. ಎಸ್. ಅಂಗಡಿ

ಪ್ರಾಚೀನ ಕೃತಿಗಳ ಸಂಪಾದನೆಯು ವ್ಯವಸ್ಥಿತ ಶ್ರಮ, ವಿದ್ವತ್ತು ಮತ್ತು ವಿಚಕ್ಷಣ ಶಕ್ತಿಗಳನ್ನು ನಿರೀಕ್ಷಿಸುವ ಅಧ್ಯಯನ ಕ್ಷೇತ್ರವಾಗಿದೆ. ಪಾಠ ಪರಿಷ್ಕರಣದ ಮೂಲಕ ಕವಿಕೃತಿಯ ಪಾಠವನ್ನು ಅಥವಾ ಒಪ್ಪಿತ ಪಾಠವನ್ನು ನಿಷ್ಕರ್ಷಿಸುವುದಕ್ಕೆ ಸ್ಥೂಲವಾಗಿ ಗ್ರಂಥಸಂಪಾದನೆ ಎಂದು ಕರೆಯುವರು. ಅಧ್ಯಯನಕಾರನು ನಿಷ್ಪುಷ್ಟವಾದ ಪಾಠದ ಆಧಾರದ ಮೇಲೆ ತನ್ನ ಅಧ್ಯಯನದ ಫಲಿತಗಳನ್ನು ನಿಖರವಾಗಿ ನೆರವೇರಿಸಬಹುದು. ಗ್ರಂಥಸಂಪಾದನೆಯಲ್ಲಿ ಹಸ್ತಪ್ರತಿ ಸಂಗ್ರಹ ಮೊದಲನೆಯ ಹಂತವಾದರೆ ಪಾಠಪರಿಷ್ಕರಣವು ಎರಡನೆಯ ಹಂತವಾಗಿದೆ. ಮೊದಲನೆಯ ಹಂತವು ಅಧ್ಯಯನಕಾರನ ಜನಸಂಪರ್ಕ ಮತ್ತು ಉಪಾಯದ ತಿಳಿವಳಿಕೆಯನ್ನೂ ಎರಡನೆಯ ಹಂತವು ಪಾಂಡಿತ್ಯ ಮತ್ತು ಬಹುಶಿಸ್ತಿನ ಜ್ಞಾನವನ್ನೂ ನಿರೀಕ್ಷಿಸುವಂತಹುದು. ಕೆಲವು ವಿದ್ವಾಂಸರು ಹಸ್ತಪ್ರತಿಗಳನ್ನು ಸಂಗ್ರಹಿಸಿ ಸಂಪಾದನೆಯ ಕಾರ್ಯಕ್ಕೆ ತೊಡಗುವರು. ಇನ್ನೂ ಕೆಲವು ವಿದ್ವಾಂಸರು ಸಂಪಾದನೆಯ ಪಾಠ ಮತ್ತು ಪಾಠಾಂತರಗಳನ್ನು ಗಮನದಲ್ಲಿಟ್ಟುಕೊಂಡು ಒಪ್ಪಿತ ಪಾಠಶೋಧಕ್ಕೆ ಒತ್ತು ಕೊಡುವರು. ಎನ್. ಅನಂತರಂಗಾಚಾರ್ ಅವರು ಆ ಎರಡು ಹಂತಗಳಲ್ಲಿ ಗಣನೀಯ ಕೆಲಸ ಮಾಡಿದ ಶ್ರೇಷ್ಠ ಗ್ರಂಥಸಂಪಾದಕರಾಗಿದ್ದಾರೆ.

ಕನ್ನಡ ಪಾಂಡಿತ್ಯಲೋಕಕ್ಕೆ ಎನ್. ಅನಂತರಂಗಾಚಾರ್ ಅವರದು ಚಿರಪರಿಚಿತ ಹೆಸರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ.ಎ. ತರಗತಿಯನ್ನು ಪ್ರಾರಂಭ ಮಾಡಿಸುವುದಕ್ಕೆ ವಿಶೇಷ ಶ್ರಮಪಟ್ಟು ಅದರ ಮೊದಲ ತಂಡದ ವಿದ್ಯಾರ್ಥಿಗಳಲ್ಲಿ ಅವರು ಒಬ್ಬರು. ಶ್ರೀಯುತರು ೧೯೩೦ ರಲ್ಲಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾಗಿ, ಮುಂದೆ ೧೦ ವರ್ಷಗಳ ಕಾಲ ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯದಲ್ಲಿ ಸಂಶೋಧನೆ ಮತ್ತು ಗ್ರಂಥ ಸಂಪಾದನೆಯಲ್ಲಿ ತೊಡಗಿ, ನಂತರ ಮೈಸೂರು ವಿಶ್ವವಿದ್ಯಾಲಯದ ವಿವಿಧ ಮಹಾವಿದ್ಯಾಲಯಗಳಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಶ್ರೀಯುತರು ಅನೇಕ

ಪ್ರಾಚೀನ ಗ್ರಂಥಗಳ ಸಂಪಾದನೆ ಮತ್ತು ಸಂಶೋಧನೆಗಳಿಂದ ಸಾಹಿತ್ಯ ಕ್ಷೇತ್ರದಲ್ಲಿ ಗಣನೀಯವಾದ ಸ್ಥಾನವನ್ನು ಗಳಿಸಿದ್ದಾರೆ.

ಅನಂತರಂಗಾಚಾರ್ ಅವರು ಸಂಪಾದಿಸಿದ ಗ್ರಂಥಗಳಲ್ಲಿ ಪ್ರಾಚೀನ ಕಾವ್ಯಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಅವುಗಳ ಪರಿಷ್ಕರಣದಲ್ಲಿ ಕಾಣುವ ಅವರ ಪಾಂಡಿತ್ಯವು ಎಂತಹವರನ್ನೂ ಬೆರಗುಗೊಳಿಸುವಂತಹುದು. ಅವರು ಸಂಪಾದಿಸಿದ ಆವೃತ್ತಿಗಳು ಆಯಾ ಕವಿಯ ಮೂಲ ಪಾಠಕ್ಕೆ ಹತ್ತಿರವಾದ ಸ್ವರೂಪವನ್ನು ಪಡೆದುಕೊಂಡಿವೆ ಎಂಬುದು ಗಮನಿಸಬೇಕಾದ ಸಂಗತಿ. ಕುಮಾರವ್ಯಾಸನ `ದ್ರೋಣಪರ್ವ', `ಕರ್ಣಪರ್ವ', `ಶಲ್ಯ ಗದಾಪರ್ವ'ಗಳು, ಮಲ್ಲಿಕಾರ್ಜುನನ `ಸೂಕ್ತಿಸುಧಾರ್ಣವಂ', ಮಲ್ಲಕವಿಯ `ಕಾವ್ಯಸಾರಂ', ದುರ್ಗಸಿಂಹನ `ಕರ್ಣಾಟಕ ಪಂಚತಂತ್ರಂ', ನಾಗವರ್ಮನ `ಕರ್ಣಾಟಕ ಕಾದಂಬರಿ', ನಂಜುಂಡ ಕವಿಯ `ಕುಮಾರ ರಾಮಸಾಂಗತ್ಯ ಸಂಗ್ರಹ' ಹಾಗೂ ರುದ್ರಭಟ್ಟನ `ಜಗನ್ನಾಥವಿಜಯ ಸಂಗ್ರಹ' ಈ ಎಲ್ಲ ಗ್ರಂಥಗಳನ್ನೂ ಅತ್ಯಂತ ಪರಿಶ್ರಮದಿಂದ ಸಂಪಾದಿಸಿದ್ದಾರೆ. ಇವುಗಳ ಪರಿಷ್ಕರಣ ರೀತಿಯನ್ನು ಪರಿಶೀಲಿಸಿದರೆ ಅನಂತರಂಗಾಚಾರ್ಯರ ಗ್ರಂಥಸಂಪಾದನೆಯ ಸ್ಥೂಲ ಪರಿಚಯವಾಗುವುದು.

ಈ ಭಾಗದಲ್ಲಿ ಅನಂತರಂಗಾಚಾರ್ಯರ ಕೃತಿ ಸಂಪಾದನೆಯ ವಿಧಾನವನ್ನು ಸ್ಥೂಲವಾಗಿಯಾದರೂ ಪ್ರತ್ಯೇಕವಾಗಿ ನೋಡಬಹುದು. ಮೈಸೂರು ವಿಶ್ವವಿದ್ಯಾಲಯದ ಓರಿಯಂಟಲ್ ಲೈಬ್ರರಿಯು ಕುಮಾರವ್ಯಾಸ ಭಾರತದ ಪರ್ವಗಳ ಸಂಸ್ಕರಣ ಯೋಜನೆಯನ್ನು ಹಾಕಿಕೊಂಡಿತು. ೧೯೧೨ರಿಂದ ೨೨ರ ವರೆಗೆ ಅದಿಪಂಚಕ ಪರ್ವಗಳು ವಿವಿಧ ವಿದ್ವಾಂಸರಿಂದ ಸಂಪಾದಿಸಲ್ಪಟ್ಟವು. ೧೯೩೧ ರಿಂದ ಯುದ್ಧಪಂಚಕ ಪರ್ವಗಳ ಸಂಸ್ಕರಣ ಕಾರ್ಯ ಆರಂಭವಾಯಿತು. ಎನ್. ಅನಂತರಂಗಾಚಾರ್ಯರು ಯುದ್ಧಪಂಚಕದ ದ್ರೋಣಪರ್ವ, (ಪ್ರ.ಮು. ೧೯೩೬, ನಾಲ್ಕನೆಯ ಮು. ೧೯೭೧) ಕರ್ಣಪರ್ವ (ಪ್ರ.ಮು. ೧೯೪೦, ನಾಲ್ಕನೆಯ ಮು. ೧೯೭೦) ಶಲ್ಯ ಮತ್ತು ಗದಾಪರ್ವಗಳನ್ನು (ಪ್ರ.ಮು. ೧೯೪೨, ಮೂರನೆ ಮು. ೧೯೭೦) ಸಂಪಾದಿಸಿದರು.

ದ್ರೋಣಪರ್ವ ಎಂಬುದು ೧೯ ಸಂಧಿಗಳ ಪರ್ವವಾಗಿದೆ. ಸಂಪಾದಕರು ಮೈಸೂರು ಪ್ರಾಚ್ಯಕೋಶಾಗಾರದಲ್ಲಿಯ ೯ ಹಸ್ತಪ್ರತಿಗಳಿಂದ ಈ ಕೃತಿಯನ್ನು ಸಂಪಾದಿಸಿದ್ದಾರೆ. ವಿಶ್ವಾಸಾರ್ಹವಾದ 'ಕ' ಪ್ರತಿಯನ್ನು ಆಧಾರವಾಗಿಟ್ಟುಕೊಂಡು ಪರಿಷ್ಕರಿಸಿದ್ದಾರೆ. ಗ್ರಂಥಪಾತಗಳಿದ್ದರೆ ಮಿಕ್ಕ ಹಸ್ತಪ್ರತಿಗಳಿಂದ ತುಂಬಿದ್ದಾರೆ. ಕೆಲವು ಪ್ರತಿಗಳಲ್ಲಿ ಮಾತ್ರ ದೊರೆಯುವ ಪದ್ಯಗಳಲ್ಲಿ ಸೂಕ್ತವಾಗಿ ಕಂಡುಬಂದುವುಗಳನ್ನು, ಒಂದೆರಡು ಪದ್ಯಗಳಾಗಿದ್ದರೆ ಪುಟದಡಿಯಲ್ಲಿ ಅನೇಕ ಪದ್ಯಗಳಾಗಿದ್ದರೆ ಕೊನೆಯಲ್ಲಿ ಪರಿಶಿಷ್ಟವಾಗಿ ಕೊಟ್ಟಿದ್ದಾರೆ. ಈ ಪರ್ವವನ್ನು ಶೋಧಿಸುವುದಕ್ಕೆ ಉಪಯೋಗಿಸಿಕೊಂಡಿರುವ ಎಲ್ಲ ಮಾತೃಕೆಗಳಲ್ಲಿ ಇರುವ ಮೂಲಗ್ರಂಥಕ್ಕೆ ಸೇರಿಸಲಾರದೆಂದು ತೋರಿಬಂದಿರುವ ಪದ್ಯಗಳನ್ನು ಸಹಿತ ಪರಿಶಿಷ್ಟದ

ಭಾಗವಾಗಿ ಕೊಡಲಾಗಿದೆ. ಕರ್ಣಪರ್ವ ಎಂಬುದು ೨೭ ಸಂಧಿಗಳ ಪರ್ವವಾಗಿದೆ. ಮದ್ರಾಸ್ ಪ್ರಾಚ್ಯಕೋಶಾಗಾರದಲ್ಲಿ ದೊರೆತ ಪ್ರತಿಗಳು ಹಾಗೂ ಆರ್. ರಾಮಾನುಜ ಚಕ್ರವರ್ತಿಗಳು, ಆರ್. ರಾಮರಾಯರು ಹಾಗೂ ಡಿ. ಎಲ್. ನರಸಿಂಹಾಚಾರ್ ಅವರಿಂದ ದೊರೆತ ಹಸ್ತಪ್ರತಿಗಳನ್ನು ಅನುಲಕ್ಷಿಸಿ ಈ ಪರ್ವವನ್ನು ಪರಿಷ್ಕರಿಸಿದ್ದಾರೆ. ಹಿಂದಿನ ಪರ್ವದಂತೆ ಈ ಪರ್ವವನ್ನು ಶೋಧನೆ ಮಾಡುವಾಗ ಎಲ್ಲ ಪ್ರತಿಗಳಲ್ಲಿಯೂ ದೊರೆಯುವ ಪದ್ಯಗಳಲ್ಲಿ ಸೂಕ್ತವಾಗಿ ಕಂಡುಬಂದುವುಗಳನ್ನು ಒಂದೆರಡು ಪದ್ಯಗಳಾಗಿದ್ದರೆ ಪುಟದಡಿಯಲ್ಲಿಯೂ ಅನೇಕ ಪದ್ಯಗಳಾಗಿದ್ದರೆ ಕೊನೆಯಲ್ಲಿಯೂ ಕೊಟ್ಟಿದ್ದಾರೆ.

ಶಲ್ಯಗದಾಪರ್ವ ಶಲ್ಯ ಪರ್ವವು ೩ ಸಂಧಿಗಳನ್ನು, ಗದಾಪರ್ವವು ೧೩ ಸಂಧಿಗಳನ್ನೊಳಗೊಂಡಿವೆ. ಪ್ರಾಚ್ಯಕೋಶಾಗಾರದಲ್ಲಿ ಲಭಿಸಿದ ಹತ್ತು ಓಲೆ ಪ್ರತಿಗಳನ್ನಾಧರಿಸಿ ಈ ಪರ್ವವನ್ನು ಸಂಪಾದಿಸಿದ್ದಾರೆ. `ಕ' ಪ್ರತಿಯ ಪಾಠವು ವಿಶ್ವಾಸಾರ್ಹವಾಗಿರುವುದರಿಂದ ಅದನ್ನೇ ಮುಖ್ಯವಾಗಿಟ್ಟುಕೊಂಡು ಮಿಕ್ಕವುಗಳನ್ನು ಪಾಠದೋಷದ ಸಂದರ್ಭದಲ್ಲಿ ಬಳಸಿಕೊಂಡಿದ್ದಾರೆ. ಆದರೆ ಈ ಮೂರು ಪರ್ವಗಳ ಸಂಪಾದನೆಯಲ್ಲಿ ಸಂಪಾದಕರಿಗೆ ದೊರೆತ ಹಸ್ತಪ್ರತಿಗಳ ಸ್ವರೂಪ, ಸ್ಥಿತಿ, ಕಥಾಸಾರಾಂಶ ಇವುಗಳನ್ನು ಕುರಿತು ಅಭ್ಯಾಸಪೂರ್ಣ ಪ್ರಸ್ತಾವನೆಯಿಲ್ಲದಿರುವುದು ವ್ಯಸನದ ಸಂಗತಿಯಾಗಿದೆ.

ಅನಂತರಂಗಾಚಾರ್ಯರ ನಿಜವಾದ ಗ್ರಂಥಸಂಪಾದನೆಯ ಶಕ್ತಿ ಬೆಳಕಿಗೆ ಬಂದುದು ಮಲ್ಲಿಕಾರ್ಜುನನ `ಸೂಕ್ತಿಸುಧಾರ್ಣವಂ' (ಪ್ರ.ಮು. ೧೯೪೨, ದ್ವಿ.ಮು. ೧೯೭೨) ಮತ್ತು ಮಲ್ಲಕವಿಯ ಕಾವ್ಯಸಾರಂ (೧೯೭೬) ಎಂಬ ಗ್ರಂಥಗಳನ್ನು ಪ್ರಕಟಿಸಿದಾಗ. ಈ ಎರಡು ಗ್ರಂಥಗಳು ಕನ್ನಡದ ಉದ್ದಾಮ ಸಂಕಲನ ಗ್ರಂಥಗಳು. ಇಲ್ಲಿನ ಸಂಪಾದನೆಯ ಕಾರ್ಯ ಉತ್ತಮ ಮಟ್ಟದ್ದಾಗಿದೆ. ಆಧುನಿಕ ಗ್ರಂಥಸಂಪಾದನೆಯ ತತ್ತ್ವಗಳೆಲ್ಲ ಇಲ್ಲಿ ಬಹುಶಾಸ್ತ್ರೀಯವಾಗಿ ಉಪಯುಕ್ತವಾಗಿವೆ. ಇವುಗಳ ಸಂಪಾದನೆಯ ಕಾರ್ಯದಲ್ಲಿ ಸಂಪಾದಕರು ಉಪಲಬ್ಧವಾದ ಎಲ್ಲ ಹಸ್ತಪ್ರತಿಗಳನ್ನೂ ಉಪಯೋಗಿಸಿಕೊಂಡಿದ್ದಾರೆ.

**ಮಲ್ಲಿಕಾರ್ಜುನನ (ಸು. ೧೨೪೫) ಸೂಕ್ತಿಸುಧಾರ್ಣವಂ:** ಇದೊಂದು ಸಂಕಲನ ಗ್ರಂಥ. ಇದರಲ್ಲಿ ಪ್ರಾಚೀನ ಕವಿ ಕಾವ್ಯಗಳ ಸ್ವಾರಸ್ಯಕರವಾದ ಪದ್ಯಗಳನ್ನು ಒಂದೆಡೆ ಕಲೆ ಹಾಕಲಾಗಿದೆ. ಕೃತಿಯ ಮೊದಲಲ್ಲಿರುವ ಮುನ್ನುಡಿ ಮತ್ತು ಪ್ರಸ್ತಾವನೆಯ ಭಾಗದಲ್ಲಿ ಮಲ್ಲಿಕಾರ್ಜುನನ ಕಾಲ, ದೇಶ ಮತ್ತು ವಿಚಾರಗಳನ್ನು ಚರ್ಚಿಸಿದ್ದಾರೆ. ಮಲ್ಲಿಕಾರ್ಜುನನು ಅಜೈನನೆಂದು ಸಕಾರಣವಾಗಿಯೇ ಹೇಳಿದ್ದಾರೆ. ತಾವು ಬಳಸಿಕೊಂಡಿರುವ ಹಸ್ತಪ್ರತಿಗಳ ವಿವರ ಹಾಗೂ ತಾವು ಅನುಸರಿಸಿರುವ ಗ್ರಂಥಸಂಪಾದನೆಯ ವಿಧಾನವನ್ನು ಕುರಿತು ವಿಶದವಾಗಿ ವಿವರಿಸಿದ್ದಾರೆ. ಇದರಲ್ಲಿ ಒಟ್ಟು ಪೀಠಿಕಾ ಪ್ರಕರಣವೂ ಸೇರಿ ಹತ್ತೊಂಬತ್ತು ಆಶ್ವಾಸನಗಳಿವೆ. ಕಾವ್ಯಾಂಗಗಳಾದ ಅಷ್ಟಾದಶವರ್ಣನೆಗಳನ್ನು ಕ್ರಮಬದ್ಧವಾಗಿ ಬೇರೆ ಬೇರೆ ಅಶ್ವಾಸಗಳಾಗಿ ವಿಭಾಗಿಸಿಕೊಂಡು

ಮಹಾಕಾವ್ಯದ ಮಾದರಿಯಲ್ಲಿ ರಚಿಸಲಾಗಿದೆ. ಆದುದರಿಂದ ಈ ಯೋಜನೆಯ ರೀತಿ, ಕ್ರಮ ಎಲ್ಲವೂ ಮಲ್ಲಿಕಾರ್ಜುನನದೇ ಆಗಿದೆ.

ಹತ್ತೊಂಬತ್ತು ಪ್ರಕರಣಗಳಿರುವ ಈ ಕೃತಿ ಸಂಪಾದನೆಗೆ ಐದು ಹಸ್ತಪ್ರತಿಗಳನ್ನು ಬಳಸಿಕೊಳ್ಳಲಾಗಿದೆ. ಸಂಪಾದಕರಲ್ಲಿದ್ದ ಕಾಗದ ಪ್ರತಿಯನ್ನು ಮುಖ್ಯ ಪಾಠವನ್ನಾಗಿಟ್ಟುಕೊಳ್ಳಲಾಗಿದೆ. ಇದರಲ್ಲಿ ಐ ಕಾರಣ ಶುದ್ಧವಾಗಿ ಉಪಯೋಗವಾಗಿರುವುದರಿಂದ ಇದರ ಮೂಲ ಮಾತೃಕೆ ಪ್ರಾಚೀನವಾದುದಾಗಿರಬೇಕೆಂದು ಸಹಜವಾಗಿ ಊಹಿಸಬಹುದು ಹಾಗೂ ಇದರ ಪಾಠವು ಬಹುಮಟ್ಟಿಗೆ ಶುದ್ಧವಾಗಿದೆ. ಇದನ್ನು `ಕ' ಎಂಬ ಸಂಕೇತದಿಂದ ಗುರುತಿಸಿದ್ದಾರೆ. ಪ್ರಾಚ್ಯಕೋಶಾಗಾರದಲ್ಲಿರುವ ಹಾಗೂ ಸಂಪಾದಕರಿಗೆ ಬೇಲೂರು ಪ್ರದೇಶದಲ್ಲಿ ಸಿಕ್ಕ ಓಲೆ ಪ್ರತಿಯ ಪಾಠವೂ ಶುದ್ಧವಾಗಿದೆ. ಇದರಲ್ಲಿಯ ೧೮ನೆಯ ಆಶ್ವಾಸವು ಎರಡು ಭಾಗಗಳಾಗಿ ವಿಂಗಡಿಸಲ್ಪಟ್ಟಿವೆ. ಇದನ್ನು `ಗ' ಎಂಬ ಸಂಕೇತದಿಂದ ಗುರುತಿಸಿದ್ದಾರೆ. `ಕ' ಪ್ರತಿಯಲ್ಲಿ ಲಿಪಿಕಾರನ ದೋಷಗಳಿಂದ ಗ್ರಂಥಪಾತಗಳಾಗಿದ್ದರೆ `ಗ' ಪ್ರತಿಯನ್ನಾಧರಿಸಿ ಪಾಠ ಶುದ್ಧ ಮಾಡಲಾಗಿದೆ. ಶೃಂಗೇರಿ ಶಂಕರ ಮಠದ ಓಲೆಯ ಪ್ರತಿ, ಬೇಲೂರಿನ ಜೋಡಿದಾರ್ ನಾರಾಯಣ ಭಟ್‌ರಿಂದ ದೊರೆತ ಓಲೆ ಪ್ರತಿಗಳು ಅಪೂರ್ಣವಾಗಿರುವುದರಿಂದ ಸಂದೇಹ ಬಂದೆಡೆಗಳಲ್ಲಿ ಅವುಗಳನ್ನು ಬಳಸಿಕೊಳ್ಳಲಾಗಿದೆ. ಕೃತಿಯ ಉದ್ದಕ್ಕೂ ಶೋಧಿತವೂ ಸಂಪಾದಿತವೂ ಆದ ಶುದ್ಧ ಪಾಠವನ್ನು ಕೊಟ್ಟಿದೆ. ಸಂಪಾದಿತ ಪದ್ಯದ ಕೆಳಗೆ ಮಿಕ್ಕ ಪ್ರತಿಗಳ ಪಾಠಾಂತರಗಳನ್ನು ಕೊಡಲಾಗಿದೆ. ಈ ಎಲ್ಲ ಸಾಮಾಗ್ರಿಗಳನ್ನು ಉಪಯೋಗಿಸಿಕೊಂಡು ವಿಶೇಷ ಶ್ರಮ ಪಟ್ಟರೂ ಅರ್ಥವಾಗದ ಸುಮಾರು ೫೦ ಪದ್ಯಗಳಿಗೆ ಪ್ರಶ್ನಾರ್ಥಕ ಚಿಹ್ನೆಯನ್ನು ಹಾಕಿದ್ದಾರೆ. ಇದು ಸಂಪಾದಕರ ವಿದ್ವತ್ತಿನ ಪ್ರಾಮಾಣಿಕತನದ ದ್ಯೋತಕವಾಗಿದೆ. ಮಾತೃಕೆಗಳಿಲ್ಲದ ಸಂಪಾದಕರ ವಿದ್ವತ್ತಿನ ಹೊಸಪಾಠಗಳನ್ನು ಕಂಸದಲ್ಲಿ ಸೇರಿಸಲಾಗಿದೆ. ಈ ಕೃತಿಯ ಪರಿಷ್ಕರಣವು ಬಹು ಎಚ್ಚರಿಕೆಯಿಂದ ನಡೆದಿದೆ. ಇತರ ಸುಭಾಷಿತ ಗ್ರಂಥಗಳಂತೆ ಇದರಲ್ಲಿರುವ ಪದ್ಯಗಳಿಗೆ ಮಾತೃಕೆಗಳಲ್ಲಿ ಆಕರಗಳು ಸೂಚಿತವಾಗಿಲ್ಲವಾದುದರಿಂದ ಅದನ್ನು ಶೋಧಿಸಲಿಕ್ಕೆ ಸಂಪಾದಕರು ತುಂಬ ಕಷ್ಟಪಟ್ಟಿದ್ದಾರೆ. ಅದಕ್ಕಾಗಿ ಮಲ್ಲಿಕಾರ್ಜುನನಿಗಿಂತ ಹಿಂದೆ ಇದ್ದ, ಉಪಲಬ್ಧವಾದ ಕನ್ನಡ ಚಂಪೂ ಗ್ರಂಥಗಳಿಗೂ (ಪ್ರಕಟವಾಗಿರಲಿ ಅಥವಾ ಹಸ್ತಪ್ರತಿಯಲ್ಲಿರಲಿ) ಅಕಾರಾದಿಯನ್ನು ಮಾಡಿಕೊಂಡು ಸೂಕ್ತಿಸುಧಾರ್ಣವದ ಅಕಾರಾದಿಯೊಂದಿಗೆ ಹೋಲಿಸಿ ಶಾಸ್ತ್ರೀಯವಾಗಿ ಸಾಧ್ಯವಾದಷ್ಟು ಪದ್ಯಗಳಿಗೆ ಆಕರಗಳನ್ನು ಕಂಡುಹಿಡಿದು ಅವುಗಳಡಿಯಲ್ಲಿ ಕೊಟ್ಟಿದೆ. ಪರಿಷ್ಕರಣೆಯಲ್ಲಿ ಮೇಲೆ ಸೂಚಿಸಿದ ಹಸ್ತಪ್ರತಿಗಳನ್ನು ಆಕರ ಸಿಕ್ಕಿರುವ ಪದ್ಯಗಳಿಗೆ ಇವುಗಳ ಜೊತೆಗೆ ಆಯಾಗ್ರಂಥಗಳ ಅಚ್ಚಿನ ಅಥವಾ ಹಸ್ತಪ್ರತಿಗಳ ಗ್ರಂಥಗಳನ್ನೂ ಉಪಯೋಗಿಸಿಕೊಂಡಿದ್ದಾರೆ. ಅಚ್ಚಿನ ಪ್ರತಿಗಳಿಂದ ಪಾಠಾಂತರವನ್ನು ಕೊಟ್ಟಿದ್ದರೆ ಅದಕ್ಕೆ (ಅ) ಸಂಕೇತವನ್ನು ಉಪಯೋಗಿಸಲಾಗಿದೆ.

ಗ್ರಂಥಾಂತ್ಯದಲ್ಲಿ ನಾಲ್ಕು ಅನುಬಂಧಗಳಿವೆ. ಮೊದಲನೆಯದು ಸೂಕ್ತಿಸುಧಾರ್ಣವದ ಪದ್ಯಗಳ ಅಕಾರಾದಿ, ಎರಡನೆಯದು ಆಕರಗಳು ಗೊತ್ತಾಗಿರುವ ಸೂಕ್ತಿಸುಧಾರ್ಣವದ ಪದ್ಯಗಳ

ಸೂಚಿ, ಮೂರನೆಯದು ಪ್ರಸ್ತುತ ಪರಿಷ್ಕರಣದಲ್ಲಿ ಉಪಯೋಗಿಸಿದ ಆಕರಗಳ ಪಟ್ಟಿ, ನಾಲ್ಕನೆಯದು ಪರಿಷ್ಕರಣದಲ್ಲಿ ಉಪಯೋಗಿಸಿಕೊಂಡಿರುವ ಅಚ್ಚಿನ ಪ್ರತಿಗಳು ಈ ವಿವರಗಳನ್ನೊಳಗೊಂಡಿವೆ. ಈ ಕಾವ್ಯದಲ್ಲಿ ೨,೨೦೦ ಪದ್ಯಗಳಿವೆ. ಅವುಗಳಲ್ಲಿ ಅರ್ಧಕ್ಕೆ ಮಾತ್ರ ಆಕರಗಳು ಲಭ್ಯವಾಗಿವೆ. ಉಳಿದವಕ್ಕೆ ಆಕರಗಳನ್ನು ಗೊತ್ತುಮಾಡಲು ಸಾಧ್ಯವಾಗಿಲ್ಲ. ಇದನ್ನು ಗಮನಿಸಿದರೆ ಈಗ ನಷ್ಟವಾಗಿರುವ ಕನ್ನಡ ಗ್ರಂಥರಾಶಿಯ ಪರಿಮಾಣವೂ ಕನ್ನಡ ಸಾಹಿತ್ಯದ ವಿಸ್ತಾರವೂ ಲಭ್ಯವಾಗುವುದು. ಅಜ್ಞಾತ ಕವಿಕೃತಿಗಳ ಅಧ್ಯಯನಕ್ಕೆ ಪ್ರಸುತ್ತ ಸಂಕಲನವು ಬಹುಮುಖ್ಯ ಆಕರವಾಗುತ್ತದೆ. ಸಂಪಾದಕರು ಕೊಟ್ಟಿರುವ ಅನುಬಂಧಗಳು ಈ ಕ್ಷೇತ್ರದಲ್ಲಿ ಅಧ್ಯಯನ ಮುಂದುವರೆಸುವವರಿಗೆ ಆಕರಗಣಿಗಳಾಗಿ* ನೆರವಾಗುತ್ತವೆ. ಇದನ್ನು ಗಮನಿಸಿದರೆ ಈ ಪರಿಷ್ಕರಣದ ಮಹತ್ವ ತಿಳಿಯುತ್ತದೆ.

**ಮಲ್ಲಕವಿಯ (ಸು. ೧೫೭೦) ಕಾವ್ಯಸಾರಂ :** ಇದು ಸಹಿತ ಸೂಕ್ತಿಸುಧಾರ್ಣವದಂತೆ ಪ್ರಾಚೀನ ಕವಿಕಾವ್ಯಗಳ ಸಂಕಲನ ಕೃತಿ. ಕನ್ನಡ ಸಾಹಿತ್ಯದಲ್ಲಿ ದೊರೆತ ಮೂರನೆಯ ಸಂಕಲನ ಗ್ರಂಥವಿದು. ಹಿಂದಿನವುಗಳಿಗಿಂತ (ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವ, ಅಭಿನವವಾದಿ ವಿದ್ಯಾನಂದನ `ಕಾವ್ಯಸಾರ', ಪ್ರಸ್ತುತ ಸಂಕಲನ ಕೃತಿಯೂ) ಗುಣ ಮತ್ತು ಗಾತ್ರಗಳಲ್ಲಿ ಮೌಲಿಕವಾಗಿವೆ. ಇದರಲ್ಲಿ ಒಟ್ಟು ೧೫ ಪ್ರಕರಣಗಳಿವೆ. ಪೂರ್ವಕಾವ್ಯಸಂಪ್ರದಾಯದ ಅಷ್ಟಾದಶ ವರ್ಣನೆಗಳು ಹದಿನೈದು ಪ್ರಕರಣಗಳಲ್ಲಿ ಅಡಕವಾಗಿದೆ. ಈ ಸಂಕಲನಕೃತಿಯ ಶಿಲ್ಪವೂ ಸೂಕ್ತಿಸುಧಾರ್ಣವದ ಆಧಾರದ ಮೇಲೆಯೇ ರಚಿತವಾಗಿರುವುದು ನಿರ್ವಿವಾದದ ವಿಷಯವಾಗಿದೆ. ಆಶ್ವಾಸಗಳ ವಿಭಾಗಕ್ರಮ, ಆದಿ ಅಂತ್ಯ ಪದ್ಯಗಳು ಹಾಗೂ ಗ್ರಂಥ ಶರೀರದಲ್ಲಿ ಬರುವ ಎಲ್ಲವೂ ಬಹುಮಟ್ಟಿಗೆ ಒಂದೇ ರೀತಿಯಾಗಿವೆ. ಸಂಪಾದಕರು ಪ್ರಸ್ತಾವನೆಯಲ್ಲಿ ತಮಗೆ ದೊರೆತ ಹಸ್ತಪ್ರತಿಗಳ ಸ್ವರೂಪ, ಕೃತಿಯ ಶಿಲ್ಪ, ಸಂಪಾದನೆಯ ಶಿಲ್ಪವನ್ನು ಕುರಿತು ಪ್ರಸ್ತಾವನೆಯಲ್ಲಿ ವಿಶದೀಕರಿಸಿದ್ದಾರೆ.

ಈ ಗ್ರಂಥ ಹಸ್ತಪ್ರತಿಗಳ ನೆರವಿನಿಂದ ಮೊದಲ ಬಾರಿಗೆ ಪ್ರಕಟವಾಗಿ ಕನ್ನಡಿಗರಿಗೆ ದೊರೆಯುವಂತಾಗಿದೆ. ಇದು ಅನಂತರಂಗಾಚಾರ್ಯರ ದೊಡ್ಡ ಸಾಧನೆ. ಈ ಕೃತಿಯನ್ನು ಸಂಪಾದಿಸುವಾಗ ಸಂಪಾದಕರು ತಮ್ಮ ಹಿಂದಿನ ಸಂಕಲನಕೃತಿಯನ್ನೇ ಮಾದರಿಯಾಗಿರಿಸಿಕೊಂಡಿದ್ದಾರೆ.

ಗ್ರಂಥವನ್ನು ಸಂಪಾದಿಸಲು ಮೈಸೂರಿನ ಪ್ರಾಚ್ಯಸಂಶೋಧನಾಲಯದ ಎರಡು ಸಂಪುಟಗಳುಳ್ಳ ಕಾಗದಪ್ರತಿ, ಜೋಡಿದಾರ ನಾರಾಯಣ ಭಟ್‌ರಿಂದ ದೊರೆತ ಓಲೆಯ ಪ್ರತಿ ಹಾಗೂ ಸಂಪಾದಕರಲ್ಲಿದ್ದ ಕಾಗದಪ್ರತಿ ಹೀಗೆ ಒಟ್ಟು ಮೂರು ಕೃತಿಗಳನ್ನು ಬಳಸಿದೆ. ಸಂಪಾದಕರಲ್ಲಿದ್ದ ಕಾಗದಪ್ರತಿಯಲ್ಲಿ ಎಲ್ಲ ಹದಿನೈದು ಆಶ್ವಾಸಗಳಿದ್ದು ಪಾಠವು ಸಾಧುವಾಗಿರುವುದರಿಂದ ಪ್ರಸ್ತುತ ಸಂಪಾದನೆಯು ಸಂಪಾದಕರಲ್ಲಿದ್ದ ಹಸ್ತಪ್ರತಿಯ ಪಾಠವನ್ನು

ಅವಲಂಬಿಸಿದೆ. ಅಲ್ಲಲ್ಲಿ ಗ್ರಂಥಪಾತಗಳಿದ್ದರೆ ಮಿಕ್ಕ ಪಾಠಗಳ ನೆರವನ್ನು ಪಡೆದುಕೊಳ್ಳಲಾಗಿದೆ. ಕೆಲವು ಅಚ್ಚಿನಪ್ರತಿಗಳ ನೆರವಿನಿಂದ ಪಾಠವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾರೆ. ಆಗ ಆ ಕೃತಿಯ ಸಂಕೇತವನ್ನು ಕೊಟ್ಟಿದ್ದಾರೆ. ಉದಾ: ಸೂಕ್ತಿಸುಧಾರ್ಣವದ ನೆರವಿನಿಂದ ಪಾಠ ತಿದ್ದಿದರೆ (ಸೂ) ಎಂದು ಸಂಕೇತ ಕೊಟ್ಟಿದ್ದಾರೆ. ಅಲ್ಲಲ್ಲಿ ಅರ್ಥವಾಗದ ಪದ್ಯಗಳಿಗೆ ಪ್ರಶ್ನಾರ್ಥಕ ಚಿಹ್ನೆ ಹಾಕಲಾಗಿದೆ, ಇದು ಸಂಪಾದಕರ ಪ್ರಾಮಾಣಿಕತೆಯ ಕುರುಹು.

ಗ್ರಂಥಾಂತ್ಯದಲ್ಲಿ ವಾಚಕರ ಸೌಕರ್ಯದ ದೃಷ್ಟಿಯಿಂದ ಹನ್ನೆರಡು ಅನುಬಂಧಗಳನ್ನು ಸಿದ್ಧಪಡಿಸಿದ್ದಾರೆ ಕಾವ್ಯಸಾರದ ಪದ್ಯಗಳ ಆಕಾರಾದಿಸೂಚಿ, ಕಾವ್ಯಸಾರದಲ್ಲಿ ಆಕರಗಳು ಸಿಕ್ಕದಿರುವ ಪದ್ಯಗಳ ಅಕಾರಾದಿ, ಕಾವ್ಯಸಾರದಲ್ಲಿ ಆಕರಗಳ ಪಟ್ಟಿ, ಈ ಸಂಪಾದನೆಯಲ್ಲಿ ಉಪಯೋಗಿಸಿರುವ ಅಚ್ಚಿನ ಪುಸ್ತಕಗಳು, ಸೂಕ್ತಿಸುಧಾರ್ಣವ ಮತ್ತು ಕಾವ್ಯಸಾರಗಳ ತೌಲನಿಕ ಪಟ್ಟಿ, ಈ ಸಂಪಾದನೆಯಲ್ಲಿ ಉಪಯೋಗಿಸಿರುವ ಅಚ್ಚಿನ ಪುಸ್ತಕಗಳು ಸೂಕ್ತಿಸುಧಾರ್ಣವ ಮತ್ತು ಕಾವ್ಯಸಾರಗಳ ತೌಲನಿಕ ಪಟ್ಟಿ, ಕಾವ್ಯಸಾರದಲ್ಲಿ ಅನುವಾದವಾಗದ ಸೂಕ್ತಿಸುಧಾರ್ಣವದ ಆಕರ ಸಿಕ್ಕಿದ ಪದ್ಯಗಳ ಅಕಾರಾದಿ, ಕಾವ್ಯಾವಲೋಕನ, ಭಾಷಾಭೂಷಣ, ಶಬ್ದಮಣಿದರ್ಪಣ ಹಾಗೂ ಕವಿರಾಜಮಾರ್ಗದ ಉದಾಹರಣ ಪದ್ಯಗಳಲ್ಲಿ ಆಕರ ಸಿಕ್ಕಿದ ಪದ್ಯಗಳ ಅಕಾರಾದಿ, ಈ ಕೃತಿಯಲ್ಲಿ ಉಕ್ತವಾದ ೩,೬೦೦ ಪದ್ಯಗಳಲ್ಲಿ ಎಷ್ಟೋ ಪದ್ಯಗಳ ಆಕರಗಳು ದೊರೆಯದಿರುವುದು. ಇದನ್ನು ಗಮನಿಸಿದರೆ ಕನ್ನಡದಲ್ಲಿ ಎಷ್ಟೋ ಹಳೆಯ ಗ್ರಂಥಗಳು ಕಣ್ಮರೆಯಾಗಿವೆ ಎಂಬ ಸಂಗತಿ ಮನವರಿಕೆಯಾಗದಿರದು. ಹಿಂದಣ ಅಜ್ಞಾತವಾಗಿರುವ ಕವಿಕಾವ್ಯಗಳ ಶೋಧನೆಗೆ ಇಂತಹ ಅನುಬಂಧದ ಅಗತ್ಯವಿತ್ತು. ಅದನ್ನು ತುಂಬ ಶ್ರಮವಹಿಸಿ ಅನಂತರಂಗಾಚಾರ್ಯರು ಈ ಪುಸ್ತಕದ ಮೂಲಕ ಒದಗಿಸಿಕೊಟ್ಟಿದ್ದಾರೆ.

ಕನ್ನಡ ಸಾಹಿತ್ಯದ ಅಧ್ಯಯನದ ದೃಷ್ಟಿಯಿಂದ ಪರಿಶೀಲಿಸಿದರೆ ಈ ಎರಡೂ ಸಂಕಲನ ಗ್ರಂಥಗಳು ತುಂಬ ಪ್ರಯೋಜನಕರವಾಗಿವೆ. ಕೆಲವು ಅಧ್ಯಯನಕಾರರಿಗೆ ಅಥವಾ ಆಸಕ್ತರಿಗೆ ಇಡೀ ಕಾವ್ಯವನ್ನು ಓದಿ ರಸಾನಂದ ಅನುಭವಿಸಲು ಸಾಧ್ಯವಾಗುವುದಿಲ್ಲ. ಪ್ರಾಚೀನ ಕಾವ್ಯಗಳ ರಸವತ್ತಾದ ಹಾಗೂ ಸಾಹಿತ್ಯಿಕವಾಗಿ ಮಹತ್ವ ಪಡೆದ ಭಾಗಗಳನ್ನು ಅಡಕಗೊಳಿಸಿದ ಇಂತಹ ಸಂಕಲನಗಳನ್ನು ಅಧ್ಯಯನ ಮಾಡುವುದರಿಂದ ರಸಾನಂದದ ಜೊತೆಗೆ ಕೆಲವು ಅಜ್ಞಾತ ಕವಿಗಳ ಇತಿವೃತ್ತವನ್ನು ಶೋಧಿಸಲು ಅನುಕೂಲವಾಗುತ್ತದೆ. ಅಲ್ಲದೆ ಉಪಲಬ್ಧವಾದ ಗ್ರಂಥಗಳ ಉತ್ತಮ ಪದ್ಯಗಳನ್ನು ಸೂಕ್ತಿಸುಧಾರ್ಣವ ಮತ್ತು ಕಾವ್ಯಸಾರಗಳು ಉಳಿಸಿಕೊಟ್ಟಿವೆ ಎಂಬುದು ಅಷ್ಟೇ ಸಮಾಧಾನದ ಸಂಗತಿಯಾಗಿದೆ.

**ದುರ್ಗಸಿಂಹನ (ಸು. ೧೧೦೦) ಕರ್ಣಾಟಕ ಪಂಚತಂತ್ರಂ :** ಇದು ನೀತಿಬೋಧಕ ಕಾವ್ಯ. ಇದಕ್ಕೆ ಮೂಲ ಸಂಸ್ಕೃತದ ವಸುಭಾಗಭಟ್ಟನ ಪಂಚತಂತ್ರ. ಇದನ್ನು ಕನ್ನಡದಲ್ಲಿ `ಪೊಸತಾಗಿರೆ ವಿರಚಿಸುವೆಂ' ಎಂದು ದುರ್ಗಸಿಂಹನು ಹೇಳಿದ್ದಾನೆ. ಇದು ಅನುವಾದ ಕೃತಿಯಾದರೂ ದುರ್ಗಸಿಂಹನ ಸ್ವತಂತ್ರಶೀಲತೆ ಐದೂ ಪ್ರಕರಣಗಳಲ್ಲಿಯೂ ಅಡಗಿದೆ. ಕರ್ಣಾಟಕ ಪಂಚತಂತ್ರವು

ಶ್ರೇಷ್ಠ ಕಾವ್ಯ ಅಲ್ಲವಿದ್ದರೂ ಹೊಸಧೋರಣೆಯನ್ನು ಅಭಿವ್ಯಕ್ತಿಸಿದ ಕಾವ್ಯವಾಗಿದೆ. ಪಂಚತಂತ್ರವು ಚಂಪೂವಿನಲ್ಲಿದೆ, ಆದರೂ ಪದ್ಯಗಳಿಗಿಂತ ಗದ್ಯ ಭಾಗವೇ ಹೆಚ್ಚು.

ಈ ಕಾವ್ಯವನ್ನು ೧೮೯೮ ರಲ್ಲಿ ಎಂ. ಎ. ರಾಮಾನುಜ ಅಯ್ಯಂಗಾರ್ ಮತ್ತು ಎಸ್. ಜಿ. ನರಸಿಂಹಾಚಾರ್ ಅವರು ಜೊತೆ ಸೇರಿ ಮೂರು ಹಸ್ತಪ್ರತಿಗಳ ನೆರವಿನಿಂದ ಕರ್ಣಾಟಕ ಕಾವ್ಯಕಲಾನಿಧಿಯ ಮಾಲೆಯಲ್ಲಿ ಪ್ರಕಟಿಸಿದ್ದಾರೆ. ಆ ಸಂಪಾದಕರು ಕೊಟ್ಟಿರುವ ಪಾಠ ಸುಖಕರವಾಗಿಲ್ಲ. ಪದಚ್ಛೇದದೋಷ ಮತ್ತು ಛಂದೋದೋಷಗಳು ಹೇರಳವಾಗಿವೆ.* ಇದರಿಂದ ಕರ್ಣಾಟಕ ಪಂಚತಂತ್ರವನ್ನು ಇನ್ನೊಮ್ಮೆ ಪರಿಷ್ಕರಿಸಿ ಪ್ರಕಟಿಸುವ ಅಗತ್ಯವಿತ್ತು. ಈ ಗುರುತರವಾದ ಕೆಲಸವನ್ನು ಎನ್. ಅನಂತರಂಗಾಚಾರ್ ಅವರು ನೆರವೇರಿಸಿದರು (೧೯೭೩). ಪ್ರಸ್ತುತ ಕೃತಿ ಸಂಪಾದನೆಗೆ ಮುದ್ರಿತ ಪ್ರತಿ (ರಾಮಾನುಜ ಅಯ್ಯಂಗಾರ್ ಮತ್ತು ನರಸಿಂಹಾಚಾರ್‌ರ ಪರಿಷ್ಕರಣ) ಹಾಗೂ ಮೈಸೂರು ಗ್ರಂಥಭಂಡಾರದಲ್ಲಿ ದೊರೆತ ಹಸ್ತಪ್ರತಿಗಳನ್ನು ಬಳಸಿಕೊಳ್ಳಲಾಗಿದೆ.

ಪೀಠಿಕಾ ಪ್ರಕರಣವನ್ನು ಹೊರತುಪಡಿಸಿ ಐದು ಪ್ರಕರಣಗಳ ಈ ಕೃತಿಯ ಸಂಪಾದನೆಯಲ್ಲಿ ಸಂಪಾದಕರು ತಮ್ಮ ಹಿಂದಣ ಕೃತಿಗಳ ಮಾದರಿಯನ್ನೇ ಅನುಸರಿಸಿದ್ದಾರೆ. ಮೊದಲನೆಯ ಮುದ್ರಣದ ಪಾಠಾಂತರಗಳನ್ನು ಹಾಗೆಯೇ ಉಳಿಸಿಕೊಂಡಿದ್ದಾರೆ. ಹಾಗೂ ಮೊದಲನೆಯ ಮುದ್ರಣದ ಕೆಲವು ಪಾಠದೋಷಗಳನ್ನು ಮಿಕ್ಕ ಹಸ್ತಪ್ರತಿಗಳ ಪಾಠಗಳಿಂದ ಹಾಗೂ ತಮ್ಮ ಪಾಂಡಿತ್ಯಬಲದಿಂದ ನಿಷ್ಕರ್ಷಿಸಿ ಒಪ್ಪಿತ ಪಾಠವನ್ನು ಕೊಡಲು ಯತ್ನಿಸಿದ್ದಾರೆ. ಪಾಠಾಂತರಗಳನ್ನು ಅಡಿಯಲ್ಲಿ ಸೂಚಿಸಿದ್ದಾರೆ. ವಿರಳವಾಗಿ ಅಲ್ಲಲ್ಲಿ ಹಸ್ತಪ್ರತಿಗಳಲ್ಲಾದ ಲೋಪ, ಪ್ರಕ್ಷೇಪ, ವ್ಯತ್ಯಾಸ, ಹಾಗೂ ಪದರಚನೆಯಲ್ಲಾದ ಛಂದೋದೋಷಗಳನ್ನು ಗುರುತಿಸಿ ಸರಿಪಡಿಸಿದ್ದಾರೆ. ಪ್ರಸ್ತುತ ಪಾಠವು ಅರ್ಥ ಮತ್ತು ಅಧ್ಯಯನದ ದೃಷ್ಟಿಯಿಂದ ಸುಲಲಿತವಾಗಿದೆ. ಗ್ರಂಥಾರಂಭದಲ್ಲಿ ಅಭ್ಯಾಸಪೂರ್ಣ ಪ್ರಸ್ತಾವನೆಯಿದೆ. ಭಾರತದಲ್ಲಿ ಕಥಾಸಾಹಿತ್ಯ, ಪಂಚತಂತ್ರ ಮತ್ತು ಹಿತೋಪದೇಶ, ಭಾರತದಲ್ಲಿ ಪ್ರಚಾರವಾಗಿರುವ ಪಂಚತಂತ್ರಗಳ ಸ್ವರೂಪ, ಪ್ರಸ್ತುತ ಪಂಚತಂತ್ರದ ಕಥಾಸಾರಾಂಶ ಈ ಎಲ್ಲ ವಿವರಗಳು ತುಂಬ ಉಪಯುಕ್ತವಾಗಿವೆ. ಗ್ರಂಥಾಂತ್ಯದಲ್ಲಿ ಒಟ್ಟು ೧೨ ಅನುಬಂಧಗಳಿವೆ. ದುರ್ಗಸಿಂಹನ ಪಂಚತಂತ್ರದಲ್ಲಿ ಉಕ್ತವಾಗಿರುವ ಕನ್ನಡ ಪದ್ಯಗಳ, ಸಂಸ್ಕೃತ ಶ್ಲೋಕಗಳ, ಸಂಸ್ಕೃತ ಮತ್ತು ಕನ್ನಡ ಸುಭಾಷಿತಗಳ ಅಕಾರಾದಿಯಿದೆ. ಆ ಕಾವ್ಯದಲ್ಲಿ ಉಕ್ತವಾಗಿರುವ ಉಪಮಾನಗಳ ಪಶುಪಕ್ಷಿಗಳ ಹಾಗೂ ಋಷಿಗಳ ಹೆಸರುಗಳನ್ನೂ ಕೊಟ್ಟಿದ್ದಾರೆ. ಕಾವ್ಯದಲ್ಲಿ ಉಕ್ತವಾಗಿರುವ ಕೆಲವು ಶಾಸ್ತ್ರೀಯ ಶಬ್ದಗಳ ವಿವರಣೆಯಿದೆ ಹಾಗೂ ಪಂಚತಂತ್ರಾವಲೋಕನಂ ಭಾಗವು ಪಂಚತಂತ್ರದ ಪ್ರತಿಯೊಂದು ಪ್ರಕರಣಗಳ ಶಬ್ದಾರ್ಥಕ್ಕೆ ಸಂಬಂಧಿಸಿದೆ. ಮಾಹಿತಿಭರಿತವಾದ ಈ ಅನುಬಂಧಗಳು ಗ್ರಂಥಾಧ್ಯಯನಕ್ಕೆ ತುಂಬ ನೆರವಾಗುತ್ತವೆ.

**ನಾಗವರ್ಮನ (ಸು. ೯೯೦) ಕರ್ಣಾಟಕ ಕಾದಂಬರಿ :** ಇದು ಬಾಣನ ಸಂಸ್ಕೃತ ಕಾದಂಬರಿಯ ಕನ್ನಡ ಪರಿವರ್ತನ. ಸಂಸ್ಕೃತದಲ್ಲಿನ ಉತ್ತಮ ಸಾಹಿತ್ಯಗ್ರಂಥವೊಂದನ್ನು

ಕನ್ನಡಿಸಬೇಕು ಎಂಬ ಉದ್ದೇಶದಿಂದ ನಾಗವರ್ಮನು ಈ ಅನುವಾದವನ್ನು ಮಾಡಿದ್ದಾನೆ. ಈ ದಾರಿಯಲ್ಲಿ ನಮಗೆ ತಿಳಿದಮಟ್ಟಿಗೆ ಇವನೇ ಮೊದಲಿಗನು. ಇದು ಅನುವಾದವಾದರೂ ಕಥಾಭಾಗದ ಅನೇಕ ಸನ್ನಿವೇಶಗಳಲ್ಲಿ ನಾಗವರ್ಮನ ಪ್ರತಿಭೆ ಅಭಿವ್ಯಕ್ತವಾಗಿದೆ. ಕರ್ಣಾಟಕ ಕಾದಂಬರಿಯನ್ನು ಕಳೆದ ಶತಮಾನದ ಅಂತ್ಯದಲ್ಲಿ ಬಿ. ಮಲ್ಲಪ್ಪ ಅವರು ಮೊದಲ ಬಾರಿಗೆ ಸಂಪಾದಿಸಿ ಪ್ರಕಟಿಸಿದರು. ಈ ಕೃತಿಯ ಶುದ್ಧಪಾಠವನ್ನು ಗೊತ್ತುಮಾಡಲು ಅವಶ್ಯಕವಾದ ಹಸ್ತಪ್ರತಿಗಳು ದೊರೆಯದಿರುವುದರಿಂದ ಮಲ್ಲಪ್ಪನವರ ಪಾಠವನ್ನು ಅನುಸರಿಸಿ ಅಲ್ಪಸ್ವಲ್ಪ ತಿದ್ದುಪಡಿ ಮಾಡುವುದರ ಮೂಲಕ ಟಿ. ಎಸ್. ವೆಂಕಣ್ಣಯ್ಯನವರು `ಕರ್ಣಾಟಕ ಕಾದಂಬರೀ ಸಂಗ್ರಹ' ಎಂಬ ಸಂಗ್ರಹ ಆವೃತ್ತಿಯನ್ನು ಪ್ರಕಟಿಸಿದರು (೧೯೩೩).

ಇದಾದ ನಂತರ ಮೂರನೆಯ ಶಾಸ್ತ್ರೀಯ ಸಂಪಾದನೆ ಅನಂತರಂಗಾಚಾರ್ ಅವರದು (೧೯೭೩). ಇವರಿಗೂ ಸಹ ಹಸ್ತಪ್ರತಿಗಳ ಅಲಭ್ಯದಿಂದಾಗಿ ಬಿ. ಮಲ್ಲಪ್ಪನವರ ಪಾಠವೇ ಮುಖ್ಯವಾಗಿದೆ. ಅದನ್ನು ಕೇಂದ್ರವಾಗಿಟ್ಟುಕೊಂಡು ಕೆಲವೆಡೆಗಳಲ್ಲಿ ಸಂಸ್ಕೃತ ಗ್ರಂಥವನ್ನು ನೋಡಿ. ಕೆಲವೆಡೆಗಳಲ್ಲಿ ಓರಿಯಂಟಲ್ ಲೈಬ್ರರಿಯಲ್ಲಿರುವ ಹಸ್ತಪ್ರತಿಯನ್ನು ನೋಡಿ ಮತ್ತೆ ಕೆಲವೆಡೆಗಳಲ್ಲಿ ಮಲ್ಲಪ್ಪನವರ ಆವೃತ್ತಿಯಲ್ಲಿನ ಪಾಠಾಂತರಗಳ ಸಹಾಯದಿಂದ ತಮ್ಮ ಸಂಪಾದನೆಯಲ್ಲಿ ಅಲ್ಲಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿದ್ದಾರೆ. ಕಾದಂಬರಿಯು ಹನ್ನೊಂದನೆಯ ಶತಮಾನದಲ್ಲಿ ರಚಿತವಾಗಿರುವುದರಿಂದ ಱಟಿ, ಕುಳಗಳನ್ನು ಹಾಗೂ ಕೆಲವು ಹಳಗನ್ನಡದ ಪ್ರಯೋಗಗಳನ್ನು ಸೂಕ್ತಸ್ಥಾನದಲ್ಲಿ ಉಪಯೋಗಿಸಿ ಹಿಂದಣ ಪರಿಷ್ಕರಣದ ಅಚ್ಚಿನ ತಪ್ಪುಗಳನ್ನು ಸರಿಪಡಿಸಿ, ಭಾಷೆಗೆ ಸಂಬಂಧಿಸಿದ ಕೆಲವು ಸ್ಖಾಲಿತ್ಯಗಳನ್ನು ತಿದ್ದಿ ಅಧ್ಯಯನದ ಸೌಂಕರ್ಯಕ್ಕಾಗಿ ವೃತ್ತ, ಕಂದಗಳನ್ನು ಛಂದೋನಿಯಮಕ್ಕೆ ಅನುಗುಣವಾಗಿ ವಿನ್ಯಾಸಗೊಳಿಸಿ ಪ್ರಕಟಿಸಿದ್ದಾರೆ. ಸ್ಥೂಲವಾಗಿ ಹೇಳುವುದಾದರೆ ಇದನ್ನು ಬಿ. ಮಲ್ಲಪ್ಪ ಅವರ ಆವೃತ್ತಿಯ ಪರಿಷ್ಕೃತ ಪುನರ್ಮುದ್ರಣವೆಂದು ಕರೆಯಬಹುದು.

---

*ಎಂ. ಎ. ರಾಮಾನುಜ ಅಯ್ಯಂಗಾರ್ ಮತ್ತು ಎಸ್. ಜಿ. ನರಸಿಂಹಾಚಾರ್ ಅವರು ಗ್ರಂಥ ಸಂಪಾದನೆ ಮಾಡುವ ಕಾಲದಲ್ಲಿ (೧೮ನೇ ಶತಮಾನದ ಅಂತ್ಯಭಾಗ) ಗ್ರಂಥ ಸಂಪಾದನೆಯು ಶೈಕ್ಷಣಿಕ ಶಿಸ್ತಿನ ವಿಷಯವಾಗಿರಲಿಲ್ಲ. ಆ ಇಬ್ಬರು ವಿದ್ವಾಂಸರಿಗೆ ಯಾವುದೇ ಮಾದರಿಗಳು ಇರಲಿಲ್ಲ. ಅಂತಹ ಸಂದರ್ಭದಲ್ಲಿ ಆ ಇಬ್ಬರು ವಿದ್ವಾಂಸರ ಜೊತೆ ಸೇರಿ ಆಧುನಿಕ, ಪೂರ್ವ ಕನ್ನಡದ ಅನೇಕ ಕೃತಿಗಳನ್ನು ಸಂಪಾದಿಸಿದರು. ಅವರ ಆವೃತ್ತಿಗಳಿಗೆ ಚಾರಿತ್ರಿಕ ಮಹತ್ವ ಪ್ರಾಪ್ತವಾಗಿದೆ. ಅವರ ಸಂಪಾದನೆಯ ವಿಧಾನ ಇಂದಿನವರಿಗೆ ಹಿಡಿಸದಿದ್ದರೂ ಹಿಂದಿನ ಕೃತಿಗಳ (ಆ ಇಬ್ಬರು ವಿದ್ವಾಂಸರು ಸಂಪಾದಿಸಿದ) ಈಚಿನ ಪರಿಷ್ಕರಣೆಗಳು ಅವರ ಪರಿಷ್ಕರಣಕ್ಕೆ ವಿಶೇಷ ಋಣಿಯಾಗಿರುವುದನ್ನು ನೋಡಿದರೆ ಆ ಇಬ್ಬರು ವಿದ್ವಾಂಸರ ಗ್ರಂಥ ಸಂಪಾದನೆಯ ಮಹತ್ವ ತಿಳಿಯುತ್ತದೆ.

ಈ ಕೃತಿಗೆ ಅಭ್ಯಾಸಪೂರ್ಣ ದೀರ್ಘ ಪ್ರಸ್ತಾವನೆಯಿದೆ. ಸಂಸ್ಕೃತ ಸಾಹಿತ್ಯದಲ್ಲಿ ಬಾಣನ ಸ್ಥಾನ, ಕತೆಯ ಆಶಯ ಮತ್ತು ಸ್ವರೂಪ ಹಾಗೂ ನಾಗವರ್ಮನ ಕೃತಿಗಳ ಪರಿಚಯ ಈ ಎಲ್ಲ ಅಂಶಗಳನ್ನು ಪ್ರಸ್ತಾವನೆಯಲ್ಲಿ ಚರ್ಚಿಸಿದ್ದಾರೆ. ಅಧ್ಯಯನಕಾರನ ಸೌಕರ್ಯಕ್ಕಾಗಿ ಪಠ್ಯವನ್ನು ಕಥಾವರಣ, ಚಂದ್ರಾಪೀಡನ ಜನನ, ಬಾಲ್ಯ, ಚಂದ್ರಾಪೀಡನ ಜೈತ್ರ ಯಾತ್ರೆ, ಮಹಾಶ್ವೇತೆಯ ಸಂದರ್ಶನ, ಮಹಾಶ್ವೇತೆಯ ವೃತ್ತಾಂತ, ಕಾದಂಬರಿಯ ಪ್ರಥಮ ಸಂದರ್ಶನ, ಕಾದಂಬರಿಯ ದ್ವಿತೀಯ ಸಂದರ್ಶನ, ಚಂದ್ರಾಪೀಡನ ಪ್ರಾಣವಿಯೋಗ, ಚಂದ್ರಾಪೀಡ ಕಾದಂಬರಿಯರ ಪುನಸ್ಸಮಾಗಮ ಎಂದು ಒಂಬತ್ತು ಪರಿಚ್ಛೇದಗಳಲ್ಲಿ ವಿಂಗಡಿಸಿ ಅವುಗಳಿಗೆ ಉಚಿತವಾದ ಹೆಸರು ಕೊಟ್ಟಿದ್ದಾರೆ. ಈ ರೀತಿಯ ವಿಭಾಗ ಮೂಲದಲ್ಲಿಲ್ಲ. ಹಾಗೂ ಬಿ. ಮಲ್ಲಪ್ಪನವರ ಆವೃತ್ತಿಯಲ್ಲಿಯೂ ಇಲ್ಲ ಎಂಬುದನ್ನು ಗಮನಿಸಬೇಕು.

ಗ್ರಂಥಾಂತ್ಯದ ಭಾಗದಲ್ಲಿ ಎರಡು ಅನುಬಂಧಗಳಿವೆ. `ಕಾದಂಬರೀ ದರ್ಪಣ' ಎಂಬ ಭಾಗ ತುಂಬ ಮೌಲಿಕವಾಗಿದೆ. ಅದರಲ್ಲಿ ಪ್ರತಿಯೊಂದು ಪ್ರಕರಣದ ಶಬ್ದಾರ್ಥ ವಿವೇಚನೆಯಿದೆ. ಇದನ್ನು ಒಂದರ್ಥದಲ್ಲಿ ಕಾದಂಬರಿಯ ನಿಘಂಟು ಎಂದು ಕರೆಯಬಹುದಾಗಿದೆ. ಈ ಭಾಗವನ್ನು ರಚಿಸುವಾಗ ಮಲ್ಲಪ್ಪನವರ ಆವೃತ್ತಿಯ ಪುಟಗಳ ಅಡಿಯಲ್ಲಿದ್ದ ಟಿಪ್ಪಣಿಗಳ ಭಾಗಗಳನ್ನು ಅಳವಡಿಸಿಕೊಂಡಿದೆ. ಪ್ರಥಮ ಮತ್ತು ಪ್ರಸಕ್ತ ಮುದ್ರಣಗಳ ಸಂಖ್ಯಾ ವಿವರಣಗಳೊಂದಿಗೆ ಕೃತಿಯ ಅಕಾರಾದಿಗಳನ್ನು ಎರಡನೆಯ ಅನುಬಂಧದಲ್ಲಿ ಕೊಡಲಾಗಿದೆ.

ಎನ್. ಅನಂತರಂಗಾಚಾರ್ಯ ಅವರು `ಕುಮಾರರಾಮಸಾಂಗತ್ಯ ಸಂಗ್ರಹ', `ಜಗನ್ನಾಥವಿಜಯ ಸಂಗ್ರಹ' ಎಂಬ ಎರಡು ಪ್ರಾಚೀನ ಗ್ರಂಥಗಳನ್ನು ಸಂಗ್ರಹಿಸಿದ್ದಾರೆ. ವಿದ್ಯಾರ್ಥಿಗಳ ಪಾಠಕ್ಕೆ ಪ್ರಮಾಣವು ಅತಿ ಮೀರದಂತೆ ನೋಡಿಕೊಳ್ಳುವುದು ಅವರ ಸಂಗ್ರಹದ ಒಂದು ಮುಖ್ಯೋದ್ದೇಶ. ಈ ಉದ್ದೇಶ ಸಾಧನೆಗಾಗಿ ಕಥಾಸೂತ್ರಕ್ಕೆ ಅವಶ್ಯಕವಲ್ಲವೆಂದು ತೋರಿದ ಭಾಗಗಳನ್ನು ಅವು ಬೇರೆ ದೃಷ್ಟಿಯಿಂದ ಎಷ್ಟೇ ಚೆನ್ನಾಗಿದ್ದರೂ ಕೆಲವು ಕಡೆ ಸಂಪೂರ್ಣವಾಗಿ ಕೈಬಿಟ್ಟಿದ್ದಾರೆ. ಕೆಲವು ಕಡೆ ಸಂಗ್ರಹಿಸಿದ್ದಾರೆ. ಅಲ್ಲದೆ, ಅಲ್ಲಲ್ಲಿ ಪದ್ಯಗಳಿರುವ ಕೆಲವು ಮಾತುಗಳನ್ನು ಮಾತ್ರ ಆರಿಸಿ ಜೋಡಿಸಿ ಗದ್ಯವಾಗಿ ಬರೆದಿದೆ. ವಾಚಕರ ಅನುಕೂಲಕ್ಕಾಗಿ ಆಯಾ ಸಂಗ್ರಹದ ಸ್ವರೂಪವನ್ನು ಅನುಲಕ್ಷಿಸಿ ಪಠ್ಯವನ್ನು ಕೆಲವು ಪರಿಚ್ಛೇದಗಳಾಗಿ ವಿಂಗಡಿಸಿ ಅವುಗಳಿಗೆ ಉಚಿತವಾದ ಹೆಸರನ್ನು ಕೊಟ್ಟಿದ್ದಾರೆ. ಸಂಗ್ರಹಕಾರ್ಯದಲ್ಲಿ ಅನಂತರಂಗಾಚಾರ್ಯ ಅವರ ಕಾವ್ಯವಿವೇಕ, ಕಾವ್ಯಾಭಿರುಚಿಗಳು ಜಾಗೃತವಾಗಿ ಕೆಲಸ ಮಾಡಿವೆ. ಪೀಠಿಕೆಯಲ್ಲಿಯ ಗದ್ಯಶೈಲಿ ಆದರ್ಶಪ್ರಾಯವಾದುದೆಂದು ಹೇಳಬಹುದು.

ಗ್ರಂಥ ಸಂಪಾದನೆ ಮತ್ತು ವಿದ್ವತ್ತಿನ ದೃಷ್ಟಿಯಿಂದ ಅವರ ಸಾಹಿತ್ಯ ಭಾರತೀ (೧೯೭೦) ಮತ್ತು ಕನ್ನಡ ಚಂಪೂಕಾವ್ಯಗಳ ಪದ್ಯಾನುಕ್ರಮಣಿ (೧೯೭೨) ಈ ಕೃತಿಗಳು ಬಹು ಚಿರಸ್ಮರಣೀಯವಾಗಿವೆ. ಇವು ಅವರ ಅಖಂಡ ಜೀವನದ ದುಡಿಮೆಯ ಫಲವೆಂದು

ಹೇಳಬಹುದು. ಸಾಹಿತ್ಯ ಭಾರತೀ ಅವರ ಅಪೂರ್ವ ಕೃತಿ. ಇಂಗ್ಲೀಷ್ ಭಾಷೆಯೂ ಸೇರಿದಂತೆ ಸಂಸ್ಕೃತ, ಪಾಲಿ, ಪ್ರಾಕೃತ, ಅಪಭ್ರಂಶ, ಕನ್ನಡ, ತಮಿಳು, ತೆಲುಗು ಮುಂತಾದ ಭಾರತದ ಇಪ್ಪತ್ತು ಅಧಿಕೃತ ಭಾಷೆಗಳ ಸಾಹಿತ್ಯ ಚರಿತ್ರೆಯನ್ನು ಉಗಮದಿಂದ ಇಂದಿನವರೆಗೆ ಸಮೀಕ್ಷಿಸಿದ ಮತ್ತೊಂದು ಗ್ರಂಥವಿಲ್ಲ. ಈ ಗ್ರಂಥದಲ್ಲಿ ಆಯಾ ಭಾಷೆಯನ್ನಾಡುವ ಭಾಷಿಕರ ಭೌಗೋಳಿಕ ವ್ಯಾಪ್ತಿ, ಮೂಲ, ಇತರ ಭಾಷೆಗಳ ಸಂಪರ್ಕ, ಕವಿಕಾವ್ಯಪರಿಚಯ, ಆಯಾ ಭಾಷೆಯ ಸಾಹಿತ್ಯದ ಮೇಲೆ ಇತರ ಭಾಷೆಗಳ ಪ್ರಭಾವ, ಆಯಾ ಭಾಷೆಯ ಸಾಹಿತ್ಯ ಚರಿತ್ರೆಯ ವಿವಿಧ ಹಂತಗಳು ಮೊದಲಾದ ವಿಷಯಗಳು ಸ್ಪಷ್ಟವಾಗಿ ಮತ್ತು ವಿವರವಾಗಿ ನಿರೂಪಿತವಾಗಿವೆ. ಭಾರತೀಯ ಚರಿತ್ರೆಯನ್ನು ಅಭ್ಯಾಸ ಮಾಡುವವರಿಗೆ ಈ ಗ್ರಂಥ ಮುಖ್ಯ ಆಕರವಾಗುತ್ತದೆ. ಈ ಕೃತಿ ಅವರಿಗೆ ನಾಡಿನಲ್ಲಿ ಖ್ಯಾತಿಯನ್ನು ತಂದಿದೆ. ಕೃತಿರಚನೆಯ ಉದ್ದಕ್ಕೂ ಲೇಖಕರ ಶ್ರಮ ಮತ್ತು ವಿದ್ವತ್ತನ್ನು ಕುರಿತು ಎಷ್ಟು ಹೇಳಿದರೂ ಕಡಿಮೆ.

ಅನುಕ್ರಮಣಿಕೆಗಳು ಸಂಶೋಧನೆಯಲ್ಲಿ ಬಹುಮುಖ್ಯ ಆಕರಗಳಾಗುತ್ತವೆ. ಸಂಸ್ಕೃತ, ತಮಿಳು ಸಾಹಿತ್ಯದಲ್ಲಿ ಆಧುನಿಕ ಪೂರ್ವ ಸಾಹಿತ್ಯ ಕೃತಿಗಳಿಗೆ ಪದ್ಯಾನುಕ್ರಮಣಿಕೆಗಳು ರಚಿತವಾಗಿವೆ. ಆದರೆ ಕನ್ನಡದಲ್ಲಿ ಇಲ್ಲ ಎನ್ನುವಷ್ಟರ ಮಟ್ಟಿಗೆ ವಿರಳ. ಅನಂತರಂಗಾಚಾರ್ಯ ಅವರ ಚಂಪೂ ಕಾವ್ಯಗಳನ್ನು ಕೇಂದ್ರವಾಗಿಟ್ಟುಕೊಂಡು `ಕನ್ನಡ ಚಂಪೂ ಕಾವ್ಯಗಳ ಪದ್ಯಾನುಕ್ರಮಣಿ' ಎಂಬ ಬೃಹದ್ಗ್ರಂಥವನ್ನು ಸಿದ್ಧಪಡಿಸಿದ್ದಾರೆ (೧೯೭೨). ಹಳಗನ್ನಡ ಚಂಪೂ ಕಾವ್ಯಗಳಲ್ಲಿ ತಕ್ಕಮಟ್ಟಿನ ಪರಿಣತಿಯನ್ನು ಪಡೆದ ಅಧ್ಯಯನಕಾರರಿಗೆ ಈ ಗ್ರಂಥ ತುಂಬ ಉಪಯುಕ್ತವಾಗುತ್ತದೆ. ವಿದ್ವಾಂಸರು ಅಥವಾ ಹಳಗನ್ನಡ ಸಾಹಿತ್ಯದಲ್ಲಿ ಆಸಕ್ತರಾಗಿರುವವರು ವಿದ್ವತ್ತಿನ ಚರ್ಚೆಯಲ್ಲಿ ತೊಡಗಿದಾಗ ಯಾವುದೋ ಕಾವ್ಯದ ಮೊದಲ ಪಂಕ್ತಿ ನೆನಪಾಗುತ್ತದೆ. ಆದರೆ ಆ ಪಂಕ್ತಿ ಯಾವ ಕಾವ್ಯದ್ದು, ಯಾವ ಪದ್ಯದ್ದು, ಯಾವ ಆಶ್ವಾಸದ್ದು, ಯಾವ ಸಂದರ್ಭದಲ್ಲಿ ಅದು ಉಕ್ತವಾಗಿದೆ ಎಂಬುದು ಅವರಿಗೆ ಎಷ್ಟು ಯೋಚಿಸಿದರೂ ಹೊಳೆಯದಿರಬಹುದು. ಆ ಸಂದರ್ಭದಲ್ಲಿ ವಿದ್ವಾಂಸ ಮಿತ್ರರ ನೆರವೂ ಪ್ರಯೋಜನಕ್ಕೆ ಬಾರದೆ ಹೋಗಬಹುದು. ಅದನ್ನು ಒದಗಿಸುವ ಯಾವ ಗ್ರಂಥವೂ ಕನ್ನಡದಲ್ಲಿ ಇದುವರೆಗೆ ಇರಲಿಲ್ಲವೆಂದೇ ಹೇಳಬಹುದು. ಆ ಕೊರತೆಯನ್ನು ಅನಂತರಂಗಾಚಾರ್ಯರ ಈ ಕೃತಿ ತುಂಬಿದೆ. ಪದ್ಯದ ಮೊದಲ ಪಂಕ್ತಿ, ಕೃತಿ, ಆಶ್ವಾಸ, ಪದಸಂಖ್ಯೆ ಈ ಕ್ರಮದಲ್ಲಿ ಕೃತಿ ರಚಿತವಾಗಿದೆ. ಚಂಪೂ ಕೃತಿಗಳಿಗೆ ಸಂಬಂದಿಸಿದಂತೆ ನಡೆದ ಕೆಲಸದ ಮಾದರಿಯಲ್ಲೇ ಇತರ ಸಾಹಿತ್ಯ ಪ್ರಕಾರದ ಕೃತಿಗಳಿಗೂ ಅನುಕ್ರಮಣಿಕೆಗಳು ಸಿದ್ಧವಾಗಬೇಕಾಗಿವೆ. ಈ ದಿಸೆಯಲ್ಲಿ ಮೊದಲ ಅತ್ಯಂತ ಸಾರ್ಥಕ ಪ್ರಯತ್ನ ಮಾಡಿದವರು ಅನಂತರಂಗಾಚಾರ್ ಅವರು.

ಅನಂತರಂಗಾಚಾರ್ ಅವರು ಪ್ರಬುದ್ಧ ಕರ್ಣಾಟಕದ ಐವತ್ತು ಸಂಪುಟಗಳ ಕವಿಕಾವ್ಯ ಸೂಚಿಯನ್ನು ಸಿದ್ಧಪಡಿಸಿದ್ದಾರೆ. ಸಂಪಾದಿತವಾದ `ಮಾನೌಮಿ ಚೌಪದ' ಅವರಿಂದ ಜಾನಪದಗೀತೆಯಾಗಿದೆ. ಆಡುನುಡಿಯನ್ನು ಸಮರ್ಥವಾಗಿ ದಾಖಲಿಸಿದ ಇಲ್ಲಿರುವ ಗ್ರಂಥಪಾಠ

ಬಹುಮಟ್ಟಿಗೆ ಶುದ್ಧವಾಗಿದೆ. ಸಂಗ್ರಹದ ಕೊನೆಯಲ್ಲಿ ಸೂಕ್ತ ಟಿಪ್ಪಣಿಗಳಿರುವುದರಿಂದ ಬಹು ಉಪಯುಕ್ತವಾಗಿದೆ.

ಇವುಗಳೆಲ್ಲ ಗ್ರಂಥ ಸಂಪಾದನೆಯ ದೃಷ್ಟಿಯಿಂದ ಎಷ್ಟು ಕ್ರಮಬದ್ಧವಾಗಿವೆಯೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅವರು ಕೊಟ್ಟಿರುವ ಗ್ರಂಥ ಪಾಠಗಳು ಮೂಲಕ್ಕೆ ಹತ್ತಿರವಾಗಿವೆ. ಇತರ ಹಸ್ತಪ್ರತಿಗಳ ಪಾಠಾಂತರಗಳನ್ನು ಗುರುತುಮಾಡಿಕೊಂಡು, ಪಾಠವಿಮರ್ಶೆ ಮತ್ತು ಪಾಠ ನಿರ್ಣಯಗಳನ್ನು ಅದರಲ್ಲಿಯೇ ಉಚಿತ ಚಿಹ್ನೆಗಳಿಂದ ಗುರುತಿಸಿಕೊಂಡು ಗ್ರಂಥಾಧ್ಯಯನಕ್ಕೆ ಹಾಗೂ ಈ ಕುರಿತು ಹೆಚ್ಚಿನ ಅಧ್ಯಯನಕ್ಕೆ ಅನುಕೂಲವಾಗುವಂತಹ ಮಾಹಿತಿಭರಿತವೂ ವೈವಿಧ್ಯಮಯವೂ ಉಪಯುಕ್ತವೂ ಆದ ಅನುಬಂಧಗಳನ್ನು ಕೊಡುವುದರಲ್ಲಿಯೂ ಕಟ್ಟಕಡೆಯದಾಗಿ ಮುದ್ರಣದ ಪ್ರತಿಯನ್ನು ಸಿದ್ಧ ಮಾಡಿರುವ ಗ್ರಂಥ ಸಂಪಾದನೆಯ ಪ್ರಮುಖ ಹಂತಗಳನ್ನು ಅನಂತರಂಗಾಚಾರ್ಯರ ಸಂಪಾದನೆಯಲ್ಲಿ ಕಾಣಬಹುದು. `ಸೂಕ್ತಿಸುಧಾರ್ಣವಂ', `ಕಾವ್ಯಸಾರಂ', `ಕರ್ಣಾಟಕ ಕಾದಂಬರಿ', `ಕರ್ಣಾಟಕ ಪಂಚತಂತ್ರಂ' ಈ ನಾಲ್ಕು ಸಂಪಾದಿತ ಕೃತಿಗಳು ಕನ್ನಡ ಸಂಪಾದನೆಯ ಕ್ಷೇತ್ರಕ್ಕೆ ಮಾತ್ರವಲ್ಲದೆ ಕನ್ನಡ ಸಾಹಿತ್ಯಕ್ಕೂ ಅಭೂತಪೂರ್ವವಾದ ಅತ್ಯಂತ ಬೆಲೆಯುಳ್ಳ ಕೊಡುಗೆ. ಈ ಕ್ಷೇತ್ರದಲ್ಲಿ ಕೆಲಸ ಮಾಡಬೇಕೆನ್ನುವವರಿಗೆ ಅತ್ಯುತ್ತಮವಾದ ಮಾದರಿಗಳು. ಎಲ್ಲ ಸಂಪಾದಕರೂ ಹೀಗೆ ಪರಿಶ್ರಮಪಟ್ಟು ಶ್ರದ್ಧೆಯಿಂದ ಗ್ರಂಥ ಸಂಪಾದಿಸಿದರೆ ಹಸ್ತಪ್ರತಿಗಳಿಂದ ಕವಿ ಬಿಡುಗಡೆಯಾಗಿ ಉತ್ತಮಪಾಠಗಳು ಲಭಿಸುತ್ತವೆ. ಈ ದೃಷ್ಟಿಯಿಂದ ಅನಂತರಂಗಾಚಾರ್ ಅವರ ಗ್ರಂಥಸಂಪಾದನೆಯ ವಿಧಾನ ಮೇಲ್ಮಟ್ಟದ್ದಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.





# ನಮ್ಮ ಮಾರ್ಗದರ್ಶಕರು

ಎಸ್.ಕೆ. ಚಕ್ರವರ್ತಿ

ಸನ್ಮಾನ್ಯ ಶ್ರೀ ಡಾ. ಎನ್. ಅನಂತರಂಗಾಚಾರ್ಯರ ಜನ್ಮಶತಾಬ್ದಿ ಸಂದರ್ಭದಲ್ಲಿ ಸ್ಮಾರಕ ಗ್ರಂಥ ಹೊರತರಬೇಕೆಂಬ ವಿಷಯ ತಿಳಿದು ಸಂತೋಷವಾಯಿತು. ಅದರಲ್ಲಿ ನಾನೂ ಪಾಲ್ಗೊಳ್ಳಲು ಆದೇಶಿಸಿದ್ದಕ್ಕಾಗಿ ಕೃತಜ್ಞತೆಗಳು. ಸಾಮಾನ್ಯವಾಗಿ ವಿದ್ವಾಂಸರಾದ ಶಿಷ್ಯ, ಬಂಧು, ಗೆಳೆಯರಿಂದ ಲೇಖನ ಅಪೇಕ್ಷಿಸುವುದು ಸಹಜವಾಗಿದೆ. ಆದರೆ ಕನ್ನಡದ ವಿಶೇಷ ಪರಿಚಯವಿಲ್ಲದ ನನಗೆ ಈ ಅವಕಾಶ ಕೊಟ್ಟಿರುವುದು ಸಂಪಾದಕಸಮಿತಿಯ ಔದಾರ್ಯವಾಗಿದೆ.

ಡಾ. ಅನಂತರಂಗಾಚಾರ್ಯರು ಸತ್ಕುಲಪ್ರಸೂತರೂ ಸದಾಚಾರ ಸಂಪನ್ನರೂ ಕನ್ನಡ, ಸಂಸ್ಕೃತ, ತಮಿಳು ಮತ್ತು ಆಂಗ್ಲ ಭಾಷೆಗಳಲ್ಲಿ ವಿದ್ವಾಂಸರೂ ಆಗಿದ್ದರು. ಉಪಾಧ್ಯ ಸ್ವಚ್ಛಂದಂ ಶ್ರೀಲಕ್ಷ್ಮೀನರಸಿಂಹಾಚಾರ್ಯ ಮತ್ತು ಶ್ರೀಮತೀ ವೆಂಕಟಲಕ್ಷ್ಮಮ್ಮನವರ ಸುಪುತ್ರರಾಗಿ ಕ್ರೋಧಿನಾಮ ಸಂವತ್ಸರ ವೈಶಾಖಮಾಸದ ಕೃತ್ತಿಕಾನಕ್ಷತ್ರದಲ್ಲಿ (೦೪-೦೬-೧೯೦೪) ಜನಿಸಿದರು. ಶ್ರೀಯುತರು ಪ್ರಾಥಮಿಕ ಹಂತದ ವಿದ್ಯಾಭ್ಯಾಸವನ್ನು ಅವರ ಸ್ವಂತ ಸ್ಥಳವಾದ ತಿರುಮಕೂಡ್ಲು ನರಸೀಪುರದಲ್ಲಿ ಪಡೆದರು. ನಂತರ ಪ್ರೌಢವಿದ್ಯಾಭ್ಯಾಸಕ್ಕೆ ಮೈಸೂರು ನಗರಕ್ಕೆ ಬಂದು ಮಹಾರಾಜ ಹೈಸ್ಕೂಲು ಮತ್ತು ಮಹಾರಾಜ ಕಾಲೇಜುಗಳಲ್ಲಿ ಮುಂದುವರಿಸಿದರು. ಪದವಿ ಪರೀಕ್ಷೆಯ ನಂತರ 'ಬಿ.ಟಿ.' ಪರೀಕ್ಷೆಯನ್ನು ಮಾಡಿದರು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಸ್ನಾತಕೋತ್ತರ ಪ್ರಾರಂಭವಾದ ವರ್ಷದಲ್ಲೇ ನಮ್ಮ ಕನ್ನಡ ನಾಡಿನ ಸುಪ್ರಸಿದ್ಧ ವಿದ್ವಾಂಸರಾದ ಸರ್ವಶ್ರೀ ಕುವೆಂಪು, ಡಿ.ಎಲ್. ನರಸಿಂಹಾಚಾರ್ಯ, ಡಿ.ಕೆ. ಭೀಮಸೇನ ರಾವ್, ಕೆ. ವೆಂಕಟರಾಮಪ್ಪ ಮೊದಲಾದ ಅಗ್ರಗಣ್ಯರ ಸಹಪಾಠಿಯಾಗಿ ವ್ಯಾಸಂಗ ಮಾಡಿದರು. ಸ್ವಲ್ಪಕಾಲ ಪ್ರೌಢಶಾಲಾ ಅಧ್ಯಾಪಕರಾಗಿದ್ದು, ಬಳಿಕ ಓರಿಯೆಂಟಲ್ ಲೈಬ್ರರಿಯಲ್ಲಿ ತಮ್ಮ ಸೇವೆಯನ್ನು ಮುಂದುವರಿಸಿ ಅನೇಕ ಕನ್ನಡ ಗ್ರಂಥಗಳ ಸಂಪಾದನೆ ಮಾಡಿದರು. ಸೂಕ್ತಿ ಸುಧಾರ್ಣವ, ಪಂಪ ಭಾರತವೇ ಮೊದಲಾದ ಗ್ರಂಥಗಳನ್ನು ಇವರು ಸಂಪಾದನೆ ಮಾಡಿರುತ್ತಾರೆ. ನಂತರ

ಉಪನ್ಯಾಸಕರಾಗಿ ಮೈಸೂರು, ತುಮಕೂರು, ಕೋಲಾರ, ಶಿವಮೊಗ್ಗ, ಬೆಂಗಳೂರುಗಳಲ್ಲಿ ಸೇವೆ ಸಲ್ಲಿಸಿದರು. ಪ್ರಬುದ್ಧ ಕರ್ಣಾಟಕದ ಸಂಪಾದಕರಾಗಿಯೂ ಸ್ವಲ್ಪ ಕಾಲ ಸೇವೆ ಸಲ್ಲಿಸಿದ್ದರು. ಅವರಿಂದ ರಚಿತವಾಗಿರುವ 'ಭಾರತೀಯ ತೀರ್ಥ ಕಲಾಕ್ಷೇತ್ರ ಸಂದರ್ಶನ' ಯಾತ್ರಾರ್ಥಿಗಳಿಗೆ ಸಾರ್ವಕಾಲಿಕವಾಗಿ ಉಪಯೋಗುವಾಗುವ ಗ್ರಂಥ. ಅವರ ಲೇಖನಗಳು ಅನೇಕ ಹೆಸರಾಂತ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾಗಿರುವ ಅವರ ಉತ್ತಮ ಕೃತಿಗಳಲ್ಲಿ ಒಂದಾದ 'ಸಾಹಿತ್ಯಭಾರತಿ' ಅವರಿಗೆ ಡಿ.ಲಿಟ್. ಪ್ರಶಸ್ತಿಯನ್ನು ತಂದುಕೊಟ್ಟಿದೆ. ರಾಮಾಯಣ ಮತ್ತು ಮಹಾಭಾರತದ ಸುಭಾಷಿತಗಳನ್ನೆಲ್ಲ ಸಂಗ್ರಹಿಸಿ ಅವುಗಳನ್ನೊಳಗೊಂಡ ಕೃತಿಯನ್ನು ಹೊರತರುವ ಆಸೆ ಅವರಿಗಿತ್ತು. ಅದಕ್ಕಾಗಿ ಸಾಕಷ್ಟು ಸಂಗ್ರಹವನ್ನೂ ಮಾಡಿದ್ದರು. ಆದರೆ ಅದು ಕಾರ್ಯರೂಪಕ್ಕೆ ಬಂದಂತಿಲ್ಲ. ದುರ್ಗಸಿಂಹನ ಪಂಚತಂತ್ರವನ್ನು ಸಂಪಾದಿಸಲು ಶ್ರವಣ ಬೆಳಗೊಳ ಕ್ಷೇತ್ರದ ಶ್ರೀ ಚಾರುಕೀರ್ತಿ ಸ್ವಾಮಿಗಳಿಂದ ಆ ಗ್ರಂಥವನ್ನು ತೆಗೆದುಕೊಳ್ಳಲು ನಡೆಸಿದ ಸಾಹಸದಲ್ಲಿ ನಾನೂ ಭಾಗಿಯಾಗಿದ್ದೆನು. ಶ್ರೀ ಸ್ವಾಮಿಗಳ ಸಹಕಾರದಿಂದ ಆ ಗ್ರಂಥವೂ ಬೆಳಕಿಗೆ ಬಂದಿತು.

ಶ್ರೀ ಅನಂತರಂಗಾಚಾರ್ಯರು ವೈದಿಕ ಸಂಪ್ರದಾಯಕ್ಕೆ ಸೇರಿ ಅದಕ್ಕನುಗುಣವಾಗಿ ಜೀವನ ನಡೆಸುತ್ತಿದ್ದರು. ನಿತ್ಯಕರ್ಮಗಳು, ಭಗವದಾರಾಧನೆ, ಪಾರಾಯಣಗಳನ್ನು ನಿಷ್ಠೆಯಿಂದ ಮಾಡುತ್ತಿದ್ದರು. ಅವರು ಪುನರ್ವಸು ಪಟ್ಟಾಭಿಷೇಕಗಳನ್ನು ಅನೇಕ ಬಾರಿ ಮಾಡಿದ್ದಾರೆ. ಅಂತಹ ಸಂದರ್ಭಗಳಲ್ಲಿ ಆಹ್ವಾನಿತರಿಗೆ ತೊಂದರೆಯಾಗದಂತೆ ಬೆಳಿಗ್ಗೆ ೯.೦೦ ಗಂಟೆಯೊಳಗೆ ಎಲ್ಲವನ್ನೂ ಕ್ರಮ ತಪ್ಪದಂತೆ ನಡೆಸಿ ಭೋಜನಮಾಡಿಸಿ ಕಳುಹಿಸುತ್ತಿದ್ದರು. ಈ ರೀತಿ ಕೆಲಸ ಮಾಡಲು ಅವರ ಶ್ರೀಮತಿಯವರ ಸಂಪೂರ್ಣ ಸಹಕಾರವಿರುತ್ತಿತ್ತು.

ಶ್ರೀ ಅನಂತರಂಗಾಚಾರ್ಯರು ನಡೆವಳಿಕೆಯಲ್ಲಿ ಸಂಪ್ರದಾಯವಾದಿಗಳಾಗಿದ್ದರೂ ಮತಾಂಧರಾಗಿರಲಿಲ್ಲ. ಅನೇಕ ವಿದ್ಯಾರ್ಥಿಗಳಿಗೆ ವಾರಾನ್ನಭೋಜನದ ಅನುಕೂಲ ಮಾಡಿಕೊಟ್ಟು, ಅವರು ವಿದ್ಯಾಭ್ಯಾಸ ಮುಂದುವರಿಸಲು ಸಹಾಯಮಾಡಿದ ಮಹನೀಯರು. ಆ ರೀತಿ ಉಪಕೃತಿ ಹೊಂದಿದ ಅನೇಕರು ಇಂದಿಗೂ ಸಾಹಿತ್ಯ ಮತ್ತು ಸಾರ್ವಜನಿಕ ಕ್ಷೇತ್ರಗಳಲ್ಲಿ ಇದ್ದು ಅವರನ್ನು ಮನಃಪೂರ್ವಕವಾಗಿ ಸ್ಮರಿಸುವವರಿದ್ದಾರೆ. ಸ್ವಾತಂತ್ರ್ಯಚಳವಳಿಕಾಲದಲ್ಲಿ ವಿದ್ಯಾರ್ಥಿಗಳು ಪಾಲ್ಗೊಂಡಿದ್ದ ವಿಷಯ ಲೋಕವಿದಿತವಾಗಿದೆ. ಅವರು ಒಂದು ಸಂದರ್ಭದಲ್ಲಿ ಶ್ರೀ ಅನಂತರಂಗಾಚಾರ್ಯರ ಮನೆಯ ಸಮೀಪದಲ್ಲೇ ಇದ್ದಾಗ ಹಸಿವು ನೀರಡಿಕೆಗಳಿಂದ ಬಳಲಿದ್ದರು. ಆಗ ಕೆಲವರು ಅವರ ಗುರುಗಳ ಮನೆಗೆ ಹೋಗಬೇಕೇ ಬೇಡವೇ ಎಂದು ಚರ್ಚಿಸಿ ಕೊನೆಗೆ ಅವರ ಮನೆಗೆ ಹೋಗಿ ತಮ್ಮ ಹಸಿವು ಬಾಯಾರಿಕೆ ವಿಷಯ ತಿಳಿಸಿದರು. ಕೂಡಲೇ ಶ್ರೀ ಅನಂತರಂಗಾಚಾರ್ಯರು ಅವರ ಬಾಯಾರಿಕೆ ಪರಿಹಾರ ಮಾಡಿ ಅವರೊಡನೆ ಸ್ವಲ್ಪಕಾಲ ಮಾತನಾಡುತ್ತಿದ್ದರು. ಅಷ್ಟರಲ್ಲಿ ಅವರಿಗೆ ಉಪಹಾರವ್ಯವಸ್ಥೆಗೂ ಮನೆಯಲ್ಲಿ ಸೂಚನೆ ಕೊಟ್ಟಿದ್ದರು. ಅದು ವಿದ್ಯಾರ್ಥಿ ಚಳುವಳಿಗಾರರಿಗೆ ತಿಳಿದಿರಲಿಲ್ಲ. ಇದ್ದಕ್ಕಿದ್ದಂತೆ ಉಪಹಾರ

ಬಂದಿದ್ದನ್ನು ನೋಡಿ ಆಶ್ಚರ್ಯಚಕಿತರಾದರು. ಅವರು ಆದರದ ಆತಿಥ್ಯವನ್ನು ಸ್ವೀಕರಿಸಿದರು. ಅಷ್ಟರಲ್ಲಿ ಈ ಸುದ್ದಿ ಆರಕ್ಷಕರ ಗಮನಕ್ಕೆ ಬಂದು ಅನಂತರಂಗಾಚಾರ್ಯರು ಮಾಡಿದ ಅಪರಾಧಕ್ಕೆ ವಿವರಣೆ (Showcause) ಕೇಳಿದಾಗ ಶ್ರೀ ಅನಂತರಂಗಾಚಾರ್ಯರು ತಾವು ಚಳುವಳಿಗಾರರಿಗೆ ಏನೂ ಸಹಕಾರ ಮಾಡಿಲ್ಲವೆಂದೂ ತಮ್ಮ ವಿದ್ಯಾರ್ಥಿಗಳ ಸಂಕಷ್ಟಕ್ಕೆ ತಾವು ಪರಿಹಾರ ನೀಡಿದುದಾಗಿಯೂ ತಂದೆ ಮಕ್ಕಳ ಸಂಬಂಧ ಮತ್ತು ಗುರು ಶಿಷ್ಯರ ಸಂಬಂಧ ಒಂದೇ ರೀತಿಯದೆಂದೂ ಹೇಳಿ ಅವರಿಗೆ ಸಮಾಧಾನಪಡಿಸಿದರು. ಅದೃಷ್ಟವಶಾತ್ ಅವರ ಮೇಲೆ ಅಧಿಕಾರಿಗಳು ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ. ಅಂದರೆ ಆ ರೀತಿಯಲ್ಲಿ ಅವರ ಮೇಲೆ ತಮ್ಮ ಪ್ರಭಾವ ಬೀರಿ ಮನವೊಲಿಸಿಕೊಂಡರು.

ಶ್ರೀ ಅನಂತರಂಗಾಚಾರ್ಯರು ಒಳ್ಳೆಯ ಗ್ರಂಥಸಂಗ್ರಹವನ್ನು ಮಾಡಿದ್ದರು. ಹಾಗೆಯೇ ಎಲ್ಲರೂ ಗ್ರಂಥಭಂಡಾರ ಹೊಂದಿರಬೇಕೆಂದು ಬಯಸಿದ್ದರು. ಅವರು "ಕೋಶವಾನ್ ಪಂಡಿತಃ " ಎಂಬ ಉಕ್ತಿಯನ್ನು ಹೇಳಿ ಹಾಗೆ ಗ್ರಂಥಗಳಿದ್ದರೆ ಅವಕಾಶವಾದಾಗ ಓದುವ ಮನಃ ಪ್ರವೃತ್ತಿ ಉಂಟಾಗುತ್ತದೆ ಎಂದು ಹೇಳುತ್ತಿದ್ದರು. ಅದು ಸರಿಯಾದ ಸಲಹೆ ಎಂಬುದು ನನ್ನ ಅನುಭವಕ್ಕೂ ಬಂದಿದೆ. ಚಾಮರಾಜನಗರದಲ್ಲಿ ಕಾಲೇಜು ಪ್ರಾರಂಭವಾದಾಗ ನಾವಿಬ್ಬರೂ ಆ ಸಂಸ್ಥೆಯಲ್ಲಿ ಕೆಲಕಾಲ ಸಹೋದ್ಯೋಗಿಗಳಾಗಿದ್ದೆವು. ಆಗ ಅಲ್ಲಿನ ವಿದ್ಯಾರ್ಥಿಗಳನ್ನು ಓದುವ ಹವ್ಯಾಸದಲ್ಲಿ ತೊಡಗಿಸಲು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲೆಯ ಸುಲಭ ಬೆಲೆಯ ಪುಸ್ತಕಗಳನ್ನು ತಂದು, ನಿತ್ಯವೂ ವಿದ್ಯಾರ್ಥಿಗಳು ಒಂದು ಪುಸ್ತಕ ಓದುವಂತೆ ಮಾಡಿ, ಎಲ್ಲರೂ ಓದಿದ ಬಳಿಕ ಎಲ್ಲರಿಗೂ ಒಂದೊಂದು ಪುಸ್ತಕವನ್ನು ಅವರು ವಿತರಿಸಿದರು. ಸ್ತೋತ್ರ ಪ್ರಬಂಧ ಪಾಠಗಳನ್ನು ಉಚಿತವಾಗಿ ಹೇಳಿಕೊಟ್ಟು ಅನೇಕರನ್ನು ಅದರ ಅಭ್ಯಾಸದಲ್ಲಿ ತೊಡಗಿಸಿದರು.

ಶ್ರೀ ಅನಂತರಂಗಾಚಾರ್ಯರು ವಿದ್ಯಾಕ್ಷೇತ್ರದಲ್ಲಿ ಮಾತ್ರವಲ್ಲದೆ ಕೃಷಿ ಕ್ಷೇತ್ರದಲ್ಲೂ ಪಂಡಿತರಾಗಿದ್ದರು. ರೈತರೊಂದಿಗೆ ಒಂದಾಗಿ ಉಳುವ ಕೆಲಸವನ್ನೂ ಮಾಡಿದವರು. ಉತ್ತಮ ಬೆಳೆ ಬಂದಾಗ ಕೇವಲ ಅರ್ಥಕಾಮರಾಗದೆ ಬಂಧುಮಿತ್ರರೊಡನೆ ತಮ್ಮ ವ್ಯವಸಾಯದ ಫಸಲನ್ನೂ ಫಲಪುಷ್ಪಗಳನ್ನೂ ಹಂಚಿಕೊಂಡು ಸಂತೋಷಪಡಿಸುತ್ತಿದ್ದರು.

ಶ್ರೀ ಅನಂತರಂಗಾಚಾರ್ಯರು "ಎಲ್ಲರೂ ಸಾಧ್ಯವಾದಷ್ಟು ಪರಾವಲಂಬಿಗಳಾಗದೆ ಎಲ್ಲಾ ಕ್ಷೇತ್ರಗಳಲ್ಲೂ ಪರಿಶ್ರಮ ಪಡೆದು ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳುವುದಲ್ಲದೇ ಸಾರ್ವಜನಿಕವಾಗಿಯೂ ಸೇವೆಮಾಡಬೇಕು" ಎಂದು ಹೇಳುತ್ತಿದ್ದರು. ಅವರೂ ಬಂಧುಮಿತ್ರರ ಮನೆಗಳಲ್ಲಿ ಸಮಾರಂಭಗಳಿಗೆ ಹೋದಾಗ ತಮ್ಮ ಕೈಲಾದಷ್ಟು ಸೇವೆ ಸಲ್ಲಿಸಿ ಸಹಕರಿಸುತ್ತಿದ್ದರು.

ಶ್ರೀ ಅನಂತರಂಗಾಚಾರ್ಯರ ಕೈಚಳಕ ಅವರ ನಳಪಾಕದಲ್ಲೂ ಹೇಗಿತ್ತೆಂಬುದು ಅವರ ಬಂಧುಮಿತ್ರರಿಗೆ ತಿಳಿದ ವಿಷಯ. ತಿ. ನರಸೀಪುರದ ಜಾತ್ರೆ, ಅವರ ಗದ್ದೆಯಲ್ಲಿ ಪ್ರತಿ ವರ್ಷವೂ

ನಡೆಸುತ್ತಿದ್ದ 'ವನ ಭೋಜನ' ಇಂದಿಗೂ ಎಲ್ಲರ ಮನಸ್ಸಿನಲ್ಲೂ ಅಚ್ಚಳಿಯದೇ ಇದೆ. ಅಂತೆಯೇ ಅವರ ಮನೆಯಲ್ಲಿ ನಡೆಯುತ್ತಿದ್ದ ಬೆಳದಿಂಗಳೂಟ, ಕೃಷ್ಣಜಯಂತಿ, ರಾಮ ಪಟ್ಟಾಭಿಷೇಕದ ಸಮಾರಾಧನೆ ಅವರ ಬಂಧುಮಿತ್ರರೆಲ್ಲರಿಗೂ ಚಿರಸ್ಮರಣೆಯವಾಗಿದೆ.

ಹೀಗೆ ಜೀವನದಲ್ಲಿ ಸದಾ ಚಟುವಟಿಕೆಯಲ್ಲಿ ತೊಡಗಿದ್ದ ಶ್ರೀಯುವರು ಅವರ ಅನಾರೋಗ್ಯಕಾಲದಲ್ಲಿ ಮೇಲಿನ ಚಟುವಟಿಕೆಗಳೆಲ್ಲಾ ವಿರಾಮ ಕೊಡಬೇಕಾಯಿತು. ಆದರೂ ಆ ಕಾಲದಲ್ಲೂ ಅವರು ಬರವಣಿಗೆ ಕೆಲಸ ನಿಲ್ಲಿಸಿರಲಿಲ್ಲ. ಒಮ್ಮೆ ಬಹಳ ಮನನೊಂದು "ನೋಡಪ್ಪ, ಸದಾ ಚಟುವಟಿಕೆಗಳಲ್ಲಿ ತೊಡಗಿದ್ದ ನನಗೆ, ಈಗ ಬರೆಯುತ್ತಿರುವಾಗ ಲೇಖನಿ ಕೆಳಗೆ ಬಿದ್ದುಹೋದರೆ ನಾನು ಮತ್ತೊಬ್ಬರ ಸಹಕಾರವಿಲ್ಲದೆ ಏನೂ ತೆಗೆದುಕೊಳ್ಳಲಾಗುವುದಿಲ್ಲ" ಎಂದು ಹೇಳಿದರು. ಆದರೆ ದೃಢವಾದ ಸಾಹಿತ್ಯ ಕೃಷಿ ಅನವರತ ನಡೆಯಿತು.

ಸಾರ್ವಜನಿಕ ಕ್ಷೇತ್ರದಲ್ಲಿಯೂ ಅವರು ಕಾರ್ಯೋನ್ಮುಖರಾಗಿದ್ದರು. ವಿದ್ಯಾರ್ಥಿಗಳಿಗೆ ಉಚಿತ ಬೋಧನಾವ್ಯವಸ್ಥೆ, ಪುಸ್ತಕಭಂಡಾರದಿಂದ ಪುಸ್ತಕವಿತರಣೆ, ಪರೀಕ್ಷಾಶುಲ್ಕ ಸಹಾಯಧನ ಮೊದಲಾದ ಅನುಕೂಲತೆಗಳನ್ನು ಕಲ್ಪಿಸಿಕೊಟ್ಟಿದ್ದರು. ಸರಸ್ವತೀಪುರದಲ್ಲಿರುವ ಶ್ರೀವೈಷ್ಣವ ಸಭೆಯು ಇಂದಿನ ಸ್ಥಿತಿಗೆ ಬರಲು ಅವರು ಪ್ರಮುಖಕಾರ್ಯಕರ್ತರಲ್ಲಿ ಒಬ್ಬರಾಗಿದ್ದರು.

ಈ ರೀತಿಯಲ್ಲಿ ಜೀವನದ ನಾನಾಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ನಮ್ಮೆಲ್ಲರಿಗೂ ಮಾರ್ಗದರ್ಶಕರಾಗಿರುವ ಶ್ರೀ ಅನಂತರಂಗಾಚಾರ್ಯರ ಶತಮಾನ ಉತ್ಸವ ಸಂದರ್ಭದಲ್ಲಿ ಅವರನ್ನು ಸ್ಮರಿಸಿಕೊಳ್ಳುವುದು ನಮ್ಮೆಲ್ಲರ ಶ್ರೇಯಸ್ಸಿಗಾಗಿಯೇ. ಇದರಿಂದ ಅವರಿಗೇನೂ ಆಗಬೇಕಾಗಿಲ್ಲ. ಅವರಿಗೆ ನಮ್ಮ ಕೃತಜ್ಞತೆ ನಮನಗಳನ್ನು ಸಲ್ಲಿಸಲು ಇದೊಂದು ಸದವಕಾಶ.



# ನನ್ನ ದೊಡ್ಡಪ್ಪ

ಎ. ಜಾನಕಿ

ಡಾ. ಎನ್. ಅನಂತರಂಗಾಚಾರ್‌ರವರ ಜನ್ಮ ಶತಾಬ್ದಿಯ ಸ್ಮರಣಾರ್ಥ ಬರೆಯುವ ಒಂದು ಸದವಕಾಶ ನನಗೆ ದೊರೆತಿದ್ದು ನನ್ನ ಪೂರ್ವ ಸುಕೃತ. ಅವರದು ಒಂದು ಸಮಗ್ರ ಸಂಪೂರ್ಣ ವ್ಯಕ್ತಿತ್ವ. ಲೌಕಿಕ, ವೈದಿಕಗಳ ಸಮನ್ವಯ ಅದರ ಉಜ್ವಲ ಪಕ್ಷ. ಕನ್ನಡ ತಮಿಳಿನ ಸಂಗಮ ಅದರ ವೈಶಿಷ್ಟ್ಯ. ಮಾನವತೆ ಅದರ ಜೀವಾಳ; ನಿರಹಂಕಾರ ಅದರ ಸೊಗಸು.

ತಿರುಮಕೂಡಲು ನರಸೀಪುರದಲ್ಲಿ ೧೯೦೨ನೆ ಇಸವಿಯಲ್ಲಿ ವಾದ್ಯಾರ್ ಸ್ವಚ್ಛಂದಂ ನರಸಿಂಹಾಚಾರ್ ಮತ್ತು ಶ್ರೀಮತಿ ವೆಂಕಟಲಕ್ಷಮ್ಮನವರ ನಾಲ್ಕನೆಯ ಪುತ್ರನಾಗಿ ಜನನ. ಇಷ್ಟು ಹೊತ್ತಿಗಾಗಲೇ ಮೊದಲನೆಯ ಮೂರು ಗಂಡು ಮಕ್ಕಳು ತೀರಿಕೊಂಡಿದ್ದರಿಂದ ಅವರಿಗೆ ಹಿರಿಯ ಮಗನ ಸ್ಥಾನ. ಮತ್ತೆ ಐದು ಹಾಗೂ ಆರನೆಯ ಗಂಡು ಮಕ್ಕಳು ಹುಟ್ಟಿ ಗತಿಸಿದ್ದು ಏಳನೆಯ ಮಗನಾಗಿ ನಮ್ಮ ತಂದೆಯವರಾದ ಎನ್. ಅನಂತಾರಮಯ್ಯಂಗಾರ್ ಹಾಗೂ ಎಂಟನೆಯವರಾದ ನಮ್ಮ ಚಿಕ್ಕಪ್ಪ ಪ್ರೊ. ಎನ್ ಅನಂತಾಚಾರ್ಯರಿಗೆ ಇವರು ಮುತ್ತಣ್ಣ (ಹಿರಿಯ ಅಣ್ಣ). ಮಕ್ಕಳನ್ನು ಕಳೆದುಕೊಂಡ ತಂದೆತಾಯಿಗಳಿಗೆ ಈ ಮಗು ಅಚ್ಚು ಮೆಚ್ಚು. ಮಗು ಅಷ್ಟೇ ಸುಂದರವಾಗಿತ್ತು. ತಿ. ನರಸೀಪುರದ ಸುತ್ತಮುತ್ತ ಸುಮಾರು ೧೪ ಎಕರೆ ಗದ್ದೆ ಹಾಗೂ ಒಂದು ಸ್ವಂತ ಮನೆ, ಗುಂಜಾ ನರಸಿಂಹಸ್ವಾಮಿಯವರ ದೇವಸ್ಥಾನದಲ್ಲಿ ಕೈಂಕರ್ಯ, ವೇದಾಧ್ಯಯನ, ಅಧ್ಯಾಪನ ಹಾಗೂ ಪೌರೋಹಿತ್ಯ ನಮ್ಮ ತಾತಂದಿರ ಕಸುಬಾಗಿತ್ತು. ಅಪರೂಪದ ಮಗುವಾದರೂ ನಮ್ಮ ತಾತನವರ ಕಟ್ಟುನಿಟ್ಟಾದ ಶಿಸ್ತನ್ನು ಕಡ್ಡಾಯವಾಗಿ ಪಾಲಿಸಬೇಕಾಗಿತ್ತು. ಚಿಕ್ಕ ವಯಸ್ಸಿಗೆ ಉಪನಯನ. ಕೂಡಲೇ ವೇದಾಧ್ಯಯನ. ಹತ್ತು ವರ್ಷಕ್ಕಾಗಲೇ ವಿವಾಹೋಪನಯನ ಮಂತ್ರಗಳೆಲ್ಲಾ ಕಂಠಪಾಠ. ಅಲ್ಲಿಂದಲೇ ಪೌರೋಹಿತ್ಯದ ಅಂಕುರಾರ್ಪಣ. ಪ್ರಾಥಮಿಕ ತರಗತಿಗಳ ವಿದ್ಯಾಭ್ಯಾಸ ನರಸೀಪುರದಲ್ಲಿ ನಡೆದು ಮುಂದಿನ ವಿದ್ಯಾಭ್ಯಾಸಕ್ಕಾಗಿ ಮೈಸೂರಿಗೆ ಆಗಮನ. ದೂರದ ಬಂಧು ಒಬ್ಬರ ಮನೆಯಲ್ಲಿ ವಾಸ. ಪರಕಾಲಮಠದಿಂದ ಬುತ್ತಿ. ಸಹಜ ಬುದ್ಧಿವಂತಿಕೆಯ ಚಿಂತನ, ಕಠಿಣ ಪರಿಶ್ರಮ.

ನಮ್ಮ ದೊಡ್ಡಪ್ಪನವರ ಜೀವನವೇ ಆಕಸ್ಮಿಕ ಘಟನೆಗಳ ಸರಮಾಲೆ. ೧೩ ವರ್ಷದ ಹುಡುಗ ಅಂದು ಪರಕಾಲಮಠದಿಂದ ಪಟತಂದು ಇನ್ನೇನು ಊಟ ಮಾಡಿ ಶಾಲೆಗೆ ಹೋಗುವ ಸಿದ್ಧತೆಯಲ್ಲಿದ್ದ. ಅಷ್ಟು ಹೊತ್ತಿಗೆ ಮನೆಯ ಯಜಮಾನರಿಂದ ಬುಲಾವ್. ಏಯ್, ಅನಂತರಂಗ, ಸ್ವಲ್ಪ ಇಲ್ಲಿ ಬಾ. ಏನು ಊಟ ಮಾಡಿದೆಯಾ? 'ಪಾಪ ಆ ಹುಡುಗ ಹೆದರುತ್ತಾ ಅವರ ಎದುರು ನಿಂತು ಹೇಳಿದ "ಇಲ್ಲ. ಪರಿಸೇಚನೆ ಮುಗಿಸಿದ್ದೇನೆ. ಇನ್ನೇನು ಊಟಮಾಡಿ ಶಾಲೆಗೆ ಹೋಗಬೇಕು" "ನೀನು ಈಗ ಶಾಲೆಗೆ ಹೋಗುವುದು ಬೇಡ. ಊಟವನ್ನು ಮಾಡಬೇಡ. ನಿನಗೆ ಮದುವೆಯಂತೆ. ಕೂಡಲೇ ಹೊರಡು". ಆಗ ತಾನೇ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತಮವಾಗಿ ತೇರ್ಗಡೆ ಹೊಂದಿ ಫೋರ್ತ್ ಫಾರಂಗೆ ಅವನು ಕಾಲಿರಿಸಿದ್ದ. ಅವನಿಗೆ ದಿಕ್ಕೇ ತೋಚದಾಯಿತು. ಅವನನ್ನು ಕರೆದುಕೊಂಡು ಹೋಗಲು ಹಿರಿಯರಿಬ್ಬರು ಬಂದಿದ್ದರು. ತುಟಿಕ್, ಪಿಟಿಕ್ ಎನ್ನದೆ ಅವರ ಜೊತೆ ಪಯಾಣ. ಅಲ್ಲಿ ವರನ ಆಗಮನದ ಸೂಚನೆಯಾಗಿ ಬಾವುಟ ಸಿದ್ಧವಾಗಿತ್ತು. ಕಾವೇರಿ ನದಿಯ ಈ ದಡದಿಂದ ಭಾವುಟ ಹಾರಾಡಿತು. ಆ ದಡದಲ್ಲಿ ಬಾಜಾ ಬಜಂತ್ರಿಗಳು ಮೊಳಗಲಾರಂಭಿಸಿದವು. ದೋಣಿ ಸಿದ್ಧವಾಗೇ ಇತ್ತು. ಅದರಲ್ಲಿ ಬಂದವರು ಆ ಹುಡುಗನನ್ನು ಕೂರಿಸಿಕೊಂಡು ಕೂತರು. ಆ ಕಡೆ ದಡ ಮುಟ್ಟಿದ ಕೂಡಲೇ ಹುಡುಗನ ಕೊರಳಿಗೆ ಸುಂದರವಾದ ಗಮಗಮಿಸುವ ಹೂಮಾಲೆ. ಬಹಳ ಆದರದಿಂದ ಅವನನ್ನು ಮನೆಯೊಳಕ್ಕೆ ಕರೆದುಕೊಂಡು ನಡೆದರು. ಹುಡುಗನು ವಿಚಾರಿಸೋಣವೆಂದರೆ ತನ್ನ ಮನೆಯ ಯಾವ ಸದಸ್ಯನ ಸುಳಿವೂ ಇಲ್ಲ. ಹುಡುಗನನ್ನು ನೆಟ್ಟಗೆ ಚಪ್ಪರಕ್ಕೇ ಕರೆತಂದು ಮಣೆಯ ಮೇಲೆ ಕೂರಿಸಿದರು. ಯಾವ ಹುಡುಗಿಯೊಡನೆ ಮದುವೆ ತಿಳಿಯದು. ಹುಡುಗಿ ತಂದೆ ತಾಯಿಗಳು ಯಾರು ಎನ್ನುವ ಸುಳಿವೂ ಇಲ್ಲ. ಆಗ ನಿಧಾನವಾಗಿ ನಗುತ್ತಾ ನಮ್ಮ ತಾತಂದಿರು ಮಗನ ಮುಂದೆ ಬಂದು ನಿಂತರಂತೆ. ನಮ್ಮ ದೊಡ್ಡಪ್ಪನವರ ಕ್ರೋಧ ಮುಗಿಲು ಮುಟ್ಟುತ್ತಿತ್ತು. ಆದರೆ ಅವರ ಸಂಸ್ಕಾರ, ಸಂಸ್ಕೃತಿ ಅವರನ್ನು ತಡೆಹಿಡಿದಿತ್ತು.

ಆಗಿದ್ದು ಇಷ್ಟೆ. ರೀಜೆಂಟ್ ಮಹಾರಾಣಿಯವರ ತಮ್ಮಂದಿರಾದ ದಿವಾನ್ ಬಹದ್ದೂರ್ ಕೆಂಪರಾಜೆ ಅರಸ್‌ರವರ ಧರ್ಮ ಗುರುಗಳಾಗಿದ್ದ ವಿದ್ವಾನ್ ಶ್ರೀನಿವಾಸ ಚಕ್ರವರ್ತಿಯವರ ಹಿರಿಯ ಮಗಳು ಸೌ. ಜಾನಕಿಗೆ ಅಂದು ಸೋಸಲೆಯಲ್ಲಿ ಮದುವೆ ಏರ್ಪಾಡು ನಡೆದಿತ್ತು. ಇದಕ್ಕೆ ದಿವಾನ್ ಬಹದ್ದೂರ್‌ರವರೂ ಬರುವ ನಿರೀಕ್ಷೆ ಇತ್ತು. ಆದರೆ ಮದುವೆಯ ಹಿಂದಿನ ದಿನ ಗೊತ್ತಾಗಿದ್ದ ವರ ಇದ್ದಕ್ಕಿದ್ದಂತೆ ತಾನು ಆ ವಧುವನ್ನು ಮದುವೆಯಾಗುವುದಿಲ್ಲ ಎಂದು ಹೇಳಿ ಓಟಕಿತ್ತನಂತೆ.

ಪ್ರತ್ಯಕ್ಷ ಸಿಡಿಲಿನ ಆಘಾತ ಎಲ್ಲರನ್ನೂ ದಂಗಾಗಿಸಿತ್ತು. ಮದುವೆ ಮನೆಗೆ ಬಂದಿದ್ದವರಲ್ಲಿ ಯಾರಾದರೂ ಸರಿಯಾದ ವರ ಸಿಗುತ್ತಾನೆಯೇ ಎಂದು ಸ್ವಲ್ಪ ಹುಡುಕಾಟ. ರಾತ್ರಿ ಹನ್ನೊಂದು ಹೊಡೆದಾಗ ಹುಡುಗಿಯ ಅಜ್ಜಿ ತಮ್ಮ ಮಗನನ್ನು ಕರೆದು ಜೆಣ್ಣೆ ಇಟ್ಟುಕೊಂಡು ತುಪ್ಪಕ್ಕಾಗಿ ಯೋಚನೆಯೇ? ನಮ್ಮ ನರಸಿಂಹನ ಮಗ ಅನಂತರಂಗ ಎಲ್ಲ ವಿಧದಲ್ಲೂ ಯೋಗ್ಯವಾದ

ವರ. ಅವನು ಮೈಸೂರಿನಲ್ಲಿ ಆಂಗ್ಲಶಿಕ್ಷಣ ಪಡೆಯುತ್ತಿದ್ದಾನೆ. ಅವನಿಗೆ ನಿನ್ನ ಮಗಳನ್ನು ಕೊಟ್ಟು ಮದುವೆ ಮಾಡು. ಯಾವ ಯೋಚನೆಯೂ ಬೇಡ ಎಂದರಂತೆ. ಇದರ ಫಲವೇ ನಮ್ಮ ದೊಡ್ಡಪ್ಪನವರ ಮದುವೆ. ಆದರೆ ಈ ವಿಧಿಲೀಲೆ ನಮ್ಮ ದೊಡ್ಡಪ್ಪನವರ ಭಾಗ್ಯದ ಬಾಗಿಲನ್ನು ತೆರೆಯಿತು ಎಂದರೆ ತಪ್ಪಾಗಲಾರದು. ಅವರಿಬ್ಬರ ಆದರ್ಶದಾಂಪತ್ಯ ಲೋಕಕ್ಕೆ ಒಂದು ನಿದರ್ಶನ. ಇದನ್ನು ನೋಡಿದಾಗ ವಿಧಿ ಕುರುಡಲ್ಲ ಎಂಬುದನ್ನು ಒಪ್ಪಲೇಬೇಕಾಗುತ್ತದೆ.

ಮದುವೆಯಲ್ಲಿ ನಮ್ಮ ದೊಡ್ಡಮ್ಮನಿಗೆ ಕೇವಲ ಎಂಟು ವರ್ಷ. ನಮ್ಮ ದೊಡ್ಡಪ್ಪನವರ ಮಾವನವರು ಅಳಿಯನನ್ನು ತಮ್ಮ ಮನೆಯಲ್ಲಿಯೇ ಇರಬೇಕೆಂದು ಒತ್ತಾಯಿಸಿದ್ದರಿಂದ ಬಂಧುಗಳ ಮನೆಯನ್ನು ಬಿಟ್ಟು ಮಾವನವರ ಮನೆಯಲ್ಲಿದ್ದು ಅವರು ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಮದುವೆಯಾದ ನಾಲ್ಕು ತಿಂಗಳಲ್ಲೇ ಮಾತೃವಿಯೋಗ ಉಂಟಾಗಿ ಕರ್ಮ ಮಾಡಬೇಕಾಗಿ ಬಂತು. ಅವರು ಆಗಾಗ್ಗೆ ಹೇಳುತ್ತಿದ್ದರು : ನಮ್ಮ ಅಮ್ಮ ನನ್ನ ಮದುವೆಯನ್ನು ನೋಡಿ ಸಂತೃಪ್ತಳಾಗಬೇಕೆಂದೇ ವಿಧಿ ಈ ಸಂಚು ಹೂಡಿದ್ದಿರಬೇಕು ಎಂದು.

ವಿಧೇಯತೆ ಹಾಗೂ ಕರ್ತವ್ಯ ಪ್ರಜ್ಞೆ ಅವರನ್ನು ಯಾವಾಗಲೂ ಜಾಗರೂಕರನ್ನಾಗಿಸಿತ್ತು. ಆರೇಳು ವರ್ಷಗಳು ಕಳೆಯುವಷ್ಟರಲ್ಲಿ ನಮ್ಮ ತಾತಂದಿರೂ ದೈವಾಧೀನರಾದಾಗ ನಮ್ಮ ತಂದೆ ಹಾಗೂ ಚಿಕ್ಕಪ್ಪನವರಿಗೆ ನಮ್ಮ ದೊಡ್ಡಪ್ಪನವರೇ ತಂದೆ, ತಾಯಿ, ಅಣ್ಣ ಸರ್ವಸ್ವವಾದರು. ಅವರುಗಳನ್ನು ಮೈಸೂರಿಗೆ ಕರೆದುಕೊಂಡು ಬಂದು ವಿದ್ಯಾಭ್ಯಾಸ ಮಾಡಿಸಿ ಮುಂಜಿ ಮದುವೆ ಮಾಡಿಸಿ ಅವರುಗಳ ಕಾಲಮೇಲೆ ಅವರು ನಿಲ್ಲಲು ಆಸರೆಯಾದರು. ಈ ಅಣ್ಣತಮ್ಮಂದಿರ ಬಾಂಧವ್ಯ ಅಸ್ವಾದೃಶ. ಒಂದೇ ವರ್ಷದಲ್ಲೇ ಈ ಮೂವರೂ ಮೃತ್ಯುವನ್ನಪ್ಪಿ ಅಲ್ಲ ತಮ್ಮ ಅಪೂರ್ವ ಬಾಂಧವ್ಯವನ್ನು ಮೆರೆದರು.

ನಮ್ಮ ದೊಡ್ಡಪ್ಪ ಮಮತಾ ವಾತ್ಸಲ್ಯದ ಜೀವಂತ ಸ್ವರೂಪರು. ತಮ್ಮಂದಿರಷ್ಟೇ ಅಲ್ಲ ಅವರ ಮಕ್ಕಳೂ ಇವರ ಮಕ್ಕಳು. ಮನೆಗೆ ತಾನು ಹಿರಿಯನೆಂದೂ ತನ್ನ ಹೊಣೆಗಾರಿಕೆಯೂ ಅಷ್ಟೇ ಇತ್ತೆಂಬುದನ್ನು ಅವರು ಎಂದೂ ಮರೆಯಲಿಲ್ಲ. ನಮ್ಮ ತಾಯಿಗೆ ಚಿಕ್ಕಂದಿನಲ್ಲೇ ಪಿತೃವಿಯೋಗವಾಗಿತ್ತು. ನಮ್ಮ ಅಣ್ಣನವರಿಗೆ ಜನ್ಮ ಕೊಡಬೇಕು ಎನ್ನುವಲ್ಲಿ ನಮ್ಮ ಅಜ್ಜಿಯವರೂ ತೀರಿಕೊಂಡರಂತೆ. ಆದರೆ ವಾತ್ಸಲ್ಯಮಯಿಗಳಾದ ಈ ದಂಪತಿಗಳು ನಮ್ಮ ತಾಯಿಗೆ ಈ ವ್ಯಥೆಯ ಅರಿವೇ ಆಗದಂತೆ ಅವರಿಗೆ ತಾಯಿತಂದೆಗಳಾಗಿ ಕರ್ತವ್ಯ ನಿರ್ವಹಿಸಿದರು. ನಾಲ್ಕು ಬಾಣಂತನಗಳನ್ನು ನಮ್ಮ ಮಾತೃಶ್ರೀ ದೊಡ್ಡಮ್ಮನವರು ತಾಯಿ ಮಗಳಿಗೆ ಬಾಣಂತನ ಮಾಡುವಂತೆಯೇ ಮಾಡಿದರಂತೆ. ಇದನ್ನು ನಮ್ಮ ತಾಯಿಯವರು ನನಗೆ ಹೇಳಿದ್ದು. ನಮ್ಮ ಅಣ್ಣ ಹಾಗೂ ನನ್ನ ಮಧ್ಯೆ ವೆಂಕಟಲಕ್ಷ್ಮಿ ಎಂಬ ಬಹಳ ಮುದ್ದಾದ ಒಂದು ಮಗು ಇತ್ತಂತೆ. ಇನ್ನೂ ಮಗು ಬಹಳ ಚಿಕ್ಕದಾಗಿದ್ದಾಗಲೇ ನಮ್ಮ ತಂದೆಯವರು ಬೇರೆ ಊರಿನಲ್ಲಿ ಕೆಲಸಕ್ಕಿದ್ದುದರಿಂದ ಬಲವಂತವಾಗಿ ನಮ್ಮ ದೊಡ್ಡಪ್ಪ ದೊಡ್ಡಮ್ಮನವರ ಇಷ್ಟಕ್ಕೆ ವಿರೋಧವಾಗಿ

ಮಗು ಬಾಣಂತಿಯನ್ನು ಕರೆದುಕೊಂಡು ಹೋದರಂತೆ. ಆದರೆ ವಿಧಿಲೀಲೆ. ಕೇವಲ ಜ್ವರ ಬಂದು ಆ ಮಗು ಅಸುನೀಗಿತಂತೆ. ಇದಾದ ನಂತರ ಯಾವುದೋ ಕೆಲಸಕ್ಕೆ ನಮ್ಮ ತಂದೆಯವರು ಅಣ್ಣನ ಮನೆಗೆ ಬಂದಾಗ ಅಣ್ಣ ಅತ್ತಿಗೆ ಅವರ ಮುಖವನ್ನೂ ನೋಡಲಿಲ್ಲವಂತೆ. ಅಂತಹ ವಜ್ರಾಘಾತ ಅವರಿಗಾಗಿತ್ತು.

ನರಕ ಚತುರ್ದಶಿಯಂದು ನಮ್ಮ ಅಜ್ಜಿಯವರ ವೈದಿಕ. ಆದರೆ ನಮ್ಮ ದೊಡ್ಡಪ್ಪನವರು ಮಕ್ಕಳಿಗೆ ಯಾವುದೇ ಕೊರತೆ ಆಗದಂತೆ ಮುತುವರ್ಜಿ ವಹಿಸುತ್ತಿದ್ದರು. ಅವರ ವಾತ್ಸಲ್ಯ ನೆನೆದಾಗ ಕಣ್ಣು ತಾನಾಗಿಯೇ ಒದ್ದೆಯಾಗುತ್ತದೆ. ಸುಮಾರು ಏಳು, ಎಂಟು ಮಕ್ಕಳಿಗೆ ಬೆಳಗಿನ ಜಾವವೇ ಮೈತುಂಬ ಎಣ್ಣೆ ಹಚ್ಚಿ, ಬಿಸಿಬಿಸಿಯಾದ ನೀರನ್ನು ತಾನೇ ಹಾಕಿ, ಸೀಗೆಕಾಯಿ ಹಚ್ಚಿ, ಸ್ನಾನ ಮಾಡಿಸಿ, ಮೈ ಒರೆಸಿ ಹೊಸ ಬಟ್ಟೆ ತೊಡಿಸುತ್ತಿದ್ದರು. ಇದಕ್ಕೆ ಎಂದೂ ವ್ಯತ್ಯಯ ಬರಲಿಲ್ಲ. ಹಿರಿಯರಿಗೆ ಸೇರಿದ್ದು ಶ್ರಾದ್ಧ. ಆದರೆ ಮಕ್ಕಳ ಪಾಲಿಗೆ ಅಂದು ಹಬ್ಬ. ಸಂಜೆ ಪೆಟ್ಟಿಗೆ ತುಂಬಾ ಪಟಾಕಿ, ಮತಾಪು, ಸುರಸುರಬತ್ತಿಗಳನ್ನು ತಂದು ಮನೆಯವರನ್ನೆಲ್ಲಾ ಒಟ್ಟಿಗೆ ಕಲೆ ಹಾಕಿ, ತಾನೇ ಮುಂದಾಳುತ್ವ ವಹಿಸಿ ಸಿಡಿಸಿ, ಉರಿಸಿ, ಹಿಗ್ಗಿಸಿ ತಾವೂ ಹಿಗ್ಗುತ್ತಿದ್ದರು.

ನಮ್ಮ ದೊಡ್ಡಪ್ಪನವರು ಅನಾಥ ಬಂಧು, ಕಾರುಣ್ಯಸಿಂಧು, ಬಂಧುಗಳ ನಿಜವಾದ ಬಾಂಧವರು. ಬಡವ, ಬಲ್ಲಿದ, ಕಲಿತವ, ಕಲಿಯದವ, ಜಾಣ, ಪೆದ್ದ ಎಂಬ ಯಾವ ಭೇದಭಾವವೂ ಅವರ ಹತ್ತಿರ ಸುಳಿಯಲವಕಾಶವಿರಲಿಲ್ಲ. ಬಂಧು ಅಷ್ಟೆ ಅಲ್ಲ. ಅವನು ನನಗೆ ಸೇರಿದವ, ಬಾಂಧವ. ಅವನ ಒಳಿತು ಕೆಡುಕುಗಳು ನನ್ನವು. ಬಂಧುಗಳಲ್ಲಿ ಯಾರದೇ ಸಾವಾದರೂ ತತ್‌ಕ್ಷಣ ಓಡಿಹೋಗಿ ತನ್ನ ಕೈಲಾದ ಸಹಾಯವನ್ನು ಮಾಡಿ ಹೆಗಲಿಗೆ ಹೆಗಲನ್ನು ಕೊಟ್ಟು, ಸಮಯ ಬಿದ್ದರೆ ಅಪರ ಕರ್ಮಗಳನ್ನು ಮಾಡಿಸಿ ಮನೆಗೆ ಬಂದು ಶುಚಿಯಾಗಿ ನಲವತ್ತೋ, ಐವತ್ತೋ ಜನಗಳಿಗೆ ಊಟವನ್ನು ತೆಗೆದುಕೊಂಡು ಹೋಗಿ ಬಂಧುತ್ವ ನಿರ್ವಹಣೆ ಮಾಡುತ್ತಿದ್ದರು.

ಅವರು ಹುಟ್ಟಿದ್ದು ಅಮಾವಾಸ್ಯೆಯ ದಿನವಂತೆ. ಅಂದು ಹುಟ್ಟಿದವ ಸಕಲ ವಿದ್ಯಾಪಾರಂಗತನಾಗುತ್ತಾನಂತೆ. ಇದನ್ನು ನಮ್ಮ ತಂದೆ ಹೇಳುತ್ತಿದ್ದರು. ಇದು ನಮ್ಮ ದೊಡ್ಡಪ್ಪನವರ ವಿಷಯದಲ್ಲಿ ಸಾರ್ಥಕ್ಯವನ್ನು ಕಂಡಿತ್ತು. ಅವರು ಮೇಧಾವಿ, ದಾರ್ಶನಿಕ, ಒಳ್ಳೆಯ ಕುಸ್ತಿಪಟು, ಶ್ರಮಿಕ, ಕೃಷಿಕ, ರಸಿಕ ಹಾಗೂ ಒಳ್ಳೆಯ ಅಡಿಗೆಯವರೂ ಆಗಿದ್ದರು. ಅವರದು ನಳಪಾಕ. ಯಾವ ಹೆಂಗಸೂ ಅವರನ್ನು ಸರಿದೂಗಲು ಸಾಧ್ಯವಿರಲಿಲ್ಲ. ಅಷ್ಟೇ ಅಚ್ಚುಕಟ್ಟು, ಅಷ್ಟೇ ರುಚಿ. ಯಾವುದೇ ಸಮಾರಂಭಕ್ಕೆ ಹೋದರೂ ತಾವು ಎಂ.ಎ ಪಾಸ್ ಮಾಡಿ ದೊಡ್ಡ ಹುದ್ದೆಯಲ್ಲಿದ್ದೇನೆಂಬ ಗರ್ವ ಸ್ವಲ್ಪವೂ ಇಲ್ಲ. ಸೊಂಟಕ್ಕೆ ಉತ್ತರೀಯವನ್ನು ಬಿಗಿದು ಅಡಿಗೆ ಮನೆಗೆ ಹೋಗಿ, ಸಹಾಯ ಬೇಕಿದ್ದರೆ ಅದನ್ನು ಮಾಡಿ, ತಾನೇ ಸೌಟು ಹಿಡಿದು ಬಡಿಸಲು ಮುಂದಾಗುತ್ತಿದ್ದರು. ಯಾವುದೇ ಸಮಾರಂಭವಾದರೂ ಅನಂತರಂಗಾಚಾರ್‌ರವರ ಹಾಜರಿ ಬಂಧುಗಳಿಗೆ ನೆಮ್ಮದಿಯ ಉಸಿರನ್ನು ತರಿಸುತ್ತಿತ್ತು.

ಅವರ ಜೀವನ ಹೂವಿನ ಸುಪ್ಪತ್ತಿಗೆ ಆಗಿರಲಿಲ್ಲ. ಆದರೆ ಅದನ್ನು ಅರಿತವರು ಬಹಳ ಕಡಿಮೆ. ನಲವತ್ತನಾಲ್ಕನೇ ವರ್ಷದಲ್ಲೇ ಅವರಿಗೆ ಪತ್ನೀ ವಿಯೋಗ. ಆರು ಮಕ್ಕಳು. ದೊಡ್ಡ ಮಗನಿಗೆ ಆಗ ಹದಿನೈದು ತುಂಬಿತ್ತು. ಕೊನೆಯ ಮಗುವಿಗೆ ಒಂದೂವರೆ ತಿಂಗಳು. ಈ ಮಗುವೂ ಸ್ವಲ್ಪ ದಿನಗಳಲ್ಲೇ ತೀರಿಕೊಂಡಿತ್ತು. ಅಧ್ಯಾಪಕ ವೃತ್ತಿ. ಮನೆಯಲ್ಲಿ ದೊಡ್ಡ ಸಂಸಾರದ ಹೊಣೆಗಾರಿಕೆ. ಅಡಿಗೆಯನ್ನು ಅವರೇ ಮಾಡಬೇಕಾಗಿತ್ತು. ಇಂಥಹ ಸಂದರ್ಭದಲ್ಲಿ ಅವರಿಗೆ ಮತ್ತೆ ಮದುವೆ ಮಾಡಿಕೊಳ್ಳದೆ ಬೇರೆ ವಿಧಿಯೇ ಇರಲಿಲ್ಲ. ನಮ್ಮ ದೊಡ್ಡಮ್ಮ ಜಾನಕಮ್ಮನವರ ಚಿಕ್ಕಪ್ಪನವರ ಮಗಳಾದ ಇಂದಿರಾ ಜೊತೆ ಎರಡನೆಯ ವಿವಾಹ. ಇವರು ವಯಸ್ಸಿನಲ್ಲಿ ಅತ್ಯಂತ ಕಿರಿಯರಾದರೂ ದೊಡ್ಡ ಸಂಸಾರದ ಜವಾಬ್ದಾರಿಯನ್ನು ಹೊತ್ತು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ ಎಂದು ಹೇಳಲು ನನಗೆ ಹೆಮ್ಮೆ ಎನಿಸುತ್ತದೆ. ಅವರು ನಮ್ಮಗಳೆಲ್ಲರಿಗೂ 'ಇಂದಿರು ಶಿತ್ತಿ' (ಚಿಕ್ಕಮ್ಮ). ಇಂದೂ ಕುಟುಂಬದ ಹಿರಿಯರಾಗಿ ನಮ್ಮಗಳಿಗೆಲ್ಲಾ ಮಾರ್ಗದರ್ಶನ ನೀಡುತ್ತಿದ್ದಾರೆ. ಇವರದೂ ಆದರ್ಶ ದಾಂಪತ್ಯ. ಪತಿಯ ಇಂಗಿತವನ್ನರಿತು ಅದನ್ನೇ ತನ್ನದಾಗಿಸಿಕೊಂಡು ಸಹಧರ್ಮಚಾರಿಣಿಯ ಕರ್ತವ್ಯವನ್ನು ನಿರ್ವಹಿಸಿದ್ದಾರೆ. ಈ ದಂಪತಿಗಳು ಬಂಧುಗಳ ಮನೆಯ ಮುಂಜಿಯಲ್ಲಾಗಲೀ, ಹುಟ್ಟುಹಬ್ಬದ ದಿನವಾಗಲೀ, ಅಕ್ಷರಾಭ್ಯಾಸದ ದಿನವಾಗಲೀ, ಅಥವಾ ಗೃಹಪ್ರವೇಶವೇ ಆಗಲೀ ಅಡಿಗೆಯವರೇನಾದರೂ ಕೈಕೊಟ್ಟರೆ ತಾವೇ ಲಡ್ಡುವಿನಿಂದ ಹಿಡಿದು ಎಲ್ಲಾ ಭಕ್ಷ್ಯಗಳೊಂದಿಗೆ ಸಮಾರಂಭದ ಅಡಿಗೆಯನ್ನು ಮಾಡಿ, ಬಡಿಸಿ, ಬಂಧುಗಳ ಮನಸ್ಸಿಗೆ ನೆಮ್ಮದಿಯನ್ನು ತಂದ ಅದೆಷ್ಟೋ ಘಟನೆಗಳು ನಮ್ಮ ಕುಟುಂಬದಲ್ಲಿ ನಡೆದಿವೆ.

ನಮ್ಮ ದೊಡ್ಡಪ್ಪನವರು ಪರಮ ದೈವಭಕ್ತರು. ನಿಷ್ಠೆಯಿಂದ ಕೂಡಿದ ಆಚಾರ ಪುರುಷರು. ಎಂದೂ ಯಾವುದೇ ಕ್ರಿಯಾಲೋಪ ಮಾಡಿದವರಲ್ಲ. ಆಳ್ವಾರರುಗಳ ನಾಲಾಯಿರಂ ಪ್ರಬಂಧ ಅವರಿಗೆ ವಾಚೋ ವಿಧೇಯವಾಗಿತ್ತು. ಅವುಗಳನ್ನು ಅವರು ತಮ್ಮ ಮಕ್ಕಳಿಗೂ ಕಲಿಸುತ್ತಿದ್ದರು.ನಿಗಮಾಂತಮಹಾದೇಶಿಕರೆಂದು ಪ್ರಸಿದ್ಧರಾದ ಸಂಸ್ಕೃತದ ಕವಿ, ಆಚಾರ್ಯ ವೆಂಕಟನಾಥರ ಸ್ತೋತ್ರಗಳನ್ನು ಮೊಟ್ಟಮೊದಲನೆಯ ಬಾರಿಗೆ ಸಂಪಾದಿಸುವ ಹೊಣೆಗಾರಿಕೆ ಇವರು ಹೊತ್ತಿದ್ದರು. ಇಂದಿಗೂ ಇದನ್ನು ಸರಿಗಟ್ಟುವ ಮತ್ತೊಂದು ಪ್ರಯತ್ನ ನಡೆದಿಲ್ಲ. ಶ್ರೀ ವೈಷ್ಣವ ಸಂಪ್ರದಾಯದಂತೆ ಅವರು ವೇದಾಂತವನ್ನು ಸಿಲ್ಲವರಾಗಿದ್ದು, ಅಧಿಕಾರವಾಣಿಯಿಂದ ಅದರ ಬಗ್ಗೆ ಮಾತನಾಡುವ ಸಾಮರ್ಥ್ಯವುಳ್ಳವರೂ ಆಗಿದ್ದುದೇ ಅಲ್ಲದೆ ಪ್ರತಿಯೊಬ್ಬರಿಗೂ ಅದನ್ನು ಮನವರಿಕೆ ಮಾಡುವ ಪ್ರಯತ್ನವನ್ನು ಅನವರತ ಮಾಡುತ್ತಲಿದ್ದರು.

ಈ ಮೂವರು ಸಹೋದರರು ಜೀವಿಕೆಗಾಗಿ ತೀ. ನರಸೀಪುರವನ್ನು ಬಿಟ್ಟು ಬರಬೇಕಾಗಿ ಬಂದರೂ ಶ್ರೀ ಗುಂಜಾನರಸಿಂಹ ಸ್ವಾಮಿಯ ಸೇವೆಗೇ ಇವರ ಜೀವನ ಮುಡುಪಾಗಿದ್ದಿತು. ಕಾವೇರಿ, ಕಪಿಲೆ, ಸ್ಫಟಿಕ ಸರೋವರದ ಸಂಗಮಕ್ಷೇತ್ರದ ಮಹಾತ್ಮೆ ನಮ್ಮಗಳನ್ನೂ ಆಕರ್ಷಿಸಿತ್ತು. ಔದಾರ್ಯ ಇವರುಗಳ ಹುಟ್ಟುಗುಣ. ವರ್ಷದಲ್ಲಿ ಎಷ್ಟು ಸಮಾರಾಧನೆಗಳನ್ನು ಮಾಡಿದರೂ

ತೃಪ್ತಿ ಇಲ್ಲ. ನಮ್ಮ ಮುತ್ತಾತಂದಿರಾದ ರಂಗಪ್ಪನವರಿಗೆ ಬಹಳ ವರ್ಷಗಳ ಕಾಲ ಮಕ್ಕಳಿರಲಿಲ್ಲವಂತೆ. ತಿ. ನರಸೀಪುರದಿಂದ ಸುಮಾರು ಎರಡು ಕಿಲೋ ಮೀಟರ್ ದೂರದಲ್ಲಿ ಹೊಸೂರೆಂಬ ಗ್ರಾಮದಲ್ಲಿ ಅವರಿಗೆ ತೋಟ ಹಾಗೂ ಗದ್ದೆ ಇದ್ದಿತು. ಪೂಜ್ಯ ರಂಗಪ್ಪ ದಂಪತಿಗಳು ಆ ತೋಟದ ಒಂದು ಮೂಲೆಯಲ್ಲಿ ಸತತವಾಗಿ ನಾಲ್ಕು ತಿಂಗಳು ಪರಿಶ್ರಮಪಟ್ಟು, ಸ್ವಹಸ್ತದಿಂದ ಒಂದು ಕೆರೆ ತೋಡಿದರು. ಇಂದೂ ಅದು ಇದೆ. ಅದೇ 'ಕಂತೇಕಟ್ಟೆ'. ಅಂದಿನಿಂದ ಕಾರ್ತಿಕ ಮಾಸದಲ್ಲಿ ಒಂದು ದಿನ ಶ್ರೀ ಗುಂಜಾನೃಸಿಂಹ ಸ್ವಾಮಿಯ ಉತ್ಸವಮೂರ್ತಿಯನ್ನು ಆ ಜಾಗಕ್ಕೆ ಬಿಜ ಮಾಡಿಸಿ ನರಸೀಪುರ ಹಾಗೂ ಹೊಸೂರಿನವರಿಗೆಲ್ಲಾ ಅನ್ನ ಸಂತರ್ಪಣೆ ನಡೆಯುತ್ತದೆ. ಅದೇ ವನಭೋಜನ. ನಾವು ಚಿಕ್ಕವರಿದ್ದಾಗ ವನಭೋಜನಕ್ಕಾಗಿ ನಾವು ಕಾತರಿಸುತ್ತಿದ್ದುದುಂಟು. ಎರಡು ದಿನ ಮುಂಚಿತವಾಗಿ ಕಮಾನಿರುವ ಎರಡು ಗಾಡಿಗಳನ್ನು ಕಟ್ಟುತ್ತಿದ್ದರು. ಒಂದರಲ್ಲಿ ಅಡಿಗೆಗೆ ಬೇಕಾದ ಎಲ್ಲಾ ಪಾತ್ರೆ, ಪದಾರ್ಥಗಳು, ಇನ್ನೊಂದರಲ್ಲಿ ಮೆತ್ತನೆಯ ಹಾಸಿಗೆ. ಅದು ರಾತ್ರಿ ಮಕ್ಕಳಿಗೆ ಮಲಗಲು. ಒಂದು ಸಣ್ಣ ಮನೆ, ಬೇವು, ಹೊನ್ನೆ, ಬೇಲ, ಆಲದ ಮರಗಳ ತೋಪು ಸುತ್ತಲೂ ಗದ್ದೆ. ಒಂದು ಪಕ್ಕದಲ್ಲಿ ಹತ್ತಿರವೇ ಹರಿಯುತ್ತಿದ್ದ ಕಾಲುವೆ. ಮಕ್ಕಳಿಗೆ ಇನ್ನೇನು ಬೇಕು? ಎರಡು ದಿನ ನಮ್ಮ ಸಡಗರ ಹೇಳತೀರದು. ಅಡಿಗೆಯ ಸಂಪೂರ್ಣ ಜವಾಬ್ದಾರಿ ನಮ್ಮ ದೊಡ್ಡಪ್ಪನವರದೇ. ದೇವರನ್ನು ಬಿಜ ಮಾಡಿಸಿಕೊಂಡು ಬರುವ ಜವಾಬ್ದಾರಿ ನಮ್ಮ ತಂದೆಯವರದು. ಸುಮಾರು ಏಳುನೂರು, ಎಂಟುನೂರು ಜನಗಳಿಗೆ ಸಮಾರಾಧನೆ ನಡೆಯುತ್ತಿತ್ತು.

ಇದೇ ರೀತಿ ಶ್ರೀ ಗುಂಜಾನೃಸಿಂಹಸ್ವಾಮಿಯವರ ರಥೋತ್ಸವ. ಅದಕ್ಕೆ ಸಾರ್ವಜನಿಕರಿಂದ ದೇಣಿಗೆ ಸಿಗುತ್ತಿತ್ತು. ಅಂದು ಅಲ್ಲಿಗೆ ಬರುವ ಸಮಸ್ತ ಭಕ್ತರಿಗೂ ಹುಳಿಯನ್ನು, ಮೊಸರನ್ನು, ಪುಳಿಯೋಗರೆ, ಪಾನಕ ಸಮಾರಾಧನೆ, ಸಂಪೂರ್ಣ ಜವಾಬ್ದಾರಿ ದೊಡ್ಡಪ್ಪನವರದೇ ಎಂದು ಹೇಳುವ ಅವಶ್ಯಕತೆ ಇಲ್ಲ.

ಅವರಿಗೆ ಕಲೆಯಲ್ಲಿ ಅಪಾರ ಆಸಕ್ತಿ. ಹಿಂದಿನದನ್ನು ಅದು ಇದ್ದ ಹಾಗೆಯೇ ಉಳಿಸಿಕೊಂಡು ಬರಬೇಕು ಎನ್ನುವುದು ಅವರ ಸಿದ್ಧಾಂತ. ಶ್ರೀ ನಿಗಮಾಂತಕ ಮಹಾದೇಶಿಕರ ಸಪ್ತಶತಮಾನೋತ್ಸವ ಸಂದರ್ಭದಲ್ಲಿ ಸಂಪೂರ್ಣವಾಗಿ ಶಿಥಿಲವಾಗಿದ್ದ ಶ್ರೀ ಗುಂಜಾನೃಸಿಂಹ ಸ್ವಾಮಿಯವರ ದೇವಸ್ಥಾನದ ಜೀರ್ಣೋದ್ಧಾರದ ಕೆಲಸ ಅವರಿಂದ ನಡೆಯಿತು. ದೇವಸ್ಥಾನಕ್ಕೆ ಹೊಸ ಮೆರುಗು ಬಂದರೂ ಪುರಾತನಕ್ಕೆ ಯಾವುದೇ ಧಕ್ಕೆ ಬಂದಿಲ್ಲ. ಅವರ ಸತತ ಪರಿಶ್ರಮ ದೇವಸ್ಥಾನವನ್ನು ಉಳಿಸಿ ಬೆಳೆಸಿತು. ದೇಶಿಕ ಸಪ್ತ ಶತಮಾನೋತ್ಸವ ಸಂದರ್ಭದಲ್ಲಿ ಹೊರತಂದ ಸ್ಮರಣಸಂಚಿಕೆ ಇಂದಿಗೂ ಒಂದು ಆಕರಗ್ರಂಥವಾಗಿ ಉಳಿದಿದೆ. ಅದರಲ್ಲಿನ ಸಂಶೋಧನಾ ಲೇಖನಗಳಿಂದ ಅದೆಷ್ಟೋ ತತ್ವಜಿಜ್ಞಾಸುಗಳು ಹಾಗೂ ಸಂಶೋಧಕರು ಮಾರ್ಗದರ್ಶನ ಪಡೆಯುತ್ತಿದ್ದಾರೆ. ಇದು ನಮ್ಮ ದೊಡ್ಡಪ್ಪನವರ ತತ್ವಬದ್ಧತೆಗೆ ಹಿಡಿದ ಕನ್ನಡಿ.

ಅವರದು ಬಹುಮುಖ ವ್ಯಕ್ತಿತ್ವ, ಬಹುಮುಖ ಪ್ರತಿಭೆ. ಸಂಘಸಂಸ್ಥೆಗಳನ್ನು ಕಟ್ಟುವಲ್ಲಿ ಅವರಿಗೆ ಮಿತಿಮೀರಿದ ಉತ್ಸಾಹ. ಶ್ರೀ ವೈಷ್ಣವರಿಗಾಗಿ ಒಂದು ಸಂಘ ಆಗ ತಾನೇ ಸ್ಥಾಪಿತವಾಗಿತ್ತು. ಆದರೆ ಅದು ಇನ್ನೂ ಬಾಲ್ಯಾವಸ್ಥೆಯನ್ನು ದಾಟಿರಲಿಲ್ಲ. ಯಾರದೋ ಮನೆಯಲ್ಲಿ ಸಭೆ ಸೇರಿ ಕಾರ್ಯಕಲಾಪ ನಡೆಯುತ್ತಿತ್ತು. ನಮ್ಮ ದೊಡ್ಡಪ್ಪನವರನ್ನು ಅದರ ಕಾರ್ಯದರ್ಶಿಯನ್ನಾಗಿ ಚುನಾಯಿಸಲು ಒಕ್ಕೊರಲಿನಿಂದ ನಿರ್ಧರಿಸಲಾಯಿತು. ಇನ್ನೂ ಹೆಜ್ಜೆ ಇಡಲೂ ತಡವರಿಸುತ್ತಿದ್ದ ಸಂಘ ತನ್ನದೇ ಆದ ನೆಲೆಯನ್ನು ಕಂಡುಕೊಳ್ಳಲು ನಮ್ಮ ದೊಡ್ಡಪ್ಪನವರು ಅನವರತ ಶ್ರಮಿಸಿದರು. ಸಾಕಷ್ಟು ದೊಡ್ಡ ನಿವೇಶನ ಇದಕ್ಕಾಗಿ ಮಂಜೂರಾಯಿತು. ಈಗಲೂ ಇದು ಕಾಂತರಾಜ ಅರಸ್ ರಸ್ತೆಯಲ್ಲಿದೆ. ಅದಕ್ಕೆ ಅಡಿಪಾಯವೂ ಅವರ ಕಾಲದಲ್ಲೇ ಹಾಕಲ್ಪಟ್ಟಿತು. ಈಗ ಅದು ಅತ್ಯಂತ ಪ್ರವರ್ಧಮಾನ ಸ್ಥಿತಿಯನ್ನು ತಲಪಿದೆ.

ನನಗೆ ಅವರು ಗುರುಗಳೂ ಹೌದು. ಕನ್ನಡ ವ್ಯಾಕರಣ ಗ್ರಂಥಗಳನ್ನು ಅವರ ಅಡಿದಾವರೆಗಳಲ್ಲಿ ನಾನು ಅಭ್ಯಸಿಸಿದ್ದೇನೆ. ಅವರು ಹುಟ್ಟು ಅಧ್ಯಾಪಕರೆಂದೇ ನನ್ನ ಎಣಿಕೆ. ಶಿಷ್ಯರಲ್ಲಿ ಅವರಿಗೆ ಎಲ್ಲಿಲ್ಲದ ವಾಂಛಲ್ಯ. ಅಧ್ಯಾಪಕ ವೃತ್ತಿಯಲ್ಲಿ ಅತೀವ ಆಸಕ್ತಿ. ನಿಷ್ಠೆ, ಪ್ರಾಮಾಣಿಕತೆ, ತನ್ನ ಎಲ್ಲವನ್ನೂ ಶಿಷ್ಯರಿಗೆ ದಾನ ಮಾಡುವ ಮನಸ್ಸು. ಎಷ್ಟು ಹೇಳಿದರೂ ಸಾಲದೆಂಬ ಅತೃಪ್ತಿ. ಎಷ್ಟು ಸಿದ್ಧತೆ ನಡೆಸಿದರೂ ಸಂಪೂರ್ಣ ತೃಪ್ತಿ ಸಿಗದು. ಒಂದು ದಿನ ಅವರು ಪಾಠ ಹೇಳುತ್ತಿದ್ದಾಗ ಬಸಪ್ಪಶಾಸ್ತ್ರಿಗಳ ಶಾಕುಂತಲ ನಾಟಕವನ್ನು ತರಲು ನನಗೆ ಹೇಳಿದರು. ಅವರ ಗ್ರಂಥಭಂಡಾರ ಮಹಡಿ ಮೇಲಿನ ಕೊಠಡಿಯಲ್ಲಿತ್ತು. ಅದು ಸರಸ್ವತಿಯ ಭಂಡಾರವೇ ಆಗಿತ್ತು. ಯಾವ ಒಳ್ಳೆಯ ಪುಸ್ತಕವೂ ಅವರ ಕಣ್ಣು ತಪ್ಪಿಸಲು ಸಾಧ್ಯವಿರಲಿಲ್ಲ. ನಾನು ಪುಸ್ತಕ ತೆಗೆದುಕೊಂಡು ಬಂದೆ. ಅದನ್ನು ತೆಗೆಯಲು ನನಗೆ ಹೇಳಿದರು. ಅದನ್ನು ಹಾಳೆ ಹಾಳೆ ತೆಗೆದಾಗ ಅವರು ಎಂತಹ ಪ್ರಾಮಾಣಿಕ ಅಧ್ಯಾಪಕರಾಗಿದ್ದರೆಂಬುದು ನಾನು ಯೋಚಿಸುವಂತೆ ಮಾಡಿತು. ಅಷ್ಟು ಹೊತ್ತಿಗಾಗಲೇ ಮಹಾರಾಣಿ ಕಾಲೇಜಿನಲ್ಲಿ ಹಿಂದಿ ಅಧ್ಯಾಪಕಳಾಗಿ ನನ್ನ ನಿಯುಕ್ತಿ ಆಗಿತ್ತು. ಒಂದು ಕಡೆ ಬಸಪ್ಪ ಶಾಸ್ತ್ರಿಗಳ ಅನುವಾದ. ಪ್ರತಿಯೊಂದು ಪುಟಕ್ಕೂ ಇನ್ನೊಂದು ಬಿಳಿ ಹಾಳೆಯನ್ನು ಸೇರಿಸಿ ಬೈಂಡ್ ಮಾಡಿಸಿದ್ದರು. ಆ ಬಿಳಿಹಾಳೆಯಲ್ಲಿ ಕವಿ ಕಾಳಿದಾಸನ ಮೂಲಕೃತಿಯ ಸಂಸ್ಕೃತ ಪಾಠ. ಪುಸ್ತಕದ ಕೊನೆಯಲ್ಲಿ ಸುಮಾರು ೫೦ ಪುಟಗಳಷ್ಟು ಬಿಳಿಹಾಳೆ. ಅದರಲ್ಲಿ ಕೃತಿಯ ಬಗ್ಗೆ ವಿವಕ್ಷೆ. ಈ ಮಟ್ಟಕ್ಕೆ ಇಂದು ನಾವು ಅಧ್ಯಾಪಕರು ಇದ್ದೇವೆಯೆ ಎಂಬ ಆತ್ಮಮಂಥನ ನಾವೇ ಮಾಡಿಕೊಳ್ಳಬೇಕು. ಅವರ ವಿದ್ಯಾರ್ಥಿ ಅವರು ಕಂಡ ದೇವರು. ದೇವತಾರಾಧನೆಯಂತಹುದೇ ನಿಷ್ಠೆ ಅವರ ಅಧ್ಯಾಪನದಲ್ಲಿ. ಅವರಂತಹ ಆದರ್ಶ ಪ್ರಾಮಾಣಿಕ ಅಧ್ಯಾಪಕರು ಬೆರಳೆಣಿಕೆಗೆ ಸಿಗುವರು.

ಅವರು ತಮ್ಮ ಬದುಕಿನಲ್ಲಿ ಯಾವುದೇ ಕಾರಣಕ್ಕೂ ತಮ್ಮ ಸಿದ್ಧಾಂತಗಳೊಡನೆ ಹೊಂದಾಣಿಕೆ ಮಾಡಿಕೊಳ್ಳಲಿಲ್ಲ. ಅವರ ನಿಯತ್ತು ಎಂದೂ ಸಡಿಲಗೊಳ್ಳಲಿಲ್ಲ. ಒಂದು ರೀತಿಯಲ್ಲಿ ನೋಡುವುದಾದರೆ ಅವರು ಖಂಡಿತವಾದಿ. ತಮ್ಮ ಸ್ವಾರ್ಥಕ್ಕಾಗಿ ಅವರು

ಯಾವಾಗಲೂ ಯಾರಲ್ಲೂ ಏನನ್ನೂ ಕೇಳಲಿಲ್ಲ. ಶ್ರೀನಿಗಮಾಂತ ಮಹಾದೇಶಿಕರು ಹೇಳಿದ ಈ ವಾಕ್ಯಗಳೇ ಅವರ ಬದುಕಿನ ಆದರ್ಶಗಳಾಗಿದ್ದವು.... ದುರೀಶ್ವರದ್ವಾರ ಬಹಿರ್ವಿತರ್ದಿಕಾ। ದುರಾಶಿಕಾಯೈ ರಚಿತೋSಯಮಂಜಲಿಃ". ಅವರದು ಅದಮ್ಯ ಮನೋದಾರ್ಢ್ಯ. ದೈನ್ಯತೆಗೂ ಅವರಿಗೂ ಅಜಗಜಾಂತರ. ಮೃಗರಾಜ ಸಿಂಹದಂತೆ ಅವರು ಬಾಳ್ವೆ ನಡೆಸಿದರು.

ಅವರ ಬದುಕಿನುದ್ದಕ್ಕೂ ಕಂಡುಬರುವ ಅದಮ್ಯ ಶಕ್ತಿ ಬದುಕಿನ ಬಗೆಗಿನ ಉತ್ಸಾಹ, ಗೌರವ ಹಾಗೂ ಅವಿರತ ಪರಿಶ್ರಮ. ಆಲಸ್ಯ ಅವರ ಹತ್ತಿರವೂ ಸುಳಿಯಲಿಲ್ಲ. ಪ್ರತಿನಿತ್ಯ ಹದಿನೆಂಟು ಗಂಟೆಗಳಿಗೆ ಕಡಿಮೆ ಇಲ್ಲದಂತೆ ಅವರು ಕೆಲಸ ಮಾಡುತ್ತಿದ್ದರು. ನಾವುಗಳು ಹರಟೆಯಲ್ಲಿ ಕಾಲಹರಣ ಮಾಡುತ್ತಿದ್ದರೆ ನೋಡಿ ಅವರಿಗೆ ಇರಿಸುಮುರಿಸು ಉಂಟಾಗುತ್ತಿದ್ದುದು ಈಗಲೂ ನೆನಪಿದೆ. ಕ್ಷಣಶಃ ಕಣಶಶ್ಚೈವ ವಿದ್ಯಾಂ ಅರ್ಥಂ ಚ ಸಾಧಯೇತ್! ಕ್ಷಣೇ ನಷ್ಟೇ ಕುತೋ ವಿದ್ಯಾ ಕಣೇ ನಷ್ಟೇ ಕುತೋ ಧನಂ।। ತಮ್ಮ ಜೀವನದಲ್ಲಿ ಅವರು ಈ ಸಿದ್ಧಾಂತವನ್ನು ಚಾಚೂ ತಪ್ಪದೆ ಪರಿಪಾಲಿಸಿದರು. ಅವರ ಬದುಕಿನ ಕೊನೆಯ ಹತ್ತು ವರ್ಷಗಳಲ್ಲಿ ಅನಾರೋಗ್ಯದಿಂದ ಅವರ ದೇಹಸ್ಥಿತಿಯಲ್ಲಿ ಬಹಳಷ್ಟು ಬದಲಾವಣೆ ಉಂಟಾಯಿತು. ಆ ಸಮಯದಲ್ಲಿ ಅವರು ತಮ್ಮ ಮನೋದಾರ್ಢ್ಯವನ್ನಾಗಲೀ ಧೈರ್ಯವನ್ನಾಗಲೀ ಕಳೆದುಕೊಳ್ಳಲಿಲ್ಲ. ಬದುಕಿನ ಬಗೆಗಿನ ಅವರ ಆಸಕ್ತಿ ಕ್ಷೀಣಿಸಲಿಲ್ಲ. ಎಂದೂ ಅವರು ತಮ್ಮ ಕ್ರಿಯಾಶೀಲತೆಯನ್ನು ಬದಿಗೊತ್ತಲಿಲ್ಲ. "ಆಲಸ್ಯೋ ಹಿ ಮನುಷ್ಯಾಣಾಂ ಶರೀರಸ್ಥೋ ಮಹಾರಿಪುಃ" ಎನ್ನುವುದನ್ನು ತಮ್ಮ ಕಾಯಕದಿಂದ ಅವರು ಮಾಡಿ ತೋರಿಸಿದರು. ಆಲಸ್ಯ ಅವರ ಹತ್ತಿರ ಸುಳಿಯದೆ ಇದ್ದುದರಿಂದ ಅವರ ಅನಾರೋಗ್ಯ ಅವರಿಗೆ ಯಾವುದೇ ಅಡಚಣೆ ಉಂಟುಮಾಡಲು ಶಕ್ತವಾಗಲಿಲ್ಲ. ಇದೇ ಹತ್ತು ವರ್ಷಗಳಲ್ಲಿ ಅವರ ಅತ್ಯುತ್ತಮ ಕೃತಿಗಳು ಹೊರಬಂದಿವೆ. ಇಂಥಹ ಸ್ಥಿತಪ್ರಜ್ಞ ಕರ್ಮಯೋಗಿಯನ್ನು ದೊಡ್ಡಪ್ಪನನ್ನು ಪಡೆಯುವ ಭಾಗ್ಯ ನನಗೆ ಕರುಣಿಸಿದ್ದಕ್ಕಾಗಿ ದೈವಕ್ಕೆ ನನ್ನ ಕೃತಜ್ಞತೆಗಳು.



# ಶ್ರೀವೈಷ್ಣವ ಚಿಂತನ

ನೀಲತ್ತಹಳ್ಳಿ ರಾಮಶೇಷನ್

ಕನ್ನಡ ಸಾಹಿತ್ಯೇತಿಹಾಸದ ಪರಂಪರೆಯನ್ನು ಕುರಿತಂತೆ ಚಿಂತನ ನಡೆಸುವಲ್ಲಿ, 'ನವೋದಯ ಕಾಲ'ವೆಂದು ವಿದ್ವಾಂಸರು ಏನನ್ನು ಕರೆದಿದಾರೆಯೋ ಆ ಅವಧಿ - ಕ್ರಿ. ಶ. ೧೮ರ ಶತಕದಿಂದೀಚೆಗೆ - ಆ ಅವಧಿಯಲ್ಲಿ ಬದುಕಿ ತಮ್ಮದೇ ಆದ ವಿಶಿಷ್ಟ ತೆರನಾದ ಸಾಹಿತ್ಯಿಕ ಕೊಡುಗೆ ನೀಡಿರುವ ಹಿರಿಯ ವಿದ್ವಾಂಸರಲ್ಲಿ ಡಾ। ಎನ್. ಅನಂತರಂಗಾಚಾರ್ ಅವರ ಹೆಸರು ಬಹುಶ್ರುತವೆಂದರೆ ಉತ್ಪ್ರೇಕ್ಷೆಯಾಗದು. ಆಚಾರ್ಯ ಬಿಎಂಶ್ರೀ, ಎ.ಆರ್. ಕೃಷ್ಣಶಾಸ್ತ್ರಿಗಳು, ತ. ಸು ವೆಂಕಣ್ಣಯ್ಯನವರು, ಡಿವಿಜಿ, ಮಾಸ್ತಿ, ಕಾರಂತರು ಹೀಗೆ ಅನೇಕ ಹಿರಿಯರ ಸಾಲಲ್ಲಿ ಅವರವರು ತೋರಿಗೊಟ್ಟ ಜ್ಞಾನದ ಬೆಳಕನ್ನು ವಿಶಾಲ ಮನದಿಂದ ಸ್ವೀಕರಿಸಿ, ತನ್ನದೆ ಆದ ಸ್ವತಂತ್ರ ಶೈಲಿ-ಚಿಂತನ-ಸಾಧನೆ-ವಾಙ್ಮಯ ತಪಸ್ಸು ನಡೆಸಿದ ಧೀಮಂತ ಚೇತನ ಶ್ರೀ ಅನಂತರಂಗಾಚಾರ್ಯರು. ಅವರು ಅದೆಷ್ಟು ಚೆಲುವರಂಗರಾಗಿದ್ದರೊ ಹಾಗೆಯೇ ಅವರ ಬರಹ ಕೂಡ; ನೀಡುವ ಕೈ ಅವರದಾಗಿದ್ದು ಅಲ್ಲಿ ಕೃಪಣತೆಗೆ ಎಡೆ ಸುತಾರಂ ಇರಲಿಲ್ಲ.

ಅನ್ನವನು ಇಕ್ಕುವುದು,
ನನ್ನಿಯನು ನುಡಿಯುವುದು
ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಾಣವಕ್ಕು ಸರ್ವಜ್ಞ
"ಏನು ಬಂದಿರಿ ಕುಳ್ಳಿರೆಂದರೆ ನಿಮ್ಮ ಮನೆಯ ಸಿರಿ ಹಾರಿಹೋಹುದೆ"

"An interesting Teacher" ಹೀಗೆಲ್ಲ ಪುಂಖಾನುಪುಂಖ ಆಗಿ ಆಚಾರ್ಯರ ಬಗ್ಗೆ ನೆನಪು ಮೂಡಿ ಬರುತ್ತದೆ. ಅವರು ಅದೆಷ್ಟು ನೂರಾರು ವಿದ್ಯಾರ್ಥಿಗಳಿಗೆ ಅನ್ನವಿಕ್ಕಿದರೊ ಕಾಣಬಂದವರಿಗೆ ಉಪಚರಿಸಿದರೊ ವಿದ್ಯಾರ್ಥಿಗಳಿಗೆ ಸ್ಫೂರ್ತಿಯುತ ಮೇಷ್ಟರಾಗಿದ್ದರೊ ಆ ಪೀಳಿಗೆ (ನನಗೆ ಹಿರಿಯರು!) ಇಂದೂ ಅನಂತರಂಗಾಚಾರ್ಯರನ್ನು ಸ್ಮರಿಸುತ್ತದೆ. ನಾನಂತೂ ಆಚಾರ್ಯರನ್ನು ಅನೇಕ ಸಲ ಕಂಡು, ಅವರ ಮನೆಯ ಒಬ್ಬಟ್ಟು, ಪುಳಿಯೊಗರೆ ಆತಿಥ್ಯ

ಸವಿದು, "ನೀನೇನು ತಿಳಿಯೆ ನಾ ಕಾಣೆ" ಅಂತನ್ನಿಸಿಕೊಂಡು, ಮುಗುಳ್ನಗುವ ಆ ಅಂದವಾದ ಸಿರಿಮೊಗ ಕಂಡು, ನಮಿಸಿ, ಹೊರಡುವುದು ಪರಿಪಾಠವೇ ಆಗಿತ್ತು. ಕೃಷ್ಣಶಾಸ್ತ್ರಿಗಳನ್ನು ಕುರಿತ ಅವರ ಲೇಖನವಾಗಲಿ, ಅವರು ಬರೆದಿರುವ, ಸಂಪಾದಿಸಿರುವ ಕೃತಿಗಳನ್ನಾಗಲಿ ವೀಕ್ಷಿಸಿದಾಗ, ಎಷ್ಟುಗಾಢವಾದ ಚಿಂತನ ಅವರಲ್ಲಿ ಬಸಿಯಾಗಿ ಹರಳುಗಟ್ಟಿತ್ತು ಎಂಬುದು ವಿದಿತವಾಗುತ್ತದೆ. ರಸ - ಅನುಭವ - ಅದರ ವಾಗ್ರೂಪದ ಅಭಿವ್ಯಕ್ತಿ, ಅದರಲ್ಲಿ ಅಂತರ್ದೃಷ್ಟ ಆಗಿ ಇರುವ ಧ್ವನಿ, ಎಲ್ಲವೂ ಆಚಾರ್ಯರ ``ಸಾಹಿತ್ಯ ಭಾರತಿ" ಯಂಥ ವಿದ್ವತ್ತು ಕೃತಿಯಿಂದ ಹಿಡಿದು, ಅನೇಕ ಲೇಖನಗಳ ತನಕವೂ ಓರಂತು ವಿಚಾರ ವೇದ್ಯ ಆಗುತ್ತದೆ.

ಆಚಾರ್ಯರ ಬಗ್ಗೆ ಆತ್ಮೀಯ, ಸಾಹಿತ್ಯಿಕ ವಿಶ್ಲೇಷಣೆ, ಅನೇಕರು ನಡೆಸಿದ್ದಾರೆ. ತಾವು ನಂಬಿ ನಡೆದ ಸ್ವಧರ್ಮ- ಶ್ರೀವೈಷ್ಣವ ಧರ್ಮ - ರಾಮಾನುಜ ಚಿಂತನೆ - ಪ್ರಪತ್ತಿಯ ಕುರಿತ ಸದಾಲೋಚನೆ, ಶ್ರೀ ನಿಗಮಾಂತ ದೇಶಿಕರಂಥ ಮಹಾನ್ ದಾರ್ಶನಿಕರ ಬಗ್ಗೆಬರೆದಿರುವ ಗ್ರಂಥ, ವಿಶಿಷ್ಟಾದ್ವೈತ ಪರಂಪರೆ, ಶಂಕರರ ಕುರಿತ ಚಿಂತನೆ, ತುಲನಾತ್ಮಕ ಸಾಹಿತ್ಯಿಕ ಮೀಕ್ಷೆ -ಹೀಗೆ ಆಚಾರ್ಯರ ಸಾಹಿತ್ಯಶೈಲಿ ನಡೆದಿದೆ.

ಅನೇಕ ದಶಕಗಳ ಕಾಲ ಆಚಾರ್ಯರು ಪ್ರಾಧ್ಯಾಪಕರಾಗಿ. ಉನ್ನತಲೇಖಕರಾಗಿ ಬೆಳಗಿದ್ದಾರೆ (೧೯೦೪ -೧೯೮೬). ಹೀಗಾಗಿ ಅವರು ಶ್ರೀವೈಷ್ಣವ ಸಾಹಿತ್ಯಕ್ಕೆ ನೀಡಿರುವ ಕೊಡುಗೆಯನ್ನು ಇಲ್ಲಿ ಸಮಾಲೋಚಿಸುವಲ್ಲಿ, ಬೇಲೂರು ದೇವಾಲಯವನ್ನೂ, ಒಂದು ತಾಸಲ್ಲಿ ತೋರಿಸುವ "ಗೈಡ್"ನ ಪಾಡು ನನ್ನದಾದೀತೇನೊ!

ಶ್ರೀವೈಷ್ಣವ ಹಾಗೂ ಧಾರ್ಮಿಕ ಚಿಂತನೆಗೆ ಒತ್ತುಗೊಟ್ಟಂತೆ ಅನಂತರಂಗಾಚಾರ್ಯರ ಕೃತಿಸಂಪದದಲ್ಲಿ ಹೆಸರಿಸಬಹುದಾದ ಕೃತಿಗಳು:

(i) ಶ್ರೀವೇದಾಂತದೇಶಿಕರು ಮತ್ತು ಅವರ ಗ್ರಂಥಗಳು

(ii) ಶ್ರೀಮನ್ನಿಗಮಾಂತ ಮಹಾದೇಶಿಕರು

(iii) ರಾಮಾಯಣಭಾರತಿ

(iv) ಭಾರತೀಯ ತೀರ್ಥಕಲಾಕ್ಷೇತ್ರ ಸಂದರ್ಶಿನೀ

(v) ಶ್ರೀವೇದಾಂತ ದೇಶಿಕರ ಸ್ತೋತ್ರಗಳು (ಸಂಪಾದಿತ)

(vi) 'ಸಾಹಿತ್ಯಭಾರತಿ'ಯ ಒಂದು ಅಧಿಕರಣ - ತಮಿಳು ಸಾಹಿತ್ಯ ಚರಿತ್ರೆ

(vii) ಇಪ್ಪತ್ತಕ್ಕೂ ಹೆಚ್ಚು ಲೇಖನಗಳು - "ಸಪ್ತಗಿರಿ" ಪತ್ರಿಕೆಯಲ್ಲಿ ಬೆಳಕು ಕಂಡಂಥವು.

ಇವುಗಳನ್ನು ಕುರಿತೇ ಒಂದು ವಿಚಾರಸಂಕಿರಣ ನಡಸುವಷ್ಟು ಸಾಮಗ್ರಿ, ಆಕರ, ಈ ಲೇಖನ - ಗ್ರಂಥಗಳಲ್ಲಿವೆ.

ತತ್ವತ್ರಯ - ಅದ್ವೈತ, ವಿಶಿಷ್ಟಾದ್ವೈತ ಹಾಗೂ ದ್ವೈತ - ಸಂಸ್ಥಾಪಕ - ಪ್ರವರ್ತಕರಾದ ಶ್ರೀ ಶಂಕರಾಚಾರ್ಯರು, ಆಚಾರ್ಯರಾಮಾನುಜರು. ಮಧ್ವಾಚಾರ್ಯರು - ವಿಶ್ವವಿಖ್ಯಾತ

ದರ್ಶನಗಳಷ್ಟೆ ರಾಮಾನುಜರ ಹಾಗೂ ಮಧ್ವಾಚಾರ್ಯರ ತತ್ವಗಳು "ಭಕ್ತಿ" - ಹಾಗೂ ಆ ಹಿನ್ನೆಲೆಯಲ್ಲಿ ವಿಷ್ಣು ಸರ್ವೋತ್ತಮತ್ವ ಪ್ರತಿಪಾದಿಸಿದ ತತ್ವಗಳಾಗಿವೆ ಎಂಬುದು ಸುವಿದಿತ. ರಾಮಾನುಜರ ಸುಧಾರಣಾಮನೋಧರ್ಮ ಅವರ ಬದುಕಿನೊಳಗನ್ನು ಅರಿತವರೆಲ್ಲರೂ ಬಲ್ಲರು. "ದಯೈಕಸಿಂಧೋ" ಎಂದೇ ರಾಮಾನುಜ ಆಚಾರ್ಯರು ವಿಖ್ಯಾತರು. ದಕ್ಷಿಣ ಭಾರತದ ವಿವಿಧೆಡೆ ಮೂಡಿಬಂದ ವೈಷ್ಣವ ಭಕ್ತರಾದ "ಆಳ್ವಾರ್" ಮಹನೀಯರ "ನಾಲಾಯಿರ ದಿವ್ಯ ಪ್ರಬಂಧ। ತಿರುವಾಯ್ಮೊಳಿ । ಸಿರಿಬಾಯನುಡಿ। ಭಕ್ತಿ ಸಾಹಿತ್ಯಕ್ಕೆ ಒಂದು ಉತ್ತಮ ಕೊಡುಗೆ. ಸ್ಥಾಯೀ ಕೊಡುಗೆ. ಅನಂತರಂಗಾಚಾರ್ಯರ "ಅಧ್ಯಾಪಕ ಚಿಂತನ", ರಾಮಾನುಜರ - ಆಳ್ವಾರರ - ರಾಮಾನುಜರ ನಂತರ ಬಂದ ಆಚಾರ್ಯ ಪರಂಪರೆ - ವೇದಾಂತದೇಶಿಕರ ಕುರಿತ ಬರಹಗಳಲ್ಲಿ ಮನಸ್ಸಿಗೆ ಹಿತವೀಯುವಂತೆ ಮೂಡಿಬಂದಿದೆ ಎಂಬುದು ಈ ಗ್ರಂಥ ಲೇಖನಗಳನ್ನು ಓದಿದಾಗಷ್ಟೇ ತಿಳಿವಂಥದು.

ರಾಮಾನುಜೀಯ ಪರಂಪರೆಯನ್ನು ಅನುಕರಿಸಿದವರು ಶ್ರೀವೇದಾಂತದೇಶಿಕರು. "ವೇಂಕಟನಾಥ" ರೆಂದು ಮೊದಲಲ್ಲಿ ಪರಿಚಿತರಾದರಂತೆ, ಪರಂಪರೆಯ ಸಲಹೆ ಪ್ರಕಾರ, ``ವಿಷ್ಣು ಘಂಟಾವತಾರ"ರೆಂದೇ ಹೆಸರಾದ ಮಹಾನ್ ದಾರ್ಶನಿಕರು. ಆಗ್ಗೆ ಇದ್ದ ಶಾಂಕರ, ಸಿದ್ಧಾಂತ - ಇನ್ನಿತರ ನಾಸ್ತಿಕ ಧರ್ಮಗಳ ವಿರುದ್ಧ ತಮ್ಮ ವಾದ ಮಂಡಿಸಿ ಜಯಿಸಿ, "ಕವಿತಾರ್ಕಿಕಸಿಂಹ" ರೆಂದೇ ವಿಖ್ಯಾತರಾದ ವೇದಾಂತದೇಶಿಕರು ಕ್ರಿ. ಶ. ೧೨೬೮ ರಿಂದ ೧೩೬೯ರ ತನಕ ಬದುಕಿದ್ದು ನೂರಾರು ಗ್ರಂಥ ರಚಿಸಿದ್ದಾರೆ.

ಮೇಲೆ ತಿಳಿಸಿದಂತೆ, ಅನಂತರಂಗಾಚಾರ್ಯರ ಮೊದಲ ಎರಡು ಪುಸ್ತಕಗಳು, ಶ್ರೀ ದೇಶಿಕರ ಬದುಕು, ಕೃತಿಗಳ ಪರಿಚಯಾತ್ಮಕ ಗ್ರಂಥಗಳಾಗಿದ್ದರೂ ಒಂದು ಸಂಪೂರ್ಣ ತಿಳಿವು ದೇಶಿಕರ ಕುರಿತಂತೆ ನೀಡುತ್ತವೆ. (ದುರದೃಷ್ಟವಶಾತ್, ಎರಡು ಪುಸ್ತಕಗಳೂ ಈಗ ಲಭ್ಯವಿಲ್ಲ!)

ವೇದಾಂತ ದೇಶಿಕರ ಕೃತಿಗಳಾದ "ಯಾದವಾಭ್ಯುದಯ", 'ಹಂಸಸಂದೇಶ', "ಸುಭಾಷಿತನೀವೀ", "ಪಾದುಕಾಸಹಸ್ರಂ", ಸಂಕಲ್ಪ ಸೂರ್ಯೋದಯ ನಾಟಕ, "ಶತದೂಷಣೀ" ಖಂಡನ ಗ್ರಂಥ, ವಿಶಿಷ್ಟಾದ್ವೈತವನ್ನು ಸಮರ್ಥಿಸುವ "ರಹಸ್ಯತ್ರಯಸಾರ", "ದೇಶಿಕ ಪ್ರಬಂಧಂ" ಎಂಬ ಗ್ರಂಥ ಸಂಕಲನ, ದೇಶಿಕರು ರಚಿಸಿರುವ ಅನೇಕ ವ್ಯಾಖ್ಯಾನ ಗ್ರಂಥಗಳು ಇವೆಲ್ಲದರ ಪರಿಚಯ ನಮಗಾಗುವುದು ಅನಂತರಂಗಾಚಾರ್ಯರ ತಿಳಿಗನ್ನಡನುಡಿಗಟ್ಟಿನ ಈ ಗ್ರಂಥಗಳಿಂದ.

ವೇದಾಂತದೇಶಿಕರ ಅನೇಕ ಸ್ತೋತ್ರಗಳನ್ನು ಅರ್ಥಸಹಿತ ಅನಂತರಂಗಾಚಾರ್ಯರು ಪ್ರಕಟಿಸಿ, ಆ ಸ್ತುತಿಗಳಲ್ಲಿ ಅಳವಟ್ಟಿರುವ ಕಾವ್ಯಸೌಂದರ್ಯವನ್ನು ಮನವರಿಕೆ ಮಾಡಿಕೊಡುವ ಸ್ತುತ್ಯಕಾರ್ಯವೆಸಗಿದ್ದಾರೆ. ತಾನು ಅಧ್ಯಯನಗೈದು, ಅರ್ಥೈಸಿಕೊಂಡು, ಅದರ ತಿರುಳನ್ನು ಓದುಗರಿಗೆ ಮನಂಬುಗುವಂತೆ ನೀಡುವುದು ಅವರಿಗೆ ಹೃದ್ಗತವಾಗಿತ್ತು. ವಿಶೇಷ ಸ್ಮರಣಶಕ್ತಿಯಿಂದ, ಅವರಿಗೆ ಅನೇಕ ಕಾವ್ಯಗಳ ಬಿಡಿಭಾಗಗಳು - ಸರ್ಗಗಳು - ವಾಚೋವಿಧೇಯ ಆಗಿದ್ದವು.

"ಸಪ್ತಗಿರಿ" ಮೊದಲಾದ ಧಾರ್ಮಿಕ ಪತ್ರಿಕೆಗಳಲ್ಲಿ ಆಚಾರ್ಯರ ಇಪ್ಪತ್ತಕ್ಕೂ ಹೆಚ್ಚು ಲೇಖನಗಳು ಪ್ರಕಟ ಆಗಿವೆ. ಅವುಗಳು ಸಂಗ್ರಹಯೋಗ್ಯ ಬರಹಗಳು. "ಪುರಾಣ ಪ್ರಪಂಚ", ಪುರಾಣಗಳ ಅರ್ಥ, ವ್ಯಾಪ್ತಿ ಸ್ವಭಾವ ಕುರಿತ ವಿವರ ನೀಡುತ್ತದೆ:

"ಅಷ್ಟಾದಶಾಪುರಾಣಾನಿ ಕೃತ್ವಾಸತ್ಯಾವತೀಸುತಃ
ಭಾರತಾಖ್ಯಾನಮಖಿಲಂ ಚಕ್ರೇ ತದುಪಬ್ರುಂಹಣಂ"

ಎಂಬುದು ಮತ್ಸ್ಯಪುರಾಣದ ಒಂದು ಉಕ್ತಿ. ವೇದವ್ಯಾಸರು ಅಷ್ಟಾದಶಪುರಾಣಗಳನ್ನು ರಚಿಸಿದ ವಿವರ ನೀಡುತ್ತದೆ. "ಒಟ್ಟಿನಲ್ಲಿ ಪುರಾಣಗಳು ಹಿಂದೂಧರ್ಮದ ಬೆಳೆವಣಿಗೆಗೆ ಅಪಾರ ಸಹಾಯವನ್ನು ಮಾಡಿವೆ ಕುಮಾರವ್ಯಾಸನ ಶ್ರೀಕೃಷ್ಣನನ್ನು ಕುರಿತ ತಮ್ಮ ಲೇಖನದಲ್ಲಿ , :ಆತ, ಮಿತ್ರನಾಗಿ, ಪುತ್ರನಾಗಿ, ದೂತನಾಗಿ, ಬಂಧುವಾಗಿ, ಬಳಗವಾಗಿ ನಡೆದುಕೊಂಡ ಒಂದೊಂದು ಸನ್ನಿವೇಶವೂ ಆಕರ್ಷಕವಾಗಿದೆ ಎಂಬುವ ಮಾತು ಶ್ರೀಕೃಷ್ಣನ ಸ್ವಭಾವ ಕುರಿತ ಚಿತ್ರಣ ನೀಡುವಲ್ಲಿ ಸಫಲ ಆಗುತ್ತದೆ. "ಕೃಷ್ಣದೇವರಾಯನ ಕಾಲದ ತೆಲುಗು ಸಾಹಿತ್ಯ" ಅನಂತರಂಗಾಚಾರ್ಯರ ತೌಲನಿಕ ಅಧ್ಯಯನ ಮನದಟ್ಟು ಮಾಡಿಕೊಡುವಂಥದು. ಜಾಂಬವತೀಪರಿಣಯ, ಆ ಮುಕ್ತಮಾಲ್ಯದ ಮೊದಲಾದ ರಾಯನ ಕಾವ್ಯಗಳನ್ನು ಆಚಾರ್ಯರು ಪರಿಚಯಿಸುತ್ತಾರೆ. "ವೇದಾಂತದೇಶಿಕರ ಕಾವ್ಯಗ್ರಂಥಗಳು" ಅನಂತರಂಗಾಚಾರ್ಯನ ಮತ್ತೊಂದು ವಿದ್ವತ್ಪೂರ್ಣ ಲೇಖನ. "ಸುಭಾಷಿತನೀವಿ" - ಸುಭಾಷಿತಗಳ ಆಕರಗ್ರಂಥ. ೧೪೪ ಶ್ಲೋಕಗಳನ್ನುಳ್ಳ, ೧೨ ಪದ್ಧತಿ (ಅಧ್ಯಾಯ)ಗಳಲ್ಲಿ ವಿಸ್ತೃತಗೊಂಡಿರುವ ಗ್ರಂಥವಿದು. ಭರ್ತೃಹರಿಯ ಶತಕಗಳಿಗಿಂತ ಸುಭಾಷಿತನೀವೀ ಮನೋಜ್ಞಗ್ರಂಥವೆಂದು ಆಚಾರ್ಯರು ಪರಿಚಯಿಸುತ್ತಾರೆ. ನಾಟಕ (ಸಂಕಲ್ಪ ಸೂರ್ಯೋದಯ), ಸ್ತೋತ್ರವ್ಯಾಖ್ಯಾನಗಳನ್ನು ಕುರಿತು ಪರಿಚಯಿಸುವ ಲೇಖನಗಳಲ್ಲಿ ಅನಂತರಂಗಾಚಾರ್ಯರ "ಗುರು" ವ್ಯಕ್ತಿತ್ವ, ವಿಶೇಷವೆನ್ನಿಸುತ್ತದೆ. ತಿಳಿಯಾದ ಭಾಷೆ, ಕಠಿಣ ಪ್ರಮೇಯಗಳನ್ನೂ ಅರ್ಥೈಸುವ ರೀತಿ ಅನನ್ಯವಾದದ್ದು.

ಅನಂತರಂಗಾಚಾರ್ಯರ "ದೇವಾಲಯಗಳು ಹಾಗೂ ನಮ್ಮ ಸಂಸ್ಕೃತಿ", ದೇವಾಲಯ ವಾಸ್ತು ಶಿಲ್ಪ ಮೊದಲಾದ ವಸ್ತುಗಳನ್ನೂ ಕುರಿತ ಪುಸ್ತಕಗಳನ್ನೂ ಬೇರೆ ವಿದ್ವಾಂಸರು ಚರ್ಚಿಸಿರಬಹುದು, ಇಲ್ಲಿ ಮಾಡಿಲ್ಲ. ಪ್ರವಾಸ ತೀರ್ಥಯಾತ್ರೆ ಮನುಷ್ಯನ ಒಂದು ಗುಣ, ಸ್ವಭಾವ. "ಕರ್ಣಾಟಕ ತೀರ್ಥ ಕಲಾಕ್ಷೇತ್ರ ಸಂದರ್ಶಿನಿ" ಅಂತಹ ಒಂದು ಅಪರೂಪದ ಗ್ರಂಥ. ಶ್ರೀವೈಷ್ಣವ ದಿವ್ಯದೇಶಗಳು, ಕರ್ಣಾಟಕದ ಯಾತ್ರಾ ಕೇಂದ್ರಗಳು, ದಕ್ಷಿಣಭಾರತದ ಶೈವಕ್ಷೇತ್ರಗಳು, ಆಂಧ್ರಪ್ರದೇಶದ - ಭದ್ರಾಚಲದಂಥ ಪ್ರಸಿದ್ಧ ಕ್ಷೇತ್ರ ಸೇರಿದಂತೆ - ವೈಷ್ಣವ ಕ್ಷೇತ್ರಗಳು, ಕೇದಾರ, ಬದರಿ - ಅಯೋಧ್ಯೆ ಮೊದಲಾದ ಉತ್ತರ ಭಾರತದ ತೀರ್ಥಕ್ಷೇತ್ರಗಳೂ ಭಾರತದ ಸುಪ್ರಸಿದ್ಧ ನಗರಗಳು - ಹೀಗೆ ಈ ಗ್ರಂಥ, ೩೫೦ಕ್ಕೂ ಹೆಚ್ಚು ಪುಟಗಳ ಬೃಹತ್‌ಗ್ರಂಥ. ಇದರಿಂದ ನಮಗೆ ಆಯಾ ಕ್ಷೇತ್ರ - ಪರಿಚಯವೂ ಆಗುತ್ತದೆ.

ಪ್ರಸಿದ್ಧ ಅಂಕಣ ಬರಹಗಾರರಾಗಿದ್ದ ಡಾ|| ಹಾಮಾನಾಯಕರು, ಕೃಷ್ಣಶಾಸ್ತ್ರಿಗಳನ್ನು ಕುರಿತು ಬರೆಯುತ್ತ, "ಕನ್ನಡದ ಪ್ರಜ್ಞೆ, ಅಭಿಮಾನ ಸ್ವಲ್ಪವಾದರೂ ಇಂದು ಕನ್ನಡಿಗರಲ್ಲಿ ಉಳಿದಿದ್ದರೆ ಅದು ಕೃಷ್ಣಶಾಸ್ತ್ರಿಗಳ ಹಾಗೂ ಅವರಂಥ ವಿರಳರ ಸಾಹಸದ ಫಲ; ತಪಸ್ಸಿನ ಫಲ". "ಕೃಷ್ಣಶಾಸ್ತ್ರಿಗಳು ಕನ್ನಡ ನವೋದಯದ ಹೊತ್ತಾರೆ ಹುಟ್ಟಿದ ಹೊಳಪಿನ ಬೆಳ್ಳಿ. ಅವರು ಕನ್ನಡವನ್ನು ಕಟ್ಟಿದರು; ಕನ್ನಡಿಗರನ್ನು ಎಚ್ಚರಿಸಿದರು.' ಡಾ|| ಎನ್. ಅನಂತರಂಗಾಚಾರ್ಯರು ಕೃಷ್ಣಶಾಸ್ತ್ರಿಗಳ ಪ್ರಿಯ ಶಿಷ್ಯರಾಗಿ ಕನ್ನಡಕ್ಕಾಗಿ ದುಡಿದ ಪ್ರಾತಃ ಸ್ಮರಣೀಯರು. ಡಾ|| ಹಾಮಾನಾ ಅವರ ಮಾತುಗಳನ್ನು ಆಚಾರ್ಯರಿಗೆ ಬಹುಮಟ್ಟಿಗೆ ಅನ್ವಯಿಸುವುದರಲ್ಲಿ ಅರ್ಥವೇ ಇದೆ ಎಂದನ್ನಿಸುತ್ತದೆ.

"ಶ್ರೀಮಾನ್ ವೆಂಕಟನಾಥಾರ್ಯಃ, ಕವಿತಾರ್ಕಿಕ ಕೇಸರೀ।
ವೇದಾಂತಾಚಾರ್ಯ ವರ್ಯೋ ಮೇ ಸನ್ನಿಧತ್ತಾಂ ಸದಾ ಹೃದೀ।"



# ಎಲ್ಲರಂಥವರಲ್ಲ ನನ್ನ ಅಪ್ಪ

ಎ. ಶಶಿಕಲಾ

ಅಪ್ಪ ಎಂದಾಕ್ಷಣ ಎಲ್ಲರಿಗೂ ಸಾಮಾನ್ಯವಾಗಿ ಹೆಚ್ಚು ಕಡಿಮೆ ಸಮಾನವಾದ ಚಿಂತನೆಗಳು ಮನದಲ್ಲಿ ಸುಳಿಯಬಹುದು. ಮಗುವಾದಾಗಿನಿಂದ ಮುದ್ದಿಸಿ, ಬೆಳೆದಾಗ ಬುದ್ಧಿ ಹೇಳಿ, ವಿದ್ಯೆ ಕೊಟ್ಟು, ಜೀವನದಲ್ಲಿ ಸ್ವಂತವಾಗಿ ಕಾಲಮೇಲೆ ನಿಲ್ಲಲು ಅಗತ್ಯವಾದ ಅನುಕೂಲಗಳನ್ನು ಅಣಿ ಮಾಡಿಕೊಟ್ಟ ವಾತ್ಸಲ್ಯಮೂರ್ತಿ ಇತ್ಯಾದಿ. ನನ್ನ ಅಪ್ಪ ಇದೆಲ್ಲಾ ಆಗಿದ್ದೂ ಇನ್ನೂ ಏನೋ ಆಗಿದ್ದರು ಎಂಬುದು ವಿಶೇಷ. 'ನನ್ನ ಅಪ್ಪ'ನನ್ನು ರೂಪಿಸಿದ ಅನೇಕ ವಿಷಯಗಳು ನನ್ನ ಅಪ್ಪನಿಗೇ ಸೀಮಿತ ಎಂಬುದು ನನ್ನ ದೊಡ್ಡ ಹೆಮ್ಮೆ ಕೂಡ.

ಅನುಭವದ ಆಗರಗಳ ಮಧ್ಯೆ ಎಲ್ಲಿಂದ ಪ್ರಾರಂಭಿಸುವುದು ಎಂದು ತಿಳಿಯುವುದಿಲ್ಲ. ನನಗೆ ಇಷ್ಟವಾದ ಕೆಲವು ಘಟನೆಗಳಿಂದಲೇ ಪ್ರಾರಂಭಿಸುತ್ತೇನೆ. ನಾವಿದ್ದುದು ಮೈಸೂರಿನಲ್ಲಿ. ನಮ್ಮ ಮನೆಯಲ್ಲಿ ಪ್ರತಿ ತಿಂಗಳು ತಿಂಗಳ ಸಾಮಾನು ತರಲು ಅಪ್ಪನೊಂದಿಗೆ ಯಾರು ಹೋಗುವುದು ಎಂಬುದಕ್ಕೆ ಅಕ್ಕ ತಂಗಿಯರಲ್ಲಿ ಪೈಪೋಟಿ. ಏಕೆಂದರೆ ಒಂದು ಕುದುರೆಗಾಡಿಯಲ್ಲಿ ಹಾಕಿಕೊಂಡು ಬರಬಹುದಾದಷ್ಟು ಸಾಮಾನನ್ನು ತರುವಾಗ ನಮಗಾಗಿ ಪ್ರಾಣಿಗಳ ಆಕಾರದಲ್ಲಿದ್ದ ರುಚಿಯಾದ ಬಿಸ್ಕೆಟುಗಳ ಒಂದು ಪೊಟ್ಟಣವನ್ನು ಅಪ್ಪ ಕಟ್ಟಿಸುತ್ತಿದ್ದರು. ಆ ಪೊಟ್ಟಣ ಸಿಕ್ಕವರಿಗೆ ಅಂದು ಅತ್ಯಂತ ಪ್ರಾಶಸ್ತ್ಯ. ಅವರೇ ತಮಗೆ ಬೇಕಾದ ಆಕಾರಗಳ ಬಿಸ್ಕೆಟುಗಳನ್ನು ಇಟ್ಟುಕೊಂಡು ಉಳಿದವರಿಗೆ ಗೂಬೆ, ಬೆಕ್ಕು ಇತ್ಯಾದಿ ಆಕಾರಗಳ ಬಿಸ್ಕೆಟುಗಳನ್ನು ಹಂಚಿ 'ನನ್ನಲ್ಲಿ ಆನೆ ಇದೆ, ಸಿಂಹ ಇದೆ, ಹಸು ಇದೆ' ಎಂದು ಹೇಳಿ ಕೆಲಕಾಲವಾದರೂ ಜಂಭ ಪಡುತ್ತಿದ್ದ ವಿಶೇಷ ಕ್ಷಣಗಳು. ಇದಕ್ಕಾಗಿ ಪಡಬೇಕಾದ ಶ್ರಮ ಅಷ್ಟಿಷ್ಟಲ್ಲ. ಕುದುರೆ ಗಾಡಿಯಲ್ಲಿ ಸಾಮಾನು ತರಬೇಕಾದರೆ ಎರಡು ಮೂರು ರೂಪಾಯಿ ಖರ್ಚಾಗುವುದೆಂದು ಅಪ್ಪ ಅಷ್ಟೂ ಸಾಮಾನನ್ನು ಸೈಕಲ್ ಮೇಲೆಯೇ ಪ್ಯಾಕ್ ಮಾಡುತ್ತಿದ್ದರು. ಸಾಮಾನುಗಳ ಪಟ್ಟಿ ಅಪ್ಪನಿಗೆ ಮನಸ್ಸಿನಲ್ಲೇ ಇರುತ್ತಿತ್ತು. ಜೊತೆಯಲ್ಲಿ

ಕರೆದುಕೊಂಡು ಹೋದ ನಮ್ಮನ್ನು ಶಿವರಾಂ ಪೇಟೆಯ ಒಂದು ಅಂಗಡಿಯಲ್ಲಿ ಕೂರಿಸಿ ಸುತ್ತಮುತ್ತ ಅಂಗಡಿಗಳಿಂದ ಸಾಮಾನುಗಳನ್ನು ತಂದು ನಮ್ಮ ಬಳಿ ಇಟ್ಟು ಎಲ್ಲ ಸಾಮಾನುಗಳನ್ನು ಕೊಂಡ ನಂತರ ಸೈಕಲ್ ಮೇಲೆ ಇರಿಸಿ ನಂತರ ಮೂರು ನಾಲ್ಕು ಐದು ಕಿಲೋಮೀಟರುಗಳ ಹಾದಿಯನ್ನು ಸೈಕಲ್ ತಳ್ಳಿಕೊಂಡೇ ಮನೆ ಸೇರುತ್ತಿದ್ದರು. ಇಲ್ಲಿ ಅತ್ಯಂತ ಸ್ವಾರಸ್ಯಕರವಾದ ಭಾಗ ಎಂದರೆ ಮನೆಯಿಂದ ಮಾರ್ಕೆಟಿಗೆ ಹೋಗುವ ಮತ್ತು ಮಾರ್ಕೆಟಿನಿಂದ ಮನೆಗೆ ಬರುವ ನಮ್ಮ ದಾರಿಯುದ್ದದ ಘಟನೆಗಳು. ನಮ್ಮ ಮನೆಯಿಂದ ಸ್ವಲ್ಪ ದೂರದಲ್ಲಿ ಒಂದು ಫೈರ್‌ಬ್ರಿಗೇಡ್ ಇತ್ತು. ಸಾಮಾನ್ಯವಾಗಿ ಅಲ್ಲಿಂದ ಅಪ್ಪನ ಜೀವನದ ಹಳೆಯ ಕಥೆಗಳು ಪದರಪದರವಾಗಿ ಬಿಚ್ಚಿಕೊಳ್ಳುತ್ತಿದ್ದವು. ಅಲ್ಲಿ ಬಾರದ ಘಟನೆಗಳಿಲ್ಲ. ಅವರ ಗುರುಗಳು ಡ್ರೆಸ್ ಮಾಡುತ್ತಿದ್ದ ರೀತಿ, ಅವರ ಹ್ಯಾಟಿನ ಶೈಲಿ, ಸೂಟಿನ ಅಂದ, ಪಾಠ ಮಾಡುತ್ತಿದ್ದ ವೈಖರಿ, ವಿದ್ಯಾರ್ಥಿಗಳನ್ನು ನಡುಗಿಸುತ್ತಿದ್ದ ನಡೆ ಇಲ್ಲಿಂದ ಹಿಡಿದು ನರಸೀಪುರದಲ್ಲಿ ನಡೆದ ಅವರ ವಿವಾಹದ ವೈಖರಿಯವರೆಗೆ ಎಲ್ಲವೂ.

ಘಟನೆಗಳನ್ನು ಬಿಚ್ಚಿಡುತ್ತಿದ್ದಂತೆ ಅವರ ತನ್ಮಯತೆ ಕೆಲವೊಮ್ಮೆ ಸೈಕಲ್‌ಗೆ ಸ್ಟ್ಯಾಂಡ್ ಹಾಕಿ ನಿಲ್ಲಿಸಿಬಿಡುತ್ತಿತ್ತು. 'ರೊಲೊ ಸಾಹೇಬರು ನಡೆಯುತ್ತಿದ್ದುದು ಹೀಗೆ ನೋಡು' , 'ಹಿರಿಯಣ್ಣನವರು ಛತ್ರಿ ಹಿಡಿಯುತ್ತಿದ್ದುದು ಈ ರೀತಿ', 'ಬಿ.ಎಂ.ಶ್ರೀ ಅವರ ಪಾಠ ಹೀಗೆ' ಎಂದು ಹೇಳುತ್ತಿರುವಾಗ ನಾವು ಅಲ್ಲಲ್ಲೇ ನಿಲ್ಲುತ್ತಿದ್ದೆವು. ಅತ್ಯಂತ ಸ್ವಾರಸ್ಯಕರವಾದ ಘಟನೆಗಳನ್ನು ಹೇಳುತ್ತಾ ಕೇಳುತ್ತಾ ಹೋಗುತ್ತಿರುವಾಗ ಅಲ್ಲಲ್ಲಿ ಮಂಟಪೋತ್ಸವ. 'ಸರ್ ನಮಸ್ಕಾರ, ಬುದ್ಧಿ ಹೇಗಿದ್ದೀರಾ,' ಇತ್ಯಾದಿ ಮಾತುಗಳೊಂದಿಗೆ ಹತ್ತು ಹಲವರು ಅಪ್ಪನಿಗೆ ಸಿಗುತ್ತಿದ್ದರು. ತಕ್ಷಣವೇ ಸಿಕ್ಕವರ ಬಗ್ಗೆ, ಅವರ ಗುಣಗಾನದ ಬಗ್ಗೆ ಕೆಲವು ರೆಫರೆನ್ಸ್ ಮಾತುಗಳು. ನಾನು ಪುನಃ 'ಅಪ್ಪ ಅದೇ ಆ ವಿಷಯ ಹೇಳುತ್ತಿದ್ದರಲ್ಲ........' ಎಂದು ಹಿಂದಕ್ಕೆ ಕರೆದೊಯ್ಯಬೇಕು, ಪುನಃ ಯಾರೂ ಹೀಗೆ ಸಿಗದಿರಲಪ್ಪ... ಮೂಕಪ್ರೇಕ್ಷಕರಾಗಿ ನಿಂತು ಸಾಕಾಗುತ್ತದೆ, ಎಂದುಕೊಳ್ಳುತ್ತಲೇ ಮಾರ್ಕೆಟ್ ಸೇರುತ್ತಿದ್ದೆವು. ಅಪ್ಪ ಎಲ್ಲ ಸಾಮಾನುಗಳನ್ನು ಕೊಂಡು ನಮ್ಮಲ್ಲಿಗೆ ಬಂದು ಸೇರುತ್ತಿದ್ದರು. ನಂತರ ಕೊಂಡ ಎಲ್ಲ ಸಾಮಾನುಗಳನ್ನು ಸೈಕಲಿನ ಎಲ್ಲ ಅವಯವಗಳಿಗೆ ಸಿಕ್ಕಿಸುತ್ತಿದ್ದರು. ಎರಡು ಮೂಟೆ ಬೂಸಾ, ಎರಡು ಮೂಟೆ ಕಡ್ಲೆಹೊಟ್ಟು, ಅರ್ಧ ಮೂಟೆ ಹಿಂಡಿ, ಸಾಸಿವೆಯಿಂದ ಸೋಪಿನವರೆಗೆ ದೊಡ್ಡ ಸಂಸಾರದ ಎಲ್ಲ ಸಾಮಾನುಗಳು... ಇವೆಲ್ಲದರ ಜಂಬೂ ಸವಾರಿ. ಇದರೊಂದಿಗೆ ಮನೆ ಕಡೆಗೆ ಹೊರಡುತ್ತಿದ್ದೆವು. ದಾರಿಯುದ್ದಕ್ಕೂ ಯಾವುದಾದರೂ ತಮಾಷೆಯ ಘಟನೆಗಳು. ನಮಗೆ ನಡೆಯುವುದರ ನೋವು ಗೊತ್ತಾಗಬಾರದೆಂಬ ಮುನ್ನೆಚ್ಚರಿಕೆಯೂ ಇಲ್ಲಿರುತ್ತಿತ್ತು. ಅವರು ಮಾತ್ರ ಸಾಕಾಯಿತೆಂದು ಒಮ್ಮೆಯೂ ಸೈಕಲ್ ನಿಲ್ಲಿಸಿದುದು ನನಗೆ ನೆನಪಿಲ್ಲ.

ನಮ್ಮ ಮನೆಯಲ್ಲಿ ಎಲ್ಲರೂ ಒಟ್ಟಿಗೆ ಊಟ ಮಾಡುವುದು ಒಂದು ತಪ್ಪದ ಅಭ್ಯಾಸ. ಈಗಿನಂತೆ ಟಿ.ವಿ ಮುಂದೆ ಕುಳಿತುಕೊಳ್ಳಲು ಟಿ.ವಿ. ಇರಲಿಲ್ಲವಲ್ಲಾ! ನಮ್ಮ ಊಟ

ಮೌನವಾಗಿ ಸಾಗುತ್ತಿರಲಿಲ್ಲ. ಅಮ್ಮನದು ಅತ್ಯಂತ ರುಚಿಯಾದ ಅಡಿಗೆ, ಊಟದ ಮಧ್ಯೆ ಮಾಡಿದ ಅಡಿಗೆಯನ್ನು ಕುರಿತು. ಮನೆಗೆ ಬಂದು ಹೋದ ನೆಂಟರನ್ನು ಕುರಿತು, ಮುಂದಾಗುವ ಮದುವೆ ಮುಂಜಿಗಳನ್ನು ಕುರಿತು - ಇನ್ನೂ ಏನೇನೋ ವಿಷಯಗಳು ಬಂದು ಹೋಗುತ್ತಿದ್ದವು. ನನ್ನ ಅಪ್ಪನದು ಊಟದ ಮನೆಯ ಒಂದು ಕಡೆಯ ಜಾಗ. ಸುತ್ತ ನಾವೆಲ್ಲರೂ. ಅಪ್ಪನಿಗೆ ವಿಶೇಷವಾದ ಘನವಾದ ಒಂದು ಬೆಳ್ಳಿ ತಟ್ಟೆ. ಅಪ್ಪ ಕುಳಿತುಕೊಳ್ಳುವ ಸ್ಥಳದ ಎಡಭಾಗಕ್ಕೆ ಒಂದು ಮರದ ಪಟ್ಟಿ ಇತ್ತು. ಅದೇಕೆ ಇತ್ತೋ ನಾ ಕಾಣೆ. ಊಟವಾದ ನಂತರ ಅಪ್ಪ ಆ ಮರದ ಪಟ್ಟಿಯ ಮೇಲೆ ಎಡಗೈ ಇಟ್ಟು ಏನಾದರೂ ಒಂದು ಹೊಸ ವಿಷಯ ಹೇಳಿಕೊಡುತ್ತಿದ್ದರು. ಒಂದು ಶ್ಲೋಕ, ಒಂದು ಹಾಡು ಇಲ್ಲವೆ ಮೋಜಿನ ನಾಲಿಗೆ ಸುರುಳಿ ಇತ್ಯಾದಿ. ಅವರು ಆಗ ಹೇಳಿಕೊಟ್ಟುದನ್ನು ತಕ್ಷಣವೇ ಒಪ್ಪಿಸಬೇಕಾಗಿದ್ದುದು ಕಡ್ಡಾಯ. ನಾವು ಅದನ್ನು ಗುನುಗುನಿಸುತ್ತಲೇ ಗೋಮ ಮಾಡುವುದು, ತಟ್ಟೆಗಳನ್ನೆಲ್ಲಾ ತೊಳೆಯುವುದು ನಡೆಯುತ್ತಿತ್ತು. ಅಷ್ಟರವೇಳೆಗೆ ಅಪ್ಪ ಊಟದ ಮನೆಯಿಂದ ನಡುಮನೆಯನ್ನು ದಾಟಿ ಹಜಾರದಲ್ಲಿ ಬಂದು ಕುಳಿತಿರುತ್ತಿದ್ದರು. ಜಾನು, ಶಶಿ.... ಇನ್ನೂ ಆಗಿಲ್ವಾ.... ಎಂದು ಆ ಶ್ಲೋಕದ, ಹಾಡಿನ ಭಾಗಗಳನ್ನು ಗಟ್ಟಿಯಾಗಿ ನಮಗೆ ಕೇಳುವಂತೆ ಹೇಳುತ್ತಲೇ ಇರುತ್ತಿದ್ದರು. ನಾವು ಹಜಾರದಲ್ಲಿ ಅವರ ಮುಂದೆ ಬಂದು ಆ ಶ್ಲೋಕಗಳನ್ನು ಒಪ್ಪಿಸುವವರೆಗೆ ಇನ್ನೆಲ್ಲೂ ಹೋಗುವಂತಿಲ್ಲ. ಅವು ನಮಗೂ ಮುದ ಕೊಡುತ್ತಿದ್ದವು. ಹೀಗೆ ಕಲಿತ ಶ್ಲೋಕಗಳು ನೂರಾರು. ಈ ಶ್ಲೋಕಗಳು ನಮ್ಮ ಕುಟುಂಬದ ಎಲ್ಲರಿಗೂ ಗೊತ್ತು. ಯಾವುದಾದರೂ ಸಂದರ್ಭ ನೋಡಿ ಅಪ್ಪ ಇವುಗಳನ್ನು ಎಲ್ಲರಿಗೂ ಹೇಳಿಕೊಟ್ಟುಬಿಡುತ್ತಿದ್ದರು. ಹೀಗೆ ಅಪ್ಪನಿಂದ ಜನಪ್ರಿಯವಾದ ಒಂದು ಕತೆ ಇದೆ.

ಹಿಂದೆ ಡೆಲ್ಲಿಯಲ್ಲಿ ಒಬ್ಬ ರಾಜನಿದ್ದನಂತೆ. ಅವನಿಗೆ ತನ್ನ ಆಸ್ಥಾನದಲ್ಲಿದ್ದ ಕವಿಯ ಮನಸ್ಸು ಹೇಗೆ ಎಂದು ಪರೀಕ್ಷೆ ಮಾಡಬೇಕೆನಿಸಿತಂತೆ. ಸೇವಕರಿಗೆ ಹೇಳಿ ಆ ಕವಿಯನ್ನು ಕರೆಸಿದನಂತೆ. ಆ ಕವಿ ಬಂದ ಕೂಡಲೆ ಒಂದು ಪದ್ಯವನ್ನು ರಚಿಸಲು ಹೇಳಿ ಆ ಪದ್ಯಕ್ಕೆ ಬಹುಮಾನವಾಗಿ ದೊಡ್ಡ ರೊಟ್ಟಿಯಿಂದ ಮುಚ್ಚಿದ ಒಂದು ಚಿನ್ನದ ತಗಡನ್ನು ಅವನಿಗೆ ಕೊಟ್ಟನಂತೆ. ಅದಕ್ಕೆ ಅವನು ಹೇಗೆ ಪ್ರತಿಕ್ರಿಯಿಸಬಹುದೆಂದು ನೋಡಲು ಒಬ್ಬ ಗೂಢಚಾರನನ್ನು ಜೊತೆಗೆ ಕಳುಹಿಸಿದನಂತೆ. ಕವಿ ಮನೆಗೆ ಹೋದ ಕೂಡಲೇ ಹೆಂಡತಿ 'ಮಹಾರಾಜರು ಏನು ಕೊಟ್ಟರು ರೀ' ಎಂದು ಕೇಳಿದಳಂತೆ. ಅದಕ್ಕೆ ಅವನು 'ಶಾಖಾಯ ವಾಸ್ಯಾತ್, ಲವಣಾಯ ವಾಸ್ಯಾತ್' (ಉಪ್ಪಿಗೆ ಆಗುತ್ತದೆ, ಇಲ್ಲವೇ ತರಕಾರಿಗೆ ಆಗುತ್ತದೆ) ಎಂದು ಹೇಳಿದನಂತೆ. ಅಂದರೆ ಸಾಮಾನಿನ ವಿನಿಮಯವಿದ್ದ ಆಗಿನ ಕಾಲದಲ್ಲಿ ಈ ರೊಟ್ಟಿಯನ್ನು ಕೊಟ್ಟು ಉಪ್ಪೋ ತರಕಾರಿಯೋ ಕೊಳ್ಳಬಹುದೆಂದರ್ಥ. ಇದನ್ನು ಕೇಳಿಸಿಕೊಂಡ ಗೂಢಚಾರ ರಾಜನ ಬಳಿಗೆ ಬಂದು ಹಾಗೆಯೇ ಹೇಳಿಬಿಟ್ಟನಂತೆ. ರಾಜನು 'ಇರಲಿ, ಇವನನ್ನು ವಿಚಾರಿಸುತ್ತೇನೆ' ಎಂದು ಕವಿಯನ್ನು ಕರೆಸಿದನಂತೆ. ಆ ವೇಳೆಗಾಗಲೇ

ಕವಿಯ ಹೆಂಡತಿ ರೊಟ್ಟಿಯನ್ನು ಮುರಿಯುವಾಗ ಚಿನ್ನದ ತಗಡನ್ನು ಕಂಡು 'ರೀ ಒಳಗೆ ಚಿನ್ನದ ತಗಡಿದೆ ' ಎಂದು ಹೇಳಿದ್ದಳಂತೆ. ಅಷ್ಟರವೇಳೆಗೆ ರಾಜನ ಸೇವಕರು ರಾಜನು ಕರೆಯುತ್ತಿರುವ ಸುದ್ದಿ ತರಲು ಕವಿಯು ನಡೆದುದನ್ನೆಲ್ಲ ಒಂದೇ ಕ್ಷಣದಲ್ಲಿ ಊಹಿಸಿದನಂತೆ. ರಾಜನ ಮುಂದೆ ಬರುತ್ತಲೇ ರಾಜನು ' ಏನಯ್ಯಾ ನೀನು ಉಪ್ಪಿಗೋ ತರಕಾರಿಗೋ ಆಗುತ್ತದೆ ಎಂದೆಯಂತೆ' ಎಂದು ಕೇಳಲು, ಕವಿಯು 'ಸ್ವಾಮಿ ನಿಮ್ಮ ಚಾರನು ನಾನು ಹೇಳಿದ ಮೊದಲ ಮೂರು ಸಾಲನ್ನು ಕೇಳಿಕೊಳ್ಳಲಿಲ್ಲ. ನಾಲ್ಕನೇ ಸಾಲನ್ನು ಮಾತ್ರ ಕೇಳಿಕೊಂಡಿದ್ದಾನೆ' ಎಂದನಂತೆ. ರಾಜನು ಹಾಗಾದರೆ 'ಮೊದಲ ಮೂರು ಸಾಲು ಏನು' ಎನ್ನಲು ಕವಿಯು

ದಿಲ್ಲೀಶ್ವರೋ ವಾ ಜಗದೀಶ್ವರೋ ವಾ
ಮನೋರಥಂ ಪೂರಯತುಂ ಸಮರ್ಥಃ
ಅನ್ಯೇನ ಕೇನಾಪಿ ನೃಪೇಣ ದತ್ತಂ
ಶಾಖಾಯ ವಾಸ್ಯಾತ್ ಲವಣಾಯ ವಾಸ್ಯಾತ್

ಎಂದನಂತೆ.

ಅಂದರೆ ಡೆಲ್ಲಿಯ ರಾಜ ಮತ್ತು ಜಗದೀಶ್ವರನಾದ ಪರಮಾತ್ಮ ಇವರು ಮಾತ್ರ ಜನರ ಮನಸ್ಸಿನ ಇಷ್ಟಾರ್ಥಗಳನ್ನು ಪೂರೈಸಲು ಸಮರ್ಥರು. ಇತರ ಯಾರಾದರೂ ರಾಜರು ಬಹುಮಾನ ಕೊಟ್ಟರೆ ಅದು 'ತರಕಾರಿಗೋ ಉಪ್ಪಿಗೋ ಆಗುತ್ತದೆ ಎಂದೆ' ಎಂದನಂತೆ.

ಈ ಕತೆಯನ್ನು ನಾನೂ ನನ್ನ ಮಗನಿಗೆ ಹೇಳಿ ಹೇಳಿ ಕೇಳಿಸಿದ್ದೇನೆ.

ನನ್ನ ಅಪ್ಪ ಮಕ್ಕಳಲ್ಲಿ ಮಕ್ಕಳಾಗಿ ಬೆರೆಯುತ್ತಿದ್ದವರು. ನನ್ನ ಮನೆಯಲ್ಲಿ ನಾನಾದ ಮೇಲೆ ಐದು ಮಕ್ಕಳು. ನನ್ನ ಅಪ್ಪನಷ್ಟು ಕಾರ್ಯಭಾರವಿದ್ದವರನ್ನು ನಾನು ಕಂಡಿಲ್ಲ. ಆದರೂ ಮಕ್ಕಳಿಗಾಗಿ ಸಮಯ ಕೊಟ್ಟು ಅವರನ್ನು ಆಡಿಸುವಾಗಲೆಲ್ಲಾ ಅವರೂ ಮಗುವಾಗುತ್ತಿದ್ದುದನ್ನು ಕಂಡಿದ್ದೇನೆ. ಮಕ್ಕಳನ್ನು ಹೆಗಲ ಮೇಲೆ ಕೂರಿಸಿಕೊಂಡು ಅವರ ಕಾಲುಗಳನ್ನು ಆಚೀಚೆ ಹಾಕಿ, ಯಕ್ಷಗಾನದವರು ಕಾಲು ಹಾಕುವಂತೆ ಒಂದೊಂದೇ ಹೆಜ್ಜೆ ಮುಂದೆ ಹಾಕುತ್ತಾ 'ಡಟ್ಟಿ ಕುಟ್ಟಿ ಥಣ್ ಥಣ್' ಎಂದು ಮನೆಯೆಲ್ಲಾ ಓಡಾಡಿಸುತ್ತಿದ್ದರು. ಮಗು ಆಟವಾಡುತ್ತಾ ಮಲಗಿರುವಾಗ ಅವರು ಕಂಚಿನ ಕಂಠದಿಂದ 'ಕೃಷ್ಣೋ ರಕ್ಷತು ನೋ ಜಗತ್ರಯ ಗುರುಃ .....' ಎಂದು ಮುಕುಂದಮಾಲಾ ಸ್ತೋತ್ರದ ಪದ್ಯವನ್ನು ಗಟ್ಟಿಯಾಗಿ ಹೇಳುತ್ತಿದ್ದರೆ ಮಕ್ಕಳು ಕಣ್ಣೆವೆಯಿಕ್ಕದೆ ಅವರನ್ನೇ ನೋಡಿ ಆನಂದಿಸುತ್ತಿದ್ದವು. ಕಾಲ ಮೇಲೆ ನಮ್ಮನ್ನು ಹತ್ತಿಸಿಕೊಂಡು ಥೈ ಥೈ ಹೇಳುತ್ತಾ ಆಡಿಸಿ ಇದ್ದಕ್ಕಿದ್ದಂತೆ ಹಾರಿಸಿ ಬಿಡುತ್ತಿದ್ದರು. ಅದೊಂದು ಆನಂದ ಭಯಂಕರ ಅನುಭವ. ನಮ್ಮ ಕೈ ಹಿಡಿದು ಬೆರಳುಗಳನ್ನು ಎಳೆದು ನೆಟಿಕೆ ಬರಿಸುವಾಗ ನಾವು ಅಪ್ಪನ ಕೈ ಬೆರಳುಗಳನ್ನು ಎಳೆದೆಳೆದು ಹಾಕುತ್ತಿದ್ದೆವು. ಆದರೆ ಅವರಂತೆ ನೆಟಿಕೆ ತರಿಸುವಲ್ಲಿ ಯಾರೂ ಯಶಸ್ವಿಯಾಗುತ್ತಿರಲಿಲ್ಲ.

ಅಪ್ಪನೊಡನೆ ಬೆಳಿಗ್ಗೆ ಐದು ಗಂಟೆಗೆ ವಾಕಿಂಗ್ ಹೋಗುತ್ತಿದ್ದ ಅನುಭವ ಅತಿ ಮುದವಾದದ್ದು. ನಾನು ಮತ್ತು ನನ್ನ ಅಕ್ಕ ಇಬ್ಬರೂ ಅಪ್ಪನ ಕಾಲವೇಗಕ್ಕೆ ಕಾಲು ಹಾಕಿ ಕುಕ್ಕರಹಳ್ಳಿ ಕೆರೆಯವರೆಗೂ ಓಡುತ್ತಿದ್ದೆವು. ಕುಕ್ಕರಹಳ್ಳಿ ಕೆರೆ ಮೇಲಿನಿಂದ ಇಳಿಜಾರಿನಲ್ಲಿ ಓಡಲು ಅಪ್ಪ ನಮಗೆ ಬಿಡುತ್ತಿದ್ದರು. ನಮಗೆ ಆಗ ಅತ್ಯಂತ ಕುಷಿ. ಹಾಗೆ ಇಳಿಜಾರಿನಲ್ಲಿ ಓಡುವಾಗ ಅದೆಷ್ಟೋ ಸಲ ಕುಂಬಳಕಾಯಿಯಂತೆ ಉರುಳುಉರುಳಿ ಗಾಯ ಮಾಡಿಕೊಂಡಿದ್ದೇವೆ. ಅಲ್ಲಿಂದ ಫೈವ್ ಲೈಟ್ಸ್ ವೃತ್ತಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಅವರು ಒಂದೆಡೆ ನಿಂತಾಗ ನಾವು ಸರ್ಕಲ್‌ನ ಸುತ್ತ ಐದು ಹತ್ತು ಸುತ್ತು ಹಾಕಿ ಬರಬೇಕಿತ್ತು. ಮನೆಗೆ ಮರಳಿ ಬರುವಾಗ ಹೋಗುವಾಗ ಇದ್ದ ಅವಸರ, ರಭಸವಿರುತ್ತಿರಲಿಲ್ಲ. ನಿಧಾನವಾಗಿ ಬರುತ್ತಿದ್ದೆವು. ದಾರಿಯಲ್ಲಿ ಸಿಕ್ಕ ಚೆಂಡುಕಾಯಿ, ಕೋಳಿಜಗಳದ ಕಾಯಿ, ಹೂವಿನ ಗೊಂಚಲುಗಳು ಎಲ್ಲವನ್ನೂ ಕೈತುಂಬಾ ಹಿಡಿದುಕೊಂಡು ಬರುತ್ತಿದ್ದೆವು. ನಮ್ಮ ಅಕ್ಕಂದಿರು ಆ ವೇಳೆಗಾಗಲೇ ಮನೆಯನ್ನು ಗುಡಿಸಿ ಒರಸಿ ಓರಣವಾಗಿಡುತ್ತಿದ್ದರು. ಮನೆಯೊಳಗೆ ಬರುತ್ತಿದ್ದಂತೆ ' ಕೈಯಲ್ಲಿರುವುದನ್ನು ಹೊರಗೇ ಬಿಟ್ಟು ಬನ್ನಿ' ಎಂಬ ಕೂಗು ಒಳಗಿಂದ ಬರುತ್ತಿತ್ತು. ಅಪ್ಪನ ಮುಖ ನೋಡಿ ಎಲ್ಲವನ್ನೂ ನಾವು ಒಳಗೆ ತೆಗೆದುಕೊಂಡು ಹೋಗಿಬಿಡುತ್ತಿದ್ದೆವು.

ಅಪ್ಪ ನನಗೆ ಗುರುವೂ ಹೌದು. ಪಿಯುಸಿಯಲ್ಲಿ ನಾನೇ ಗಲಾಟೆ ಮಾಡಿ ಭೌತ ರಸಾಯನ ಶಾಸ್ತ್ರಗಳನ್ನು ತೆಗೆದುಕೊಂಡು ರಸಾಯನಶಾಸ್ತ್ರದ ಈಕ್ವೇಷನ್ನುಗಳಲ್ಲಿ, ಆಸಿಡ್‌ಗಳ ಗುಣಗಳಲ್ಲಿ ಯಾವುದೇ ಜೀವ ಕಾಣದೆ, ಅಪ್ಪನೊಡನೆ ಅತ್ತಿದ್ದೆ. 'ನಾನಿನಗೆ ಹೇಳಿದ ಹಾಗೆ, ಕನ್ನಡ, ಸಂಸ್ಕೃತ, ಭಾಷಾಶಾಸ್ತ್ರ ವಿಷಯಗಳನ್ನು ತೆಗೆದುಕೊ' ಎಂದರು. ನನ್ನ ಗುರುಗಳು ಬಹಳ ಮಟ್ಟಿಗೆ ಅಪ್ಪನ ಶಿಷ್ಯಬಳಗದಲ್ಲಿದ್ದುದರಿಂದ ಅವರೇ ಕಾಲೇಜಿಗೆ ಹೋಗಿ ನನ್ನನ್ನು ಬಿ.ಎ. ಗೆ ದಾಖಲಿಸಿ ಬಂದರು. ದ್ರೋಣಪರ್ವ, ಶಬ್ದಮಣಿದರ್ಪಣ, ಕರ್ನಾಟಕ ಕಾದಂಬರಿ ಇವುಗಳ ಅನೇಕ ಭಾಗಗಳು ನನಗೆ ಅಪ್ಪನಿಂದ ಪಾಠವಾದವು. ಅವರು ಅರ್ಥ ಹೇಳಬೇಕಾದರೆ ನಾನು ಓದಬೇಕಾಗಿತ್ತು. ಒಂದೇ ಒಂದು ಅಕ್ಷರ ತಪ್ಪಿದರೆ, 'ಛಂದಸ್ಸು ಹೋಯಿತು, ತಪ್ಪಿತು ತಪ್ಪಿತು ಎನ್ನುತ್ತಿದ್ದರು.' ಪುನಃ ಓದುತ್ತಿದ್ದೆ. 'ಈ ರಾತ್ರಿ ಇಷ್ಟು ಪದ್ಯಗಳು ಬಾಯಿಗೆ ಬರಬೇಕು' ಎನ್ನುತ್ತಿದ್ದರು. ಹಾಗಾಗಿ ಶಬ್ದಮಣಿದರ್ಪಣದ ಅರ್ಧಕ್ಕಿಂತ ಹೆಚ್ಚು ಭಾಗ ಆಗ ನನಗೆ ಬಾಯಲ್ಲಿತ್ತು.

ಬೇಸಿಗೆ ರಜೆ ನಮ್ಮ ಪಾಲಿಗೆ ವಿಶೇಷ ದಿನಗಳು. ನಮ್ಮ ಅಪ್ಪ ಡಬ್ಬದಲ್ಲಿ ಕಲ್ಲುಸಕ್ಕರೆಯ ಚೂರುಗಳನ್ನು ಹಾಕಿಡುತ್ತಿದ್ದರು. ಅವರು ಹೇಳಿದ ಮೂರು ನಾಲ್ಕು ಶ್ಲೋಕಗಳನ್ನು ಕಲಿತರೆ ನಮಗೆ ಒಂದು ಕಲ್ಲುಸಕ್ಕರೆಯ ಚೂರು ಸಿಗುತ್ತಿತ್ತು. ಆ ಚಿಕ್ಕ ಕಲ್ಲುಸಕ್ಕರೆಯ ತುಂಡಿನ ಆಸೆಗೆ ಅದನ್ನು ಬಿಡದೆ ಕಲಿಯುತ್ತಿದ್ದೆವು. ರಾಮಾಯಣದ

ಬಾಲಕಾಂಡದ ಮೊದಲ ನೂರು ಶ್ಲೋಕಗಳು, ಸಹಸ್ರನಾಮಗಳು, ಕಾವ್ಯಭಾಗಗಳು ಮುಂತಾದ ಅನೇಕ ವಿಷಯಗಳನ್ನು ನಾವು ಬಾಯಿಪಾಠ ಕಲಿತದ್ದು ಹೀಗೆಯೇ. ಈಗಿನ ಯಾವುದೇ ಫೈವ್‌ಸ್ಟಾರ್ ಹೋಟೆಲಿನ ಯಾವುದೇ ರಸದೌತಣವೂ ಆ ಕಲ್ಲುಸಕ್ಕರೆಯ ಸವಿಯನ್ನು ನೀಡಲಾರದು.

ಅನವರತ ದುಡಿಮೆ ಅಪ್ಪನ ಹುಟ್ಟುಗುಣ. ಬೆಳಗ್ಗೆ ನಾಲ್ಕು ಗಂಟೆಗೆ ಏಳುವುದು, ಸ್ನಾನಮಾಡಿ ಪೂಜೆಗೆ ಕೂರುವ ಮೊದಲು ಒಂದು ಪಾತ್ರೆಯಲ್ಲಿ ಅನ್ನಕ್ಕೆ ಇಟ್ಟು ಪೂಜೆ ಮುಗಿಸಿ ಅಮ್ಮ ಮಾಡಿಟ್ಟಿದ್ದ, ತಟ್ಟೆಗೆ ಬೀಳಲು ಮೊಂಡು ಮಾಡುವ, ಮೊಸರನ್ನು ಅನ್ನದೊಡನೆ ಕಲಸಿ ಅಮ್ಮ ಮಾಡಿಟ್ಟ ಹಸಿರು ಮೆಣಸಿನ ಕಾಯಿ ಚಟ್ನಿಯೊಡನೆ ತಿಂದು ಸೈಕಲ್ ಹತ್ತಿ ಹದಿನೆಂಟು ಕಿಲೋಮೀಟರು ದೂರದ ಹೊಲಕ್ಕೆ ಹೋಗಿ ಕೆಲಸ ಮುಗಿಸಿ ಮಧ್ಯಾಹ್ನ ಹಿಂತಿರುಗುವುದು. ಪುನಃ ಸ್ನಾನಮಾಡಿ ಉಪಹಾರ ಇಲ್ಲವೇ ಹಾಲು ತೆಗೆದುಕೊಂಡು ಕಾಲೇಜಿಗೆ ಹೋಗಿ ಪಾಠಮಾಡಿ ಸಂಜೆ ಬಂದು ಉಳಿದ ಸಮಾಜಸೇವಾ ಕಾರ್ಯಗಳಿಗೆ ಗಮನ. ಈ ಮಧ್ಯೆ ವಾರದಲ್ಲಿ ಕೆಲವೊಮ್ಮೆ ನಮ್ಮ ಗದ್ದೆ, ದೇವಸ್ಥಾನ ಇದ್ದ ತೀ ನರಸೀಪುರಕ್ಕೆ ಕೆಲಸದ ಮೇಲೆ ಹೋಗುವುದು. ಈ ಯಾವ ಸಂದರ್ಭಗಳಲ್ಲಿಯೂ ಅವರು 'ಸುಸ್ತು' ಎಂದು ಹೇಳಿದುದನ್ನು ನಾವು ಕೇಳಲೇ ಇಲ್ಲ. ಅನಾರೋಗ್ಯದಿಂದಿದ್ದಾಗಲೂ ಅವರು ಮುಖ ಬಾಡಿಸಿಕೊಳ್ಳುತ್ತಿರಲಿಲ್ಲ. ಮುಖದಲ್ಲಿ ವಿಶಿಷ್ಟವಾದ ಒಂದು ವರ್ಚಸ್ಸು, ಸ್ಫೂರ್ತಿ, ಕಳೆ. ಅದು ಅವರು ಇರುವವರೆಗೂ ಇತ್ತು. ನಮ್ಮ ಅಮ್ಮ ನಮಗೆ ಕೆಲಸ ಹೇಳುವಾಗ ನಾವು 'ಹಾ ಹಿ' ಎಂದರೆ 'ನಾನಿಷ್ಟು ಕೆಲಸ ಮಾಡುತ್ತೇನಲ್ಲ, ನಾನೆಂದಾದರೂ ಹಾಗೆ ಹೇಳಿದ್ದೇನೆಯೇ?' ಎನ್ನುತ್ತಿದ್ದರು. ಅದಕ್ಕೆ ನಾವು 'ಅಪ್ಪಾ, ನಿಮಗಾದರೆ ಕೆಲಸ ಮಾಡಿ ಅಭ್ಯಾಸವಾಗಿದೆ' ಎನ್ನುತ್ತಿದ್ದೆವು. ಅದಕ್ಕೆ ಅವರು 'ಮದುವೆ ಮಾಡಿಕೊಂಡು ಅಭ್ಯಾಸವಿರುತ್ತದೆಯೇ, ಕೆಲಸ ಕಲಿತರೆ ತಾನಾಗಿ ಬರುತ್ತದೆ' ಎನ್ನುತ್ತಿದ್ದರು.

ಅವರಿಗೆ ಶಿಷ್ಯವೃಂದದವರಲ್ಲಿ ಅಪಾರ ಪ್ರೀತಿ. ಗೆಳೆಯರು, ಬಂಧುಬಾಂಧವರಲ್ಲಿ ಅತ್ಯಂತ ಅಭಿಮಾನ. ಅವರನ್ನು ಸೇರಿಸುವುದಕ್ಕಾಗಿಯೇ ಮನೆಯಲ್ಲಿ ಸಮಾರಂಭಗಳ ನೆಪ ಮಾಡುತ್ತಿದ್ದರು. ವಿದ್ಯಾರ್ಥಿಗಳನ್ನು ಕುರಿತು ಹೇಳುವಾಗ, 'ನಮ್ಮ ಶಾಸ್ತ್ರೀ', 'ನಮ್ಮ ಮೂರ್ತಿ' ಎಂದೇ ಹೇಳುತ್ತಿದ್ದರು. ಕಲಿಯಬೇಕಾದ, ಅಧ್ಯಯನ ಮಾಡಬೇಕಾದ, ಕಷ್ಟ ಸಹಿಷ್ಣುವಾಗಬೇಕಾದ ಸಂದರ್ಭ ಬಂದಾಗಲೆಲ್ಲಾ 'ಶಾಸ್ತ್ರಿಯನ್ನು ನೋಡಿ' ಎಂದು ಹೆಮ್ಮೆಯಿಂದ ಬೀಗುತ್ತಿದ್ದರು.

ಬದುಕಿನ ಪ್ರತಿ ಅನುಭವವನ್ನು ನನ್ನ ಅಪ್ಪ ಪ್ರೀತಿಸುತ್ತಿದ್ದರು. ತನಗಾಗಿ ಶ್ರಮಿಸಿದವರನ್ನು ನೆನೆನೆನೆದು ಕಣ್ಣೀರಿಡುತ್ತಿದ್ದರು. ಅವರು ಹಾಸಿಗೆಯಲ್ಲಿ ಮಲಗಿದಾಗ 'ನೋಡು ನಿಮ್ಮಮ್ಮ ನನಗಾಗಿ ಎಷ್ಟು ಕಷ್ಟಪಡುತ್ತಾಳೆ' ಎನ್ನುತ್ತಿದ್ದರು. ನನ್ನ ತಮ್ಮ ಅವರನ್ನು

ಒಂದು ಕಡೆಯಿಂದ ಇನ್ನೊಂದು ಕಡೆಗೆ ಅನಾಮತ್ತು ಹೂವಿನಂತೆ ಎತ್ತಿಕೊಂಡು ಓಡಾಡುವಾಗ 'ಗೋಪಿಯ ಸಾಮರ್ಥ್ಯ' ಕಂಡು ಮನಸ್ಸಿನಲ್ಲಿ ಹೆಮ್ಮೆ ಪಡುತ್ತಿದ್ದರು. ಬಂಧು ಬಳಗದವರೋ ವಿದ್ಯಾರ್ಥಿಗಳೋ ಅವರನ್ನು ನೋಡಲು ಬಂದು ಹೋದಾಗ ಅದನ್ನು ಬಹಳವಾಗಿ ಮೆಚ್ಚಿಕೊಳ್ಳುತ್ತಿದ್ದರು. ಆ ಸಂದರ್ಭಗಳಲ್ಲಿ ಅವರ ಕಣ್ಣುಗಳು ತುಂಬಿ ಬರುತ್ತಿದ್ದವು. ಹೀಗೇ ಒಂದು ಸಂಜೆ ಅನಾರೋಗ್ಯಕ್ಕೆ ಮೊದಲು ಹಜಾರದಲ್ಲಿ ಕುರ್ಚಿಯ ಮೇಲೆ ಕುಳಿತಿದ್ದರು. ನಾನು ಹೊರಗೆ ಹೋದವಳು ಒಳಗೆ ಬಂದೆ. 'ಶಶಿ' ಎಂದು ಕರೆದರು. ಕಣ್ಣಲ್ಲಿ ನೀರಿತ್ತು. ನಾನು ಹೆದರಿ 'ಅಪ್ಪ ಏನು ಎಂದೆ'. ಕಣ್ಣೊರೆಸಿಕೊಂಡು 'ನಿನಗೆ ಎಂ.ಎ. ಪ್ರಥಮ ದರ್ಜೆಯಲ್ಲಿ ಪಾಸಾಗಿದೆಯಂತೆ. ನಿನ್ನ ಸಹಪಾಠಿ ಹೇಳಿಹೋದರು' ಎಂದರು. ಆಗ ನನಗೆ ಅವರ ಕಣ್ಣೀರಿನ ಅರ್ಥವಾಯಿತು. ಆನಂದವನ್ನು ಅವರು ಅಷ್ಟು ಆಳವಾಗಿ ಅನುಭವಿಸುತ್ತಿದ್ದರು.

ಹಿಂದೆ ಹೇಳಿದಂತೆ ನನ್ನ ಅಪ್ಪನಲ್ಲಿ ನಾನೊಬ್ಬ ಹತ್ತಿರದ ಗೆಳೆಯನನ್ನು ಕಂಡುಕೊಂಡಿದ್ದೇನೆ. ಅವರಲ್ಲಿ ನಾನು ಏನೂ ಹೇಳಿಕೊಳ್ಳಬಹುದಿತ್ತು. ಅವರು ನನ್ನನ್ನು ನನ್ನೆಲ್ಲಾ ಭಾವನೆಗಳನ್ನು ಅರ್ಥ ಮಾಡಿಕೊಳ್ಳುತ್ತಾರೆ ಎಂಬ ಭರವಸೆ ನನ್ನ ಮನಸ್ಸಿನಲ್ಲಿತ್ತು. ನನ್ನ ಮನೆಯಲ್ಲಿ ನನಗೆ ಮದುವೆಗಾಗಿ ಗಂಡು ಹುಡುಕುತ್ತಿದ್ದ ಸಂದರ್ಭ. ನಾನು ನಿರಾಕರಿಸುತ್ತಿದ್ದೆ. ನನಗೆ ನನ್ನದೇ ಆದ ಕಾರಣಗಳಿದ್ದವು. ಹೀಗಿರುವಾಗ ಒಂದು ದಿನ ಮನೆಯಲ್ಲಿ ಯಾರೂ ಇರಲಿಲ್ಲ. ನಾನು ಅಪ್ಪ ಇಬ್ಬರೇ. ಅಪ್ಪ ನನ್ನನ್ನು ಹತ್ತಿರ ಕರೆದರು. ಕೂರಿಸಿಕೊಂಡರು. 'ನೀನೇಕೆ ಮದುವೆಗೆ ಒಪ್ಪುವುದಿಲ್ಲ. ನಿನಗೆ ಬೇರೇನಾದರೂ ಆಲೋಚನೆ ಇದೆಯೇ ನನ್ನಲ್ಲಿ ಹೇಳು. ನಾನು ಯಾರಿಗೂ ಹೇಳುವುದಿಲ್ಲ' ಎಂದರು. ನಾನು ಇದ್ದೆಲ್ಲಾ ಧೈರ್ಯವನ್ನು ಒಟ್ಟುಮಾಡಿ ಅನಿರೀಕ್ಷಿತವಾದ ಆ ಸಂದರ್ಭದಲ್ಲಿ 'ಹೇಳಲಾ' ಎಂದೆ. 'ಖಂಡಿತಾ ಹೇಳು' ಎಂದರು. 'ನಾನೊಬ್ಬ ಹುಡುಗನನ್ನು ಇಷ್ಟಪಟ್ಟಿದ್ದೇನೆ. ಮದುವೆಯಾದರೆ ಅವನನ್ನು ಮಾತ್ರ' ಎಂದೆ. ಅದನ್ನು ಅರಗಿಸಿಕೊಳ್ಳುವುದು ಅವರಿಗೆ ಅಷ್ಟು ಸುಲಭವಾದ ಮಾತಾಗಿರಲಿಲ್ಲ. ಯಾವುದೇ ಭಾವೋದ್ವೇಗಗಳಿಲ್ಲದೆ ಸರಳವಾಗಿ 'ಯಾರು?' ಎಂದರು. ಇದ್ದ ವಿಷಯ ಹೇಳಿದೆ. ತಕ್ಷಣ 'ಸರಿ ಈಗಲೇ ನೀನು ಯಾರಿಗೂ ಈ ವಿಷಯ  ಹೇಳಬೇಡ 'ನನಗೆ ಬಿಡು' ಎಂದರು. ಸುಮಾರು ವರ್ಷಗಳಿಂದ ಈ ವಿಷಯ ಅಪ್ಪನಿಗೆ ಹೇಳುವುದು ಹೇಗೆ? ಹೇಳಿದಾಗ ಅಪ್ಪನಿಗೆ ಏನೆನ್ನಿಸಬಹುದು? ಎಂದುಕೊಳ್ಳುತ್ತಿದ್ದ ನನ್ನ ಬೆಟ್ಟದ ಭಯ ಕ್ಷಣಮಾತ್ರದಲ್ಲಿ ಇಳಿದು ಹೋಯಿತು. ಎರಡು ಮೂರು ತಿಂಗಳಲ್ಲಿ ನಾನು ಇಷ್ಟಪಟ್ಟವರೊಡನೆ ಮದುವೆಯೂ ಆಯಿತು. ನನ್ನ ಮನೆಯ ಪರಂಪರೆಯಲ್ಲಿ ಇದು ಅಷ್ಟು ಸುಲಭವಾದ ಮಾತಾಗಿರಲಿಲ್ಲ. ಇದು ಆಗುವಂತಾಗಲು ನನ್ನ ಅಪ್ಪನಿಗೆ ನನ್ನ ಬಗ್ಗೆ ಇದ್ದ ಅದಮ್ಯವಾದ ಪ್ರೀತಿಯೊಂದೇ ಕಾರಣವೆಂದು ನನ್ನ ಭಾವನೆ.

ನನ್ನ ಅಪ್ಪ ಉಡುಗೆ ತೊಡುಗೆಗಳಲ್ಲಿ ಬಹಳ ಅಚ್ಚುಕಟ್ಟು. ಅದು ವೈದಿಕವಾದ ಪೋಷಾಕೇ ಇರಲಿ, ಲೌಕಿಕವಾದದ್ದಿರಲಿ, ನಾಲ್ಕು ಜನ ಕಣ್ಣೆತ್ತಿ ನೋಡುವಂತಿತ್ತು ಅವರ ಉಡುಗೆಯ ಶೈಲಿ. ಗರಿಮುರಿಯಾದ ಕೋಟು, ಕಚ್ಚೆ ಪಂಚೆ, ಎತ್ತಿ ಕಟ್ಟಿದ ಅಂದವಾದ ರುಮಾಲು, ಹಣೆಯಲ್ಲಿ ನಾಮ. ಮೈಸೂರಿನ ರುಮಾಲು ಆ ಕಾಲದಲ್ಲಿ ಕೆಲವರೇ ತೊಡುತ್ತಿದ್ದ ವಿಶೇಷ ತೊಡುಗೆ. ನನ್ನ ಅಪ್ಪ ರುಮಾಲು ಕಟ್ಟುವ ವೈಖರಿಯೇ ವೈಖರಿ. ನಮ್ಮ ಮನೆಯಲ್ಲಿ ಒಂದು ಅಗಲವಾದ ಕಲಾತ್ಮಕವಾದ ಕನ್ನಡಿಯಿತ್ತು. ಅದರ ಮುಂದೆ ನಿಂತು, ತಲೆಬಗ್ಗಿಸಿ ತಲೆಯ ಹಿಂದೆ ರುಮಾಲಿನ ಬಟ್ಟೆಯನ್ನು ಇಳಿಬಿಟ್ಟು, ಕಣ್ಣನ್ನು ಮೇಲೆ ಮಾಡಿ ಕಟ್ಟುವಾಗ ನಾವು ಅಪ್ಪ ರುಮಾಲು ಕಟ್ಟುವುದನ್ನು ನೋಡುವುದಕ್ಕಿಂತ ಅವರ ಮುಖದ ಕೆಳಗೆ ಕುರ್ಚಿಯಲ್ಲಿ ಕುಳಿತು ಅವರನ್ನೇ ನೋಡುತ್ತಿದ್ದೆವು. ನಮ್ಮ ಮನೆಯಲ್ಲಿ ಬಟ್ಟೆ ದೋಬಿಗೆ ಹೋಗುತ್ತಿದ್ದುದು ಅಪ್ಪನದು ಮಾತ್ರ. ಅದೂ ಅವರ ರುಮಾಲು ಮತ್ತು ಕೋಟು. ರುಮಾಲಿನ ಜರಿ 'V' ಆಕಾರದಲ್ಲಿ ಹಣೆಯ ಮೇಲೆ ಬರುವಂತೆ ಕಟ್ಟುವ ಆ ಶೈಲಿಯನ್ನು ನಾವೆಷ್ಟು ಕಲಿಯಲು ಪ್ರಯತ್ನಿಸಿದರೂ ಬರಲೇ ಇಲ್ಲ.

ಜನರಿಗೆ ಊಟ ಹಾಕುವುದರಲ್ಲಿ ಅಪ್ಪನಿಗೆ ಅತಿ ಪ್ರೀತಿ. ತೀನರಸಿಪುರದಲ್ಲಿ ನಮಗೆ ಒಂದು ಚಿಕ್ಕ ಮನೆಯಿದೆ. ಮನೆಯ ಸುತ್ತ ಗದ್ದೆ. ಒಂದು ಬದಿಯಲ್ಲಿ ನನ್ನ ತಂದೆಯ ಅಜ್ಜ ಅಜ್ಜಿ ಕಟ್ಟಿಸಿದ ಕೆರೆ ಇದೆ. ಪ್ರತಿ ವರ್ಷ ಅಪ್ಪನ ಮುಂದಾಳುತ್ವದಲ್ಲಿ ಅಲ್ಲಿ 'ಧಾತ್ರಿ ಹವನ' ನಡೆಯುತ್ತಿತ್ತು. ನರಸಿಂಹ ದೇವರ ಉತ್ಸವ ಮೂರ್ತಿಯನ್ನು ಅಲ್ಲಿಗೆ ಬಿಜಯಮಾಡಿಸಿ ಪೂಜೆ ಮಾಡಿ ಊರಿನವರಿಗೆ, ಸುತ್ತಮುತ್ತಲಿನ ಹಳ್ಳಿಯವರಿಗೆ ಊಟ ಹಾಕಿ ಅಪ್ಪ ತೃಪ್ತಿ ಪಡುತ್ತಿದ್ದರು. ಇದು ನಮ್ಮ ಹಿರಿಯರ ಕಾಲದಿಂದ ನಡೆದು ಬಂದ ಪದ್ಧತಿ. ಈಗಲೂ ಮುಂದುವರೆದಿದೆ. ಬೆಳಗ್ಗೆ ಊರಿನವರಿಗೆ, ಸಂಜೆ ಹಳ್ಳಿಯ ಸಮುದಾಯದವರಿಗೆ ಊಟ. ಕಾರ್ತಿಕ ಮಾಸದಲ್ಲಿ ಇದು ನಡೆಯುತ್ತಿದ್ದುದರಿಂದ ಬಹಳ ಚಳಿ. ಸಂಜೆ ಹಳ್ಳಿಯ ಜನರು ಕಂಬಳಿಯನ್ನು ತಲೆಗೆ ಮುಸುಕು ಹಾಕಿ ಕೈಯಲ್ಲಿ ಪಾತ್ರೆ ಹಿಡಿದು ಪ್ರಸಾದದ ಊಟ ಸ್ವೀಕರಿಸಲು ಕುಳಿತುಕೊಳ್ಳುತ್ತಿದ್ದರು. ಆ ನಸುಗತ್ತಲಿನ ಪೆಟ್ರೋಲ್ ಮಾಕ್ಸ್ ದೀಪದಲ್ಲೂ ನನ್ನ ತಂದೆ ಪ್ರತಿಯೊಬ್ಬರನ್ನೂ ಪತ್ತೆ ಹಚ್ಚುತ್ತಿದ್ದರು. ಒಮ್ಮೆ ಹೀಗೇ ಈ ಗುಂಪಿನ ಮಧ್ಯೆ 'ದೊಡ್ಡಪ್ಪನಿಗೆ ಗೊತ್ತಾಗುತ್ತದಾ ನೋಡುತ್ತೇನೆ' ಎಂದು ನನ್ನ ಚಿಕ್ಕಪ್ಪನ ಮಗ ತಲೆಗೆ ಮುಸುಕು ಹಾಕಿ ಕೈಯಲ್ಲಿ ಪಾತ್ರೆ ಹಿಡಿದು ಕುಳಿತ. ಎಲ್ಲರಿಗೂ ಪ್ರಸಾದ ಕೊಟ್ಟು ಅವನ ಬಳಿ ಬಂದವರೇ ನಿಂತರು. "ಹಾಕಿ ಅನಂತಪ್ಪ" ಎಂದ. "ನಡಿಯೋ ಒಳಗೆ" ಎಂದು ಮೃದುವಾಗಿ ಗದರಿಸಿ ಒಳಗೆ ಕಳುಹಿಸಿದರು.

ಏನನ್ನೂ ದಂಡ ಮಾಡುವುದು ಅಪ್ಪನಿಗೆ ಆಗದು. ಅವರು ಕಾಗದ ಬಳಸುತ್ತಿದ್ದ ರೀತಿಯೇ ಇದಕ್ಕೆ ಸಾಕ್ಷಿ. ಅವರು ಹಲವು ಸಾವಿರ ಪುಟಗಳ ಹಸ್ತಪ್ರತಿ ತಯಾರಿಸಿದ್ದಾರೆ. ಇದಕ್ಕೆ ಕರಡು ತಯಾರಿಸಿಕೊಳ್ಳುವಾಗ ಎಂದಿಗೂ ಅವರು ಹೊಸ ಬಿಳಿಯ ಹಾಳೆ ಬಳಸುತ್ತಿರಲಿಲ್ಲ. ನನ್ನ ಅಣ್ಣ ಕಾಲೇಜಿನ ಕಳೆದ ವರ್ಷದ ವಿದ್ಯಾರ್ಥಿಗಳು ಬರೆದ ಬರವಣಿಗೆ ಪುಸ್ತಕಗಳ ರಟ್ಟಿನ ಭಾಗವನ್ನು ಮನೆಗೆ ತರುತ್ತಿದ್ದರು. ಇಡೀ ಸಾಹಿತ್ಯ ಭಾರತಿಯ ಕರಡನ್ನು ಅವರು ಈ ಹಾಳೆಗಳಲ್ಲಿಯೇ

ಬರೆದರು. ಅವರು ಲೇಖನಿಯನ್ನು ಬಳಸುತ್ತಿದ್ದ ರೀತಿಯೇ ವಿಶಿಷ್ಟವಾದುದು. ಮೃದುವಾಗಿ ಬಲಗೈಯಲ್ಲಿ ತೆಗೆದು ಬರೆದು ಹಾಗೆಯೇ ಮೃದುವಾಗಿ ಇಟ್ಟು ಬಿಡುತ್ತಿದ್ದರು. ಯಾವ ಪೆನ್ನೂ ಅಪ್ಪನ ಕೈಯಲ್ಲಿ ಚೆನ್ನಾಗಿಯೇ ಬರೆಯುತ್ತಿತ್ತು. ಹಾಗಾಗಿ ನಾವು ನಮ್ಮ ಹಾಗೂ ಅಪ್ಪನ ಪೆನ್ನುಗಳನ್ನು ಕೆಲವೊಮ್ಮೆ ಅವರಿಗೆ ಹೇಳಿ, ಕೆಲವೊಮ್ಮೆ ಹೇಳದೆಯೇ ಅದಲು ಬದಲು ಮಾಡಿಕೊಳ್ಳುತ್ತಿದ್ದೆವು. ಮನೆಯಲ್ಲಿ ಎಲ್ಲರಿಗೂ ಅಪ್ಪನ ಪೆನ್ನಿನ ಬಗ್ಗೆ ಪೈಪೋಟಿ. ಕಿಟೆಲ್ ನಿಘಂಟನ್ನು ಅವರು ಮೂವತ್ತು ವರ್ಷಗಳಿಗೂ ಮೇಲೆ ಬಳಸಿದರು. ಅದರ ಒಂದು ಪುಟವೂ ಮಾಸಲಿಲ್ಲ. ನಮ್ಮ ಪುಸ್ತಕಗಳಂತೆ ಅದಕ್ಕೆ ಕಿವಿ, ಕಣ್ಣು ಬರಲಿಲ್ಲ. ಪುಸ್ತಕದ ಹಾಳೆಗಳನ್ನು ಅವರು ತೆಗೆಯುತ್ತಿದ್ದ ರೀತಿಯೇ ಹಾಗಿತ್ತು. ಅದನ್ನು ನಮಗೂ ಕಲಿಸುತ್ತಿದ್ದರು. "ಮೇಜಿನ ಮೇಲಿರುವ ಪುಸ್ತಕವನ್ನು ಅನಗತ್ಯ ಮುಟ್ಟಬೇಡ. ಬಲಗೈನ ಬೆರಳ ತುದಿಯಿಂದ ಪುಸ್ತಕದ ಪುಟದ ತುದಿಯನ್ನು ಉಜ್ಜದೆ ಮೆಲ್ಲನೆ ತೆಗೆದು ಪಕ್ಕಕ್ಕೆ ಹಾಕು" ಎಂದು ತೋರಿಸುತ್ತಿದ್ದರು. ರಟ್ಟು ಹಾಕುವಾಗ ಆ ಕಾಗದದ ಯಾವ ತುಂಡನ್ನೂ ಹೊರಗೆ ಹಾಕದೆ ಪುಸ್ತಕದ ಒಳಗೆ ಮಡಿಸಿ ರಟ್ಟುಹಾಕಿದ್ದಾರೆ ಎಂಬ ಸುಳಿವೇ ಇಲ್ಲದಂತೆ ಬೈಂಡ್ ಮಾಡುವ ಕಲೆಯನ್ನು ಅವರು ನಮಗೆ ಕಲಿಸಿದ್ದರು. ನಾವು ಮಕ್ಕಳು ಅದೆಷ್ಟು ಕಾಗದ, ಶಾಯಿ ಬಳಸುತ್ತಿದ್ದೆವೆಂದರೆ, ಒಮ್ಮೆ ಗೌರಿಶಂಕರ ಬುಕ್ ಡಿಪೋ ವ್ಯಾಪಾರಿಗಳು "ಏನು ಸಾರ್, ನಿಮ್ಮ ಮನೆಯಲ್ಲಿ ಪೇಪರ್ ತಿಂದು ಶಾಯಿ ಕುಡಿಯುತ್ತಾರೆಯೇ?" ಎಂದು ಕೇಳಿದರಂತೆ. ನಾವು ಬಳಸದ ಹಾಳೆ, ಶಾಯಿ ಅಪ್ಪನ ಪಾಲಿಗೆ.

ಕಾಲದ ಬಗ್ಗೆ ಅವರಿಗೆ ಅತ್ಯಂತ ಎಚ್ಚರಿಕೆ. ಯಾವುದೇ ಕಾರಣಕ್ಕೂ ಕಾಲವ್ಯಯ ಮಾಡುವುದನ್ನು ಅವರು ಸಹಿಸುತ್ತಿರಲಿಲ್ಲ. ಪರೀಕ್ಷೆಗಾಗಿ ಮಾತ್ರ ನಾವು ನಿರಂತರ ಓದುವುದನ್ನು, ಪರೀಕ್ಷೆಯಿಲ್ಲದಿದ್ದರೆ ಓದದಿರುವುದನ್ನು ಮನಗಂಡು ಒಂದಾದ ಮೇಲೊಂದರಂತೆ ಡಿಗ್ರಿ ಮಾಡಲು ಪ್ರೇರೇಪಿಸಿದರು. ಡಿಗ್ರಿಗಾಗಿ ಅಲ್ಲ, ಡಿಗ್ರಿಯ ನೆಪದಲ್ಲಾದರೂ ಓದಲಿ ಎಂದು. ರಜಾ ಬಂದಾಗ ವಯಸ್ಕರ ಶಿಕ್ಷಣಕ್ಕೆ ಸಿದ್ಧಪಡಿಸಿದ ಕತೆಪುಸ್ತಕಗಳನ್ನು ದಿನಕ್ಕೊಂದರಂತೆ ಓದಿ ಮುಗಿಸಲು ಕಡ್ಡಾಯ ಮಾಡುತ್ತಿದ್ದರು. ಅದು ಆಗ ನಮಗೆ ಅಷ್ಟು ಅಪ್ಯಾಯಮಾನವಾಗದಿದ್ದರೂ ಆಗ ಕಲಿತ ವಿಷಯಗಳ ಬೆಲೆ ನಮಗೆ ಈಗ ತಿಳಿಯುತ್ತಿದೆ.

ನಾಟಕ ಆಡುವುದರಲ್ಲಿ ಆಡಿಸುವುದರಲ್ಲಿ ಅಪ್ಪನಿಗೆ ಅತಿ ಖುಷಿ. ಅದು ರಂಗದ ಮೇಲೆಯೇ ಸಾಗಿ ಬರಬೇಕೆಂದಿಲ್ಲ. ನಾನು ಹಿಂದೆ ಹೇಳಿದಂತೆ, ಊಟವಾದ ನಂತರ ಅವೆಷ್ಟೋ ರಂಗಗೀತೆಗಳು, ನಾಟಕದ ಪದ್ಯಗಳು, ಸಂಭಾಷಣೆಗಳು ಅವರ ಬಾಯಿಯಿಂದ ಹೊರಟದ್ದೇ ತಡ, ನಾವು ಅದನ್ನು ಕಲಿಯುತ್ತಿದ್ದೆವು. ಹಾಗಾಗಿ ಅಶ್ವತ್ಥಾಮನ್ ನಾಟಕ ಹಾಗೂ ಗದಾಯುದ್ಧ ನಾಟಕಗಳ ಬಹುಭಾಗದ ಸ್ಕ್ರಿಪ್ಟ್ ನಮ್ಮ ಮನೆಯಲ್ಲಿ ಎಲ್ಲರಿಗೂ ಗೊತ್ತು. ಅಶ್ವತ್ಥಾಮನ್ ಮೇಳದ ಹಾಡುಗಳಂತೂ ಅವರಿಗೆ ಅತ್ಯಂತ ಪ್ರೀತಿ. "ದ್ರೋಣಪುತ್ರ ರುದ್ರಮಿತ್ರ ನಿನ್ನ ಪೆಸರ ಪಟಿಯಿಡೇನ್......" ಎಂಬುದು ಒಂದು ಧಾಟಿ. "ಕೃಷ್ಣನೇನ್ ಪುಸಿವನೇನ್...." ಎಂಬ ಭಾರ್ಗವಿಯ ಮಾತುಗಳ ರೀತಿಯೇ ಬೇರೆ. "ಇಂದೇನೊ ಮುಂದೇನೊ ಮುಂದೆ

ಆಳ್ಕಾಣಳ್...." ಇದರ ರಾಗ ಮತ್ತೊಂದು ಬಗೆ. ಎಲ್ಲವೂ ಅವರ ಮಾತಿನ ಭಾಗಗಳಾಗಿ ಕುಣಿಯುತ್ತಿದ್ದವು. ನಮ್ಮ ಮನೆಯಲ್ಲಿ ಮೊಮ್ಮಕ್ಕಳು ಗದಾಯುದ್ಧದ "ತೊಡಳಾಯ್ತೆನ್ನಯ ಪೂಣ್ದ ಪೂಣ್ಕೆ ಸಭೆಯೊಳ್...." ಈ ನಾಟಕಭಾಗವನ್ನು ಅಭಿನಯದಲ್ಲಿ ಆಡಿ ತೋರಿಸಿ ಶಾಲೆಯಲ್ಲಿ ಬಹುಮಾನ ಗಿಟ್ಟಿಸಿದ್ದಾರೆ.

ನಮ್ಮ ಅಪ್ಪ ನಮ್ಮಲ್ಲಿ ಅನೇಕ ಒಳ್ಳೆಯ ಅಭ್ಯಾಸಗಳನ್ನು ಬೆಳೆಸಿದ್ದರು. ನಮಗೆಲ್ಲ ಹಣ ಕೂಡಿಸಲು ಒಂದು ಗೋಲಕ ಇರುತ್ತಿತ್ತು. ಅವರು ಪೌರೋಹಿತ್ಯ ಮಾಡಿಸಿ ಬಂದಾಗ ತಂದ ಅಕ್ಕಿಯಲ್ಲಿ ನಾಣ್ಯಗಳು ಇರುತ್ತಿದ್ದವು. "ಸಿಕ್ಕಿದವರಿಗೆ ಸೀರುಂಡೆ..." ಎಂಬಂತೆ ಅದನ್ನು ಮೊರದಲ್ಲಿ ಹಾಕಿ ಯಾರು ಎಷ್ಟು ಆಯುತ್ತಾರೆಯೋ ಅವರಿಗೆ ಅಷ್ಟು ಸಿಗುತ್ತಿತ್ತು. ನಾವು ಅದನ್ನು ಗೋಲಕದಲ್ಲಿ ಹಾಕಿಟ್ಟುಕೊಳ್ಳುತ್ತಿದ್ದೆವು. ವರ್ಷವಿಡೀ ಸೇರಿಸಿದ ಗೋಲಕ ಮುರಿದರೆ ಸಿಗುತ್ತಿದ್ದುದು ಐದರಿಂದ ಆರು ರೂಪಾಯಿಗಳು ಮಾತ್ರವಾದರೂ ಆಗಿನ ಆ ಖುಷಿ ಈಗಿನ ಲಕ್ಷಕ್ಕೂ ಮೀರಿದ್ದು.

ಅಪ್ಪ ಮನೋದಾರ್ಢ್ಯದ ಸಾಕಾರಮೂರ್ತಿ. ಅವರಿಗಿದ್ದ ಆ 'ವಿಲ್‌ಪವರ್'ನಿಂದಾಗಿಯೇ ಅವರು ಒಂದು ತಿಂಗಳು ಕೋಮಾದಲ್ಲಿದ್ದೂ ಅದನ್ನು ಜಯಿಸಿ ಹೊರಬಂದಿದ್ದರು. ಬದುಕಿರುವಷ್ಟು ದಿವಸವೂ ಹಸುರಾಗಿ ಬದುಕಿದರು. ಕಾಲು ಕೈಕೊಟ್ಟಾಗಲೂ ಬದುಕಿನ ಪ್ರೀತಿಯನ್ನು ಕಳೆದುಕೊಳ್ಳಲಿಲ್ಲ. ನನ್ನ ತಮ್ಮ ಒಂದು ದಿನ ಕನ್ನಂಬಾಡಿಯಲ್ಲಾಗಿರುವ ಬದಲಾವಣೆಗಳನ್ನು ಹೇಳುತ್ತಿರುವಂತೆ ಅವನ ಜೊತೆ ಕಾರಿನಲ್ಲಿ ಹೋಗಿ ಕನ್ನಂಬಾಡಿಯನ್ನು ಸುತ್ತಿಬಂದರು. ಲಂನೇ ವರ್ಷದ ಶಾಂತಿಯನ್ನು ನಲವತ್ತೆಂಟು ಬಾರಿ ರಾಮಾಯಣ ಓದಿ ಸಾಮ್ರಾಜ್ಯ ಪಟ್ಟಾಭಿಷೇಕ ಮಾಡಿ ವಿಜೃಂಭಣೆಯಿಂದ ನೆರವೇರಿಸಿಕೊಂಡರು.

ನಾವೆಲ್ಲ ಬಹಳ ದೂರದ ಊರಿಗೆ ಪ್ರಯಾಣ ಹೋಗುತ್ತಿದ್ದುದು ಕಡಿಮೆಯಾದರೂ ಒಮ್ಮೊಮ್ಮೆ ಚಿಕ್ಕಪ್ಪನ ಮನೆಯಲ್ಲಿ ಶುಭ ಸಮಾರಂಭಗಳಿರುವಾಗ ಮೈಸೂರಿನಿಂದ ಬೆಂಗಳೂರಿಗೆ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದೆವು. ಆಗ ಬೆಂಗಳೂರಿನ ರೈಲು ಈಗಿನಷ್ಟು ವೇಗವಾಗಿ ಹೋಗುತ್ತಿರಲಿಲ್ಲ. ಕೆಲವು ಗಂಟೆಗಳೇ ಬೇಕಾಗುತ್ತಿತ್ತು. ರೈಲಿನಲ್ಲಿ ಕುಳಿತ ಸ್ವಲ್ಪ ಹೊತ್ತು ಅಪ್ಪ ಸುಮ್ಮನಿರುತ್ತಿದ್ದರು. ರೈಲು ಹೊರಟ ಸ್ವಲ್ಪ ಹೊತ್ತಿಗೆ "ಸುಮ್ಮನೆ ಸಮಯ ದಂಡ ಮಾಡುವುದು ಯಾಕೆ? ಸಹಸ್ರನಾಮ ಹೇಳಿ. ತಿರುಪ್ಪಾವೈ ಹೇಳಿ " ಎಂದು ಪ್ರಾರಂಭಿಸಿಬಿಡುತ್ತಿದ್ದರು. ಲೋಕದಲ್ಲಿ ಇತರರು ಹಾಗೆ ಮಾಡುತ್ತಿರಲಿಲ್ಲವಾದ್ದರಿಂದ ನಮಗೆ ನಾಚಿಕೆಯೋ ನಾಚಿಕೆ. ಅತ್ತಿತ್ತ ನೋಡುತ್ತಿದ್ದಂತೆ ರೈಲಿನಲ್ಲಿ ಆಚೀಚೆ ಕುಳಿತ ಜನರು ಬಂದು ಬಗ್ಗಿ ಬಗ್ಗಿ ನೋಡುತ್ತಿದ್ದರು. ನಾವಾಗ ಎಷ್ಟು ಮುಜುಗರಪಟ್ಟುಕೊಳ್ಳುತ್ತಿದ್ದೆವೆಂದು ಈಗ ನೆನೆಸಿಕೊಂಡರೆ ನಗು ಬರುತ್ತದೆ.

ಅಪ್ಪನಿಗೆ ಪುಸ್ತಕ ಸೇರಿಸುವುದು, ಕಾಪಾಡುವುದರಲ್ಲಿ ಅತೀವ ಆಸಕ್ತಿ. ಅವರು ಪುಸ್ತಕ ಕೊಂಡದ್ದು ಕಡಿಮೆ. ಪುಸ್ತಕಗಳು ತಾನೇ ತಾನಾಗಿ ಬಂದು ಸೇರುತ್ತಿದ್ದವು. ಪುಸ್ತಕಗಳು ಮನೆಗೆ

ಬಂದ ಕೂಡಲೇ ಅದಕ್ಕೆ ರಟ್ಟು ಹಾಕಬೇಕು, ಹೆಸರು ಬರೆಯಬೇಕು. ಈ ಪುಸ್ತಕಗಳ ಸುರಕ್ಷತೆಯ ಬಗ್ಗೆ ಮುಂದೆ ತುಂಬಾ ತಲೆಕೆಡಿಸಿಕೊಂಡಿದ್ದರು ಕೂಡಾ. ಅವರ ಕಾಲಾನಂತರ ಅವರ ಆ ಅಪಾರ ಶ್ರಮ ವ್ಯರ್ಥವಾಗಬಾರದೆಂದು ಅದರ ಕೆಲವು ಭಾಗಗಳನ್ನು ನಾವು ಮಂಗಳೂರು ವಿಶ್ವವಿದ್ಯಾನಿಲಯದ ಗ್ರಂಥಾಲಯಕ್ಕೆ ಕೊಟ್ಟೆವು. ಈಗ ವಿದ್ಯಾರ್ಥಿಗಳಿಂದ, ಸಂಶೋಧಕರಿಂದ, ಅಧ್ಯಾಪಕರಿಂದ ಅದು ಬಹಳಮಟ್ಟಿಗೆ ಬಳಕೆಯಾಗುತ್ತಿದೆ. ಅದನ್ನು ಕುಟುಂಬದ ಸ್ವತ್ತಾಗಿ ಉಳಿಸಿ ಮನೆಯವರಿಗೆ ಕೊಡಲಿಲ್ಲವೆಂಬ ಆಕ್ಷೇಪ ಇಂದೂ ಇದ್ದೇ ಇದೆ. ಆದರೂ ಒಬ್ಬರಿಗೆ ಜೀವಾವಧಿಯಲ್ಲಿ ಓದಲಾಗದ ಪುಸ್ತಕಗಳು ಹಲವಾರು ಜನರ ಜ್ಞಾನಭಂಡಾರಗಳಾಗಿಯಾದರೂ ರೂಪುಗೊಳ್ಳಲಿ ಎಂಬ ಸಮುದ್ದೇಶದಿಂದ ಮಾತ್ರ ಅವುಗಳನ್ನು ಗ್ರಂಥಾಲಯಕ್ಕೆ ಕೊಡುವ ಪ್ರಯತ್ನ ಮಾಡಲಾಗಿದೆ.

ಅಪ್ಪ ಎಂದೂ ತರಗತಿಗೆ ತಯಾರಿ ಇಲ್ಲದೆ ಹೋದವರಲ್ಲ. ಅವರು ನಿವೃತ್ತರಾದ ಮೇಲೆ ಯು.ಜಿ.ಸಿ ವತಿಯಿಂದ ಸಿಕ್ಕ ಅವಕಾಶದಲ್ಲಿ ಕಾಲೇಜಿನಲ್ಲಿ ಪಾಠ ಹೇಳುತ್ತಿದ್ದರು. ಕಾಲೇಜಿಗೆ ಹೋಗುವ ಮೊದಲು ಒಂದೆರಡು ಗಂಟೆ ಓದಿಕೊಳ್ಳುತ್ತಿದ್ದರು. ಆಗೆಲ್ಲಾ ನಾನು ಅವರನ್ನು ಕೇಳುತ್ತಿದ್ದೆ " ನೀವಿನ್ನೂ ಓದಿಕೊಂಡೇ ಹೋಗಬೇಕಾ?" ಅದಕ್ಕೆ ಅವರು " ಅಧ್ಯಾಪಕ ಸಿದ್ಧತೆಯಿಲ್ಲದೆ ತರಗತಿಯೊಳಗೆ ಕಾಲಿಡಬಾರದು" ಎಂದು ದೃಢವಾಗಿ ಹೇಳುತ್ತಿದ್ದರು.

ಅಪ್ಪ ಮನೆಗೆ ಹಣ್ಣು ಹಂಪಲು ತರುವ ಬಗೆಯೇ ಬೇರೆ. ಆಗ ಕೆ.ಜಿ. ಲೆಕ್ಕ ಇರಲಿಲ್ಲವಾದರೂ ಡಜನ್ ಅವರಿಗೆ ಬಳಕೆಯೇ ಇಲ್ಲ. ಅವರು ಯಾವಾಗಲೂ ತರುತ್ತಿದ್ದುದು ನೂರು, ಐವತ್ತರ ಲೆಕ್ಕದಲ್ಲಿಯೇ. ತಂದ ಕಿತ್ತಳೆಹಣ್ಣುಗಳನ್ನು ಕುಕ್ಕೆಯಲ್ಲಿ ತುಂಬಿ ಪ್ರತಿಯೊಬ್ಬರನ್ನೂ ಕರೆಕರೆದು ಕೈತುಂಬಾ ಕೊಡಬೇಕು. ಆಗಲೇ ಅವರಿಗೆ ತೃಪ್ತಿ.

ಅಪ್ಪನಿಗೆ ಏನನ್ನಾದರೂ ಆಗಲಿ ತಾನೇ ಕೊಟ್ಟರೆ ಸಮಾಧಾನ. ಹಸು ಸಾಕುವುದೊಂದು ಅವರಿಗೆ ಇಷ್ಟವಾದ ಕೆಲಸ. ನಮ್ಮ ಮನೆಯಲ್ಲಿ ಜೆರ್ಸಿ ಎಂಬ ಹಸುವಿತ್ತು. ಅದರ ಜಾತಿಯೂ ಜೆರ್ಸಿಯೇ. ಅದು ದಿನಕ್ಕೆ ಹನ್ನೆರಡರಿಂದ ಹದಿನಾಲ್ಕು ಲೀಟರ್ ಹಾಲು ಕೊಡುತ್ತಿತ್ತು. ಅಮ್ಮ ಹಾಲನ್ನು ಕಾಯಿಸಿ ರಾತ್ರಿ ವೇಳೆ ಒಂದು ದೊಡ್ಡ ಸ್ಟೀಲ್ ಡಬ್ಬಿಯಲ್ಲಿ ಹಾಕಿ ಅದಕ್ಕೆ ಕೇಸರಿ, ಸಕ್ಕರೆ ಸೇರಿಸಿ ಅಪ್ಪನ ಮುಂದೆ ತಂದಿಡುತ್ತಿದ್ದರು. ಎಲ್ಲರಿಗೂ ಲೋಟದಲ್ಲಿ ಹಾಕಿ ಕೊಡುವುದು ಅಪ್ಪನ ಸರದಿ.

ಅಪ್ಪ ಒಳ್ಳೆಯ ಕೃಷಿಕರು. ಅವರು ದಾಖಲೆಯ ವ್ಯವಸಾಯ ಮಾಡಿರುವುದುಂಟು. ಒಮ್ಮೆ ಅವರು ಬೆಳೆದ ಕುಂಬಳಕಾಯಿ ಅತಿದೊಡ್ಡ ಗಾತ್ರದ್ದಾಗಿದ್ದು ವಸ್ತುಪ್ರದರ್ಶನದಲ್ಲಿ ಸ್ಥಾನ ಕಂಡಿತು. ಮತ್ತೊಮ್ಮೆ ಕಡ್ಲೆಕಾಯಿ ಬೆಳೆ ಅತಿಯಾಗಿ ಬಿಟ್ಟು, ಅದಕ್ಕೆ ಬೆಲೆಯಿಲ್ಲದೆ ಮನೆಯಲ್ಲಿ ಒಂದು ಕೋಣೆಯಲ್ಲಿ ಕೆಳಗಿನಿಂದ ಮೇಲಿನವರೆಗೆ ಸುರಿದಿದ್ದರಂತೆ. ಅಂದಿನಿಂದ ಆ ಕೋಣೆಗೆ ನಮ್ಮ ಮನೆಯಲ್ಲಿ 'ಕಡ್ಲೆಕಾಯಿ ಕೋಣೆ' ಎಂದೇ ಹೆಸರು. ಮತ್ತೊಮ್ಮೆ ಸೂರ್ಯಕಾಂತಿ ಬೆಳೆದಿದ್ದರು.

ಫಸಲು ಚೆನ್ನಾಗಿ ಬಂದಿತ್ತು. ಅದನು ನಾವೆಲ್ಲರೂ ನೋಡಬೇಕೆಂದು ಅವರಿಗೆ ಆಸೆ. ಮಕ್ಕಳಾದ ನಮಗೆ ಅದು ಅಷ್ಟು ಆಕರ್ಷಕವಾಗಿರಲಿಲ್ಲ. ಮಾವಿನಕಾಯಿ ಕಾಲದಲ್ಲಿ ಬರುತ್ತೇವೆ ಎನ್ನುತ್ತಿದ್ದೆವು. ಮಾವಿನ ಕಾಯಿ ನೆಲ ಮುಟ್ಟುವಂತೆ ಬಿಡುತ್ತಿತ್ತು. ಆ ಕಾಲದಲ್ಲಿ ಯಾವುದಾದರೂ ಒಂದು ದಿನ ಮನೆಯಿಂದ ಅದ್ದೂರಿಯ ಅಡಿಗೆ ಮಾಡಿಕೊಂಡು ಹೊಲದಲ್ಲಿ ಓಡಾಡಿ ತಿಂದು ಮಾವಿನ ಕಾಯಿ ಕಿತ್ತು ಮಡಿಲಿಗೆ ತುಂಬಿಸಿಕೊಂಡು ಬರುತ್ತಿದ್ದೆವು.

ಎಂದೂ ಅಪ್ಪ ಆವಶ್ಯಕತೆಯ ಹಿಂದೆ ಹೋದವರೇ ವಿನಾ ಆಡಂಬರ ಅವರಿಗೆ ಆಗದು. ಬಟ್ಟೆ ಹೊಲಿಸುವ ವಿಷಯ ಬಂದಾಗಲೆಲ್ಲಾ ನಮ್ಮ ಮನೆಯಲ್ಲಿ ದೊಡ್ಡ ಚರ್ಚೆಯೇ ಆಗುತ್ತಿತ್ತು. ಬಟ್ಟೆ ಅಥವಾ ಡ್ರೆಸ್ ಯಾವಾಗಲೂ ಎರಡೇ ಇರಬೇಕು. " ಕೋಲ ಮೇಲೊಂದು ಮೈಯ ಮೇಲೊಂದು". ಇದು ನನ್ನ ತಂದೆಯ ತತ್ವ. ಮೂರನೆಯದು ಇದ್ದರೂ ಅದನ್ನು ಹೊರತೆಗೆಯಬಾರದು. ಏಕೆಂದರೆ ಅದರಿಂದ ಅನೇಕ ಸಮಸ್ಯೆಗಳುಂಟು. ಮೂರನೆಯ ಡ್ರೆಸ್ಸನ್ನು ಬೇರೆಯಾಗಿ ಕಾಪಾಡಬೇಕು. ಅಲ್ಲದೆ, ಮೂರನೇ ಡ್ರೆಸ್ ಇರುವುದರಿಂದ ಎರಡನೆಯ ಡ್ರೆಸ್ ಒಗೆಯಲು ಸೋಮಾರಿತನವಾಗುತ್ತದೆ ಇತ್ಯಾದಿ. ನಮ್ಮಲ್ಲಿ ಬಟ್ಟೆ ಹೊಲಿಸುತ್ತಿದ್ದುದು ದೀಪಾವಳಿಗೊಮ್ಮೆ ಯುಗಾದಿಗೆ ಒಮ್ಮೆ. ಬಟ್ಟೆ ಹಾಕಿಕೊಳ್ಳುವುದು ಮೈ ಮುಚ್ಚುವುದಕ್ಕಾಗಿ ಮಾತ್ರ ಎಂಬುದು ಅವರ ಅಭಿಪ್ರಾಯ. ಹಾಗಾಗಿ ಒಂದು ಥಾನ್ ಬಟ್ಟೆ ತಂದು ಮೂರು ನಾಲ್ಕು ಮಕ್ಕಳಿಗೆ ಅದರಲ್ಲಿಯೇ ಲಂಗ, ಜಂಪರ್ ಎಲ್ಲವೂ ಕೂಡಾ. ಅದನ್ನೇ ನಾವು ಖುಷಿಯಾಗಿ ಹಾಕಿಕೊಂಡು ಕುಣಿಯುತ್ತಿದ್ದೆವು.

ತಿರುಪ್ಪಾವೈ ಹಾಡುಗಳು ನನ್ನ ಅಪ್ಪನಿಗೆ ಬಲು ಪ್ರೀತಿ. ಧನುರ್ಮಾಸದ ಪೂರ್ತಿ ತಿಂಗಳು ಪ್ರತೀ ವರ್ಷ ಸಂಜೆಯಾಗುತ್ತಲೇ ನಮ್ಮ ಮನೆಯಲ್ಲಿ ತಿರುಪ್ಪಾವೈ ಪಾಠ. ದಿನಕ್ಕೆ ಒಂದು ಹಾಡು ಕಲಿಯಬೇಕು. ಅದು ಹಿಂದಿನ ವರ್ಷ ಕಲಿತದ್ದೇ ಆದರೂ ಹೇಳಿಕೊಳ್ಳದೆ ಮರೆತುಹೋಗಿರುತ್ತಿತ್ತು. ಅದನ್ನು ಪುನರಾವರ್ತಿಸಿ ಮಾರನೇ ದಿನ ಹೇಳಿಕೊಳ್ಳಲು ಗಟ್ಟಿ ಮಾಡಿಕೊಳ್ಳಬೇಕು. ನಂತರ ಮಲಗಬಹುದು. ಬೆಳಗ್ಗೆ ಬೇಗನೆ ಎದ್ದು ಅದನ್ನು ಪೂಜೆಯ ಸಮಯದಲ್ಲಿ ಹೇಳಬೇಕು. ಚಳಿಗಾಲದ ಚಳಿಯ ಮಧ್ಯೆ ದೇವರ ಮುಂದೆ ರಾಗವಾಗಿ ತಿರುಪಾವೈ ಹಾಡುತ್ತಿದ್ದುದು ಆಂಡಾಳ್ ದೇವರ ಬಗೆಗಿನ ಅತಿ ಭಕ್ತಿಗಿಂತ ಪೂಜೆಯಾದ ನಂತರ ಅಮ್ಮ ಮಾಡಿರುವ ಘಮಘಮಿಸುವ ಗೇರುಬೀಜದ ಪೊಂಗಲ್‌ನ ಆಸೆಗೆ.

ಅಪ್ಪನಲ್ಲಿ ಏನನ್ನು ಬೇಕಾದರೂ ಪಾಠ ಹೇಳಿಸಿಕೊಳ್ಳಬಹುದು. ಆದರೆ ಇಂಗ್ಲೀಷನ್ನು ಮಾತ್ರ ಅಲ್ಲ. ಯಾಕೆಂದರೆ ಒಂದು ಸಣ್ಣ ಪದದ ಅರ್ಥ ಕೇಳಿದರೆ 'ಇಲ್ಲಿ ಬಾ' ಎಂದು ಕೂರಿಸಿಕೊಂಡು Different Parts of Speech ನಿಂದಲೇ ಪ್ರಾರಂಭಿಸುತ್ತಿದ್ದರು. A Noun is the name of a thing, place, person ಎಂದು ಅದೆಷ್ಟು ಬಾರಿ ಇಂಗ್ಲಿಷ್ ಭಾಷಾ ಅಧ್ಯಯನದ ನಾಂದಿ ಹಾಡಿದ್ದೇವೊ ಲೆಕ್ಕವಿಲ್ಲ. ಇದನ್ನು ತಿಳಿದ ನಂತರ ಅಪ್ಪಿತಪ್ಪಿಯೂ ಅಪ್ಪನಲ್ಲಿ

ಇಂಗ್ಲಿಷ್ ಹೇಳಿಸಿಕೊಳ್ಳುತ್ತಿರಲಿಲ್ಲ. ಆಕಸ್ಮಾತ್ ಸಿಕ್ಕಿಬಿದ್ದರೆ, ಈ ಪದ ಯಾವ Parts of Speech ಹೇಳು' ಎಂದು ಸಿಲ್ಲಿಸಿಬಿಡುತ್ತಿದ್ದರು. ಏನೂ ಅರಿಯದ ಮುಗ್ಧತೆಯಲ್ಲಿ ಮಗು "ಏನೋ ತೊದಲುವಂತೆ ನಾವು ತಪ್ಪೆಂದು ಗೊತ್ತಿದ್ದರೂ ಇಂಗ್ಲಿಷ್‌ನ ಯಾವುದಾದರೂ ಒಂದು ಪದವನ್ನು ಹೇಳಿ, ಅಪ್ಪ 'ಛೆ' ಎಂದುದನ್ನು ಕೇಳಿಸಿಕೊಂಡು "ಅಮ್ಮ ಕರೀತಾರೆ" ಎಂದು ಓಡಿಬಿಡುತ್ತಿದ್ದೆವು.

ಅಪ್ಪನಿಗೆ ಬರವಣಿಗೆ ಲೀಲಾಜಾಲ. ಯಾವುದೇ ವಿಷಯವಾಗಲಿ, ತಿಳಿದ ವಿಷಯವನ್ನು, ತಿಳಿದಿಲ್ಲದಿದ್ದರೆ ವಿಷಯ ತಿಳಿದು ಬೆಣ್ಣೆ ಸವರಿದಂತೆ ಬರೆದುಕೊಂಡು ಹೋಗಿಬಿಡುತ್ತಿದ್ದರು. ಕೂತು ಕೂತಂತೆ ಎರಡು ಮೂರು ನಾಲ್ಕು 'ಚಿಂತನಗಳು' ಸಿದ್ಧವಾಗುತ್ತಿತ್ತು. ಅವರ ಶೈಲಿಯ ಸರಳತೆ, ಓಟ, ವಿಷಯಸಂಪತ್ತನ್ನು ಕಿರಿದರಲ್ಲಿ ಅಡಗಿಸುವ ಮೋಡಿ, ಅವರ ಬರವಣಿಗೆಯನ್ನು ಓದುವಾಗಲೆಲ್ಲಾ ಖುಷಿಯಾಗುತ್ತದೆ. ಅವರ ಅನೇಕ 'ಚಿಂತನ'ಗಳು ಆಕಾಶವಾಣಿಗಾಗಿ ಮನೆಯಲ್ಲಿಯೇ ಧ್ವನಿಮುದ್ರಣವಾಗಿವೆ.

ಅಪ್ಪ ಹೇಳುತ್ತಿದ್ದ ಅನೇಕ ಅನುಭವದ ಮಾತುಗಳು ಆಗಾಗ ಮನಸ್ಸಿನಲ್ಲಿ ಮರುಕಳಿಸುತ್ತವೆ. 'ಸಹಸ್ರಂ ವದ ಏಕಂ ಮಾ ಲಿಖ', 'ಕುಪುತ್ರೋ ಜಾಯೇತ ಕುಮಾತಾ ನ ಭವಿಷ್ಯತಿ', 'Work while you Work, Play while you Play' ,' One thing at a time, and that done well is a very good rule as many can tell" , 'ಕ್ಷಣಶಃ ಕಣಶಶ್ಚೈವ ವಿದ್ಯಾಂ ಅರ್ಥಂ ಚ ಸಾಧಯೇತ್' ಇಂತಹ ಮಾತುಗಳಿಂದ ಸೂಕ್ತ ಸಮಯದಲ್ಲಿ ಸೂಕ್ತ ಮಾರ್ಗದರ್ಶನವನ್ನು ಮಾಡುತ್ತಿದ್ದರು. ಈ ಮಾತುಗಳು ನೆನಪಾದಗಲೆಲ್ಲಾ ಅಪ್ಪ ಎದ್ದು ಬಂದಂತಾಗುತ್ತದೆ.

ಜನರು ತುಂಬಾ ತಿಳಿಯಬೇಕು, ತಮಗೆ ತಿಳಿದುದೆಲ್ಲಾ ಇತರರಿಗೆ ತಿಳಿಯಬೇಕು ಎಂಬುದು ಅವರ ಆಸೆ. ಅವರು ಭಾರತಾದ್ಯಂತ ಸುತ್ತಿ ಬಂದವರು. ಅದನ್ನೇ ಮತ್ತೊಬ್ಬರಲ್ಲಿ ಬಯಸುತ್ತಿದ್ದರು. ಹಾಗಾಗಿ ಶಾಲೆಯಿಂದ ಪ್ರವಾಸಕ್ಕೆ ಹೋಗಲು ನಮಗೆ ಎಂದೂ ಅನುಮತಿಗೆ ತೊಂದರೆ ಇರಲಿಲ್ಲ. ಆದರೆ ಪಾಕೆಟ್ ಮನಿ ಮಾತ್ರ ಅತ್ಯಂತ ಗಮನಾರ್ಹ. ಹತ್ತಿರವಾದರೆ ಐದು ರೂಪಾಯಿ, ಬೊಂಬಾಯಿ ಮದ್ರಾಸು ಹೀಗಾದರೆ ಐವತ್ತು ರೂಪಾಯಿ. ಎಲ್ಲ ಖರ್ಚುಗಳನ್ನೂ ಗುರುಗಳೇ ವಹಿಸುತ್ತಾರಲ್ಲ, ನಿಮಗೆ ಹಣ ಏಕೆ ಎಂಬುದು ಅವರ ವಾದ. ಪಾಕೆಟ್ ಮನಿಯ ಈ ಅಮೌಂಟನ್ನು ಐದು ರೂಪಾಯಿ ಹೆಚ್ಚಿಸಲೂ ಬಹಳ ಹೆಣಗಬೇಕಾಗಿತ್ತು. ಒಮ್ಮೆ ನಾನು ಎರಡನೇ ಬಿ.ಎ. ಯಲ್ಲಿರುವಾಗ ಯಾವುದೋ ಕಾವ್ಯದಲ್ಲಿ ಸಮುದ್ರದ ಪ್ರಸ್ತಾಪ ಬಂತು. ನಾನು ಅಪ್ಪ ಆ ಭಾಗವನ್ನು ಒಟ್ಟಿಗೇ ಓದುತ್ತಿದ್ದೆವು. ಅಲ್ಲಿಯವರೆಗೆ ಸಮುದ್ರವನ್ನು ನಾನು ನೋಡಿಯೇ ಇರಲಿಲ್ಲ. "ಅಪ್ಪಾ, ಸಮುದ್ರ ಹೇಗಿರುತ್ತೆ" ಎಂದು ಕೇಳಿದೆ. "ಅತ್ಯಂತ ವಿಶಾಲವಾಗಿರುತ್ತೆ" ಎಂದರು. ಅದಕ್ಕೆ ನಾನು "ನಮ್ಮ ತೀನರಸೀಪುರದ ಹೊಳೆಗೆ ಹತ್ತರಷ್ಟು

ಇರಬಹುದಾ?" ಎಂದೆ. ಅದಕ್ಕವರು ನಕ್ಕು "ಸಮುದ್ರವೇನೆಂದು ಸಮುದ್ರ ನೋಡದಿದ್ದರೆ ತಿಳಿಯುವುದಿಲ್ಲ." ಎಂದು ಹೇಳಿ ಎರಡು ತಿಂಗಳೊಳಗೆ ದಕ್ಷಿಣ ಭಾರತದ ಪ್ರವಾಸ ಯೋಜಿಸಿ ಕರೆದೊಯ್ದರು. ಅಲ್ಲಿ ಸಮುದ್ರವನ್ನು ಕಂಡು ದಿಗಿಲಾಗಿ ಬಿಟ್ಟೆ. ಅಪ್ಪ ಅದಕ್ಕಾಗಿಯೇ ಸಮುದ್ರ ಹೇಗಿರುತ್ತೆ ಎಂದು ಹೇಳದೆ ಇಲ್ಲಿಗೆ ಕರೆತಂದರು ಎಂದುಕೊಂಡೆ.

ಮಕ್ಕಳು ಏನು ಮಾಡಿದರೂ ಅಪ್ಪನಲ್ಲಿ ಮಾಫಿ. ನನ್ನ ಅಕ್ಕನ ಮಗಳು ಚಿಕ್ಕವಳಾಗಿರುವಾಗ ಅತಿ ತುಂಟಿ. ಒಮ್ಮೆ "ಪಕ್ಕದ ಮನೆಯ ಆಂಟಿ ಹಾಗೆ ನಂಗೂ ಕೂದಲು ಕತ್ತರಿಸು" ಎಂದು ಅಮ್ಮನನ್ನು ಕೇಳಿದಳಂತೆ. ಅದಕ್ಕೆ ನನ್ನ ಅಕ್ಕ "ನಾವೆಲ್ಲ ಕತ್ತರಿಸಿಕೊಳ್ಳಬಾರದು." ಎಂದರಂತೆ. ಆಗ ಸುಮ್ಮನಾಗಿ ನಂತರ ಒಂದು ದಿನ ಕತ್ತರಿ ತೆಗೆದುಕೊಂಡು ಅವಳು ಎರಡು ಜಡೆಯಲ್ಲಿ ಒಂದು ಜಡೆಯ ಸ್ವಲ್ಪಕೂದಲನ್ನು ಕತ್ತರಿಸಿಕೊಂಡು ಬಿಟ್ಟಿದ್ದಳು. ಅಕ್ಕ ಅದನ್ನು ನೋಡಲಾಗದೆ, ಎಲ್ಲ ಕೂದಲನ್ನು ಸಮನಾಗಿ ಕತ್ತರಿಸಿ ಸರಿಪಡಿಸಿದಳು. ಮನೆಗೆ ಬಂದಾಗ ನಮ್ಮಲ್ಲಿ ಆ ಸಂಪ್ರದಾಯಗಳಿಲ್ಲದಿದ್ದ ಕಾರಣ, ಅಪ್ಪ ಏನು ಹೇಳುವರೋ, ಎಂದು ಭಯ ಅಕ್ಕನಿಗೆ. ಮೊಮ್ಮಗಳೇ ಮೊದಲು ತಾತನ ಎದುರು ಹೋಗಿ ನಿಂತಳು. ತಾನೇ ಹೇಳಿದಳು. 'ಯಾರು ಕೂದಲು ಕತ್ತರಿಸಿದರು' ಎಂದು ಅಪ್ಪ ಕೇಳಿದರು. 'ಅಮ್ಮ' ಎಂದಳಂತೆ. ಹೆದರಿ ಒಳಗೆ ಹೋದ ಅಕ್ಕ ವಿಷಯವನ್ನೆಲ್ಲಾ ತಿಳಿಸಲು "ಮಕ್ಕಳು...... ಎಚ್ಚರಿಕೆಯಿಂದಿರಬೇಕು. " ಎಂದಷ್ಟೇ ಹೇಳಿ ಸುಮ್ಮನಾಗಿಬಿಟ್ಟರು.

ಅಪ್ಪನದು ಕಂಚಿನ ಕಂಠ. ಗುಂಪಿನಲ್ಲಿ ಹೇಳುತ್ತಿದ್ದ ವೇದಪಾಠವಿರಲಿ, ತಿರುವಾಯ್‌ಮೊಳಿ ಇರಲಿ ಅವರ ಧ್ವನಿ ಎದ್ದು ಕೇಳುತ್ತಿತ್ತು. ಮದುವೆ ಮುಂಜಿಗಳಲ್ಲಿ ಮಂತ್ರಗಳನ್ನು ಎಲ್ಲರಿಗೂ ಕೇಳುವಂತೆ ಗಟ್ಟಿಯಾಗಿ ಹೇಳುತ್ತಿದ್ದರು. ಅದರಿಂದಲೇ ಅವರು ನಟರಾದುದು ಕೂಡಾ. ನೂರೈವತ್ತು ಇನ್ನೂರು ವಿದ್ಯಾರ್ಥಿಗಳ ತರಗತಿಯಲ್ಲಿ ಅವರೆಂದೂ ಮೈಕ್ ಬಳಸಿ ಪಾಠ ಮಾಡಿದವರಲ್ಲ. ಲೀಲಾಜಾಲವಾಗಿ ಪಾಠ ಮಾಡುವಾಗ ಪಕ್ಕದ ತರಗತಿಯ ವಿದ್ಯಾರ್ಥಿಗಳಿಗೂ ಪಾಠವಾಗುತ್ತಿತ್ತಂತೆ.

ಅಪ್ಪ ಎಂದೂ ಗುಂಪಿನವರಲ್ಲೊಬ್ಬರಲ್ಲ. ಗುಂಪಿನ ನಾಯಕರು. ಮುಂಚೂಣಿಯ ಸರದಾರ. ಅದು ಮದುವೆ ಇರಬಹುದು, ಪ್ರವಾಸವಿರಬಹುದು, ನಿರ್ದೇಶಿತರಾಗುವುದಕ್ಕಿಂತಲೂ ನಿರ್ದೇಶಿಸುವುದರಲ್ಲಿ ಅವರಿಗೆ ಖುಷಿ. ಈ ಕೆಲಸವನ್ನು ಅತಿ ಜವಾಬ್ದಾರಿಯಿಂದ ಮಾಡುತ್ತಿದ್ದರು. ಯಾವುದೇ ಕಾರ್ಯಕ್ರಮವನ್ನು ನಿಂತು ನಡೆಸಿಕೊಡುತ್ತಿದ್ದರು. ಮನಃಶಾಸ್ತ್ರ ಪಟ್ಟಿಮಾಡುವ ಗುಂಪು ನಾಯಕನ ಸರ್ವಗುಣಗಳೂ ಅವರಲ್ಲಿದ್ದವು. ಯಾರಾದರೂ ಅವರು ಮಾಡಿದ ಕೆಲಸವನ್ನು ಹೊಗಳಿದರೆ ತಪ್ಪದೆ ಅದಕ್ಕೆ ಶ್ರಮಿಸಿದವರ ಹೆಸರುಗಳನ್ನು ಎತ್ತಿ ಹಿಡಿಯುತ್ತಿದ್ದರು. ಅವರು ನಡೆಸಿಕೊಟ್ಟ ನಿಗಮಾಂತ ಮಹಾದೇಶಿಕರ ಸಪ್ತ ಶತಮಾನೋತ್ಸವ 'ಹಿಂದೆ ಆಗಿರಲಿಲ್ಲ, ಮುಂದೆ ಆಗುವುದಿಲ್ಲ' ಎಂಬಂತಹುದು.

ನನ್ನ ಅಪ್ಪನಿಗೆ ಕೋರ್ಟು ಕಛೇರಿಯ ವ್ಯವಹಾರ ಬಹಳ. ಮನೆ, ಗದ್ದೆ, ಹೊಲ, ತೋಟ, ದೇವಸ್ಥಾನ ಇತ್ಯಾದಿ ಹಲವಾರು ವ್ಯಾಜ್ಯಗಳು. ಈ ಸಂದರ್ಭಗಳಲ್ಲಿ ಅಪ್ಪ ಕೇಸು ಗೆದ್ದಿರುವುದು ಬಹಳ ಮಟ್ಟಿಗೆ ವಕೀಲರನ್ನಿಡದೆ ಅವರೇ ವಾದಿಸಿರುವಾಗ. ಹಾಗೆ 'ಹಿಯರಿಂಗ್' ಇರುವಾಗಲೆಲ್ಲಾ ಅವರು ನನಗೆ ನೋಟ್ಸ್ ಡಿಕ್ಟೇಟ್ ಮಾಡುತ್ತಿದ್ದರು. 'ಇಷ್ಟನೇ ಇಸವಿಯಲ್ಲಿ ಈ ಸ್ಥಳದಲ್ಲಿ ಈ ಕಾರಣಕ್ಕಾಗಿ ಈ ವ್ಯಕ್ತಿ ಹಾಜರಿರುವಾಗ ....' ಎಂದೆಲ್ಲಾ ಬರೆಸುವಾಗ ಅವರ ನೆನಪಿನ ಶಕ್ತಿಗೆ ನಾನು ಮಾರುಹೋಗುತ್ತಿದ್ದೆ. 'ಅಪ್ಪಾ... ನಿಮಗೆ ಇಷ್ಟೆಲ್ಲಾ ಹೇಗೆ ನೆನಪಿರುತ್ತದೆ?' ಎಂದು ಕೇಳುತ್ತಿದ್ದೆ. ಒಡೆಯರ ವಂಶದ ಪ್ರತೀರಾಜರ ವಿಷಯಗಳು ದಿನಾಂಕದೊಂದಿಗೆ, ಸ್ಥಳನಿರ್ದೇಶನದೊಂದಿಗೆ ಅವರ ಬಾಯಲ್ಲಿತ್ತು. ಒಡೆಯರ ಇಡೀ ವಂಶಾವಳಿಯನ್ನೇ ಅವರು ಬಿಚ್ಚಿಡುತ್ತಿದ್ದರು. ಅವರ ಆ ಕಾಲಕ್ರಮಾನುಗತ ವರ್ಣನಾ ವೈಖರಿ ಅಪ್ರತಿಮ.

ನನ್ನ ಅಪ್ಪನ ಮೃದುವಾದ ಮಾನವೀಯತೆಯ ನೋಟ ಮತ್ತೊಂದು ಬಗೆಯದು. ಸಂಪ್ರದಾಯಬದ್ಧರಾದ ಅವರನ್ನು ನಮ್ಮೂರಿನಲ್ಲಿನ ಯಾರೋ ಒಬ್ಬ ರೈತ 'ಅನಗತ್ಯವಾಗಿ ಬೈದರು' ಎಂಬ ಕಾರಣಕ್ಕೆ ಕೋರ್ಟಿಗೆಳೆದ. ಆ ವ್ಯಾಜ್ಯ ಇಪ್ಪತ್ತೊಂದು ವರ್ಷಗಳ ಕಾಲ ನಡೆಯಿತು. ಆ ವ್ಯಾಜ್ಯ ಕೊನೆಗೆ ಬರುವಾಗ ನನ್ನ ಅಪ್ಪ ಅನಾರೋಗ್ಯದಿಂದಿದ್ದರು. 'ಹಿಯರಿಂಗ್' ಮನೆಯಲ್ಲೇ ಆಗುವುದೆಂದು ನಿರ್ಧಾರವಾಯಿತು. ನನ್ನ ಅಪ್ಪನಿಗೆ 'ಹಿಯರಿಂಗ್' ಏನಾಗುತ್ತದೆ ಎಂಬುದಕ್ಕಿಂತ ಬರುವ ಆ ವ್ಯಕ್ತಿಗೆ ಹೇಗೆ ಸತ್ಕಾರ ಮಾಡುವುದೆಂಬುದರ ಚಿಂತೆ. ನನ್ನ ಅಮ್ಮನನ್ನು ಕರೆದು ' ಆ ರೈತ ಬರುತ್ತಿದ್ದಾನೆ. ಒಳ್ಳೆಯ ತಿಂಡಿ ಮಾಡು ಎಂದು ಹೇಳಿದರು' ನಾವೆಲ್ಲಾ ಅವಕ್ಕಾದೆವು. ಅವರ ಮಾನವೀಯ ಮುಖ ಹೀಗೇ.

ಅಪ್ಪ ಸಂಪಾದಿಸಿದ ಪುಸ್ತಕಗಳು ಅಚ್ಚಾಗುವಾಗ ನಾವಿಬ್ಬರೂ ಒಟ್ಟಿಗೆ ಕೂತು ಕರಡು ತಿದ್ದುತ್ತಿದ್ದೆವು. ಪದ್ಯದ ಯಾವುದೇ ಸಾಲಿನಲ್ಲಿ ತಪ್ಪಾದರೂ ಅವರಿಗೆ ತಕ್ಷಣ ತಿಳಿದುಬಿಡುತ್ತಿತ್ತು. ಪ್ರತೀ ಛಂದಸ್ಸು ಅವರಿಗೆ ಅಷ್ಟು ಕರಗತವಾಗಿತ್ತು. ಈ ರೀತಿಯ ಕೆಲಸಗಳಲ್ಲಿ ಅಪ್ಪ ನಮ್ಮನ್ನು ಬಹಳ ಚೆನ್ನಾಗಿ ತೊಡಗಿಸಿಕೊಳ್ಳುತ್ತಿದ್ದರು. ಚಂಪೂಕಾವ್ಯಗಳ ಪದ್ಯಾನುಕ್ರಮಣಿಕೆ ತಯಾರಾಗುವಾಗ ನಮ್ಮ ಮನೆಯಲ್ಲಿ ಎಲ್ಲಿಲ್ಲದ ಸಂಭ್ರಮ. ನಾವು ಬೇರೆ ಬೇರೆ ಅಕ್ಷರದ 'ಪಟ್ಟಿಕೆ'ಗಳನ್ನು ಬೇರೆ ಬೇರೆ ಕೋಣೆಗಳಲ್ಲಿಟ್ಟುಕೊಂಡು ಅಕಾರಾದಿಯಾಗಿ ಜೋಡಿಸಿಕೊಡುತ್ತಿದ್ದೆವು. ಆ ಕೃತಿ ಪ್ರಕಟವಾದ ಮೇಲೆ ನಮ್ಮೆಲ್ಲರಿಗೂ ಅದರಲ್ಲಿ ವಿಶೇಷವಾದ ಪಾಲು ಇದೆ ಎಂದು ಅಪ್ಪ ಒಳ್ಳೆಯ ಅಂಗಿ ಹೊಲಿಸಿಕೊಟ್ಟಿದ್ದರು. ಅದನ್ನು ಹಾಕಿಕೊಳ್ಳುವಾಗ ನಾವು ವಿಶೇಷವಾಗಿ ಖುಶಿಪಟ್ಟಿದ್ದೇವೆ.

ನನ್ನ ಅಪ್ಪ ವಿಶಿಷ್ಟ ರೀತಿಯ ತತ್ತ್ವಜ್ಞಾನಿ. ಯಾವುದೇ ಸಂದರ್ಭದಲ್ಲೂ ಅವರು ತಲೆಯ ಮೇಲೆ ಕೈ ಹೊತ್ತು ಕುಳಿತುಕೊಳ್ಳುವ ವ್ಯಕ್ತಿಯಲ್ಲ. ನಾವೇನಾದರೂ

ಯಾವುದಾದರೂ ವಿಷಯಕ್ಕೆ ಬೇಸರಿಸಿದರೆ ಅವರು 'ಯಸ್ಮಾತ್ ಚ ಯೇನ ಚ ಯಥಾ ಚ ಯದಾ ಚ ಯಚ್ಚ ಯಾವಚ್ಚ ಶುಭಾಶುಭಂ ಆಪ್ನುವಂತಃ, ತಸ್ಮಾತ್ ಚ ತೇನ ಚ ತಥಾಃ ಚ ತದಾಚ ತಚ್ಚ ತಾವಚ್ಚ ಶುಭಾಶುಭಂ ಆಪ್ನುವಂತಿ' ಎಂದು ಹೇಳುತ್ತಿದ್ದರು. ಯಾರ ದೆಸೆಯಿಂದ ಯಾವಾಗ ಯಾರಿಂದ ಹೇಗೆ ಎಲ್ಲಿ ಶುಭಾಶುಭಗಳು ಆಗಬೇಕೋ ಆಗಾಗ ಅವರ ದೆಸೆಯಿಂದ ಅಲ್ಲಲ್ಲಿ ಶುಭಾಶುಭಗಳು ಆಗುತ್ತವೆ ಎಂದು. ಇಂತಹ ಒಂದು ದಿನ ಬಂದಿತು. ನಾನು ಎಂಟು ತಿಂಗಳ ಗರ್ಭಿಣಿ. 'ನವೆಂಬರ್ ೧೧ಕ್ಕೆ ದಿನ ಚೆನ್ನಾಗಿದೆ. ಬಂದು ಬಿಡು. ಚಿಂತನದ ಕೆಲವು ಲೇಖನಗಳನ್ನು ಬರೆದಿದ್ದೇನೆ. ಓದಬೇಕು' ಎಂದು ಕಾಗದ ಬರೆದಿದ್ದರು. ಹನ್ನೊಂದನೇ ತಾರೀಕು ತವರಿಗೆ ಬರಲು ಎಲ್ಲಾ ಸಿದ್ಧತೆಗಳನ್ನು ಮಾಡಿದ್ದೆ. ೭ನೇ ತಾರೀಕಿನ ಬೆಳಗ್ಗೆ ಸುದ್ದಿ ಬಂತು. ಅಪ್ಪ ಇನ್ನಿಲ್ಲ..... ನಮ್ಮೆಲ್ಲರ ಪಾಲಿಗೆ ಅಪ್ಪ ಇನ್ನಿಲ್ಲವಾದರು. ಆದರೂ ಇಂದಿಗೂ ನಾನು ಅನೇಕ ಸಂದರ್ಭಗಳಲ್ಲಿ ನನ್ನ ಅಪ್ಪನನ್ನು ಕಂಡುಕೊಳ್ಳುತ್ತೇನೆ. ಮೌನವಾಗಿ ಮಾತನಾಡುತ್ತೇನೆ. ಅಪ್ಪ ಹೇಳಿದಂತೆ 'ದೈವೀ ವಿಚಿತ್ರಾಗತಿಃ'

ಅಪ್ಪನ ಬಗ್ಗೆ ಹೇಳಿದಷ್ಟೂ ತೀರದು. ನನ್ನ ಹಾಗೂ ಅಪ್ಪನ ನಡುವಿನ ಇಂತಹ ಸಂಬಂಧಗಳು ನೂರಾರು. ಅವರ ಅನುಭವಗಳ ಆಳ ಕೈಗೆಟಕುವಂತಹುದಲ್ಲ. ಈ ಸಂದರ್ಭದಲ್ಲಿ ಬಾಣನ ಬಗ್ಗೆ 'ಕಾದಂಬರಿ'ಯಲ್ಲಿ ಬರುವ ಒಂದು ಮಾತು ನೆನಪಾಗುತ್ತದೆ. 'ಬಾಣಂ ವಲ್ಲಭನಕ್ಕುಮೆಂದು ಪಡೆದಾ ವಾಗ್ದೇವಿಗಬ್ಜೋದ್ಭವಂ ಜಾಣಿಂ ಬಾಣಿಯೆನಿಪ್ಪದೊಂದು ಪೆಸರಂ ಮುನ್ನಿತ್ತನೆಂದಂದು.......' ಎಂದು ಹೇಳಿದಂತೆ ಈ ವ್ಯಕ್ತಿ ಅನಂತ ಅನುಭವಗಳ ಆಗರವಾಗುತ್ತಾನೆ ಎಂದು ತಿಳಿದೇ ಅವರ ಅಪ್ಪ ನನ್ನ ಅಪ್ಪನಿಗೆ 'ಅನಂತ' ಎಂದು ಹೆಸರಿಟ್ಟರೋ ಏನೋ!



# ಬಂದುದನು ಕೊಂಡುಂಡು ಬಾಳ್ವವನೆ ಜಾಣನ್

**(ಸಂದರ್ಶನ: ಟಿ. ವಿ. ವೆಂಕಟಾಚಲಶಾಸ್ತ್ರೀ ಅವರು ಡಾ. ಅನಂತರಂಗಾಚಾರ್ ಅವರೊಡನೆ ನಡೆಸಿದ ಸಂದರ್ಶನದ ಆಯ್ದ ಭಾಗ)**

### ಬಾಲ್ಯವನ್ನು ಕುರಿತು

ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರ ನನ್ನ ಜನ್ಮಸ್ಥಳ. ನಮ್ಮ ತಂದೆಯವರು ಶ್ರೋತ್ರಿಯ ಬ್ರಾಹ್ಮಣರು. ವೇದ, ಪ್ರಬಂಧ, ಸಂಸ್ಕೃತದಲ್ಲಿ ನಿಷ್ಣಾತರು. ಆ ಮಹನೀಯರೇ ನನಗೆ ಕಾಯಕಮೌಲ್ಯವನ್ನೂ ಕಾಲ ಪ್ರಜ್ಞೆಯನ್ನು ಉಂಟುಮಾಡಿದವರು. ನನ್ನ ೪ನೆಯ ವರ್ಷದಿಂದ ೧೩ನೆಯ ವರ್ಷದವರೆಗೆ ಬೆಳಿಗ್ಗೆ ೪ ಗಂಟೆಯಿಂದ ರಾತ್ರಿ ೧೦ ಗಂಟೆಯವರೆಗೆ ಜೊತೆಯಲ್ಲಿಯೇ ಇರಿಸಿಕೊಂಡು ಆ ಅವಧಿಯಲ್ಲಿ ನನಗೆ ವೇದ, ಪ್ರಬಂಧ, ಪ್ರಯೋಗ, ಸಂಸ್ಕೃತ ಮೊದಲಾದ ಉಪಯುಕ್ತಾಂಶಗಳನ್ನೆಲ್ಲಾ ಅಭ್ಯಾಸ ಮಾಡಿಸಿದರು. ಅವರ ನೇತೃತ್ವದಲ್ಲಿ ನನ್ನ ೧೩ ವರ್ಷಗಳಲ್ಲಿಯೇ ನಾನು ಉಪನಯನದ ಪೌರೋಹಿತ್ಯವನ್ನು ಮಾಡಿಸಿದೆ. ಮುಂದೆ ಜೀವನದಲ್ಲಿ ಅದು ಒಂದು ಉಪವೃತ್ತಿಯಾಗಿ ಬೆಳೆದು ಬಂದಿತು.

### ವಿದ್ಯಾಭ್ಯಾಸ

* ಇದೇ ಕಾಲದಲ್ಲಿ ನಾನು ತಿ. ನರಸೀಪುರದಲ್ಲಿನ ವಿ. ವಿ. ಸ್ಕೂಲಿನಲ್ಲಿ ನನ್ನ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವನ್ನು ಮುಗಿಸಿ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣನಾದೆ.

* ನನ್ನ ಪ್ರೌಢ ವಿದ್ಯಾಭ್ಯಾಸ ಮೈಸೂರು ಮಹಾರಾಜರವರ ಹೈಸ್ಕೂಲಿನಲ್ಲಿ. ಅಲ್ಲಿ ನನಗೆ ಶ್ರೀ. ಎಂ. ಎಚ್. ಕೃಷ್ಣ ಅವರು ಉಪಾಧ್ಯಾಯರಾಗಿದ್ದರು. ನನ್ನ ಮುಂದಿನ ಜೀವನದಲ್ಲಿ ವಿಶೇಷ ಪ್ರಭಾವವನ್ನು ಬೀರಿದ್ದಾರೆ ಅವರು. ಆ ಶಾಲೆಯಲ್ಲಿ ನನಗೆ ಕನ್ನಡದ ಅಭಿಮಾನವನ್ನುಂಟುಮಾಡಿದವರು. ಆಗ ಅಲ್ಲಿಯ ಕನ್ನಡ ಪಂಡಿತರುಗಳಾಗಿದ್ದ ಹಳ್ಳದ ಕೇರಿ ಸೀತಾರಾಮ ಶಾಸ್ತ್ರಿಗಳು ಮತ್ತು ಜಿ. ಚನ್ನಕೇಶವಯ್ಯನವರು. ಅಲ್ಲಿ ನಾನು ಎರಡು ವರ್ಷಕಾಲ

ಚರ್ಚಾಕೂಟದ ಕಾರ್ಯದರ್ಶಿಯಾಗಿದ್ದುದರಿಂದ ಮುಂದೆ ನಾನು ಸಂಘ ಸಂಸ್ಥೆಗಳಲ್ಲಿ ಭಾಗವಹಿಸುವುದಕ್ಕೆ ಪ್ರವೇಶ ದೊರೆತಂತಾಯಿತು. ಆ ಶಾಲೆಯಲ್ಲಿ ಎಂಟ್ರೆನ್ಸ್ ಪರೀಕ್ಷೆಯನ್ನು ಮುಗಿಸಿಕೊಂಡು ಪದವಿ ವ್ಯಾಸಂಗಕ್ಕಾಗಿ ೧೯೨೮ರಲ್ಲಿ ಮೈಸೂರು ಮಹಾರಾಜಾ ಕಾಲೇಜನ್ನು ಸೇರಿದೆ. ಆಗ ಅದು ಬಹು ಪ್ರಖ್ಯಾತ ವಿದ್ಯಾ ಸಂಸ್ಥೆಯಾಗಿತ್ತು.

**ಕಾಲೇಜು ವಿದ್ಯಾಭ್ಯಾಸ**

ಸುಪ್ರಸಿದ್ಧರಾದ ಎನ್. ಎಸ್. ಸುಬ್ಬರಾಯರು ಎಂ. ಹಿರಿಯಣ್ಣನವರು, ಎ.ಆರ್. ವಾಡಿಯ, ವೆಂಕಟೇಶ್ವರಯ್ಯರ್ ಪ್ರಾಧ್ಯಾಪಕರುಗಳಾಗಿದ್ದರು. ಬಿ. ಎಂ. ಶ್ರೀ. ಅವರು ಕಿರಿಯ ಇಂಗ್ಲೀಷ್ ಪ್ರಾಧ್ಯಾಪಕರು. ಕನ್ನಡಕ್ಕೆ ಪ್ರತ್ಯೇಕ ಪೀಠವಿರಲಿಲ್ಲ. ಬಿ. ಕೃಷ್ಣಪ್ಪ ಮತ್ತು ಕಾನಕಾನಹಳ್ಳಿ ಪಂಡಿತ ವರದಾಚಾರ್ಯರು ಕನ್ನಡದ ಉಪಾಧ್ಯಾಯರು. ಬಿ. ಕೃಷ್ಣಪ್ಪನವರು ಮದ್ರಾಸ್ ವಿಶ್ವವಿದ್ಯಾನಿಲಯದ ಕನ್ನಡದ ಎಂ. ಎ. ಪದವೀಧರರು. ಬಹು ಉತ್ಸಾಹಶಾಲಿಗಳಾದ ಕನ್ನಡದ ಸೇವಾಧುರೀಣರು. ಸ್ವಲ್ಪ ಕಾಲದ ಹಿಂದೆ ಪ್ರಾರಂಭವಾಗಿದ್ದ ಕರ್ನಾಟಕ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳಾಗಿದ್ದವರು. ವರದಾಚಾರ್ಯರು ಸುಪ್ರಸಿದ್ಧ ಕನ್ನಡ ಭಾಷಾ ಪಂಡಿತರು. ಅವರ ವೈದುಷ್ಯದಿಂದಲೂ ಅದ್ಭುತವಾದ ಬೋಧನಾ ಶಕ್ತಿಯಿಂದಲೂ ಅವರು ವಿಶ್ರಾಂತರಾದ ಮೇಲೆ ಒಂಬತ್ತು ವರ್ಷ ಎಕ್ಸ್‌ಟೆನ್‌ಷನ್ ಪಡೆದವರು. ತರಗತಿಯ ಪದ್ಯಗಳನ್ನು ಬಹು ಸುಶ್ರಾವ್ಯವಾಗಿ ವಾಚಿಸುತ್ತಿದ್ದರು. ಮುಂದೆ ಇವರ ಪ್ರಭಾವ ನನ್ನ ಮೇಲೆ ವಿಶೇಷವಾಯಿತು. ನಾನು ಮೂರು ವರ್ಷ ಕಾಲ ಕನ್ನಡ, ಇಂಗ್ಲೀಷ್, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಮತ್ತು ಇತಿಹಾಸವನ್ನು ಅಭ್ಯಾಸ ಮಾಡಿ ೧೯೨೭ ರಲ್ಲಿ ಬಿ. ಎ. ಪದವೀಧರನಾದೆ.

* ಈ ಕಾಲದಲ್ಲಿ ವಿದ್ಯಾರ್ಥಿಗಳ ಸರ್ವತೋಮುಖವಾದ ಬೆಳವಣಿಗೆಗೆ ಸಾಧಕವಾದ ಪಠ್ಯೇತರ ವಿಷಯಗಳನ್ನು ಅಭಿವೃದ್ಧಿಪಡಿಸಲು ಅನೇಕ ಸಂಸ್ಥೆಗಳಿದ್ದವು. ಕರ್ನಾಟಕ ಸಂಘ, ಇತಿಹಾಸ ಸಂಘ, ಸಂಸ್ಕೃತಸಂಘ ಮೊದಲಾದುವು ಕೆಲವು. ನಾನು ಕರ್ನಾಟಕ ಸಂಘದಲ್ಲಿ ಮೂರು ವರ್ಷ ಕಾರ್ಯದರ್ಶಿಯಾಗಿದ್ದೆ. ಇತಿಹಾಸ ಸಂಘದಲ್ಲಿ ೨ ವರ್ಷ ಸಹಾಯಕ ಕಾರ್ಯದರ್ಶಿ, ಸಂಸ್ಕೃತ ಸಂಘದ ಸಕ್ರಿಯ ಸದಸ್ಯ.

* ಇವೆಲ್ಲಕ್ಕಿಂತಲೂ ಬಹುಮುಖ್ಯವಾಗಿದ್ದುದು ವಿಶ್ವವಿದ್ಯಾನಿಲಯದ ಸಂಘ. (University union) ಇಲ್ಲಿ ವಿದ್ಯಾರ್ಥಿಗಳ ಸರ್ವತೋಮುಖವಾದ ಬೆಳವಣಿಗೆಗೆ ಸಹಾಯಕವಾಗುವ ಅನೇಕ ಕಾರ್ಯಗಳು ನಡೆಯುತ್ತಿದ್ದವು. ಅದಕ್ಕೆ ಪ್ರತ್ಯೇಕವಾದ ವಿಸ್ತಾರವಾದ ಎಂಟು ಕೊಠಡಿಗಳಿಂದ ಕೂಡಿದ ಎರಡಂತಸ್ತಿನ ಕಟ್ಟಡ. ಎಲ್ಲ ತರದ ಪ್ರಾತಿನಿಧ್ಯವನ್ನುಳ್ಳ ಕಾರ್ಯಮಂಡಲಿ ಕಾರ್ಯಾಗಾರ, ಉಪನ್ಯಾಸಗಳು, ಚರ್ಚಾಕೂಟ, ವಾಚನಾಲಯ, ನಾಟಕ ಪ್ರದರ್ಶನ, ಪುಸ್ತಕ ಭಂಡಾರ, ಅಂತರ ಗೃಹ ಕ್ರೀಡೆಗಳು, ಇವೆಲ್ಲ ಅದರ ಕಾರ್ಯಕ್ಷೇತ್ರಕ್ಕೆ ಸೇರಿದುದು. ಪ್ರತಿದಿನ ಏನಾದರೂ ಕಾರ್ಯಕ್ರಮ. ವಿವಿಧ ಭಾಷೆಯ ವಿವಿಧ ರೀತಿಯ ಸ್ಪರ್ಧೆಗಳು. ಕೆಲವು ಸ್ಪರ್ಧೆಗೆ ೨೦೦ ಕ್ಕಿಂತ ಹೆಚ್ಚಿನ ಅಭ್ಯರ್ಥಿಗಳಿರುತ್ತಿದ್ದರು. ಅವರು ಕೊಡುತ್ತಿದ್ದ

ಬಹುಮಾನಗಳೂ ಗಣ್ಯವಾಗಿರುತ್ತಿತ್ತು. ನಾನು ೭ ವರ್ಷಕಾಲ ಅದರ ಕಾರ್ಯಕಾರಿ ಮಂಡಲಿಯ ಸದಸ್ಯನಾಗಿದ್ದುದಲ್ಲದೆ ಅದು ನಡೆಸುತ್ತಿದ್ದ ಅನೇಕ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದ್ದೆ. ಪ್ರತಿ ವರ್ಷವೂ ಅನೇಕ ಬಹುಮಾನಗಳನ್ನು ಗಿಟ್ಟಿಸುತ್ತಿದ್ದೆ. ೧೯೨೭ರಲ್ಲಿ ಒಟ್ಟು ೧೪೯ ರೂ. ಬೆಲೆಬಾಳುವ ೫೪ ಪುಸ್ತಕಗಳು ಪಾರಿತೋಷಕವಾಗಿ ಲಭಿಸಿತು. ಇದೇ ಮುಂದಿನ ವಿಸ್ತಾರವಾದ ನನ್ನ ಸ್ವಂತ ಭಂಡಾರಕ್ಕೆ ಅಂಕುರಾರ್ಪಣವಾಯಿತೆಂದು ಹೇಳಬಲ್ಲೆ.

### ಕನ್ನಡ ಎಂ.ಎ. ಮೊದಲ ತಂಡದ ವಿದ್ಯಾರ್ಥಿಯಾಗಿ

೧೯೨೭ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮೊತ್ತಮೊದಲು ಕನ್ನಡ ಎಂ. ಎ. ತರಗತಿಯು ಪ್ರಾರಂಭವಾಯಿತು. ಅದರ ಮೊದಲನೆಯ ಗುಂಪಿನ ವಿದ್ಯಾರ್ಥಿಯಾಗಿ ನಾನು ಸೇರಿದೆ. ಪ್ರೊ. ಟಿ. ಎಸ್. ವೆಂಕಣ್ಣಯ್ಯ, ಕೆಲವು ಕಾಲ ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳು ನಮ್ಮ ಆಚಾರ್ಯರು. ಪ್ರೊ. ಬಿ. ಎಂ. ಶ್ರೀಯವರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರಾಗಿದ್ದರೂ ಗೌರವ ಪ್ರಾಧ್ಯಾಪಕರಾಗಿ ಅವರ ಕಛೇರಿಯಲ್ಲಿಯೇ ತರಗತಿಗಳನ್ನು ನಡೆಸುತ್ತಿದ್ದರು.

ಶ್ರೀ. ಬಿ. ಎಂ. ಶ್ರೀಯವರ ಪಾಂಡಿತ್ಯದ ವಿಸ್ತಾರ, ಆಳ, ವೈವಿಧ್ಯ, ಬೋಧನ ಮಾರ್ಗ, ವೆಂಕಣ್ಣಯ್ಯನವರ ನಿರಾಡಂಬರವಾದ ಅಜಾತಶತ್ರುತ್ವ ಎ. ಆರ್. ಕೃಷ್ಣಶಾಸ್ತ್ರಿಗಳವರ ಉಭಯ ಭಾಷಾ ಪಾಂಡಿತ್ಯ ಮತ್ತು ಬಹು ನಿಷ್ಠುರವಾದ ಕರ್ತವ್ಯದೃಷ್ಟಿ ನಮ್ಮಗಳ ಮೇಲೆ ವಿಶೇಷ ಪ್ರಭಾವವುಂಟು ಮಾಡಿವೆ. ಮೊದಲನೆಯ ಎಂ. ಎ. ವಿದ್ಯಾರ್ಥಿ ವರ್ಗದ ಒಂಬತ್ತು ವಿದ್ಯಾರ್ಥಿಗಳಲ್ಲಿ ಈಗ ಡಾ|| ಕೆ. ವಿ. ಪುಟ್ಟಪ್ಪ, ಕೆ. ವೆಂಕಟರಾಮಪ್ಪ, ಬಿ. ನಂಜುಂಡಯ್ಯ ಮತ್ತು ನಾನು ಜೀವಂತರಾಗಿದ್ದೇವೆ. ನಾನು ೧೯೨೯ರಲ್ಲಿ ಕನ್ನಡ ಎಂ. ಎ. ಪರೀಕ್ಷೆಯಲ್ಲಿ ಉತ್ತೀರ್ಣನಾಗಿ, ೧೯೩೦ರಲ್ಲಿ ಬಿ. ಟಿ. ಪದವೀಧರನಾದೆ.

* ನಾನು ಕನ್ನಡ ಎಂ. ಎ. ಗೆ ಸೇರಿದ ಕಾಲ ಬಹು ಉತ್ಸಾಹಪೂರ್ಣವಾದ ಕಾಲ ಕನ್ನಡಕ್ಕಿದ್ದ ತಿರಸ್ಕಾರವನ್ನು ಹೋಗಲಾಡಿಸಲು ಜನ ಕಾರ್ಯೋನ್ಮುಖರಾಗಿದ್ದರು. ಕನ್ನಡ ದೇಶ ಮತ್ತು ಭಾಷೆಯ ಅಭಿವೃದ್ಧಿಯ ದೃಷ್ಟಿಯಿಂದ ಅದು ಅರುಣೋದಯದ ಕಾಲ. ಭಾರತದ ರಾಷ್ಟ್ರೀಯ ಕಾಂಗ್ರೆಸ್ ದೇಶಭಾಷೆಗಳ ಸ್ಥಾನವನ್ನು ಉತ್ತಮಗೊಳಿಸಲು ಪ್ರಯತ್ನಪಡುತ್ತಿದ್ದ ಕಾಲ. ಕನ್ನಡ ಭಾಷಾ ಮಾಧ್ಯಮ, ಕರ್ಣಾಟಕದ ಏಕೀಕರಣಗಳ ವಿಷಯವಾದ ಹೋರಾಟ ಪ್ರಾರಂಭವಾಗಿತ್ತು. ಧಾರವಾಡದಲ್ಲಿ ವಿದ್ಯಾವರ್ಧಕ ಸಂಘ, ಬೆಂಗಳೂರಿನಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತು ಈ ದೆಸೆಯಲ್ಲಿ ಕಾರ್ಯವನ್ನು ಪ್ರಾರಂಭಿಸಿತ್ತು. ಪರಿಷತ್ಪತ್ರಿಕೆ, ಪ್ರಬುದ್ಧ ಕರ್ಣಾಟಕಗಳು ಭಾಷಾಭಿವೃದ್ಧಿಯ ಕಾರ್ಯದಲ್ಲಿ ತೊಡಗಿತ್ತು. ಮೈಸೂರು ಮತ್ತು ಬೆಂಗಳೂರಿನ ಕರ್ಣಾಟಕ ಸಂಘಗಳು ಗಣನೀಯವಾದ ಕಾರ್ಯವನ್ನು ಮಾಡುತ್ತಿದ್ದವು. ವಿದ್ಯಾರ್ಥಿಗಳಿಗೆಲ್ಲ ಕನ್ನಡ ಭಾಷೆ ಮತ್ತು ದೇಶಗಳಿಗೆ ಸೇವೆ ಸಲ್ಲಿಸುವುದು ಸ್ವಹಿತ ಮತ್ತು ದೇಶಹಿತಸಾಧಕ ಎಂಬ ಭಾವನೆ ಮೂಡಿತ್ತು. ವಾಸ್ತವವಾಗಿ ಹೇಳುವುದಾದರೆ ನಾನೂ ನನ್ನ ಮಿತ್ರರಾದ ಮಕರಂ ಅಳಸಿಂಗರಾಚಾರ್ಯರೂ ವಿಶ್ವವಿದ್ಯಾನಿಲಯದಲ್ಲಿ ಅನೇಕ ಸಲ ಕನ್ನಡ ಎಂ. ಎ. ತರಗತಿ

ಪ್ರಾರಂಭಿಸಬೇಕೆಂದು ಒತ್ತಾಯ ಪಡಿಸಿದ್ದೇವೆ. ಪ್ರಾರಂಭವಾದ ಮೇಲೆ ಮೊದಲು ಸೇರಿದವರು ನಾವಿಬ್ಬರೇ. ಇತರರು ಒಬ್ಬೊಬ್ಬರಾಗಿ ಆಮೇಲೆ ಸೇರಿದರು. ಈ ಗುಂಪಿನ ವಿದ್ಯಾರ್ಥಿಗಳೆಲ್ಲ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾದರು. ಆದರೂ ಒಬ್ಬಿಬ್ಬರಿಗೆ ಮಾತ್ರ ಕೆಲಸ ಸಿಕ್ಕಿತು.

## ಉದ್ಯೋಗ

ನಾನೂ ೨ ವರ್ಷ ಕೆಲಸವಿಲ್ಲದೆಯೇ ಇದ್ದೆ. ೧೯೩೧ರ ಜೂನ್ ತಿಂಗಳಲ್ಲಿ ಮೈಸೂರು ಮಹಾರಾಣಿಯವರ ಕಾಲೇಜಿನಲ್ಲಿ ೬೦ ರೂಪಾಯಿನ ತಲಬಿನ ಮೇಲೆ ಪಂಡಿತನಾಗಿ ಸೇರಿದೆ. ಅಲ್ಲಿ ವಾರಕ್ಕೆ ೧೩ ಗಂಟೆಗಳ ಕಾಲ ಕನ್ನಡ, ೮ ಗಂಟೆ ಸಂಸ್ಕೃತದಂತೆ ಕೆಲಸ ಮಾಡಿ ಒಂದು ವರ್ಷವಾದ ಮೇಲೆ ಅದೇ ಸಂಬಳದ ಮೇಲೆ ಮೈಸೂರು ಪ್ರಾಚ್ಯ ಕೋಶಾಗಾರಕ್ಕೆ ವರ್ಗಾಯಿಸಲ್ಪಟ್ಟೆ. ಅಲ್ಲಿಂದ ಹತ್ತು ವರ್ಷಗಳ ಕಾಲ ಅಲ್ಲಿಯೇ ಕೆಲಸ ಮಾಡಿದೆ.

ಆ ಕಾಲದಲ್ಲಿ ಅಲ್ಲಿ ಬಹು ಉಪಯುಕ್ತವಾದ ಕೆಲಸ ನಡೆಯಿತು. ಭಾರತ ಸಂಶೋಧನಾ ಸಮಿತಿಯ ಸಹಾಯದಿಂದ ಕುಮಾರವ್ಯಾಸ ಭಾರತದ ಯುದ್ಧ ಪಂಚಕವನ್ನು ಸಂಶೋಧಿಸಿ ಪ್ರಕಟಿಸಿದೆ. ಸ್ವತಂತ್ರವಾಗಿ ಮಲ್ಲಿಕಾರ್ಜುನನ 'ಸೂಕ್ತಿ ಸುಧಾರ್ಣವ'ವೆಂಬ ಸಂಕಲನ ಗ್ರಂಥವನ್ನು ಆಕರಗಳ ಸಹಿತ ಸಂಶೋಧಿಸಿ ಪ್ರಕಟಿಸಿದೆ. ನಂಜುಂಡ ಕವಿಯ 'ಕುಮಾರ ರಾಮ ಸಾಂಗತ್ಯ'ವನ್ನೂ ಮುದ್ರಣಕ್ಕೆ ಸಿದ್ಧಪಡಿಸಿದೆ.

ಇದಕ್ಕಿಂತ ಹೆಚ್ಚಿನ ಬೆಲೆಯುಳ್ಳದು ಅಲ್ಲಿ ನಾನು ಕೈಗೊಂಡ ಕೈಬರಹದ ಪುಸ್ತಕಾನ್ವೇಷಣೆಯ ಕೆಲಸ. ದೇಶದ ಒಳಗೂ ಹೊರಗೂ ಸಂಚಾರ ಮಾಡಿ ಅನೇಕ ಹೊಸ ಗ್ರಂಥಗಳನ್ನು ಭಂಡಾರಕ್ಕೆ ಸಂಗ್ರಹಿಸಿದೆ. ಅವುಗಳಲ್ಲಿ ದಕ್ಷಿಣಕನ್ನಡದ ಮೂಡಬಿದ್ರೆ ಮತ್ತು ಹೈದರಾಬಾದ್ ಕರ್ಣಾಟಕದ ರಾಯಚೂರು ಜಿಲ್ಲೆಯಲ್ಲಿ ನಡೆದ ಕಾರ್ಯ ಗಮನಾರ್ಹವಾದುದು.

## ಪುಸ್ತಕಾನ್ವೇಷಣೆ

ಮೂಡಬಿದ್ರೆಯಲ್ಲಿ ಅಪೂರ್ವವಾದ ಓಲೆಗರಿ ಗ್ರಂಥಗಳ ಸಂಗ್ರಹವಿದೆಯೆಂದು ಕೇಳಿದ್ದೆ. ಅದಕ್ಕಾಗಿ ಅಲ್ಲಿಗೆ ಹೋದೆ. ಅಲ್ಲಿ ಎರಡು ಭಂಡಾರಗಳಿವೆ. ಲೋಕನಾಥ ಶಾಸ್ತ್ರಿಗಳ ವೀರವಾಣಿ ಜೈನ ಸಿದ್ಧಾಂತ ಭವನದ ಭಂಡಾರ ಮತ್ತು ಚಾರುಕೀರ್ತಿ ಸ್ವಾಮಿಗಳವರ ಮಠದ ಭಂಡಾರ. ಇದರಲ್ಲಿ ಅಮೂಲ್ಯವಾದುದು ಮಠದ ಭಂಡಾರ. ಮೊದಲನೆಯ ಭಂಡಾರವನ್ನು ಮಾಲೀಕರ ಔದಾರ್ಯದಿಂದ ಸುಲಭವಾಗಿ ವಿಮರ್ಶಿಸಿ ಪಟ್ಟಿ ಮಾಡಿದೆ. ಮಠದ ಸ್ವಾಮಿಗಳು ತಮ್ಮಲ್ಲಿ ಒಂದು ಪುಸ್ತಕವೂ ಇಲ್ಲವೆಂದು ಕಡಾ ಖಂಡಿತವಾಗಿ ಹೇಳಿಬಿಟ್ಟರು. ಉಪಾಯಾಂತರವಿಲ್ಲದೆ ಹಾಗೆಯೇ ಹಿಂತಿರುಗಲಾರದೆ ಅವರನ್ನು ಪ್ರಭಾವಿತರನ್ನಾಗಿ ಮಾಡುವುದಕ್ಕಾಗಿ ಅವರ ಅಧ್ಯಕ್ಷತೆಯಲ್ಲಿಯೇ ಮೂರು ಉಪನ್ಯಾಸಗಳನ್ನೇರ್ಪಡಿಸಿದೆ. 'ಆದಿಪುರಾಣ', `ರನ್ನನ ಗದಾಯುದ್ಧ' ಮತ್ತು 'ನಷ್ಟವಾಗಿರುವ ಜೈನಗ್ರಂಥಗಳು' ಎಂಬ ಶೀರ್ಷಿಕೆಗಳಲ್ಲಿ. ಈ ಉಪನ್ಯಾಸಗಳಿಂದ ಅವರು ಪ್ರಭಾವಿತರಾದಂತೆ ಕಾಣುತ್ತದೆ. ಮೂರನೆಯ ದಿನ ಉಪನ್ಯಾಸವಾದ

ಮೇಲೆ ರಾತ್ರಿ ೧೦ ಗಂಟೆಯ ಸಮಯದಲ್ಲಿ ನನ್ನನ್ನು ಬರಮಾಡಿಕೊಂಡು ನಮ್ಮಲ್ಲಿ ಒಂದೆರಡು ಗಂಟು ಗ್ರಂಥಗಳಿವೆ. ಅದನ್ನು ನೀವು ಮುಟ್ಟದೆ ನೋಡುತ್ತೀರಾ ಎಂದು ಕೇಳಿದರು. ನಾನು ಮುಟ್ಟಿ ಬೇಕಾದ ಅವಶ್ಯಕತೆಯಿಲ್ಲ. ಹೆಸರು ತಿಳಿದರೆ ಸಾಕು ಎಂದೆ. ಮಠದ ಪಂಡಿತರಾದ ಗಂಗಾಧರ ಶಾಸ್ತ್ರಿಗಳ ಮೂಲಕ ೨ ಕಟ್ಟುಗಳನ್ನು ತರಿಸಿದರು. ಅವುಗಳೊಂದೊಂದರಲ್ಲಿ ಸೊಗಸಾದ ವೇಷ್ಟನಗಳಿಂದ ಸುತ್ತಿದ ಮೂರು ಮೂರು ಓಲೆಯ ಪುಸ್ತಕಗಳಿದ್ದುವು. ಶಾಸ್ತ್ರಿಗಳಿಗೆ ಆ ಅಕ್ಷರವನ್ನು ಓದಲಾಗಲಿಲ್ಲ. ನನ್ನ ಕೈಗೆ ಕೊಡಲು ಬಂದರು. ನಾನು ಅದನ್ನು ಮುಟ್ಟುವುದಿಲ್ಲವೆಂದು ಹೇಳಿ ಅವರ ಕೈಯಿಂದಲೇ ಅವುಗಳನ್ನು ಗುರುತಿಸಿದೆ. ಅವೆಲ್ಲವೂ ನಮ್ಮ ಭಂಡಾರದಲ್ಲಿದ್ದುವು. ಅವುಗಳು ನಮಗೆ ಬೇಡವೆಂದು ಹೇಳಿ ಅದರ ಹೆಸರುಗಳನ್ನು ಮಾತ್ರ ಗುರುತಿಸಿಕೊಂಡು ಹಿಂದಕ್ಕೆ ಕೊಟ್ಟೆ. ಸ್ವಾಮಿಗಳು ಧೈರ್ಯವಾಗಿ ಮತ್ತೆರಡು ಕಟ್ಟುಗಳನ್ನು ತರಿಸಿದರು. ಅವುಗಳನ್ನು ಹಾಗೆ ಮಾಡಿದೆ. ಸ್ವಾಮಿಗಳಿಗೆ ಪೂರ್ಣ ನಂಬಿಕೆ ಬಂತು. ತಮ್ಮಲ್ಲಿರುವ ಭಂಡಾರದ ಪರಿಚಯ ಮಾಡಿಕೊಳ್ಳಲು ಅನುಮತಿಯಿತ್ತರು. ಮಹಡಿಯ ಮೇಲೆ ೧೮ ಗಾಜಿನ ಬೀರುಗಳಲ್ಲಿ ೯೩೪ ಹಸ್ತ ಲಿಖಿತ ಪ್ರತಿಗಳು ಅಂದವಾದ ವೇಷ್ಟನಗಳಲ್ಲಿ ಸುತ್ತಿ ಇಡಲ್ಪಟ್ಟಿದ್ದುವು. ಅವುಗಳಾವುವೆಂದು ಮಾತ್ರ ಯಾರಿಗೂ ತಿಳಿದಿರಲಿಲ್ಲ. ಕೆಲವುಗಳಲ್ಲಿ ೨-೩ ಗ್ರಂಥಗಳು ಅಡಕವಾಗಿದ್ದುವು. ಅಲ್ಲಿ ೧೮ ದಿನಗಳಿದ್ದು ಅವುಗಳನ್ನೆಲ್ಲ ಪರಿಶೀಲಿಸಿ ಅವುಗಳ ಕಟ್ಟಿನ ಮೇಲೆ ಅವುಗಳ ಹೆಸರಿನ ಪಟ್ಟಿಯನ್ನಂಟಿಸಿ ಅವುಗಳ ಪಟ್ಟಿಯನ್ನು ತಯಾರಿಸಿ ನಕಲನ್ನು ಮಠಕ್ಕೊಂದನ್ನು ಕೊಟ್ಟು, ನಮ್ಮಲ್ಲಿಲ್ಲದ ೬ ಪುಸ್ತಕಗಳನ್ನು ಎರವಲಾಗಿ ತಂದು ಅವನ್ನೆಲ್ಲವನ್ನೂ ನಮ್ಮ ಭಂಡಾರದಲ್ಲಿ ಪ್ರತಿ ಮಾಡಿಸಿಟ್ಟೆ. ಅದರಲ್ಲೊಂದಾದ ಬಾಹುಬಲಿಕೃತ `ಧರ್ಮನಾಥ ಪುರಾಣ'ವು ಈಚೆಗೆ ಅಧ್ಯಯನ ಸಂಸ್ಥೆಯಲ್ಲಿ ಸಂಶೋಧಿತವಾಗಿ ಪ್ರಕಟವಾಗಿದೆ.

ಹಾಗೆಯೇ ಇದೇ ಕಾಲದಲ್ಲಿ ಹೈದರಾಬಾದ್ ಕರ್ಣಾಟಕದಲ್ಲಿ ಸಂಚರಿಸಿ ಗಂಗಾವತಿ ಕನಕಗಿರಿ ಕಲ್ಲುಮಠಗಳಲ್ಲಿ ಹೊಸವಚನಕಾರರ ವಚನಗಳನ್ನು ಸಂಗ್ರಹಿಸಿ ತಂದು ಲಿಂಗಸೂರಿನ ಗೋರಿಬಾಳ್ ಹನುಮಂತರಾಯರಲ್ಲಿದ್ದ ಊಗಾಭೋಗಗಳನ್ನು ಪರಿಚಯ ಮಾಡಿಕೊಂಡು ಬಂದೆ. ೧೮ ದಿನದ ಪ್ರವಾಸದಲ್ಲಿ ಸುಮಾರು ೧೮೦ ಕ್ಕಿಂತ ಹೆಚ್ಚಿನ ಕನ್ನಡ ಶಿಲಾಶಾಸನಗಳನ್ನು ಗುರುತಿಸಿ ಅದರ ಮೇಲಿನ ವರದಿಯನ್ನು ಮೈಸೂರಿನಲ್ಲಿ ನಡೆದ ಅಖಿಲ ಭಾರತ ಪ್ರಾಚ್ಯ ಸಮ್ಮೇಳನದ ೮ ನೆಯ ಅಧಿವೇಶನದಲ್ಲಿ ಮಂಡಿಸಿದೆ.

ಇದಕ್ಕಿಂತಲೂ ಪ್ರಮುಖವಾದ ಕೆಲಸ ಆಗ ಪ್ರಾರಂಭವಾದ ಅಖಿಲ ಕರ್ಣಾಟಕ ಹಸ್ತಪ್ರತಿಗಳ ಸಮೀಕ್ಷೆ. ಇದರ ಪ್ರಕಾರ ಕರ್ಣಾಟಕದ (ಮೈಸೂರಿನ) ಒಂದೊಂದು ಹಳ್ಳಿಯಲ್ಲಿಯೂ ಸಂಚರಿಸಿ ಅಲ್ಲಿರಬಹುದಾದ ಎಲ್ಲ ಕೈಬರಹದ ಪ್ರತಿಗಳನ್ನು ಮುಖ್ಯ ಅಮುಖ್ಯವೆನ್ನದೆ ಗುರುತಿಸಿ ಪಟ್ಟಿಮಾಡಿ ಅವೆಲ್ಲವನ್ನೂ ಸಂಗ್ರಹಿಸಿ ಒಂದು ಕೇಂದ್ರ ಕೈ ಬರಹದ ಗ್ರಂಥ ಭಂಡಾರವನ್ನು ನಿರ್ಮಿಸುವುದು. ಈ ಯೋಜನೆಯನ್ನು ಪ್ರಾರಂಭಿಸಿ ನಾನೂ ಭಂಡಾರದಲ್ಲಿ ಸಹೋದ್ಯೋಗಿಗಳಾಗಿದ್ದ ಶ್ರೀ ಸ್ವಾಮಿ ಘನ ಪಾಠಿಗಳೂ ಹಾಸನ, ಬೇಲೂರು, ಅರಸೀಕೆರೆ,

ಅರಕಲಗೂಡು ತಾಲ್ಲೂಕುಗಳಲ್ಲಿ ಒಂದೊಂದು ಹಳ್ಳಿಯನ್ನೂ ಭೇಟಿ ಮಾಡಿ ೨ ವರ್ಷಗಳ ಕಾಲದಲ್ಲಿ ೧೮೦೦ ಕೈಬರಹದ ಪ್ರತಿಗಳನ್ನು ಗುರುತು ಮಾಡಿಕೊಂಡು ಬಂದೆವು. ಅದರ ಪ್ರಕಾರ ಸುಮಾರು ೨೦ ವರ್ಷಗಳಲ್ಲಿ ಒಂದು ಲಕ್ಷ ಹಸ್ತಲಿಖಿತ ಪ್ರತಿಗಳು ಸಿಕ್ಕಬಹುದೆಂದು ಅಂದಾಜುಮಾಡಲಾಗಿತ್ತು. ಈ ಯೋಜನೆಯು ೨ ವರ್ಷಗಳಲ್ಲಿಯೇ ನಿಂತು ಹೋದುದು ದುರದೃಷ್ಟ. ಈ ಯೋಜನೆಯ ಕಾರ್ಯರೂಪದಲ್ಲಿಯೇ ಮಲ್ಲಿಕಾರ್ಜುನನ ಸೂಕ್ತಿ ಸುಧಾರ್ಣವದ ಪೂರ್ಣ ಪ್ರತಿ. ಲೋಕೋಪಕಾರ ಗ್ರಂಥದ ಬೇರೆ ಬೇರೆ ಭಾಗಗಳು ಮಲ್ಲಕವಿಯ ಕಾವ್ಯಸಾರ ಮೊದಲಾದುವುಗಳ ಪ್ರತಿಗಳು ಲಭ್ಯವಾದುದು. ಈ ಸಂದರ್ಭದಲ್ಲಿ ಆದಿ ಪಂಪನ ಆದಿ ಪುರಾಣದ ೫೨ ಪ್ರತಿಗಳನ್ನು ಗುರುತಿಸಿದ್ದೇನೆ. ಆ ವಿಷಯವನ್ನು ಪ್ರಬುದ್ಧ ಕರ್ಣಾಟಕದಲ್ಲಿಯೂ ತಿಳಿಸಿದ್ದೇನೆ. ಈಚೆಗೆ ಆದಿಪುರಾಣವನ್ನು ಪ್ರಕಟಿಸಿದವರಾರೂ ಅಷ್ಟನ್ನು ಉಪಯೋಗಿಸದಿರುವುದು ಶೋಚನೀಯ. ೧೯೪೦ ನೆಯ ವರ್ಷದಲ್ಲಿ ಮಹಾರಾಜರವರ ಕಾಲೇಜಿಗೆ ಪಂಡಿತನಾಗಿಯೇ ವರ್ಗಾಯಿಸಲ್ಪಟ್ಟೆ.

## ಅಧ್ಯಾಪಕರಾಗಿ

ಮಹಾರಾಜರವರ ಕಾಲೇಜಿಗೆ ಬಂದ ದಿನದಿಂದ ನನಗೆ ಸ್ವಕ್ಷೇತ್ರಕ್ಕೆ ಬಂದನೆಂಬ ಸಂತೋಷ. ೧೯೪೦ರಿಂದ ೧೯೭೧ರ ವರೆಗೆ ಕೆಲವು ಕಾಲ ವಿನಾ ಅಧ್ಯಾಪಕನಾಗಿ ಮೈಸೂರು ಮಹಾರಾಜರವರ ಕಾಲೇಜು, ಯುವರಾಜ ಕಾಲೇಜು, ತುಮಕೂರು, ಕೋಲಾರ, ಶಿವಮೊಗ್ಗ, ಬೆಂಗಳೂರು, ಮಹಾರಾಣಿಯವರ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದೇನೆ. ನನಗೆ ಸಾವಿರಾರು ವಿದ್ಯಾರ್ಥಿ ವಿದ್ಯಾರ್ಥಿನಿಗಳಿದ್ದಾರೆ. ಅವರೇ ನನ್ನ ಆಸ್ತಿಯೆಂದು ಭಾವಿಸಿದ್ದೇನೆ. ನಾನು ಎಂದೂ ಯಾರನ್ನೂ ಎದುರು ಹಾಕಿಕೊಂಡಿಲ್ಲ. ಯಾರೂ ನನ್ನಲ್ಲಿ ಅಸಭ್ಯವಾಗಿ ನಡೆದುಕೊಂಡಿಲ್ಲ. `ಶಿಷ್ಯಾದಿಚ್ಛೇತ್ ಪರಾಜಯಂ' ಎಂಬ ನ್ಯಾಯದಲ್ಲಿ ಅವರಲ್ಲನೇಕರು ಬಹು ಗಣ್ಯಸ್ಥಾನವನ್ನು ಅಲಂಕರಿಸಿದ್ದಾರೆ. ಮುಖ್ಯಮಂತ್ರಿಗಳು, ಸಚಿವರು, ಕುಲಪತಿಗಳು, ಪ್ರಾಧ್ಯಾಪಕರೂ ಶ್ರೇಷ್ಟ ಮಟ್ಟದ ಸರ್ಕಾರಿ ಅಧಿಕಾರಿಗಳು ಎಲ್ಲರೂ ನನ್ನ ವಿದ್ಯಾರ್ಥಿ ಮಿತ್ರರ ವರ್ಗದಲ್ಲಿ ಸೇರಿದ್ದಾರೆಂಬುದು ನನ್ನ ಹೆಮ್ಮೆ. ಅವರೆಲ್ಲರೂ ನನ್ನಲ್ಲಿ ಪ್ರೀತಿಯಿಂದಿದ್ದಾರೆ. ಅನೇಕರು ವಿವಿಧ ಸಂದರ್ಭಗಳಲ್ಲಿ ಉಪಕಾರ ಮಾಡಿದ್ದಾರೆ. ಅವರಿಗೆಲ್ಲ ನಾನು ಋಣಿ. ಈ ಮಧುರ ಭಾವನೆಗೆ, ನನ್ನಲ್ಲಿ ಅವರಿಗಿದ್ದ ಸದ್ಭಾವನೆಗಳೇ ಕಾರಣ. ನಾನು ವಿದ್ಯಾರ್ಥಿಗಳೊಂದಿಗೆ ವಿಶೇಷವಾಗಿ ಕಲೆಯುವುದಕ್ಕೆ ಅನೇಕ ಕಾರಣಗಳುಂಟು. ಸಂಘಸಂಸ್ಥೆಗಳಲ್ಲಿ ಓಡಾಟ, ಕ್ರೀಡಾ ವ್ಯಾಯಾಮಗಳಲ್ಲಿ ಪಾಲುಗಾರಿಕೆ, ಪ್ರವಾಸಗಳು ನಾಟಕದಲ್ಲಿ ಭಾಗವಹಿಸುವುದು ಇವು ಕೆಲವು.

## ವ್ಯಾಯಾಮ

ಅಂಗಸಾಧನೆಯು ನನ್ನ ಜೀವನದಲ್ಲಿ ಬಹು ಪರಿಣಾಮಕಾರಿಯಾಗಿದೆ. ನನಗೆ ೭೪ ವರ್ಷಗಳಾಗುವವರೆಗೆ ನಾನು ಎಂದೂ ಖಾಯಿಲೆ ಬಿದ್ದಿಲ್ಲ. ಯಾವ ಔಷಧಿಯನ್ನು ಸೇವಿಸಿಲ್ಲ. ಒಂದು ಸೂಜಿಯನ್ನೂ ಚುಚ್ಚಿಸಿಕೊಂಡಿಲ್ಲ. ಮೈಸೂರಿನಿಂದ ಸುಮಾರು ೨೦ ಮೈಲಿ

ದೂರದಲ್ಲಿರುವ ತಿ. ನರಸೀಪುರಕ್ಕೆ ಎಷ್ಟೋ ಸಲ ಕಾಲ್ನಡಿಗೆಯಲ್ಲೇ ಪ್ರಯಾಣ ಮಾಡಿದ್ದೇನೆ. ೭೫ನೆಯ ವರ್ಷದವರೆಗೆ ಏಕಪ್ರಕಾರವಾದ ಬೈಸಿಕಲ್ಲಿನ ಸಂಚಾರ. ಇದಕ್ಕೆ ನಾನು ಚಿಕ್ಕ ವಯಸ್ಸಿನಿಂದಲೇ ಮಾಡುತ್ತಿದ್ದ ಅಂಗಸಾಧನೆಯೇ ಕಾರಣ. ನಾನು ೬ ವರ್ಷಗಳ ಕಾಲ ಒಂದೇ ಸಮನಾಗಿ ಗರಡಿ ಸಾಧನೆ ಮಾಡಿದ್ದೇನೆ. ಮೈಸೂರಿನ ನಲ್ಲಪ್ಪನ ರಾಣೆಯಲ್ಲಿರುವ ಎಲ್ಲಪ್ಪನ ಗರಡಿಯಲ್ಲಿ. ಅಲ್ಲಿ ನನಗೆ ಶ್ರೀಯುತರಾದ ಎಂ. ಎಚ್. ಕೃಷ್ಣ, ಎಂ. ಎಚ್. ಗೋಪಾಲ್ ವಾಜಪೇಯಂ ಶ್ರೀರಂಗಾಚಾರ್, ಆರ್. ರಾಮಚಂದ್ರ ಎಂಬುವರು ಸಹಪಾಠಿಗಳು. ನಾವು ಕೈ ಊರಿದರೆ, ನಿಲ್ಲಿಸದೆ ೧೦೦೦ ದಂಡೆಯನ್ನು ಹೊಡೆಯುತ್ತಿದ್ದೆವು. ಹಾಗೆಯೇ ಕಾಲಿಗೂ ೧೦೦೦ ಸಪ್ಪಟ್ಟು. ಮೈಸೂರಿನಲ್ಲಿ ಕೊಪ್ಪಲು ಪೈಲ್ವಾನ್ ಬಸವಯ್ಯನವರು ವಿನಾ ಮತ್ತಾರೂ ಈ ಶಕ್ತಿಯನ್ನು ಹೊಂದಿರಲಿಲ್ಲ. ಅದಕ್ಕಾಗಿ ಆಗಾಗ ನಾವು ಅವರೊಡನೆ ಸಾಧನೆ ಮಾಡಲು ಕೊಪ್ಪಲಿಗೆ ಹೋಗುತ್ತಿದ್ದೆವು. ಆಗ ಚಾಮುಂಡಿ ಬೆಟ್ಟವನ್ನು ವ್ಯಾಯಾಮ ದೃಷ್ಟಿಯಿಂದ ಹತ್ತುವುದು ಅನೇಕರಿಗೆ ರೂಢಿಯಾಗಿತ್ತು. ನಾನೂ ಗೋಪಾಲ್ ಮತ್ತು ರಾಮಚಂದ್ರ ಮೂವರೂ ಒಂದೇ ಸಮನೆ ಎರಡು ವರ್ಷ ಕಾಲ ನಿತ್ಯವೂ ಬೆಟ್ಟಕ್ಕೆ ಹೋಗುತ್ತಿದ್ದೆವು. ಸುಮಾರು ೩ ಮೈಲಿ ದೂರವಿರುವ ಬೆಟ್ಟದ ತಪ್ಪಲಿನವರೆಗೂ ಓಡಿ ಅಲ್ಲಿಂದ ೭೦೦ ಮೆಟ್ಟಿಲುಗಳನ್ನು ಏರಿ ಅಲ್ಲಿ ಸಾಧನೆ ಮಾಡಿಕೊಂಡು ಇಳಿದು ಮನೆಗೆ ಓಡಿ ಬರುತ್ತಿದ್ದೆವು. ಆಗ ಅನೇಕ ಗಣ್ಯರು ಪರ್ವತಾರೋಹಣಕ್ಕೆ ಬರುತ್ತಿದ್ದರು. ಅವರಲ್ಲಿ ಧರ್ಮಪ್ರಕಾಶ ಬನುಮಯ್ಯ, ರಾವ್ ಬಹದ್ದೂರ್ ರಾಮಸ್ವಾಮಿ, ಅಳಿದ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರು ಮುಖ್ಯರು. ಇವರು ಮೂರು ಜನರೂ ಕುದುರೆ ಗಾಡಿಯಲ್ಲಿ ಬೆಟ್ಟದ ತಪ್ಪಲಿನವರೆಗೂ ಒಂದು ಬನುಮಯ್ಯನವರು ೧೦೦ ಮೆಟ್ಟಿಲುಗಳನ್ನು ರಾಮಸ್ವಾಮಿಯವರು ೨೦೦ ಮೆಟ್ಟಿಲುಗಳನ್ನು ಮಹಾರಾಜರವರು ಒಬ್ಬ ಸಾರ್ಜೆಂಟಿನ ಜೊತೆಯಲ್ಲಿ ೪೦೦ ಮೆಟ್ಟಿಲುಗಳನ್ನು ಹತ್ತಿ ಅಲ್ಲಿ ಕುಳಿತುಕೊಳ್ಳುತ್ತಿದ್ದರು. ಇವರೆಲ್ಲರೂ ನಾವಿಳಿದು ಬರುತ್ತಿದ್ದಾಗ ಪ್ರತಿದಿನವೂ ಎದುರಿಗೆ ಸಿಕ್ಕುತ್ತಿದ್ದರು. ನಮ್ಮ ಕಾಲದಲ್ಲಿ ಶ್ರೀನಿವಾಸಣ್ಣ ಎಂಬ ಬಡಗಿಯು ಒಂದೇ ಸಮನೆ ೧೨ ಸಲ ೭೦೦ ಮೆಟ್ಟಿಲುಗಳನ್ನು ಹತ್ತಿ ಇಳಿದು ಮಹಾರಾಜರವರಿಂದ ೧೨ ಸವರನ್‌ಗಳನ್ನು ಮತ್ತು ಒಂದು ದೊಡ್ಡ "ಷೀಲ್ಡ್"ನ್ನೂ ಪಡೆದರು. ನಾವು ೭೦೦ ಮೆಟ್ಟಿಲುಗಳನ್ನು ೮ ೧/೨ ನಿಮಿಷದಲ್ಲಿ ಹತ್ತಿ ೪ ೧/೨ ನಿಮಿಷದಲ್ಲಿ ಇಳಿಯುತ್ತಿದ್ದೆವು. ಕಾಲೇಜಿನಲ್ಲಿಯೂ ಪ್ರತಿ ವರ್ಷ ಬೆಟ್ಟ ಹತ್ತುವ ಸ್ಪರ್ಧೆ ನಡೆಯುತ್ತಿತ್ತು. ೨-೩ ವರ್ಷ ಮೊದಲು ಮತ್ತು ಎರಡನೆಯ ಬಹುಮಾನಗಳು ನನಗೆ ಅಥವಾ ಗೋಪಾಲ್‌ರವರಿಗೆ ಮೀಸಲಾಗಿರುತ್ತಿತ್ತು. ನಾನು ವಿದ್ಯಾರ್ಥಿಗಳ ಕುಸ್ತಿ ಪಂದ್ಯದಲ್ಲಿ ಅನೇಕ ಸಲ ಪಾರಿತೋಷಕಗಳನ್ನು ಪಡೆದಿದ್ದೇನೆ. ನನಗೆ ಕಂಬ ಕಟ್ಟುವುದು, ರೋಮನ್ ರಿಂಗ್ಸ್, ಪ್ಯಾರಲಲ್ ಮತ್ತು ಹಾರಿಝಾಂಟಲ್ ಬಾರ್ ಸಾಧನೆ, ವೈಟ್ ಲಿಫ್ಟಿಂಗ್ ಮೊದಲಾದುವುಗಳಲ್ಲಿ ಅಭ್ಯಾಸವಿರುತ್ತಿತ್ತು. ಅವುಗಳಲ್ಲಿಯೂ ಬಹುಮಾನಗಳು ಬರುತ್ತಿತ್ತು. ನಾನು ಕಾಲೇಜಿನಲ್ಲಿ ವ್ಯಾಯಾಮ ಶಾಲೆಯನ್ನು ಪ್ರಾರಂಭಿಸಿ ಮೂರು ವರ್ಷಗಳ ಕಾಲ ಅದರ ಕಾರ್ಯದರ್ಶಿಯಾಗಿ ನಡೆಸಿಕೊಂಡು ಬಂದೆ. ಅಲ್ಲಿ ಪ್ರತಿದಿನ ಸುಮಾರು ೧೦೦ ಜನ ಬೆಳಿಗ್ಗೆ ಮತ್ತು ಸಾಯಂಕಾಲದಲ್ಲಿ ವ್ಯಾಯಾಮ

ಮಾಡುತ್ತಿದ್ದರು. ನಾನು ಹೋದ ಕಾಲೇಜುಗಳಲ್ಲೆಲ್ಲಾ ಇವಕ್ಕೆ ಸೂಕ್ತ ಪ್ರೋತ್ಸಾಹವನ್ನು ಕೊಟ್ಟಿದ್ದೇನೆ. ವೈಯಕ್ತಿಕವಾಗಿ ನಾನು ಬಹು ದೀರ್ಘಕಾಲ ನನ್ನ ಮನೆಯಲ್ಲಿಯೇ ಅಂಗಸಾಧನೆ ಮಾಡುತ್ತಿದ್ದುದುಂಟು.

**ನಾಟಕ ರಂಗ**

ನಾಟಕಗಳಲ್ಲಿ ನನಗೆ ಚಿಕ್ಕಂದಿನಿಂದಲೂ ಆಸಕ್ತಿ. ನಾನು ಮೈಸೂರಿಗೆ ಪ್ರೌಢ ವ್ಯಾಸಂಗಕ್ಕಾಗಿ ಬಂದಾಗ ನನಗೆ ನಾಟಕ ಶಿರೋಮಣಿ ಎ. ವಿ. ವರದಾಚಾರ್ಯರ ಪರಿಚಯವಾಯಿತು. ಅವರು ನನ್ನನ್ನು ತಮ್ಮ ರತ್ನಾವಳೀ ನಾಟಕ ಸಭೆಯ ನಟವರ್ಗದಲ್ಲಿ ಸೇರಿಸಿಕೊಳ್ಳಬೇಕೆಂದು ಆಶಿಸಿದರು. ಅದಕ್ಕೆ ನಮ್ಮ ತಂದೆಯವರ ಅನುಮತಿ ದೊರೆಯಲಿಲ್ಲ. ಆದರೂ ಅವರ ನಾಟಕಗಳಿಗೆಲ್ಲ ಉಚಿತ ಪ್ರವೇಶಾವಕಾಶವು ದೊರೆಯಿತು. ಅದರಿಂದ ನನಗೆ ನಾಟಕಗಳಲ್ಲಿ ಹೆಚ್ಚು ಆಸಕ್ತಿಯುಂಟಾಯಿತು. ಕಾಲೇಜಿಗೆ ಬಂದ ಮೇಲೆ ಅಲ್ಲಿ `ಯಮನ ಸೋಲು', `ಮೇವಾಡ ಪತನ', `ವಿಗಡ ವಿಕ್ರಮರಾಯ' ಮೊದಲಾದ ನಾಟಕಗಳಲ್ಲಿ ಪಾತ್ರವಹಿಸಿದೆ. ಇವುಗಳೆಲ್ಲಕ್ಕಿಂತ ನನ್ನನ್ನು ವಿಶೇಷ ಪ್ರಭಾವಿಸಿದವು. ಬಿ. ಎಂ. ಶ್ರೀಯವರ ಗದಾಯುದ್ಧ ನಾಟಕ ಮತ್ತು ಅಶ್ವತ್ಥಾಮನ್ ನಾಟಕಗಳು. ಇದನ್ನು ಬಿ. ಎಂ. ಶ್ರೀಯವರೇ ಎಸ್. ವಿ. ಕೃಷ್ಣಸ್ವಾಮಿ ಅಯ್ಯಂಗಾರ್ ಮತ್ತು ಎಸ್. ವಿ. ರಂಗಣ್ಣನವರ ಸಹಕಾರದಿಂದ ತಿಂಗಳುಗಟ್ಟಲೆ ಅಭ್ಯಾಸ ಮಾಡಿಸಿದರು. ಇವೆರಡೂ ಈವತ್ತಿಗೂ ಹಳೆಗನ್ನಡ ಭಾಷೆಯ ನಾಟಕಗಳಲ್ಲಿ ಅತ್ಯುತ್ತಮವಾದುದು. ನಾನು ಈ ಎರಡು ನಾಟಕಗಳಲ್ಲೂ ಪಾತ್ರ ವಹಿಸಿದೆ. ಗದಾಯುದ್ಧ ನಾಟಕವನ್ನು ಮುಂದೆ ಎಷ್ಟೋ ಸಲ ಆಡಿಸಿದ್ದೇನೆ. ಅದರಲ್ಲಿ ನಾನೇ ಭಿನ್ನ ಭಿನ್ನ ಪಾತ್ರಗಳನ್ನು ಧರಿಸಿದ್ದೇನೆ. ತರಗತಿಗಳಲ್ಲಿ ಇದನ್ನು ಅನೇಕಸಲ ಪಾಠ ಹೇಳಿದ್ದೇನೆ. ಅದರಲ್ಲಿ ನನಗೆ ವಿಶೇಷ ಮೋಹವುಂಟು. `ಅಶ್ವತ್ಥಾಮನ್' ವಿಷಯದಲ್ಲಿ ಆ ಭಾಗ್ಯ ದೊರೆಯಲಿಲ್ಲ. ಈಚೆಗೆ ಅನೇಕರು ಆ ನಾಟಕವನ್ನು ಕೆಲವು ಸಲ ಅಭಿನಯಿಸಿದ್ದಾರೆ. ಆದರೂ ನನಗೆ ತೃಪ್ತಿಕರವಾಗಿ ಕಂಡಿಲ್ಲ.

ಈ ನಾಟಕದಲ್ಲಿ ಭೀಮನ ಪಾತ್ರ ವಹಿಸುತ್ತಿದ್ದವರು ಶ್ರೀ ಎನ್. ಎಸ್. ನಾರಾಯಣಶಾಸ್ತ್ರಿಯವರು. ದುರ್ಯೋಧನನ ಪಾತ್ರ ವಹಿಸಿದವರು ಶ್ರೀ ಅಮೀರ್. ರಂಗಸ್ಥಳದಲ್ಲಿ ಗದಾಯುದ್ಧವಾಡುತ್ತಿದ್ದಾಗ ಭೀಮನ ಗದೆಯೇ ಮುರಿದು ಹೋಯಿತು. ಆಗ ತಕ್ಷಣ ಶಾಸ್ತ್ರಿಗಳು `ಗದೆ ಮುರಿದೊಡೇಂ? ತೋಳ್ಬಲಮಿರ್ಪುದೈಸೆ, ಬಾ ಪೊಣರುವಂ ಮಲ್ಲಯುದ್ಧಮಂ' ಎಂದು ಹೇಳಿ ಯುದ್ಧಮಾಡಿ ಊರುಭಂಗ ಮಾಡಿದರು. ಅವರ ಸಮಯಸ್ಫೂರ್ತಿಗೆ ಪ್ರೇಕ್ಷಕ ವರ್ಗವೆಲ್ಲಾ ಅವರನ್ನು ವಿಶೇಷ ಶ್ಲಾಘಿಸಿತು. ನಾನು ದುರ್ಯೋಧನನ ಪಾತ್ರವನ್ನು ವಹಿಸಿದ್ದುದು ವಿಶೇಷ ಸಂದರ್ಭ. ೧೯೨೮ರಲ್ಲಿ ಗುಲ್ಬರ್ಗದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸಮ್ಮೇಳನ ನಡೆಯಿತು. ಈ ಬಿ. ಎಂ. ಶ್ರೀ.ಯವರೇ ಸಮ್ಮೇಳನಾಧ್ಯಕ್ಷರು. ಅವರು ನಮ್ಮಗಳನ್ನೆಲ್ಲಾ ಕರೆದುಕೊಂಡು ಹೋಗಿ 'ಯಮನಸೋಲು' ಹಾಗೂ `ಗದಾಯುದ್ಧ ನಾಟಕ'ವನ್ನು ಅಲ್ಲಿ ಆಡಿಸಿದರು. ಅಲ್ಲಿ ದಯಮಾಡಿಸಿದ್ದ ಬಿಜಾಪುರದ ಅಧಿಕಾರಿ ನಾಯಕ್

ಎಂಬುವರು ಆ ನಾಟಕಗಳನ್ನು ಬಿಜಾಪುರದಲ್ಲಿ ಪ್ರದರ್ಶಿಸಬೇಕೆಂದು ಒತ್ತಾಯಿಸಿದರು. ಆದರೆ ದುರ್ಯೋಧನನ ಪಾತ್ರ ವಹಿಸಿದ್ದ ಶ್ರೀ ಅಮೀರ್ ಅವರು ತೀರದೆ ಮೈಸೂರಿಗೆ ಹೊರಡಬೇಕಾಯಿತು. ಆಗ ಬಿ. ಎಂ. ಶ್ರೀಯವರು ನನ್ನನ್ನು ಅವರ ಪಾತ್ರ ವಹಿಸುವಂತೆ ಸೂಚಿಸಿದರು. ನಾನು ಒಪ್ಪಿಕೊಂಡು ಮೂರನೆಯ ದಿವಸ ಬಿಜಾಪುರದಿಂದ ತೊರವೆ ಕೆರೆಗೆ ಹೋಗುತ್ತಿರುವಾಗ ಆ ಪಾತ್ರದ ಭಾಗವನ್ನು ಅಭ್ಯಸಿಸಿ ಸಾಯಂಕಾಲ ನಾಟಕವನ್ನು ಆಡಿದೆವು. ನಾಟಕವು ಬಹು ಆಕರ್ಷಕವಾಗಿತ್ತು. ಅಂದಿನಿಂದ ನಾನು `ಗದಾಯುದ್ಧ ನಾಟಕ'ದ ಯಾವ ಪಾತ್ರವನ್ನಾದರೂ ವಹಿಸಬಲ್ಲೆನೆಂಬ ಧೈರ್ಯ ಬಂದಿತು. ಅಲ್ಲಿಂದ ಮುಂದೆ ಆ ನಾಟಕವನ್ನು ಎಷ್ಟೋ ಸಲ ಆಡಿಸಿ ಅದರಲ್ಲಿ ಭಿನ್ನಪಾತ್ರಗಳನ್ನು ವಹಿಸಿದ್ದೇನೆ. ಎರಡು ನಾಟಕಗಳನ್ನು ತರಗತಿಗಳಲ್ಲಿ ಅನೇಕ ಸಲ ಪಾಠ ಹೇಳಿದ್ದೇನೆ. ನಿಜವಾಗಿ ಹೇಳುವುದಾದರೆ ಆ ಪಾಠಗಳನ್ನು ಬೋಧಿಸುತ್ತಿರುವಾಗ ತರಗತಿಯಲ್ಲಿ ಏಕಪಾತ್ರಾಭಿನಯವನ್ನೇ ಮಾಡಿದ್ದೇನೆ. ಗದಾಯುದ್ಧದಂತೆ ಅಶ್ವತ್ಥಾಮನ್ ನಾಟಕವನ್ನು ಪುನಃ ಆಡಿಸಬೇಕೆಂಬ ಅಭಿಪ್ರಾಯವಿತ್ತು. ಅದು ಸಾಧ್ಯವಾಗಲಿಲ್ಲ.

## ಗ್ರಂಥರಚನೆ

ನನ್ನ ಗ್ರಂಥಗಳ ರಚನೆಗೆ ಆವಶ್ಯಕತೆಯೇ ಕಾರಣ ಮತ್ತು ಪ್ರೇರಕ. ನನ್ನ ಸಂಪಾದಿತ ಕೃತಿಗಳಲ್ಲಿ ಪ್ರಧಾನವಾದುವು ಮಲ್ಲಿಕಾರ್ಜುನನ `ಸೂಕ್ತಿ ಸುಧಾರ್ಣವ' ಮತ್ತು ಮಲ್ಲಕವಿಯ `ಕಾವ್ಯಸಾರ'. ಇವೆರಡೂ ಕಾವ್ಯದ ಅಷ್ಟಾದಶ ವರ್ಣನೆಗಳ ವಿಷಯಕವಾದ ಸಂಕಲನ ಗ್ರಂಥಗಳು ಅಲ್ಲಿಯ ಪದ್ಯಗಳೆಲ್ಲ ಅವಕ್ಕೆ ಹಿಂದೆ ಇದ್ದ ಎಲ್ಲ ಪ್ರಾಚೀನ ಚಂಪೂ ಗ್ರಂಥಗಳಿಂದ ಸಂಗ್ರಹಿತವಾದುವು. ಒಂದರಲ್ಲಿ ೨೨೦೦ ಪದ್ಯಗಳು ಮತ್ತೊಂದರಲ್ಲಿ ೩೫೦೦ ಪದ್ಯಗಳೂ ಇವೆ. ಹಸ್ತಪ್ರತಿಗಳಲ್ಲಿ ಅವು ಯಾವುದಕ್ಕೂ ಆಕರ ಗುರುತಿಸಲ್ಪಟ್ಟಿಲ್ಲ. ಈ ಎರಡು ಗ್ರಂಥಗಳು ಪ್ರಾಚೀನ ಚಂಪೂ ಕಾವ್ಯಗಳ ವಿಸ್ತಾರವನ್ನು ಪ್ರದರ್ಶಿಸುತ್ತವೆ. ಅವುಗಳ ಆಕರಗಳನ್ನು ಶಾಸ್ತ್ರ ರೀತಿಯಾಗಿ ಕಂಡುಹಿಡಿಯಬೇಕಾದರೆ ಆ ಗ್ರಂಥಗಳಿಗೆ ಆಕರವಾದ ಅಲ್ಲಿಯವರೆಗೆ ಉಪಲಬ್ಧವಾಗಿರುವ ಎಲ್ಲ ಚಂಪೂಗ್ರಂಥಗಳ ಆಕಾರಾದಿ ಆವಶ್ಯಕವಾಯಿತು. ಅದಕ್ಕಾಗಿ ಅಲ್ಲಿಯವರೆಗೆ ಉಪಲಬ್ಧವಾಗಿರುವ ಸುಮಾರು ೩೫ ಮುದ್ರಿತ ಮತ್ತು ಅಮುದ್ರಿತ ಕೃತಿಗಳ ಅಕಾರಾದಿಗಳನ್ನು ತಯಾರಿಸಿ ಅವುಗಳೊಡನೆ ತೋಲನ ಮಾಡಿ ಆಕರಗಳನ್ನು ಗುರುತು ಮಾಡಿದೆ. ಅದರಿಂದ ಈಗ ಉಪಲಬ್ಧವಾಗಿರುವ ಗ್ರಂಥಗಳಲ್ಲಿ ಆಕರ ಸಿಕ್ಕಿರುವುದು ಸುಮಾರು ೨೫೦೦ ಪದ್ಯಗಳು ಮಾತ್ರ. ಸಿಕ್ಕದಿರುವ ಸುಮಾರು ಇನ್ನೂ ೨೫೦೦ ಪದ್ಯಗಳು ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಇನ್ನೂ ೩೫ ಗ್ರಂಥಗಳಾದರೂ ನಷ್ಟವಾಗಿರಬೇಕು. ಈ ಸಂದರ್ಭದಲ್ಲಿ ಸಿದ್ಧವಾದ ೧ ಲಕ್ಷ ಪಟ್ಟಿಕೆಗಳನ್ನು ಪುನಃ ಒಟ್ಟಿಗೆ ಸೇರಿಸಿ `ಚಂಪೂ ಕಾವ್ಯಗಳ ಪದ್ಯಾನುಕ್ರಮಣಿ' ಎಂಬ ಗ್ರಂಥವನ್ನು ಸಿದ್ಧಪಡಿಸಿದ್ದೇನೆ.

ನಾನು ಬಿ. ಎ. ಆನರ್ಸ್ ತರಗತಿಗಳಿಗೆ ಸಾಹಿತ್ಯ ಚರಿತ್ರೆಯ ಪಾಠವನ್ನು ಬೋಧಿಸುತ್ತಿದ್ದಾಗ ಭಾರತೀಯ, ಇತರ ಭಾಷಾ ಸಾಹಿತ್ಯಗಳ ಚರಿತ್ರೆಯ ಆವಶ್ಯಕತೆ ಕಂಡು ಬಂದಿತು. ಅದಕ್ಕೆ

ಸಹಾಯಕವಾಗುವ ಕನ್ನಡದಲ್ಲಿ ಪುಸ್ತಕಗಳಾವುವೂ ಇರಲಿಲ್ಲ. ಅದಕ್ಕಾಗಿ ನಾನೇ ಆ ಕಾರ್ಯವನ್ನು ಪ್ರಾರಂಭಿಸಿ ೧೬ ವರ್ಷಗಳ ಕಾಲ ಶ್ರಮಪಟ್ಟು 'ಸಾಹಿತ್ಯಭಾರತಿ'ಯನ್ನು ತಯಾರಿಸಿದೆ. ಇವರಲ್ಲಿ ಭಾರತದ ೨೦ ಅಧಿಕೃತ ಭಾಷೆಗಳ ಸಾಹಿತ್ಯ ಚರಿತ್ರೆಗಳ ವಿಸ್ತಾರವಾದ ಪರಿಶೀಲನೆಯಿದೆ. ೧೦೦೦ ಪುಟಗಳ ಬೃಹತ್ ಗ್ರಂಥ. ಇಂತಹ ಗ್ರಂಥ ದೇಶಭಾಷೆಯಲ್ಲಾಗಲೀ ವಿದೇಶ ಭಾಷೆಗಳಲ್ಲಾಗಲೀ ಇದುವರೆಗೆ ಬಂದಿಲ್ಲ ಎಂದು ಡಾ|| ಕೆ. ವಿ. ಪುಟ್ಟಪ್ಪನವರು ಇದರ ಮುನ್ನುಡಿಯಲ್ಲಿ ತಿಳಿಸಿದ್ದಾರೆ.

ಈ ಗ್ರಂಥಗಳೆಲ್ಲ ಸಂಶೋಧನಾತ್ಮಕವಾಗಿರುವುವು. ಮನರಂಜಕವಾದುದಲ್ಲ. ವಿದ್ವಾಂಸರಿಗೂ ಸಂಶೋಧಕರಿಗೂ ಸಹಾಯವಾಗುವ ಮೂಲ ಕೃತಿಗಳು. ಅಲ್ಲದೆ ಬೃಹತ್ಕೃತಿಗಳು. ವಿಶೇಷ ಶಾರೀರಿಕ ಮತ್ತು ಮಾನಸಿಕ ವ್ಯವಸಾಯಗಳಿಂದ ಮಾತ್ರ ಸಾಧ್ಯವಾಗತಕ್ಕವು. ಇವುಗಳಿಗೆ ವಿಶೇಷ ಕಾಲಾವಕಾಶ ಬೇಕು. ನನಗೆ ಇತರ ಅನೇಕ ಹವ್ಯಾಸಗಳಿದ್ದುದರಿಂದ ರಾತ್ರಿ ಕಾಲದಲ್ಲಿಯೇ ದಿನಕ್ಕೆ ೬-ರಿಂದ ೮-ಗಂಟೆಗಳ ಕಾಲದಂತೆ ಅನೇಕ ವರ್ಷ ಶ್ರಮಿಸಿ ಸಿದ್ಧಪಡಿಸಿದ್ದೇನೆ.

ಇದರಲ್ಲಿ ೪೪೦೦ ಕೃತಿಕಾರರ ಹಾಗೂ ೭೩೦೦ ಕೃತಿಗಳ ಸೂಚನೆಯಿದೆ. ಇಲ್ಲಿಯ ಸಂಸ್ಕೃತ ಸಾಹಿತ್ಯದ ವಿವರಣೆಯಂತೆ ಮತ್ತಾವ ಗ್ರಂಥದಲ್ಲಿಯೂ ವಿವೃತವಾಗಿಲ್ಲ. ವೈದಿಕ ಸಾಹಿತ್ಯ, ಕಾವ್ಯ ಸಾಹಿತ್ಯ, ಶಾಸ್ತ್ರ ಸಾಹಿತ್ಯಗಳಿಗೆ ಸಮಾನವಾದ ಸ್ಥಾನವು ದೊರೆತಿದೆ. ಎಲ್ಲ ದರ್ಶನಗಳ ಪರಿಚಯವನ್ನು ಉಂಟುಮಾಡಿದೆ.

**ಇತ್ತೀಚಿನ ಗ್ರಂಥರಚನೆ**

೧೯೭೮ರಲ್ಲಿ ನಾನು ವ್ಯಾಧಿಗ್ರಸ್ತನಾಗಿ ೬ ತಿಂಗಳ ಕಾಲ ಆಸ್ಪತ್ರೆಯಲ್ಲಿದ್ದೆ. ಅಲ್ಲಿಂದ ಹಿಂತಿರುಗಿದಾಗ ಸಂಚಾರಕ್ಕೆ ಅನರ್ಹನಾಗಿ ಮನೆಗೆ ಬಂದು ಹಾಸಿಗೆ ಹಿಡಿದೆ. ಆದರೂ ಯಥೋಚಿತ ಸಾಹಿತ್ಯಕಾರ್ಯ ಮಾಡುತ್ತಿದ್ದೇನೆ.

ಈಗಲೂ ಮುದ್ರಣಕ್ಕೆ ಸಿದ್ಧವಾಗಿರುವ ಕೆಲವು ಕೃತಿಗಳಿವೆ. ಅವುಗಳಲ್ಲಿ `ಕರ್ನಾಟಕ ಪ್ರಗತಿ ವೈಭವ' ಎಂಬ ಗ್ರಂಥವು ಬಹು ಮುಖ್ಯವಾದುದು. ಇದು ಮಾಜೀ ಮುಖ್ಯಮಂತ್ರಿಗಳಾದ ದಿ|| ದೇವರಾಜೇ ಅರಸುರವರ ಸೂಚನೆಯಂತೆ ಸಿದ್ಧವಾದುದು. ಇದು ಕರ್ನಾಟಕದ ಒಂದು ಕಿರಿಯ ವಿಶ್ವಕೋಶದಂತಿದೆ. ಇದರಲ್ಲಿ ನಾಡಿನ ಚರಿತ್ರೆ, ಸಾಮಾಜಿಕ ಚರಿತ್ರೆ, ಕನ್ನಡಲಿಪಿಯ ಬೆಳವಣಿಗೆ, ಭಾಷಾ ಚರಿತ್ರೆ, ಸಾಹಿತ್ಯ ಚರಿತ್ರೆ, ಧಾರ್ಮಿಕಚರಿತ್ರೆ, ವಿದ್ಯಾಭ್ಯಾಸ, ಶಾಸನಗಳು, ನಾಣ್ಯಗಳು, ವಾಸ್ತುಶಿಲ್ಪ, ಸಂಗೀತ, ನೃತ್ಯ, ವರ್ಣಚಿತ್ರಗಳ ಚರಿತ್ರೆ, ವ್ಯವಸಾಯ, ವಾಣಿಜ್ಯ, ಕೈಗಾರಿಕೆ, ವಿದ್ಯುಚ್ಛಕ್ತಿ, ಸಾರಿಗೆ ಸಂಪರ್ಕ, ಆಡಳಿತ ವ್ಯವಸ್ಥೆ, ಪಂಚವಾರ್ಷಿಕ ಯೋಜನೆಗಳು, ಪ್ರೇಕ್ಷಣೀಯ ಸ್ಥಳಗಳು, ಸ್ವಾತಂತ್ರ್ಯ ಸಂಗ್ರಾಮ ಮೊದಲಾದ ೨೮ ಪ್ರಕರಣಗಳಿಂದ ಕೂಡಿದ ಸುಮಾರು ೧೨೫೦ ಪುಟಗಳ ಬೃಹತ್ ಗ್ರಂಥವಾಗಿದೆ. ಇದಲ್ಲದೆ ರಾಮಾಯಣದ ವಿಷಯವಾಗಿ 'ರಾಮಾಯಣದ ಸುಭಾಷಿತಗಳು', 'ರಾಮಾಯಣದ ಉಪಮಾದ್ಯಲಂಕಾರಗಳು' ಎಂಬ ಲಘು ಕೃತಿಗಳೂ ಸಿದ್ಧವಾಗಿವೆ. ರಾಮಾಯಣದ ಪಾತ್ರಗಳ ವಿಷಯವಾಗಿ ಇಪ್ಪತ್ತು ಸಾವಿರ ಪಟ್ಟಿಕೆಗಳನ್ನು

ತಯಾರಿಸಿದ್ದೇನೆ. ಈಗ ಐದಾರು ವರ್ಷಗಳಿಂದ ತಿರುಪತಿಯ ಮಾಸಪತ್ರಿಕೆಯಾದ ಸಪ್ತಗಿರಿಯಲ್ಲಿ ನನ್ನ ಸುಮಾರು ೬೦ ಲೇಖನಗಳು ಪ್ರಕಟವಾಗಿವೆ. ಹಾಗೆಯೇ ಕೇಂದ್ರ ಸಚಿವರಾಗಿದ್ದ ಶ್ರೀ ಅವಿನಾಶಿಲಿಂಗಂ ಶೆಟ್ಟಿ ಅವರಿಂದ ಇಂಗ್ಲೀಷ್ ಭಾಷೆಯಲ್ಲಿ ರಚಿತವಾದ 'Educational Philosophy of Swamy Vivekananda' ಎಂಬ ೪೦೦ ಪುಟದ ಗ್ರಂಥವನ್ನು ಸ್ವಾಮಿ ವಿವೇಕಾನಂದರ ಶಿಕ್ಷಣಪತ್ರ ಎಂಬ ಶೀರ್ಷಿಕೆಯಲ್ಲಿ ಭಾಷಾಂತರ ಮಾಡಿದ್ದೇನೆ.

## ಧಾರ್ಮಿಕ ಸೇವೆ

ಧಾರ್ಮಿಕ ಮತ್ತು ಸಾಮಾಜಿಕ ಸೇವಾ ಕ್ಷೇತ್ರದಲ್ಲಿ ನನಗೆ ಬಾಲ್ಯದಿಂದಲೂ ವಿಶೇಷ ಆಸಕ್ತಿ. ತಿ. ನರಸೀಪುರದ ಶ್ರೀ ಗುಂಜಾನರಸಿಂಹ ಸ್ವಾಮಿಯವರ ದೇವಸ್ಥಾನದೊಡನೆ ಸುಮಾರು ೬೦ ವರ್ಷಕಾಲ ಸಂಬಂಧವನ್ನಿಟ್ಟುಕೊಂಡಿದ್ದು ಆ ದೇವಸ್ಥಾನಕ್ಕೆ ಸುಮಾರು ೫೦-೬೦ ಸಾವಿರ ರೂಪಾಯಿಗಳಿಗಿಂತ ಹೆಚ್ಚಿನ ಸೇವೆ ಸಲ್ಲಿಸಿದ್ದೇನೆ. ಈಗಲೂ ವರ್ಷವರ್ಷವೂ ಸಾವಿರಾರು ರೂಪಾಯಿಗಳ ಸೇವೆಯನ್ನು ನಡೆಸುತ್ತಿದ್ದೇನೆ. ಈಚೆಗೆ ಕೈಂಕರ್ಯ ಸಭೆಯನ್ನು ಸ್ಥಾಪಿಸಿ ನಿತ್ಯ ಕೈಂಕರ್ಯಕ್ಕಾಗಿ ಸುಮಾರು ೫೦ ಸಾವಿರ ರೂಪಾಯಿಗಳ ನಿಧಿಯನ್ನು ಶೇಖರಿಸಿದ್ದೇನೆ.

ವಿದ್ಯಾರ್ಥಿಗಳ ಅಭಿವೃದ್ಧಿಯು ನನ್ನ ದೃಷ್ಟಿಯಲ್ಲಿ ಪ್ರಧಾನವಾದ ಕಾರ್ಯ. ಅದಕ್ಕಾಗಿ ಈಗ ಸುಮಾರು ೫೫ ವರ್ಷಗಳ ಹಿಂದೆ ಮೈಸೂರಿನಲ್ಲಿ ಸಭೆಯೊಂದನ್ನು ಸ್ಥಾಪಿಸಿ ಕೆಲವು ಕಾಲ ವಿದ್ಯಾರ್ಥಿಗಳಿಗೆ ಉಚಿತ ಸಂಜೆಯ ತರಗತಿಗಳನ್ನು ನಡೆಸಿ ಅವರ ಪರೀಕ್ಷಾದ್ರವ್ಯಕ್ಕೆ ಅನೇಕ ವರ್ಷಗಳ ಕಾಲ ಸಹಾಯವನ್ನೇರ್ಪಡಿಸಿದ್ದೇನೆ. ೧೯೪೨ರಲ್ಲಿ ಶ್ರೀವೈಷ್ಣವ ವಿದ್ಯಾರ್ಥಿ ನಿಲಯಕ್ಕಾಗಿ ಸರಸ್ವತೀ ಪುರದಲ್ಲಿ ೫೦೦ ರೂಪಾಯಿಗಳಿಗೆ ೩೬೦೦ ಚದುರಗಜ ಅಳತೆಯುಳ್ಳ ನಿವೇಶನವೊಂದನ್ನು ಸಂಪಾದಿಸಿ ಸುಮಾರು ೧ ಲಕ್ಷ ರೂಪಾಯಿ ವೆಚ್ಚದಲ್ಲಿ ನಿವೇಶನವನ್ನು ಸಮಮಾಡಿ ಸುತ್ತ ಗೋಡೆಯನ್ನು ಹಾಕಿಸಿ ಮುಂಭಾಗದ ಕಟ್ಟಡವನ್ನು ಕಟ್ಟಿಸಿದೆ. ಅದು ಅನ್ಯಾಕ್ರಾಂತವಾಗಿ ಉದ್ದಿಷ್ಟ ಕಾರ್ಯವನ್ನು ಮಾಡದಿರುವುದು ಶೋಚನೀಯ. ಈಗ ಕೇವಲ ನಿವೇಶನದ ಬೆಲೆಯೇ ೫ ಲಕ್ಷಕ್ಕೂ ಮೀರುತ್ತದೆ.

## ವ್ಯವಸಾಯ

ನನಗೆ ಜೀವನದಲ್ಲಿ ಇನ್ನೂ ಇತರ ಆಸಕ್ತಿಗಳುಂಟು. ನಾನಿನ್ನು ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ನನ್ನ ತಂದೆಯವರು ಪರಂಧಾಮವನ್ನೈದುದರಿಂದ ಅಂದಿನಿಂದಲೇ ನನ್ನ ಮೇಲೆ ಸಂಸಾರ ನಿರ್ವಹಣೆಯ ಭಾರ ಬಿತ್ತು. ವಿಶ್ವವಿದ್ಯಾನಿಲಯದಲ್ಲಿಯೂ ನನಗೆ ಸರಿಯಾದ ಸ್ಥಾನಮಾನಗಳು ದೊರೆಯಲಿಲ್ಲ. ಅದಕ್ಕಾಗಿ ನಾನು ಬೇರೆಯ ಹವ್ಯಾಸವನ್ನು ಅವಲಂಬಿಸುವುದು ಅನಿವಾರ್ಯವಾಯಿತು. ಹವ್ಯಾಸವೇ ಕೃಷಿ. ನಾನು ನನಗೆ ತಂದೆಯವರಿಂದ ಬಂದ ೧೧-೧೨ ಎಕರೆ ಕೃಷಿ ಜಮೀನನ್ನು ಸರಿಯಾಗಿ ಮಾರ್ಪಡಿಸಿ ವರ್ಷವರ್ಷ ನೂರಾರು ಪಲ್ಲ ಭತ್ತವನ್ನು ಬೆಳೆದಿದ್ದೇನೆ ಮತ್ತು ಬೆಳೆಯುತ್ತಿದ್ದೇನೆ. ಸ್ವಂತವಾಗಿ ಮೈಸೂರಿನಿಂದ ೭-೮ ಮೈಲಿ ದೂರದಲ್ಲಿರುವ ಒಂದು ಹಳ್ಳಿಯಲ್ಲಿ ಸ್ವಲ್ಪ ಸ್ವಲ್ಪವಾಗಿ ೩೪ ಎಕರೆ ಬಂಜರು ಜಮೀನನ್ನು ಬೆಲೆಗೆ ತೆಗೆದುಕೊಂಡು

ಅದನ್ನು ವ್ಯವಸಾಯ ಯೋಗ್ಯವನ್ನಾಗಿ ಮಾಡಿದೆ. ಹಳ್ಳಿಗರನ್ನು ಸ್ನೇಹಿತರನ್ನಾಗಿಸಿ ಅವರಿಗೆ ರಾತ್ರಿ ವಯಸ್ಕರ ಶಾಲೆಯನ್ನು ನಡೆಸಿ ಗ್ರಾಮನೈರ್ಮಲ್ಯದಲ್ಲಿ ಮಾರ್ಗದರ್ಶಕನಾಗಿ ಹೊಸ ಹೊಸ ಬೆಳೆಯನ್ನು ಪರಿಚಯ ಮಾಡಿಸಿ ಕಾಂಪೋಸ್ಟ್ ಗೊಬ್ಬರವನ್ನು ತಯಾರು ಮಾಡುವ ವಿಧಾನವನ್ನು ಕಲಿಸಿ ಊರಿಗೆ ವಿದ್ಯುಚ್ಛಕ್ತಿ ದೀಪವನ್ನು ತರುವುದಕ್ಕೆ ವಿಶೇಷ ಪ್ರಯತ್ನಪಟ್ಟೆ. ನನ್ನ ವಿಷಯದಲ್ಲಿ ಹೇಳುವುದಾದರೆ ವಿವಿಧ ರೀತಿಯ ಬೆಳೆಯನ್ನು ಅದ್ಭುತವಾಗಿ ಬೆಳೆದಿದ್ದೇನೆ. ಒಂದು ವರ್ಷ ೧೦೯ ಪಲ್ಲ ಕಡಲೆಕಾಯಿ, ಮತ್ತೊಂದು ವರ್ಷ ೩೫ ಪಲ್ಲ ರಾಗಿ ಬೇರೊಂಥು ಸಲ ೧೬ ಚೀಲ ಮೆಣಸಿನಕಾಯಿ ಇನ್ನೊಂದು ಸಲ ಒಂದು ನೂರಕ್ಕಿಂತ ಹೆಚ್ಚಿನ ಸಿಹಿಕುಂಬಳಕಾಯಿ ಬೆಳೆದಿದ್ದೇನೆ. ಅವುಗಳಲ್ಲಿ ೨೨ ಅಡಿ ಸುತ್ತಳತೆಯಿದ್ದ ಒಂದಕ್ಕೆ ದಸರಾ ಪ್ರದರ್ಶನದಲ್ಲಿ ಬೆಳ್ಳಿಯ ಪದಕ ಬಂದಿದೆ.

ಹಿಪ್ಪನೇರಳೆ ಬೆಳೆದು ೪೦ ತಟ್ಟಿಯವರೆಗೆ ಹುಳು ಸಾಕಿದ್ದೇನೆ. ಬಾಳೆ ಪರಂಗಿ ಟೊಮೆಟೊಗಳನ್ನು ಹೇರಳವಾಗಿ ಬೆಳೆದಿದ್ದೇನೆ. ತೆಂಗು ಮಾವಿನ ತೋಟಗಳನ್ನು ಸಿದ್ಧಪಡಿಸಿದ್ದೇನೆ. ಅವು ಅದ್ಯಾಪಿ ಫಲವನ್ನು ಕೊಡುತ್ತಿವೆ. ಈಚೆಗೆ ಈ ಜಮೀನುಗಳಲ್ಲಿ ಅರ್ಧಕ್ಕಿಂತ ಹೆಚ್ಚಿನ ಭಾಗವನ್ನು ಮಾರಿಬಿಟ್ಟೆ. ನನ್ನ ಜೀವನದಲ್ಲಿ ಕೃಷಿಯ ಒಂದು ಪ್ರಧಾನವಾದ ಉಪವೃತ್ತಿಯೆಂದು ಹೇಳಬಹುದು.

* ನನ್ನ ಈ ದೀರ್ಘ ಜೀವನದ ಅನುಭವದ ಆಧಾರದ ಮೇಲೆ ನಾನು ತಿಳಿಸಬಹುದಾದ ಸಂದೇಶ ಇಷ್ಟೆ. 'ಅಹಂ ಕರೋಮೀತಿ ವೃಥಾಭಿಮಾನಃ - ಪುಣ್ಯೈ ರ್ಯಶೋಲಭ್ಯತೇ -"ಬಂದುದನು ಕೊಂಡುಂಡು ಬಾಳ್ವವನೇ ಜಾಣನ್ - ದೈವಮೊಲ್ಪೊಡೆ ಸಲಹದೆಯೆ ಮಾಣನ್.'



## *O UNCLE! MY DEAR UNCLE !*

***Narasimhan A.L.***

I ventured into this mighty task of characterising a great personality, knowing full well my inadequecies and limitations with the sole purpose of paying my grateful respects to a person who was an institution by himself. Men are identified and adulated for certain qualities, but this person was an allrounder in every sense of the word. A scholar, dramatist, wrestler, cook, philanthropist, priest and above all a teacher par excellence. It is this combination of unique qualities that make people adore and adulate a rare jem of a personality. Many people are aware of the qualities of this awesome character, but I would only like to recall some rare instances which highlight the uniqueness of this multifaceted personality.

Basically, my dear uncle was a desciplinarian to the core. He not only used to get up at four in the morning and start his physical excersices but also made us, we youngsters in our teens to get up and unscrew ourselves. He not only used to sit through the excercising activities but there was often a word of encouragement and challenge. One such challenge offered by him, after getting exhausted with daily routine fetched this writer one kg of almond as the coveted prize or award if one can call it. This strict routine of his enabled him to cycle a distance of 10 to 15 kms

even at the ripe age of 70 years. The true quality of a wreslter in him manifested itself in his other quality as a dramatist in the roles he used to play such as Duryodhana and Bhima in "**Gada yuddha**", a play by the great poet Ranna.

An unique incident shows his commitment to the work. The above play was scheduled to be played one evening in the Yuvaraja's College auditorium. He had taken enormous pains to see that the play was a success and had put his heart and soul in it.That evening he played the role of Duryodhana to perfection and to the jubiliation of the packed audience. Rarely people knew that he had fulfilled his commitment risking the life of his own wife (my aunt) who was in the death bed.

He was a philanthropist to the core. While he used to help people, particularly students, he had the uncanny knack of finding persons/families who could help the deserving and the needy. He helped many of his students by arranging "**a meal a house**" on every day of the week.Many a student was a recipient of his college fees from him. In fact one of his significant achievements in this field was the students' hostel he built in Mysore with generous donations from like minded people. It is situated in an important locality like Saraswathipuram and is a real boon for the many not very previleged students. The enormous efforts put in by Dr. Anantharangachar does reflect aptly in the structure that stands today.

He was a great cook, he could manage any function of any magnitude, though not being a professional. He almost single handedly used to cook and feed a mass of people at the car festival of **"Shri Gunja Narasimhaswamy"** at T Narasipur. The way he used to fetch water from the Cauvery river for cooking, going down 25 steps was a real challenge for many youngsters. He loved serving people and hence was ready to face any challenge. The various improvements he effected for the restoration of the temple, which was in a real bad shape are truly reflective of

the man's concern for the society and the beings around.

He had abundant love and care for near and the dear He was ready to undertake any job, mind you, there was no **"Dignity of labour"** and he lived true to the last alphabet in it. When there was a crisis and dearth for men to do the job, he even undertook to sweep the floor and wash the utensils. This one is too true to believe. The marriage of one of our close relation's daughter had been fixed. On the previous day of the marriage and that too at the last hour the appointed cook played traunt. The bride's father was a nervous wreck. Seeing his plight, this man went and told him "Don't worry, give me 2 to 3 helping hands and I will cook what all is required".One could not believe that he prepared starting from Laddoos and other savouries, the entire menu for both the days of the marriage with very little assistance. He was a ready and voluntary pall-bearer whenever there was a demise in the family of our relatives. Thus he has carried innumerable corpses without ever flinching. That was the man of courage, commitment and concern.

He was a teacher who was loved by one and all. His classes never used to be dull though the class hour was at four in the afternoon. It not only used to attract students of his section, but also students from other sections too resulting in crying foul by other lecturers - "**This Anantharangachar has stolen my students**". Lucky it was only boy students, since Yuvaraja's was a boys' college, he was not accused of stealing girl students. In fact he stole, I mean attracted a few pretty good girls from other colleges to his special classes conducted on Sundays and Holidays. The dramatist in him was in full bloom during his lecture classes and that too when he taught the dramas.The Sanskrit scholar he was, also helped him in making the lecture classes more envigorating rather than being dull and drab.

He was a man for all seasons. He wanted to and did enjoy

life. He used to invite close friends and relatives on many festive occasions notably the "**Krishna Janmashtami**" and share the joy with them. In fact we were eagerly waiting for the "Moonlight dinner" on the terrace of his house during the Sharath Kala(October and November),since the occasion was a great fun. All sorts of sweet dishes, savouries, munchings were there for the taking, capped by the mouth-watering curd rice, as white as the full moon in a clear sky in the Sharath Kala. Also he was very active in bathing us on important festivals such as Ugadi and Deepavali. He used to bathe us first in oil and then in hot, very hot water so that the oil would find its way out. He used to apply oil in such a vigorous manner, that our limbs would start aching by his thumbing on them. But now we realise that our limbs are even today very strong only because of the oil bath we had under him those days. This reflects the desire in him to care and help in family circles.

His scholastic achievements are too well known and hence I am not going to dwell on them. They are generally very well received, but there could be an odd discordant note. None of them will matter since in an ocean there could be always be a whale, the ocean engulfs everything.

He lived almost a full life, not wasting a single moment of it. One could see him at his working desk at two in the morning, even a couple of days before his death. He had a penchant for writing and publishing, which he pursued till the end.

Rarely we come across such a towering personality of great character, commitment and love for one and all in every walk of life.

***May his tribe increase....***

***I salute the Master...***



## ಲೇಖನ-೧

# ಪಂಪ ಮಹಾಕವಿ

ಕನ್ನಡ ಸಾಹಿತ್ಯ ದೃಷ್ಟಿಯಿಂದ ೯-೧೦ನೆಯ ಶತಮಾನಗಳು ಬಹು ಪ್ರಶಂಸನೀಯವಾದುವುಗಳು. ಈ ಶತಮಾನಗಳ ಹಿಂದೆ ಕನ್ನಡ ಸಾಹಿತ್ಯವು ಯಾವುದೋ ಒಂದು ತೆರನಾಗಿದ್ದಿತು. ರಾಜ್ಯದ ಆಡಳಿತಗಳ ಸಂಘಟನೆಯಿಂದಲೂ ಸಾಮಾಜಿಕ ಜೀವನದ ಚಳವಳಿಗಳಿಂದಲೂ ಸಾಹಿತ್ಯದಲ್ಲಿ ಕ್ರಮೇಣ ಬದಲಾವಣೆಗಳು ತೋರಿ ಬರತೊಡಗಿದುವು. ಒಂದು ಕಾಲವು ಇನ್ನೊಂದು ಕಾಲವಾಗಿ ಪರಿವರ್ತನೆಯಾಗುವಾಗ ಇವೆರಡು ಕಾಲಗಳ ಸಂಘಟ್ಟನೆಯಿಂದಲೂ ಪರಸ್ಪರ ಸಮಾಗಮನದಿಂದಲೂ ಸಮಾಜದಲ್ಲಿ ಅನೇಕ ಹೊಸ ವಿಚಾರಗಳು ತಲೆದೋರಿ ತತ್ಫಲವಾಗಿ ಕೃತಿಗಳು ಹೊರಬಿದ್ದು ವ್ಯವಹಾರದಲ್ಲಿ ಬರುವುವು. ಆದರೆ ಈ ಎರಡು ಕಾಲಗಳ ಸಂಧಿ ಸಮಯದಲ್ಲಿ ಸಿಕ್ಕಿಕೊಂಡಿರುವ ಕಾಲದ ಪರಿಸ್ಥಿತಿಯು ಬಹು ವಿಲಕ್ಷಣವಾಗಿರುವುದು; ಜನಾಂಗವು ಪೂರ್ವಕಾಲದ ನಡೆವಳಿಕೆಗಳನ್ನು ಒಂದೇ ಸಲ ಬಿಟ್ಟುಬಿಡುವುದಿಲ್ಲ; ಇದಕ್ಕೆ ಹೆಚ್ಚು ಅವಧಿ ಬೇಕಾಗುವುದು. ಈ ಮಧ್ಯೆ ಪೂರ್ವದ ನಡತೆಗಳನ್ನು ಬಿಡದಂತೆಯೂ ಹೊಸ ಚಳವಳಿಗಳನ್ನು ಸಂಪೂರ್ಣವಾಗಿ ನಿರಾಕರಿಸದಂತೆಯೂ ಹಾಗೂ ಹೀಗೂ ಇರತಕ್ಕುದು ಸ್ವಭಾವ. ಕ್ರಮೇಣ, ಹಳೆಯ ಚಾಳಿಗಳೆಲ್ಲವೂ ಯಾರಿಗೂ ತಿಳಿಯದಂತೆ ಮರೆಯಾಗುತ್ತ ಬಂದು ಮಾಯವಾಗಿ ನವೀನ ಪದ್ಧತಿಗಳು ಸಮಾಜದಲ್ಲಿ ಊರಿಕೊಳ್ಳುವುವು. ಆಮೇಲೆ ಇವುಗಳಿಗೇ ಸಂಪೂರ್ಣ ಆಶ್ರಯವು ದೊರೆತು ಸರ್ವತೋಮುಖವಾಗಿ ತತ್ಕಾಲದ ಪ್ರಚಲಿತ ಪದ್ಧತಿಗಳಾಗಿ ಪರಿಣಮಿಸುವುವು. ಆಗ ಅವುಗಳನ್ನು ತಳ್ಳುವುದು ಕಷ್ಟವಾಗುವುದು. ಕರ್ಣಾಟಕದ ಹತ್ತನೆಯ ಶತಮಾನದ ಸ್ಥಿತಿಯೂ ಹೀಗೆಯೇ. ೯-೧೦ನೆಯ ಶತಮಾನಗಳ ಹಿಂದೆ ಕರ್ಣಾಟಕ ಸಾಹಿತ್ಯವೂ ರಾಜ್ಯವೂ ಹೇಗಿದ್ದಿತೆಂಬುದನ್ನು ಖಂಡಿತವಾಗಿ ನಿರ್ಧರಿಸಲು ಸಾಕಾದ ಸಲಕರಣೆಗಳು ಇನ್ನೂ ದೊರೆತಿಲ್ಲ. ಲಬ್ಧವಾದ ಕೆಲವು ಗ್ರಂಥಗಳ ಸಹಾಯದಿಂದಲೂ ಶಾಸನಗಳ ಸಹಾಯದಿಂದಲೂ ಹೇಗಿದ್ದಿತೆಂಬುದನ್ನು ಊಹಿಸಲು ಅವಕಾಶವಿದೆ. ಜೈನರು ದಕ್ಷಿಣಕ್ಕೆ ಬರುವ ಮೊದಲು ಕರ್ಣಾಟಕದಲ್ಲಿ ದ್ರಾವಿಡ ಸಂಸ್ಕೃತಿಯು ನೆಲೆಗೊಂಡಿದ್ದು ಕರ್ಣಾಟಕಕ್ಕೆ ಸಾಹಿತ್ಯವೊಂದಿದ್ದಿರಬೇಕು. ಆದರೆ ಆಗಿನ ಸಾಹಿತ್ಯ ರೀತಿಯಲ್ಲಿ ರಚಿತವಾದ ಗ್ರಂಥಗಳು ಯಾವುವೂ ಉಪಲಬ್ಧವಾಗಿಲ್ಲ. ಜೈನರು ಕರ್ಣಾಟಕದಲ್ಲಿ ಕಾಲೂರಿದ ಮೇಲೆ ಅವರ ಪ್ರಾಬಲ್ಯವು

ಕ್ರಮವಾಗಿ ಹೆಚ್ಚುತ್ತಾ ಹೋಗಿ ಕೊನೆಗೆ ಕರ್ಣಾಟಕವು ಅವರ ಒತ್ತಂಬಕ್ಕೊಳಪಟ್ಟು, ತನ್ನ ನಿಜವಾದ ದ್ರಾವಿಡ ಸಂಸ್ಕೃತಿಯನ್ನು ತ್ಯಜಿಸಿರಬೇಕೆಂದು ಹೇಳಬಹುದು. ಮತಾಭಿಮಾನಿಗಳಾದ ಜೈನರು ಕರ್ಣಾಟಕದಲ್ಲಿ ತಮಗಿಂತ ಮುಂಚೆ ಇದ್ದ ಗ್ರಂಥಗಳನ್ನು ಇಲ್ಲದ ಹಾಗೆ ಮಾಡಿದುದರಿಂದಲೋ ಅಥವಾ ಸರಿಯಾಗಿ ರಕ್ಷಿಸದೆ ಇದ್ದುದರಿಂದಲೋ ಆಗಿನ ಗ್ರಂಥಗಳೆಲ್ಲವೂ ನಾಶವಾಗಿರಬೇಕು. ಆದರೆ ಒಂದು ವಿಷಯವನ್ನು ಮಾತ್ರ ನಾವು ಚೆನ್ನಾಗಿ ಗಮನದಲ್ಲಿಟ್ಟಿರಬೇಕು. ಅದುವರೆಗಿದ್ದ ಗ್ರಂಥಗಳಲ್ಲಿ ಅನಾದರಣೆಯನ್ನು ತೋರಿಸಿದರೂ ಜೈನರು ಕನ್ನಡ ಸಾಹಿತ್ಯದಲ್ಲಿ ಅನಾದರಣೆಯನ್ನು ತೋರಿಸಲಿಲ್ಲ. ಕನ್ನಡ ಸಾಹಿತ್ಯವನ್ನು ಅವರು ಮೆಚ್ಚಿ, ಅದನ್ನು ಚೆನ್ನಾಗಿ ವ್ಯಾಸಂಗಮಾಡಿ ಅದರಲ್ಲಿ ಪಾಂಡಿತ್ಯವನ್ನು ಪಡೆದು ತನ್ಮೂಲಕವಾಗಿ ತಮ್ಮ ಮತ ತತ್ತ್ವಗಳನ್ನು ಜನಗಳಲ್ಲಿ ಬೋಧಿಸತೊಡಗಿದರು; ಕರ್ಣಾಟಕ ದ್ರಾವಿಡ ಸಂಸ್ಕೃತಿಯನ್ನು ಮಾರ್ಪಡಿಸಿ ತತ್ಸ್ಥಾನದಲ್ಲಿ ತಮ್ಮದನ್ನು ಊರಿದರು. ಹೀಗೆ ಮಾಡುವಾಗ ಪ್ರಾರಂಭದಲ್ಲಿ ಅವರಿಗೆ ಕೆಲವು ತೊಂದರೆಗಳು ತೋರಿಬಂದಿರಬೇಕು. ಅದಕ್ಕಾಗಿ ಮೊದಲು ಅವರು ಸಂಸ್ಕೃತ ಭಾಷೆಯೇ ಸರಿಯಾದುದೆಂದು ಬಗೆದು, ಆ ಮೂಲಕವಾಗಿಯೇ ಮತ ತತ್ತ್ವಗಳನ್ನು ಪಂಡಿತ ಸಮಾಜದಲ್ಲಿ ಹರಡುತ್ತ, ಕೊನೆಗೆ ಕನ್ನಡ ಭಾಷೆಯನ್ನು ಜನಸಾಮಾನ್ಯಕ್ಕಾಗಿ ಉಪಯೋಗಿಸಿಕೊಂಡಿರಬೇಕು. ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ ಮೊದಲಾದವರು ಸಂಸ್ಕೃತ ಭಾಷೆಯಲ್ಲಿಯೇ ಗ್ರಂಥಗಳನ್ನು ರಚಿಸಿ ತಮ್ಮ ಪ್ರಭಾವವನ್ನು ನೆಲೆಗೊಳಿಸಿದಂತೆ ಕಾಣುತ್ತದೆ. ಅವರಿಂದ ಮುಂದಿನ ಕವಿಗಳು ಸಂಸ್ಕೃತ ಕನ್ನಡ ಎರಡು ಭಾಷೆಗಳನ್ನೂ ಮತಪ್ರಚಾರಕ್ಕಾಗಿ ಉಪಯೋಗಿಸಿಕೊಂಡು ಕರ್ಣಾಟಕವನ್ನು ಸ್ವಾಧೀನಪಡಿಸಿಕೊಂಡರು. ಒಂಬತ್ತನೆಯ ಶತಮಾನದಲ್ಲಿದ್ದ ನೃಪತುಂಗನು ಕನ್ನಡದಲ್ಲಿ ಅನೇಕ ಗದ್ಯ ಪದ್ಯಾತ್ಮಕ ಕಾವ್ಯಗಳು ತನ್ನ ಕಾಲದಲ್ಲಿದ್ದುವೆಂದು ಹೇಳಿ, ಕೆಲವು ಕವಿಗಳ ಹೆಸರನ್ನೂ ಸೂಚಿಸಿರುವನು. ಆದರೆ ಆ ಕವಿಗಳ ಕಾವ್ಯಗಳಲ್ಲಿ ಯಾವುವೂ ಇನ್ನೂ ನಮಗೆ ದೊರೆತಿಲ್ಲ.

ನೃಪತುಂಗನ ಕಾಲಕ್ಕೆ ಕನ್ನಡ ಭಾಷೆಯಲ್ಲಿ ಒಂದು ಹೊಸ ಪರಿವರ್ತನೆಯು ತಲೆದೋರುತ್ತಿದ್ದಿತು. ಕಾವ್ಯಗಳಾದರೋ ಹೊಸ ರೀತಿಯಲ್ಲಿಯೇ ರಚಿತವಾಗುತ್ತಿದ್ದುವು. ಕನ್ನಡದಲ್ಲಿ ಕಾವ್ಯಗಳನ್ನು ಬರೆಯುವ ಕವಿಗಳು ಸಂಸ್ಕೃತ ಭಾಷೆಯಲ್ಲಿ ತಮಗಿದ್ದ ಹೆಚ್ಚಾದ ಪಾಂಡಿತ್ಯದಿಂದ ಕನ್ನಡ ಭಾಷೆಯಲ್ಲಿ ಸಂಸ್ಕೃತ ಸಾಹಿತ್ಯವನ್ನು ತುಂಬತೊಡಗಿದರು. ಈ ಭರದಲ್ಲಿ ಕನ್ನಡ ನುಡಿಯ ಮರ್ಯಾದೆಯ ಗಡಿಯು ಮೀರಿ ಕನ್ನಡ ಕಾವ್ಯಗಳೆಲ್ಲ ಬರಿ ಸಂಸ್ಕೃತಮಯವಾಗುವುದಕ್ಕೆ ಪ್ರಾರಂಭವಾದುವು. ಇದನ್ನು ನೋಡಿ ನೃಪತುಂಗನು ಬಹಳ ವ್ಯಸನಪಟ್ಟು ಅದನ್ನು ಸರಿಪಡಿಸುವುದಕ್ಕಾಗಿ ಕನ್ನಡದಲ್ಲಿ ಸಂಸ್ಕೃತವನ್ನು ಎಷ್ಟರಮಟ್ಟಿಗೆ ಸೇರಿಸಬಹುದು ಮತ್ತು ಬೆರಸುವಾಗ ಯಾವ ನಿಯಮಗಳನ್ನನುಸರಿಸಬೇಕು - ಇವೇ ಮೊದಲಾದ ನಿಯಮಗಳನ್ನುಳ್ಳ 'ಕವಿರಾಜಮಾರ್ಗ'ವೆಂಬ ಲಕ್ಷಣ ಗ್ರಂಥವೊಂದನ್ನು ರಚಿಸಿದನು. ಕನ್ನಡ ಲಕ್ಷಣ ಗ್ರಂಥಗಳಲ್ಲಿ ಕವಿರಾಜಮಾರ್ಗವೇ ಮೊದಲನೆಯದೆಂದು ಹೇಳಬಹುದು.

ಅಲ್ಲದೆ, ನೃಪತುಂಗನ ಕಾಲಕ್ಕೆ ಕನ್ನಡ ಭಾಷೆಯೇ ಬಹಳ ಮಟ್ಟಿಗೆ ಬದಲಾಯಿಸಿದಿತು. ಹಳಗನ್ನಡದ ಬಿಗಿಯು ಸಡಿಲುತ್ತ ಬಂದು ಭಾಷೆಯಲ್ಲಿ ಒಂದು ಬಗೆಯ ಮಾರ್ದವವೂ ಸೌಲಭ್ಯವೂ ಲಾಲಿತ್ಯವೂ ತಲೆದೋರುತ್ತಿದ್ದುವು. ನೃಪತುಂಗನು ತನ್ನ ಗ್ರಂಥವನ್ನು ರಚಿಸಿರುವುದೂ ಮೃದುವಾದ, ಸರಳವಾದ ಈ 'ತಿರುಳ್ಗನ್ನಡ' ಭಾಷೆಯಲ್ಲಿಯೇ.

ಹಿಂದಿನ ಗ್ರಂಥಗಳ ಆಧಾರದ ಮೇಲೆ ನೃಪತುಂಗನು ಬರೆದ ಲಕ್ಷಣಗ್ರಂಥವನ್ನನುಸರಿಸಿ ಆ ಕಾಲದಲ್ಲಿ ಹೊಸ ಮಾದರಿಯ ಕಾವ್ಯಗಳು ಹೊರಬರತೊಡಗಿರಬೇಕು. ಕರ್ಣಾಟಕದಲ್ಲಿ ಎಲ್ಲೆಲ್ಲಿಯೂ ಸಾಹಿತ್ಯಾಭಿಮಾನವು ತಲೆದೋರಿ ಅನೇಕ ರಾಜರು ಕವಿಗಳಿಗೆ ಪೋಷಕರಾದುದಲ್ಲದೆ ಸ್ವಯಂ ಗ್ರಂಥಕರ್ತೃಗಳೂ ಆದರು. ಉದಾಹರಣೆಗೆ, ಒಂದನೆಯ ಗುಣವರ್ಮನನ್ನು ನೋಡಬಹುದು. ರಾಜಾಶ್ರಯವು ದೊರೆತುದನ್ನು ಕವಿಗಳು ಸದುಪಯೋಗಪಡಿಸಿಕೊಂಡು ಅವರ ಆಶ್ರಯದಲ್ಲಿ ಕಾವ್ಯಗಳನ್ನು ರಚಿಸಿ ಪೋಷಕರ ಹೆಸರನ್ನು ಚಿರಸ್ಥಾಯಿಯಾಗಿ ಮಾಡತೊಡಗಿದರು. ಹೀಗೆ ಮಾಡಿದವರಲ್ಲಿ, ತಮ್ಮ ಕಾವ್ಯಗಳ ಮೂಲಕ ನಮಗೆ ಪರಿಚಿತರಾದವರಲ್ಲಿ, ಪಂಪನೇ ಮೊದಲನೆಯವನು.

ಸಂಸ್ಕೃತ ಸಾಹಿತ್ಯದಲ್ಲಿ ಕಾಳಿದಾಸನು ಹೇಗೋ ಕನ್ನಡ ಸಾಹಿತ್ಯದಲ್ಲಿ ಪಂಪನು ಹಾಗೆ. ಈಗ ನಮಗೆ ತಿಳಿದಿರುವ ಕನ್ನಡ ಕವಿಗಳಲ್ಲೆಲ್ಲ ಪಂಪನೇ ಮೊದಲನೆಯವನು ಮತ್ತು ಉತ್ತಮನು. ಇವನು ಆಗ ಪ್ರಸಿದ್ಧವಾಗಿ ಬಳಕೆಯಲ್ಲಿದ್ದ ಚಂಪೂರೂಪದಲ್ಲಿ ಎರಡು ಗ್ರಂಥಗಳನ್ನು ರಚಿಸಿದನು. ಒಂದು ಧಾರ್ಮಿಕ ಗ್ರಂಥ, ಇನ್ನೊಂದು ಲೌಕಿಕ ಗ್ರಂಥ. ತನ್ನ ಧಾರ್ಮಿಕ ಗ್ರಂಥದಲ್ಲಿಯೂ ಕೂಡ ಇವನು ತನ್ನ ತರುವಾಯ ಬಂದವರಂತೆ ವಿಶೇಷವಾದ ಮತ ತತ್ತ್ವಗಳ ಗೊಂದಲದಲ್ಲಿ ಸಿಕ್ಕು ಬಿದ್ದಿಲ್ಲ; ಆವಶ್ಯಕವಾದಷ್ಟನ್ನು ಮಾತ್ರ ತಿಳಿಸಿ ಆ ಧಾರ್ಮಿಕ ಗ್ರಂಥದಲ್ಲಿಯೂ "ಆದಿ ಪುರಾಣದೊಳಱಿವುದು ಕಾವ್ಯಧರ್ಮಮಂ ಧರ್ಮಮುಮಂ" ಎಂದು ತಾನೇ ಹೇಳಿರುವಂತೆ, ಕಾವ್ಯದ ರಸಾಸ್ವಾದನೆಗೆ ಅವಕಾಶ ಮಾಡಿಕೊಟ್ಟಿರುವನು. ಜೈನನಲ್ಲದವನೂ ಕೂಡ ಈ ಗ್ರಂಥವನ್ನು ಓದಿದರೆ, ಕೆಲವೆಡೆಗಳಲ್ಲಿ ವಿನಾ, ಉಳಿದ ಕಡೆಗಳಲ್ಲಿ ಕಾವ್ಯದ ಸ್ವಾರಸ್ಯವನ್ನು ಸವಿಯಬಹುದು. ಇಂತಹ ಧಾರ್ಮಿಕ ಗ್ರಂಥದಲ್ಲೂ ಈ ಬಗೆಯಾದ ರಸವನ್ನು ತುಂಬುವುದು ಪಂಪನಂತಹ ಕವಿಗಲ್ಲದೆ ಇತರರಿಗೆ ಸಾಧ್ಯವಿಲ್ಲ. ಇದಕ್ಕಿಂತಲೂ ಹೆಚ್ಚಿನ ಪ್ರತಿಭೆಯನ್ನೂ ಪ್ರೌಢಿಮೆಯನ್ನೂ ಪಂಪನು ತೋರಿಸಿರುವುದು ಅವನು ರಚಿಸಿರುವ ಭಾರತದಲ್ಲಿ. ಅಲ್ಲಿ ಅವನು ಎಲ್ಲರನ್ನೂ ಮೋಹಗೊಳಿಸಿ ತನ್ನ ತರುವಾಯ ಬಂದ ಕವಿಗಳೆಲ್ಲರೂ ತನ್ನ ಮಾರ್ಗವನ್ನೇ ಅನುಸರಿಸುವಂತೆ ಯಾವುದೋ ಒಂದು ವ್ಯಾಮೋಹಾಸ್ತ್ರವನ್ನು ಹೂಡಿರುವುದು ಬಹಳ ಶ್ಲಾಘನೀಯವಾಗಿದೆ. ಆದುದರಿಂದ ಇವನ ಧಾರ್ಮಿಕ ಗ್ರಂಥವಾದ ಆದಿ ಪುರಾಣವನ್ನು ವಿಮರ್ಶೆ ಮಾಡುವ ಮೊದಲು ಭಾರತದ ಕಡೆ ಸ್ವಲ್ಪ ಗಮನಿಸೋಣ.

ಪಂಪನ ಭಾರತಕ್ಕೆ ವ್ಯಾಸ ಮುನಿಯ ಸಂಸ್ಕೃತ ಮಹಾಭಾರತವೇ ಮೂಲವೆಂಬುದು ಅವನೇ ಹೇಳಿಕೊಂಡಿರುವ "ವ್ಯಾಸ ಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀಸುವೆಂ"

ಎಂಬ ವಾಕ್ಯದಿಂದಲೇ ಪ್ರತಿಪಾದಿತವಾದರೂ ಪಂಪನ ಕಾಲಕ್ಕೆ ಹಿಂದೆ ಕೆಲವು ಕನ್ನಡ ಭಾರತಗಳಿದ್ದಂತೆ ಊಹಿಸಬಹುದಾಗಿದೆ. ನಾಗವರ್ಮನ 'ಕಾವ್ಯಾವಲೋಕನ'ದಲ್ಲಿ ಲಕ್ಷ್ಯವಾಗಿ ಕೊಟ್ಟಿರುವ ಕೆಲವು ಪದ್ಯಗಳು ಯಾವುದೋ ಕನ್ನಡ ಭಾರತದಿಂದ ಉದ್ಧರಿಸಲ್ಪಟ್ಟುವಾಗಿ ಕಾಣುತ್ತದೆ. ಅಲ್ಲದೆ ಪಂಪನೇ ತನ್ನ ಭಾರತದಲ್ಲಿ "ಮುಂ ಸಮಸ್ತ ಭಾರತಮನಪೂರ್ವಮಾಗೆ ಪೇಲ್ದ ಕವೀಶ್ವರರಿಲ್ಲ" ಎಂದು ಹೇಳಿ ತನ್ನ ಭಾರತವನ್ನು "ಸಮಸ್ತ ಭಾರತಂ" ಎಂದು ಹೇಳಿಕೊಂಡಿರುವುದರಿಂದ ಇವನಿಗೆ ಹಿಂದೆ ಕೆಲವರು ಭಾರತದ ಕೆಲ ಕೆಲ ಭಾಗಗಳನ್ನು ಕನ್ನಡದಲ್ಲಿ ರಚಿಸಿದ್ದರೆಂದೂ ಸಂಪೂರ್ಣವಾಗಿ ಭಾರತವನ್ನು ಬರೆದವರಲ್ಲಿ ಇವನೇ ಮೊದಲಿಗನೆಂದೂ ಊಹಿಸಬಹುದಾಗಿದೆ. "ಕವಿ ವ್ಯಾಸನೆಂಬ ಗರ್ವಮೆನಗಿಲ್ಲ" ಎಂದು ಪಂಪನು ಹೇಳುವುದರಿಂದ ಇವನಿಗೆ ಹಿಂದೆ ಕವಿ ವ್ಯಾಸನೆಂಬವನೊಬ್ಬನಿದ್ದು ಭಾರತವನ್ನು ರಚಿಸಿರಬಹುದು. ಆದರೂ ನಮಗೆ ದೊರೆತಿರುವ ಪುರಾತನ ಸಮಗ್ರ ಕನ್ನಡ ಭಾರತವು 'ವಿಕ್ರಮಾರ್ಜುನ ವಿಜಯ'ವೊಂದೇ.

ಕನ್ನಡ ಕವಿ ಪಿತಾಮಹನಾದ ಪಂಪನು ತನ್ನ ಪೋಷಕನಾದ ಅರಿಕೇಸರಿಯ ಕೀರ್ತಿಯನ್ನು ಸ್ಥಿರಪಡಿಸುವುದಕ್ಕಾಗಿಯೂ "ಸಮಸ್ತ ಭಾರತಮನಪೂರ್ವಮಾಗೆ ........... ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇಲ್ವೊಡೆ ಪಂಪನೆ ಪೇಲ್ಗುಂ" ಎಂದು ಒತ್ತಾಯ ಮಾಡಿದ ಪಂಡಿತರನ್ನು ಸಂತೋಷಪಡಿಸುವುದಕ್ಕಾಗಿಯೂ ಭಾರತ ಕಥಾವಸ್ತುವನ್ನು ಆ ಕಾಲದ ವಾತಾವರಣಕ್ಕೆ ಒಪ್ಪುವಂತೆ ವೀರರಸದಲ್ಲಿ ಎರಕ ಹೊಯ್ದು ಕಾವ್ಯಕ್ಕೆ ತಕ್ಕಂತೆ ಕಥೆಯನ್ನು ಮಾರ್ಪಡಿಸಿ ಕನ್ನಡ ಸಾಹಿತ್ಯ ದೇವಿಗೆ "ವಿಕ್ರಮಾರ್ಜುನ ವಿಜಯ"ವೆಂಬ ಒಂದು ರತ್ನಕಂಠಿಯನ್ನು ನಿರ್ಮಿಸಿದನು. ಹೀಗೆ ಅರಿಕೇಸರಿಯ ಕೀರ್ತಿಯನ್ನು ಬೆಳಗುವುದಕ್ಕೆ ಹೊರಟಿದ್ದುದರಿಂದಲೂ "ಬೆಳಗುವೆನಿಲ್ಲಿ ಲೌಕಿಕಮಂ" ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದುದರಿಂದಲೂ ಪಂಪನು ತನ್ನ ಭಾರತವನ್ನು ಮೂಲಭಾರತದ ಕಥೆಯಂತೆಯೇ ನಡೆಯಿಸಲು ಸಾಧ್ಯವಿಲ್ಲದೆ ತನ್ನ ಪ್ರತಿಭಾ ಶಕ್ತಿಯಿಂದ ಕಥೆಯನ್ನು ತಗ್ಗಿಸಿಯೂ ಹಿಗ್ಗಿಸಿಯೂ ಕೆಲವೆಡೆಯಲ್ಲಿ ಅಜ್ಞಾತವಾಗಿ ಜೈನ ಸಂಪ್ರದಾಯಕ್ಕೆಳೆದೂ ಇರುವನು. ಹೀಗೆ ಮಾಡುವುದರಲ್ಲಿ ವಿಸ್ಮರಣೆಯಿಂದ ಕೆಲವೆಡೆಗಳಲ್ಲಿ ತೊಡಕಿಗೆ ಸಿಕ್ಕಿ ಮುಗ್ಗರಿಸಿರುವನು; ಮತ್ತೆ ಕೆಲವೆಡೆಗಳಲ್ಲಿ ಮೂಲಭಾರತದ ಕಥೆಗೆ ಮತ್ತಷ್ಟು ಮಿರುಗು ಕೊಟ್ಟು ಹೊಳೆಯುವಂತೆ ಮಾಡಿರುವನು. ಅವುಗಳಲ್ಲಿ ಕೆಲವನ್ನು ಮುಂದೆ ನೋಡಬಹುದು.

ಪಂಪನ ಪ್ರಕಾರ ಭಾರತದ ಕಥಾನಾಯಕನು ಅರ್ಜುನನು. ಇವನು ಚಾಳುಕ್ಯ ಚಕ್ರವರ್ತಿಯಾದ ಅರಿಕೇಸರಿಗೆ ಹೋಲಿಸಲ್ಪಟ್ಟಿರುವನು. ಇವನ ಸಾಹಸಗಳೆಲ್ಲ ಅರಿಕೇಸರಿಯವೇ. ಈ ಸಮಯದಲ್ಲಿ ಪಂಪನು ಅರಿಕೇಸರಿಯನ್ನು ಅರ್ಜುನನ ಅಪರಾವತಾರವೆಂದು ಎಣಿಸಿರುವನೆಂದು ಹೇಳಬಹುದು. ಭಾರತಯುದ್ಧದಲ್ಲಿ ಯಮನಂದನನು ಕರ್ಣನಿಂದ ತಾಡಿತನಾಗಿ ಸೋತು ತನ್ನ ಪಾಳೆಯಕ್ಕೆ ಹಿಂದಿರುಗಿ ಬಂದು ತನಗಾದ ಪರಾಭವಕ್ಕೇವಯಿಸಿ ಅರ್ಜುನನ ಮೇಲೆ ಕೋಪಿಸಿಕೊಳ್ಳುವನು. ಆಗ ಅರ್ಜುನನು:-

ನರಸಿಂಗಂಗಂ ಜಾಕ ।
ಬ್ಬರಸಿಗಮಳವೊದವೆ ಪುಟ್ಟಿ ಪುಟ್ಟಿಯುಮರಿಕೇ ॥
ಸರಿಯೆನೆ ನೆಗಟ್ಬುಮರಾತಿಯ ।
ಸರಿ ದೊರೆಗಂ ಬಂದೆನಪ್ಪೊಡಾಗಳ್ ನಗಿರೇ ॥

ಎಂದು ಹೇಳುವುದನ್ನು ನೋಡಿದರೆ, ಪಂಪನು ಅರ್ಜುನನಿಗೂ ಅರಿಕೇಸರಿಗೂ ಅಭೇದವನ್ನು ಕಲ್ಪಿಸಿರುವುದು ವಿಶದವಾಗುವುದು. ಅಲ್ಲದೆ, ಕುಂತಿಯೂ ಪಾಂಡುವೂ ಅರ್ಜುನನಿಗೆ ನಾಮಕರಣೋತ್ಸವವನ್ನು ಬೆಳಸುವಾಗ ಅವನ ಅಷ್ಟೋತ್ತರ ಶತನಾಮಗಳಲ್ಲಿ 'ಚಾಳುಕ್ಯ ವಂಶೋದ್ಭವಂ', 'ರಿಪು ಕುರಂಗ ಕಂಠೀರವಂ', 'ಅಮ್ಮನ ಗಂಧವಾರಣಂ', 'ಸಾಮಂತ ಚೂಡಾಮಣಿ' ಮೊದಲಾದ ಅರಿಕೇಸರಿಯ ನಾಮಾವಳಿಗಳನ್ನೇ ಇಟ್ಟು, ಆಶೀರ್ವದಿಸುವರು. ಪ್ರಪಂಚವನ್ನೆಲ್ಲ ಏಕಚ್ಛತ್ರಾಧಿಪತ್ಯ ಮಾಡಿದ ಮೂರು ಲೋಕದ ಗಂಡನಾದ ಸವ್ಯಸಾಚಿಯು ಒಮ್ಮೊಮ್ಮೆ ಸಾಮಂತ ಚೂಡಾಮಣಿಯಾಗುವನು. ಇದು ಕೆಲವೆಡೆಗಳಲ್ಲಿ ಆಭಾಸವಾಗಿ ತೋರುವುದು. ಅರ್ಜುನನು ದೇಶಾಟನೆಗೆ ಹೊರಟು, ದ್ವಾರಕಾ ಪಟ್ಟಣದಲ್ಲಿ ಕೃಷ್ಣನ ಅನುಮತಿಯಂತೆ ಸುಭದ್ರೆಯನ್ನು ಅಪಹರಿಸಿಕೊಂಡು ಹೋಗುವನಷ್ಟೆ! ಈ ಸಂದರ್ಭದಲ್ಲಿ ಪಂಪನು ಸುಭದ್ರೆಯನ್ನು ಅರ್ಜುನನು ಕೊಂಡುಹೋದನೆಂದು ಹೇಳದೆ ಸಾಮಂತ ಚೂಡಾಮಣಿಯು ಕೊಂಡುಯ್ದನೆಂದು ಹೇಳುವುದು ಮನಸ್ಸಿಗೆ ಅಷ್ಟು ಸಮರ್ಪಕವಾಗಿಲ್ಲ. ಪಂಪನು ಅರಿಕೇಸರಿಯನ್ನು ಕಿರೀಟಿಯಲ್ಲಿ ಹೋಲಿಸಿರುವುದು ಕೇವಲ ಮನದೊಲವಿನಿಂದಲ್ಲವೆಂದೂ ಅವನಲ್ಲಿ ನಿಜವಾಗಿಯೂ 'ವಿಪುಳ ಯಶೋವಿತಾನ' ಗುಣಗಳಿದ್ದುವೆಂದೂ ಹೇಳುವನಾದರೂ ಮೂರು ಲೋಕದ ಗಂಡನು ಸಾಮಂತ ಚೂಡಾಮಣಿಯಾದುದೇಕೆ ಎಂದು ಯೋಚಿಸಬೇಕಾಗುವುದು. ಅರಿಕೇಸರಿಯಾದ ಅರ್ಜುನನು ಸೋಲುವ ಪ್ರಸಂಗ ಬಂದಾಗಲೂ ಪ್ರತಿಪಕ್ಷದ ಇದುರಿನಲ್ಲಿ ಇವನ ಸಾಹಸವು ಸಾಗದ ಸಮಯದಲ್ಲೂ ಪಂಪನು ಬಹಳ ಕಾಲ ವಿಳಂಬಮಾಡದೆ ಅಲ್ಲಿಂದ ಬಹು ಬೇಗ ನುಸುಳಿಹೋಗುವನು. ಆಗ 'ವೈರಿ ಗಜ ಘಟಾ ವಿಘಟನಂ', 'ವಿದ್ವಿಷ್ಟ ವಿದ್ರಾವಣಂ,' 'ಅರಾತಿ ಕಾಳಾನಲಂ', 'ರಿಪು ಕುರಂಗ ಕಂಠೀರವಂ' ಎಂಬ ಬಿರುದುಗಳು ಮಾಯವಾಗುವುವು. ಅಷ್ಟಮಾಶ್ವಾಸದಲ್ಲಿ ಯಕ್ಷನ ಮಾಯೆಯಿಂದ ಕೊಳದ ತಡಿಯಲ್ಲಿ ನೀರು ಕುಡಿದು ಆರೂಢನಾಗಿ ಸರ್ವಜ್ಞನು ನಿಶ್ಚೇಷ್ಟಿತನಾಗಿ ನೆಲದಲ್ಲೊರಗುವನು. ಪಂಪನು ಇಲ್ಲಿ ಹೇಳುವುದು ಬಹು ಚಮತ್ಕಾರವಾಗಿದೆ:-

ಆ ಕಮಳಾಕರಮಂ ಪೊ।
ಕ್ಕಾಕಾಶ ಧ್ವನಿಯನುಜಿದೆ ಕುಡಿದರಿ ಭೂಪಾ ॥
ನೀಕ ಭಯಂಕರನುಂ ಗಡ ।
ಮೇಕೆಂದಜಿಯೆಂ ಬಟಲ್ದು ಜೋಲ್ದಂ ಧರೆಯೊಳ್ ॥

ಎಂದು ಹೇಳುವನು. ಹಾಗೆಯೇ ಅರ್ಜುನನ ಸಾಹಸ ಕಾರ್ಯಗಳನ್ನು ವರ್ಣಿಸುವಾಗ ನೋಡಿರಿ, ಪಂಪನನ್ನು ಹಿಡಿದು ನಿಲ್ಲಿಸುವರೇ ಇಲ್ಲ; ಅವನ ವಾಗ್ವೈಖರಿಯನ್ನು ಆಗ ನೋಡಬೇಕು; ಹೃದಯವು ಬಾಯ್ಗೇ ಬಂದುಬಿಡುವುದು; ಬಾಯಿ ಬಿಚ್ಚಿ ಮನಸ್ಸಾರೆ ವರ್ಣಿಸುವುದರಲ್ಲಿ ತನ್ನ ಸಾಮರ್ಥ್ಯವನ್ನೆಲ್ಲ ಉಪಯೋಗಿಸುವನು; ಒಮ್ಮೊಮ್ಮೆ ಒಂದೆರಡು ಪದ್ಯಗಳಲ್ಲಿಯೇ ಗಾಂಡಿವಿಯ ಸಾಹಸ ಶೌರ್ಯಗಳನ್ನು ಬಹು ಹೃದಯಂಗಮವಾಗಿ ನಿರೂಪಿಸುವನು. ಇದು ಇವನ ಕೌಶಲ; ಎಲ್ಲರಿಗೂ ಬಾರದು. ವಿದ್ವಿಷ್ಟವಿದ್ರಾವಣನು ಮತ್ಸ್ಯಯಂತ್ರ ಭೇದನ ಮಾಡಿದುದೂ ಅಂಗಾರವರ್ಮನನ್ನೂ ಅಂಗದರ್ಪಣನನ್ನೂ ಸೋಲಿಸಿದುದೂ ದುರ್ಯೋಧನನನ್ನು ಕೋಡಗ ಗಟ್ಟುಗಟ್ಟಿ ಎಳೆದೊಯ್ಯುತ್ತಿದ್ದ ಚಿತ್ರಸೇನನ್ನು ಪರಾಭವಿಸಿದುದೂ ಸ್ವಲ್ಪ ಮಾತಿನಲ್ಲಿ ವರ್ಣಿತವಾದರೂ ಅವನ ಪೂರ್ಣವಾದ ಸಾಹಸವು ವ್ಯಕ್ತವಾಗುವಂತಿದೆ. ಭಾರತಯುದ್ಧದಲ್ಲಿ ಅರ್ಜುನನು ಭೀಷ್ಮ ದ್ರೋಣ ಕರ್ಣಾದಿಗಳೊಡನೆ ತೋರಿಸಿದ ಸಾಮರ್ಥ್ಯವನ್ನಂತೂ ಪಂಪನು ತನ್ನ ಕವಿತಾ ಶಕ್ತಿಯನ್ನೆಲ್ಲ ವೆಚ್ಚಮಾಡಿ ಬಹಳ ಚೆನ್ನಾಗಿ ವರ್ಣಿಸಿರುವನು. ಕೊನೆಗೆ, ತಾನು ಮಾಡಿದ ವರ್ಣನೆಯಿಂದ ತೃಪ್ತಿ ಹೊಂದದೆ ಸಾಹಸಾಭರಣನ ಅದ್ಭುತವಾದ ಸಾಹಸವನ್ನು ಪಶುಪತಿಯ ಬಾಯಿಂದಲೇ ಹೊರಡಿಸಿರುವನು. ಕರ್ಣಾರ್ಜುನರು ಯುದ್ಧ ಮಾಡುತ್ತಿದ್ದುದನ್ನು ನೋಡುತ್ತಿದ್ದ ದೇವೇಂದ್ರನಿಗೂ ದಿವಸೇಂದ್ರನಿಗೂ ತಮ್ಮ ತಮ್ಮ ತನಯರ ಶೌರ್ಯದ ವಿಷಯದಲ್ಲಿ ನಡೆಯುತ್ತಿದ್ದ ಜಗಳವು ಹರನ ಕಿವಿಗೆ ಬೀಳಲು, ಈಶ್ವರನು ಹೀಗೆನ್ನುವನು:-

ಜಗಳಮಿದೇಂ ದಿನಕರ ಪೊಣ ।
ರ್ದು ಗೆಲ್ವನೇ ನಿಜ ತನೂಭವಂ ಹರಿಗನೊಳೇಂ ॥
ಬಗೆಗೆಟ್ಟಿಯೊ ಧುರದೊಳವಂ ।
ಮಿಗಿಲೆನಗೆನೆ ನಿನಗೆ ಪೆಗಲೊಳೇಂ ಕಟ್ಟಲೆಯೇ ॥

ಕೊನೆಗೆ ಯುದ್ಧದಲ್ಲಿ ಅರಿ ನೃಪರನ್ನೆಲ್ಲ ನಿರ್ಮೂಲ ಮಾಡಿದ ಮೇಲೆ ಯಥಾವತ್ತಾಗಿ ವಿಕ್ರಮಾರ್ಜುನನಿಗೇ ಪಟ್ಟಾಭಿಷೇಕವಾಗುವುದು. ಅದರೊಡನೆ ಸುಭದ್ರೆಗೆ ಮಹಾದೇವೀ ಪಟ್ಟವನ್ನು ಕಟ್ಟುವರು. ಇದು ಅಷ್ಟು ಉಚಿತವಾಗಿ ಕಾಣುವುದಿಲ್ಲ. ಮೊದಲಿನಿಂದಲೂ ವಿಕ್ರಮಾರ್ಜುನನ ಪ್ರೀತಿಗೆ ಪಾತ್ರಳಾಗಿ ಸರ್ವದಾ ಅವನೊಡನಿದ್ದೂ ವಸ್ತ್ರಾಪಹರಣ ಕೇಶಾಕರ್ಷಣಗಳಿಗೆ ಸಿಕ್ಕಿ, ಕಾಡು ಮೇಡುಗಳಲ್ಲಿ ಅಲೆದು, ಅಜ್ಞಾತವಾಸದಲ್ಲಿ ಪರರ ಸೇವೆಯಲ್ಲಿದ್ದು ಪಡಬಾರದ ಕಷ್ಟಪಟ್ಟು, ಮಹಾಭಾರತಕ್ಕೆ ಆದಿಶಕ್ತಿಯೂ ಕುರುಕುಲ ಜೀವಾಕರ್ಷಣ ಮಂತ್ರವೂ ಆಗಿದ್ದ ದ್ರೌಪದಿಯನ್ನು ಬಿಟ್ಟು, ಸುಖವಾಗಿ ಅರಮನೆಯ ಅಂತಃಪುರದಲ್ಲಿದ್ದ ಸುಭದ್ರೆಗೆ ಮಹಾದೇವಿಯ ಪಟ್ಟವನ್ನು ಕಟ್ಟಬಹುದೇ? ದ್ರೌಪದಿಯೇ ಇದನ್ನು ಕೇಳುತ್ತಿದ್ದರೆ ಒಪ್ಪುತ್ತಿದ್ದಳೇ? ಪಂಪನು ಮೊದಲು ಸ್ವಲ್ಪ ದೂರ ದ್ರೌಪದಿಯ ವಿಷಯವನ್ನು ಹೇಳಿ ಮುಂದೆ ಅವಳ ಹೆಸರನ್ನೇ ಎತ್ತದೆ ಸುಭದ್ರೆಗೆ ಪಟ್ಟಾಭಿಷೇಕ ಮಾಡಿಸುವನು. ಅರ್ಜುನನನ್ನು

ಕಥಾ ನಾಯಕನನ್ನಾಗಿ ಮಾಡಿಕೊಂಡಾಗ ಕಥಾ ನಾಯಿಕೆಯ ವಿಷಯದಲ್ಲಿ ಅವನಿಗೆ ಸ್ವಲ್ಪ ತೊಂದರೆಯಾಗಿರಬೇಕು. ವೀರಾವೇಶವುಳ್ಳವಳೂ ಪಂಚಪತಿತ್ವವನ್ನುಳ್ಳವಳೂ, ಕೇಶಾಕರ್ಷಣಾದಿ ಅವಮಾನಗಳಿಗೆ ಸಿಕ್ಕಿದವಳೂ ಆದ ದ್ರೌಪದಿಯು ಅವನ ದೃಷ್ಟಿಯಿಂದ ಕಥಾ ನಾಯಿಕೆಯಾಗುವುದಕ್ಕೆ ಅರ್ಹಳಲ್ಲವೆಂದು ತೋರಿರಬಹುದು. ಆದುದರಿಂದ ಅವನು ದ್ರೌಪದಿಯನ್ನು ಕಥಾನಾಯಿಕೆಯನ್ನಾಗಿ ಮಾಡದೆ ಸುಭದ್ರೆಯನ್ನೇ ನಾಯಿಕೆಯನ್ನಾಗಿ ಮಾಡಿರುವನು. ಈ ವಿಷಯವನ್ನು ವಾಚಕರಿಗೆ ಸ್ಪಷ್ಟಪಡಿಸುವುದಕ್ಕಾಗಿಯೇ ಪಂಪನು ದ್ರೌಪದಿಯ ವಿವಾಹವನ್ನು ಒಂದೆರಡು ಪದ್ಯಗಳಲ್ಲಿ ಮುಗಿಸಿ ಸುಭದ್ರಾ ಪರಿಣಯವನ್ನು ಒಂದು ಆಶ್ವಾಸವನ್ನಾಗಿ ಮಾಡಿರುವನು. ಹೀಗೆ ಪಂಪನು ಸುಭದ್ರೆಗೆ ರಾಜ್ಞೀ ಪದವಿಯನ್ನು ಕೊಟ್ಟರೂ ನಮಗೇನೋ ದ್ರೌಪದಿಯೇ ಆ ಸ್ಥಾನಕ್ಕೆ ಅರ್ಹಳೆನ್ನಿಸುತ್ತದೆ.

**ಮತ್ತೊಂದು ವಿಷಯ:** ದ್ರೌಪದಿಯ ಪಂಚಪತಿತ್ವವು ಲೌಕಿಕ ದೃಷ್ಟಿಯಿಂದ ಅಷ್ಟು ಸಮಂಜಸವಲ್ಲವೆಂದೋ ಏನೋ ಪಂಪನು ಅದನ್ನು ಮಾರ್ಪಡಿಸಿರುವನು. ಅವನ ಅಭಿಪ್ರಾಯದಂತೆ ದ್ರೌಪದಿಯನ್ನು ಮದುವೆಯಾಗುವವನು ಅರ್ಜುನನೊಬ್ಬನೆ; ಐವರಲ್ಲ. ವಿದ್ವಿಷ್ಟವಿದ್ರಾವಣನು ಕೈಹಿಡಿದ ಸ್ತ್ರೀಯ ಭೋಗದಲ್ಲಿ ಇತರರು ಭಾಗಿಗಳಾಗುವುದು ಹಾಸ್ಯಾಸ್ಪದವೆಂಬುದಾಗಿ ಅವನಿಗೆ ತೋರಿರಬೇಕು. ಆದುದರಿಂದ ಅದನ್ನು ತಪ್ಪಿಸುವುದಕ್ಕೆ ಯತ್ನಪಟ್ಟು, ಹಾಗೆ ಮಾಡುವುದರಲ್ಲಿ ಅನೇಕ ಕಡೆ ತೊಡಕಿಗೆ ಸಿಕ್ಕಿ ಪೂರ್ವ ವಾಸನಾ ಬಲದಿಂದ ತನ್ನನ್ನೇ ತಾನು ಮರೆತಿರುವನು.

ಪಾಂಚಾಲಿಗೆ ಬಂದೊದಗುವ ಆಪತ್ಕಾಲಗಳಲ್ಲೆಲ್ಲ ಆಕೆಯನ್ನು ಕಾಪಾಡುವುದರಲ್ಲಿ ಆಕೆಯ ಪತಿಯಾದ ಅರ್ಜುನನಿಗಿಂತಲೂ ಭೀಮಸೇನನೇ ಹೆಚ್ಚು. ಕಪಟದ್ಯೂತದಲ್ಲಿ ಧರ್ಮರಾಯನು ಎಲ್ಲವನ್ನೂ ಸೋತ ಮೇಲೆ ದ್ರೌಪದಿಯ ವಿಡಂಬನವಾಗುವ ಕಾಲದಲ್ಲಿ ಆ ಅನ್ಯಾಯವನ್ನು ನೋಡಿದಾಗ ಪ್ರೇಕ್ಷಕರಿಗೂ ಕೂಡ ಸಹಿಸಲಸಾಧ್ಯವಾಗಿ ದುಶ್ಯಾಸನನನ್ನು ಸೀಳಿಬಿಡಬೇಕೆಂಬ ಆಕ್ರೋಶವು ಹುಟ್ಟುವುದು. ಆಗ ಪಾಂಡವರು ಅಣ್ಣನ ನನ್ನಿಗೆ ಕಟ್ಟುಬಿದ್ದು ಸುಮ್ಮನೆ ಕುಳಿತುಕೊಳ್ಳುವರು. ಆ ಸಂದರ್ಭದಲ್ಲಿ ದ್ರೌಪದಿಯು ತನಗಾದ ಅವಮಾನದ ಸಿಗ್ಗಿನಿಂದ-

ಮುಡಿಯಂ ಪಿಡಿದೆಳೆದವನಂ ।
ಮಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನಂ ॥
ಮುಡಿಯಿಸುಗಾ ಮುಡಿಯಂ ದಲ್ ।
ಮುಡಿಯೆಂ ಗಳಮೀಗಳಂತೆಯೆನ್ನಯ ಮುಡಿಯಂ ॥

ಎಂದು ಹೇಳಿದುದನ್ನು ಭೀಮಸೇನನು ಕೇಳಿ ಕೋಪೋದ್ರೇಕವನ್ನು ತಡೆಯಲಾರದೆ ನವ ಮೇಘ ನಾದದಿಂದ ಹೀಗೆಂದು ಪ್ರತಿಜ್ಞೆ ಮಾಡುವನು:-

ಮುಳಿಸಿಂದಂ ನುಡಿದೊಂದು ನಿನ್ನ ನುಡಿ ಸಲ್ಗಾರಾಗದೆಂಬರ್ ಮಹಾ ।
ಪ್ರಳಯೋಲ್ಕೋಪಮ ಮದ್ಗದಾ ಹತಿಯಿನತ್ಯುಗ್ರಾಜಿಯೊಳ್ ಮುನ್ನಮೀ ॥
ಖಳ ದುಶ್ಶಾಸನನಂ ಪೊರಳ್ಚಿ ಬಸಿಱಿಂ ಪೋಳ್ದಿಕ್ಕಿ ಬಂಬಲ್ಗರು ।
ಳ್ಗಳಿನಾನಲ್ತೆ ವಿಳಾಸದಿಂ ಮುಡಿಯಿಪೆಂ ಪಂಕೇಜ ಪತ್ರೇಕ್ಷಣೇ ॥

ಕುಡಿವೆಂ ದುಶ್ಶಾಸನೋರಸ್ಥಳಮನಗಲೆ ಪೋೞ್ದಾರ್ದು ಕೆನ್ನೆತ್ತರಂ ಪೊ ।
ಕ್ಕುಡಿವೆಂ ಪಿಂಗಾಕ್ಷನೂರುದ್ವಯಮನುರುಗದಾಘಾತದಿಂ ನುಚ್ಚು ನೂಱಾ ॥
ಗೊಡೆವೆಂ ತದ್ರತ್ನ ರಶ್ಮಿ ಪ್ರಕಟ ಮಕುಟಮಂ ನಂಬು ನಂಬೆನ್ನ ಕಣ್ಣಿಂ ।
ಕಿಡಿಯುಂ ಕೆಂಡಂಗಳುಂ ಸೂಸಿದಪುವಹಿತರಂ ನೋಡಿ ಪಂಕೇಜ ವಕ್ತ್ರೇ ॥

ಎಂದು ಗರ್ಜಿಸಿ ದಿಕ್ಪಾಲಕರಸಾಕ್ಷಿಯಾಗಿ ಪ್ರತಿಜ್ಞೆ ಮಾಡಿ 'ವಿಳಯ ಕಾಳ ಜಳಧರ ನಿನಾದ'ದಿಂದ ಮೊಳಗುವನು. ಈ ಕೋಪಾಟೋಪದ ಮಧ್ಯದಲ್ಲಿ, ಪಂಪನ ಪ್ರಕಾರ, ಪತಿಯಾದ ಅರ್ಜುನನು ಒಂದು ಮಾತನ್ನೂ ಆಡದೆ ಕುಳಿತುಕೊಂಡಿರುವನು. ಇದು ಸ್ವಲ್ಪ ಆಭಾಸವಾಗಿ ಕಾಣುವುದಿಲ್ಲವೇ? ಈ ಸಂದರ್ಭದಲ್ಲಿ ಭೀಮಸೇನನು ಹೇಳುವ ಮಾತನ್ನು ಅರ್ಜುನನೇ ಹೇಳಿದ್ದರೆ ಇನ್ನೂ ಸಮಂಜಸವಾಗುತ್ತಿದ್ದಿತಲ್ಲವೇ? ಆದರೆ ಇದು ಹೇಗೆ ಸಾಧ್ಯ? ಈ ಸಮಯದಲ್ಲಿ ಪಂಪನು ದ್ರೌಪದಿಯ ಪತಿಯು ಅರ್ಜುನನೊಬ್ಬನೇ ಎಂಬುದನ್ನು ಮರೆತು ಮೂಲಭಾರತದಲ್ಲಿರುವುದನ್ನು ಇದ್ದುದಿದ್ದ ಹಾಗೆಯೇ ಹೇಳಿಬಿಟ್ಟಿರುವನು.

ಮುಂದೆ ಇನ್ನೆರಡು ಸ್ಥಳಗಳಲ್ಲಿ ಪಂಪನು ಹೀಗೆಯೇ ಮುಗ್ಗರಿಸಿರುವನು. ಪಾಂಡವರು ಅಜ್ಞಾತವಾಸದಲ್ಲಿದ್ದಾಗ ಕೀಚಕನು ದ್ರೌಪದಿಯಲ್ಲಿ ಅತ್ಯಾಚಾರವನ್ನು ನಡೆಯಿಸುವುದಕ್ಕೆ ಪ್ರಯತ್ನಪಡಲು ದ್ರೌಪದಿಯು ರಾತ್ರಿ ವೇಳೆಯಲ್ಲಿ, ಅದೂ ಕಟ್ಟೇಕಾಂತದಲ್ಲಿ, ದುರುಳನ ದಮನಕ್ಕೆ ಮೊರೆಯಿಟ್ಟುದು ಭೀಮನಲ್ಲಿ, ಅರ್ಜುನನಲ್ಲಲ್ಲ. ಇದು ಮೊದಲಿಗಿಂತಲೂ ಹೆಚ್ಚಾಗಿ ಪಂಪನ ವಿಸ್ಮರಣೆಯನ್ನು ವ್ಯಕ್ತಗೊಳಿಸುವುದು. ಅರ್ಜುನನು ಬೃಹಂದಳೆಯಾಗಿದ್ದು ಈ ಕೆಲಸವು ಅವನ ಕೈಯಲ್ಲಿ ಸಾಧ್ಯವಾಗಿರಲಿಲ್ಲವಾದುದರಿಂದ ದ್ರೌಪದಿಯು ಹೀಗೆ ಮಾಡಿದಳೆಂದು ಹೇಳಲಾಗುವುದಿಲ್ಲ. ಇದೇ ರೂಪದಲ್ಲಿದ್ದಾಗಲೇ ಅರ್ಜುನನು ಉತ್ತರ ಗೋಗ್ರಹಣ ಕಾಲದಲ್ಲಿ ಯುದ್ಧಮಾಡಿ ಎಲ್ಲವನ್ನೂ ಸೋಲಿಸಲಿಲ್ಲವೇ? ಅಥವಾ, ತಮ್ಮ ಗುಟ್ಟು ರಟ್ಟಾಗುವುದೆಂದಿದ್ದರೂ ಅದಕ್ಕೂ ಅರ್ಜುನನೇ ಈ ಕೆಲಸವನ್ನು ಮಾಡಿದ್ದರೆ ಹೆಚ್ಚು ಸಮಂಜಸವಾಗುತ್ತಿದ್ದಿತು.

ಕೊನೆಗೆ, ಭೀಮಸೇನನು ದುಶ್ಶಾಸನನನ್ನು ಸಂಹರಿಸಿ ತನ್ನ ಪೂಣ್ಕೆಯನ್ನು ಪೂರೈಸಿದ ಮೇಲೆ "ದ್ರುಪದಾತ್ಮಜೆಗೆ ಬೞಿಯನಟ್ಟಿ ಜಯವನಿತೆ ಬರ್ಪಂತೆ ಬಂದ ತನ್ನ ತಳೋದರಿಯಂ ಕೆಲದೊಳ್ ಕುಳ್ಳಿರಿಸಿ ಪೊಸೆದು ಜಡೆಗೊಂಡಿರ್ದ ಕೇಶಮಂ ಪಸರಿಸಿ ವೈರಿಯ ಪಲ್ಲ ಪಣಿಗೆಯಿಂ ಬಾರ್ಚಿ ದುಶ್ಶಾಸನನ ಕರುಳ್ಗಳೆ ಪೊಸ ಬಾಸಿಗಮಾಗೆ ಕೃಷ್ಣೆಯಂ ಮುಡಿಯಿಸಿ ಅವಳ ಮೊಗಮಂ ನೋಡಿ ಮುಗುಳ್ನಗೆ ನಕ್ಕು" ಅವಳಲ್ಲಿ ಪ್ರಣಯ ಮೋಹವನ್ನು ಬೀರಿ ಮಾತನಾಡುವನು. ದ್ರೌಪದಿಯಾದರೋ ಭೀಮನಲ್ಲಿ ಅನುರಾಗವನ್ನು ವ್ಯಕ್ತಗೊಳಿಸುವಳು.

ಈ ಸಂದರ್ಭಗಳಲ್ಲೆಲ್ಲ ಅರ್ಜುನನು ಪ್ರೇಕ್ಷಕನಾಗಿರುವನು. ಸಾಕ್ಷಾತ್ ಪತಿಯು ಇದಿರಿನಲ್ಲಿರುವಾಗ, ಅದರಲ್ಲಿಯೂ ಅವನು ಮೂರು ಲೋಕದ ಗಂಡನಾಗಿರುವಾಗ, ದ್ರೌಪದಿಯನ್ನು ರಕ್ಷಿಸಲು ಭೀಮಸೇನನು ಇಷ್ಟು ಪ್ರಯತ್ನಪಟ್ಟಿದ್ದು ವಿಸ್ಮಯ ಜನಕವಲ್ಲವೇ? ಈ ಸಮಯಗಳಲ್ಲೆಲ್ಲ ಭೀಮನು ದ್ರೌಪದಿಯ ಭಾವನೆಂಬುದನ್ನು ಪಂಪನು ಮರೆಯುವನು; ಪತಿಯೆಂಬ ಭಾವವೇ ಮನಸ್ಸಿನಲ್ಲುಂಟಾಗಿ ಇಂತಹ ತೊಡಕಿಗೆ ಸಿಕ್ಕುಬಿದ್ದಿರುವನು. ಇಲ್ಲವಾದರೆ, ಅವನು ಬೇರೆ ಸಂವಿಧಾನಗಳಿಂದ ಇದನ್ನು ತಪ್ಪಿಸಿಕೊಳ್ಳಬಹುದಾಗಿದ್ದಿತು.

ಇನ್ನು ಕೆಲವೆಡೆಗಳಲ್ಲಿ ಪಂಪನ ಬದಲಾವಣೆಗಳು ಕಥಾಸಂವಿಧಾನಕ್ಕೆ ಬಹಳ ಹೊಳಪನ್ನು ತರುವುವು: ವ್ಯಾಸಭಾರತದ ದ್ರೌಪದೀ ವಸ್ತ್ರಾಪಹರಣ ಕಥೆಯು ಲೌಕಿಕ ದೃಷ್ಟಿಯಿಂದ ಅನುಚಿತವಾದುದೆಂದು ಭಾವಿಸಿ ಪಂಪನು ಅದನ್ನು ಬಿಟ್ಟು ಕೇಶಾಕರ್ಷಣದ ವಿಚಾರವನ್ನು ಮಾತ್ರ ಹೇಳಿ ಕೊನೆಯಲ್ಲಿ ದುಶ್ಶಾಸನ ವಧಾನಂತರ-

ಇದೆಜೊಳ್ ಶ್ವೇತಾತಪತ್ರ ಸ್ಥಗಿತ ದಶ ದಿಶಾ ಮಂಡಲಂ ರಾಜ ಚಕ್ರಂ ।  
ಪುದಿದಟ್ಟಾಡಿತ್ತಡಂಗಿತ್ತಿದಜೂಳೆ ಕುರು ರಾಜಾನ್ವಯಂ ಮತ್ತೃತಾಪ ॥  
ಕ್ಕಿದಜಿಂದಂ ನೋಡಗುರ್ವರ್ವಿದುದಿದುವೆ ಮಹಾ ಭಾರತಕ್ಕಾದಿಯಾಯ್ತು ।  
ಬ್ಜ ದಳಾಕ್ಷೀ ಪೇಟಿ ಸಾಮಾನ್ಯಮೆ ಬಗೆಯೆ ಭವತ್ಕೇಶ ಪಾಶ ಪ್ರಪಂಚಂ ॥

ಎಂದು ಹೇಳಿ ವೇಣೀ ಸಂಹಾರವನ್ನು ಮುಗಿಸುವುದು ಬಹಳ ಸ್ವಾರಸ್ಯವಾಗಿದೆ.

ಹಾಗೆಯೇ, ದ್ರೌಪದಿಯು ದುಶ್ಶಾಸನನಿಂದ ಸಭೆಗೆ ಎಳೆತರಲ್ಪಟ್ಟಾಗ ಕರ್ಣನು ನೋಡಿ ನಕ್ಕನೆಂದೂ ಸಲ್ಲದ ಮಾತುಗಳನ್ನಾಡಿದನೆಂದೂ ವ್ಯಾಸ ಭಾರತದಲ್ಲಿರುವುದನ್ನು ಬಿಟ್ಟಿರುವುದೂ ಕರ್ಣನನ್ನು ರಾಜ್ಯಲಕ್ಷ್ಮಿಯು ಬಿಡಲಾರಳೆನ್ನುವುದೂ "ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ" ಎಂದು ಹೇಳುವುದೂ ಕರ್ಣನ ಪಾತ್ರಕ್ಕೆ ಬಹಳ ಗೌರವವನ್ನೂ ಮಹಿಮೆಯನ್ನೂ ಕೊಡುವುದಲ್ಲದೆ, ಒಟ್ಟಿನಲ್ಲಿ ಬಹಳ ಗಂಭೀರವಾಗಿಯೂ ಇರುವುದು.

ಇವಲ್ಲದೆ, ಪಂಪಭಾರತದಲ್ಲಿ ಇನ್ನೂ ಕೆಲವು ವ್ಯತ್ಯಾಸಗಳು ಕಾಣುವುವು. ಯುಧಿಷ್ಠಿರನ ಆಜ್ಞಾನುಸಾರವಾಗಿ ಯಕ್ಷನ ವಿಷಸರೋವರಕ್ಕೆ ನೀರು ತರಲು ಹೋದ ಭೀಮಾರ್ಜುನ ನಕುಲ ಸಹದೇವರು ಯಕ್ಷನ ಪ್ರಶ್ನೆಗೆ ಉತ್ತರಕೊಡದೆ ನೀರು ಕುಡಿದು ಮೈಮರೆತು ಬೀಳಲು, ದುರ್ಯೋಧನನ ಪುರೋಹಿತನಾದ ಕನಕಸ್ವಾಮಿಯು ಪಾಂಡವರನ್ನು ಸಂಹರಿಸಲು ಕಳುಹಿಸಿದ ಕೀರ್ತಿಗೆಯು ಬಂದು ಕೊಳದ ತಡಿಯಲ್ಲಿ ಬಿದ್ದಿದ್ದ ನಾಲ್ವರನ್ನೂ ತಿಂದು ಮುಗಿಸುವೆನೆಂದೆಣಿಸಿ ಕೈ ಹಾಕುವಾಗ, ಅವರನ್ನು ಆ ಅವಸ್ಥೆಗೆ ತಂದ ದೈವವು ಪ್ರತ್ಯಕ್ಷವಾಗಿ ಆ ಉಗ್ರದೇವತೆಯನ್ನು, 'ನೀನು ದೂರಹೋಗು' ಎನ್ನಲು, 'ನಾನು ನನ್ನ ಮಾತಿನಂತೆ ನಡೆದುಕೊಳ್ಳಬೇಕು. ಯಾರನ್ನು ಭಕ್ಷಿಸಲಿ? ಎಂದು ಕೇಳಲು, ಆ ಯಕ್ಷನು,

'ಎಲೈ ಪಿಶಾಚಿಯೇ! ನಿನ್ನನ್ನು ಯಾವನು ಹುಟ್ಟಿಸಿದನೋ ಅವನನ್ನೇ ತಿನ್ನು' ಎಂದು ಹೇಳಲು, ಆ ದೇವತೆಯು ಹಾಗೆಯೇ ಹಿಂದಿರುಗಿ, 'ಕನಕನ ಬೇಳ್ವೆಯು ಕನಕನಿಗೇ ತಟ್ಟಿತು' ಎಂದು ಜನರಾಡಿಕೊಳ್ಳುವಂತೆ ಅವನನ್ನೇ ತಿಂದುಬಿಟ್ಟಿತು. ಈ ಕಥೆಯು ಪಂಪನ ಭಾರತದಲ್ಲಿದೆ, ಮೂಲ ಭಾರತದಲ್ಲಿಲ್ಲ. ಅರ್ಜುನನಿಗೆ ಕಿರೀಟಿಯೆಂಬ ಹೆಸರು ಬರಲು ಪಂಪನು ಕೊಟ್ಟಿರುವ ಕಾರಣವು ವ್ಯಾಸಭಾರತದಲ್ಲಿಲ್ಲ. ಕಷ್ಣ ಪರಮಾತ್ಮನು ಸಂಧಾನಕ್ಕೆ ಬಂದ ಕಾಲದಲ್ಲಿ ದುರ್ಯೋಧನನು ವಿದುರನನ್ನು ಹೀಯಾಳಿಸಿ ಮಾತನಾಡಿದುದಕ್ಕಾಗಿ ವಿದುರನು-

ಕಡು ಮುಳಿದು ನಿನ್ನ ತೊಡೆಗಳ।
ನುಡಿವೆಡೆಯೊಳ್ ಭೀಮಸೇನನಾ ಪದದೊಳ್ ॥
ಪಿಡಿಯಲ್ಕೆಂದಿರ್ದೆನಿದಂ ।
ಪಿಡಿಯೆಂ ಪೋಗೆಂದು ಸಭೆಯೊಳುಡಿದಂ ಬಿಲ್ಲಂ ॥

ಎಂದು ಹೇಳುವುದು ಪಂಪನದೇ. ಕರ್ಣನು ಕುಂತಿಯ ಮಗನೆಂದು ದುರ್ಯೋದನನು ತಿಳಿದುಕೊಂಡುದು ಸತ್ಯಂತಪರೆಂಬ ದಿವ್ಯಜ್ಞಾನಿಗಳಿಂದ ಎಂದು ಕೃಷ್ಣನು ಹೇಳುವ ಮಾತುಗಳು ಪಂಪನದೇ ವಿನಾ ಮೂಲ ಭಾರತದಲ್ಲಿಲ್ಲ. ಈ ಬದಲಾವಣೆಗಳಿಗೆಲ್ಲ ಸರಿಯಾದ ಕಾರಣವನ್ನು ತಿಳಿಸಲು ಸಾಧ್ಯವಿಲ್ಲ. ಇವುಗಳನ್ನು ನೋಡಿದರೆ ಪಂಪನೇ ಮೂಲಭಾರತದಿಂದ ಈ ಬದಲಾವಣೆಗಳನ್ನು ಮಾಡಿಕೊಂಡನೊ ಅಥವಾ ಹೀಗೆ ಕಥಾಶರೀರದಲ್ಲಿ ಬದಲಾವಣೆಯನ್ನು ಹೊಂದಿದ್ದ, ಬಹುಶಃ ಜೈನ ಸಂಬಂಧವಾದ ಇನ್ನೊಂದು ಭಾರತವೇ ಪಂಪನ ಕಾಲದಲ್ಲಿದ್ದಿತೋ ಎಂಬ ಸಂಶಯವು ಹುಟ್ಟುವುದು. ಆದರೆ ಸರಿಯಾದ ಆಧಾರಗಳು ಸಿಕ್ಕುವವರೆಗೂ ಹೇಗೆ ನಿರ್ಧರಿಸಲೂ ಸಾಧ್ಯವಿಲ್ಲ.

ಪಂಪನು ಮೇಲೆ ಹೇಳಿದಂತೆ ಮೂಲಭಾರತದ ಕಥೆಯಲ್ಲಿ ಹಲವು ವ್ಯತ್ಯಾಸಗಳನ್ನು ಮಾಡಿರುವುದಲ್ಲದೆ ಕನ್ನಡದ ಸಂಪತ್ತೂ ಸ್ವಾರಸ್ಯವೂ ಸ್ಫುಟವಾಗುವ ಹಾಗೆ ಸಂಸ್ಕೃತದಲ್ಲಿ ಶ್ರೇಷ್ಠ ಕವಿಗಳಾದ ಶ್ರೀಹರ್ಷ, ಕಾಳಿದಾಸ, ಭಾರವಿ ಮುಂತಾದವರ ಕೃತಿಗಳಿಂದ ಕೆಲವು ಭಾವಗಳನ್ನು ತೆಗೆದುಕೊಂಡು ತನ್ನ ಕಾವ್ಯದಲ್ಲಿ ಪ್ರಯೋಗಿಸಿರುವನು. ನಾಲ್ಕನೆಯ ಆಶ್ವಾಸದಲ್ಲಿ ಬರುವ ಮಲಯ ಪರ್ವತದ ವರ್ಣನೆಯು ನಾಗಾನಂದದ ಮಲಯಪರ್ವತದ ವರ್ಣನೆಯ ಅನುವಾದವಿರಬೇಕು. ಪಂಚಮಾಶ್ವಾಸದಲ್ಲಿ ವಿರಹ ಜ್ವಾಲೆಯಿಂದ ತಪ್ತಳಾದ ಸುಭದ್ರೆಯನ್ನು ಅರ್ಜುನನು ಮರೆಯಾಗಿ ನಿಂತು ನೋಡುತ್ತ ಅವಳ ಸರಸ ಸಲ್ಲಾಪಗಳನ್ನು ಕೇಳುವ ಸನ್ನಿವೇಶವನ್ನು ಕಾಳಿದಾಸನ ಶಾಕುಂತಳದಿಂದ ತೆಗೆದುಕೊಂಡಿರಬೇಕು. ಸಪ್ತಮಾಶ್ವಾಸದ ಇಂದ್ರಕೀಲ ಪ್ರಕರಣವು ಭಾರವಿಯ ಕಿರಾತಾರ್ಜುನೀಯದ ಸಾರಾಂಶವೆಂದು ಹೇಳಬಹುದು. ಹೀಗೆ ಪಂಪನು ಸಮಯೋಜಿತವಾಗಿ ಸಂಸ್ಕೃತದ ಉದ್ದಾಮ ಕವಿಗಳ ಉದಾತ್ತವಾದ ಪ್ರತಿಭೆಯನ್ನು ತನ್ನ ಕಾವ್ಯದಲ್ಲಿ ಪ್ರತಿಬಿಂಬಿಸಿ ಕನ್ನಡಿಗರ ಮುಂದೆ ಇಟ್ಟಿರುವನು; ಭಾವವನ್ನು ಇತರರಿಂದ ತೆಗೆದುಕೊಂಡಿದ್ದರೂ ನಿರೂಪಣ ರೀತಿಯನ್ನು ತನ್ನದನ್ನಾಗಿಯೇ ಮಾಡಿಕೊಂಡಿರುವನು.

**ಪಂಪ ಭಾರತದ ಕಥಾಸರಣಿ** - ಪಂಪನಿಗೆ ಸಮಗ್ರ ಭಾರತವನ್ನು ಬರೆಯುವ ಭರದಲ್ಲಿ ಹೆಚ್ಚು ವಿವರಗಳನ್ನು ತುಂಬುವುದಕ್ಕೆ ಅವಕಾಶವಿಲ್ಲ. "ಪೆಱಪ್ರಮುಖಾಖ್ಯಾನ ಕಥೆಗಳೊಳವೊಂದುಂ ಕುಂದಲೀಯದೆ ಪೇೞ್ವೆಂ" ಎಂದು ಹೇಳುವನಾದರೂ ಎಷ್ಟೋ ವಿಷಯಗಳನ್ನು ಬಹು ಕೌಶಲದಿಂದ ಕ್ರೋಡೀಕರಿಸಿ ಒಂದೆರಡು ಮಾತುಗಳಲ್ಲಿ ಕಾವ್ಯಕ್ಕೆ ಸರಿಹೋಗುವಂತೆಯೂ ಆಯಾ ಸನ್ನಿವೇಶಗಳ ಮಹತ್ತ್ವವೂ ಪಾತ್ರಗಳ ವ್ಯಕ್ತಿಸ್ವರೂಪವೂ ಚೆನ್ನಾಗಿ ಸ್ಫುರಿಸುವಂತೆಯೂ, ಮೂಲ ಗ್ರಂಥದ ಆಶಯವು ಕೆಡದಂತೆಯೂ ಮೂಲ ರೇಖೆಗಳನ್ನು ಮಾತ್ರ ಎಳೆದಿರುವನು. ಮೊದಲು ಪಾಂಡವ ಕೌರವ ಜನ್ಮದಿಂದ ಹೊರಟು ಅವರ ಬಾಲ ಕೇಳಿ, ಭೀಮ ದುರ್ಯೋಧನರ ದ್ವೇಷಕ್ಕೆ ಕಾರಣ, ಲಾಕ್ಷಾಗೃಹ ದಹನ, ಹಿಡಿಂಬಾಸುರ ವಧೆ, ದ್ರೌಪದೀ ಪರಿಣಯ, ಇಂದ್ರಪ್ರಸ್ಥ ಗಮನ - ಇವುಗಳವರೆಗೆ ಕಥಾಸರಣಿಯಲ್ಲಿ ಎಲ್ಲಿಯೂ ಎಡರು ಬಾರದಂತೆ ಸರಿಪಡಿಸಿಕೊಂಡು ನಿರೂಪಿಸುತ್ತ ಹೋಗಿರುವನು. ಇಲ್ಲಿಂದ ಮುಂದೆ ಮೂಲ ಭಾರತದ ಪ್ರಕಾರ ನಾರದಾದೇಶದಂತೆ ಅರ್ಜುನನನ್ನೂ ಭೂ ಪ್ರದಕ್ಷಿಣೆಗೆ ಹೊರಡಿಸಬೇಕು. ಹಾಗೆ ಇಲ್ಲಿ ಮಾಡಲು ಸಾಧ್ಯವಿಲ್ಲ; ದ್ರೌಪದಿಯ ಪತಿಯು ಅರ್ಜುನನೊಬ್ಬನೇ ಎಂಬ ವಿಷಯದಲ್ಲಿ ಪಂಪನು ಬಹಳ ಜಾಗರೂಕನಾಗಿರುವನು. ಅಲ್ಲದೆ, "ವರ್ಣಕಂ ಕತೆಯೊಳೊಡಂಬಡಂ ಪಡೆಯೆ" ಹೇಳಬೇಕು ತಾನೆ! ಇದೂ ಜ್ಞಾಪಕಕ್ಕೆ ಬರುವುದು. ಆದುದರಿಂದ ಅರ್ಜುನನ ಪ್ರಯಾಣಕ್ಕೆ ಪಂಪನು ಬೇರೆ ಕಾರಣವನ್ನು ಕಲ್ಪಿಸಿರುವನು. ಅದು ದಿಗ್ವಿಜಯಾರ್ಥವಾಗಿ. ಅರ್ಜುನನನು ಹೊರಟು ಸಮಸ್ತ ರಾಷ್ಟ್ರಗಳನ್ನು 'ಆತ್ಮೀಯ ಶಾಸನಾಯತ್ತಂ' ಮಾಡುತ್ತ ಬರುವನು. ಇಲ್ಲಿ ಪಂಪನಿಗೆ ಅನೇಕ ದೇಶಗಳನ್ನು ವರ್ಣಿಸುವುದಕ್ಕೆ ಅವಕಾಶ ದೊರೆಯುವುದು. ಅರ್ಜುನನು ಮುಂದೆ ಹೊರಟು ಗೋಕರ್ಣ, ಬನವಾಸಿ ಮೊದಲಾದುವುಗಳನ್ನು ದಾಟಿ ದ್ವಾರಕಾಪುರವನ್ನು ಸೇರಿ ಅಲ್ಲಿ 'ತನ್ನ ಪಲವು ಜನ್ಮಗಳ ಕೆಳೆಯ'ನಾದ ಕೃಷ್ಣಪರಮಾತ್ಮನು ತನ್ನನ್ನಿದಿರ್ಗೊಳ್ಳಲು, ಪುರಪ್ರವೇಶ ಮಾಡುವನು; ಪುರ ಸ್ತ್ರೀಯರು ಫಲ್ಗುಣನನ್ನು 'ಗುಣಾರ್ಣವನೀತನೇ' ಎಂದು ಬೆರಗುಗೊಂಡು ನೋಡುವರು. ಇಲ್ಲಿಂದ ಮುಂದಕ್ಕೆ ಸುಭದ್ರಾರ್ಜುನರ ಅನುರಾಗ, ಸೂರ್ಯಾಸ್ತಮಯ, ರಾತ್ರಿ, ಚಂದ್ರೋದಯ, ಅರ್ಜುನ ಚಂದ್ರಿಕಾ ವಿಹಾರ, ವೇಶ್ಯಾವಾಟಿಕೆ, ಮಧುಪಾನ, ಸುಭದ್ರೆಯ ವಿರಹ, ಸುಭದ್ರಾ ಪರಿಣಯ- ಇವುಗಳೆಲ್ಲವೂ ವರ್ಣಕ ಕಾವ್ಯದ ಲಕ್ಷಣಗಳನ್ನು ಪೂರ್ತಿಗೊಳಿಸುವುದಕ್ಕೆ ಬಹಳ ಅನುಕೂಲಗಳಾಗುವುವು. ಇವುಗಳ ವರ್ಣನೆಯಿಂದ ಆಶ್ವಾಸವು ತುಂಬಿ ತುಳುಕಾಡುವುದು. ಇದನ್ನು ಓದುವಾಗ ಭಾರತವನ್ನು ಓದುವ ಹಾಗೆಯೇ ತೋರುವುದಿಲ್ಲ. ಚಿತ್ರದ ಮೇಲೆ ಚಿತ್ರ; ಎಲ್ಲಿ ನೋಡಿದರೂ ಕಣ್ಣಿಗೂ ಮನಸ್ಸಿಗೂ ಆನಂದವುಂಟಾಗಿ ನಮ್ಮನ್ನೇ ನಾವು ಮರೆಯುವೆವು. ಮುಂದೆ, ಅರ್ಜುನನೂ ಸುಭದ್ರೆಯೂ ಇಂದ್ರಪ್ರಸ್ಥವನ್ನು ಪ್ರವೇಶಿಸುವುದು, ಅಭಿಮನ್ಯುವಿನ ಜನನ, ಮೃಗಯಾ ವಿಹಾರ - ಇದೇ ಮೊದಲಾದುವು ಬಹು ರಸಭರಿತವಾಗಿಯೂ ಮಿತಿಯರಿದೂ ವರ್ಣಿತವಾಗಿವೆ.

ಮುಂದೆ, ಅರ್ಜುನನ ಅನ್ಯಾದೃಶವಾದ ಪೌರುಷವನ್ನು ವ್ಯಕ್ತಗೊಳಿಸುವ ಖಾಂಡವ ದಹನದ ದೃಶ್ಯವು ಕಣ್ಣಿಗೆ ಬೀಳುವುದು. ಇಲ್ಲಿ ಕವಿಯು ಪ್ರಸ್ತುತ ವಿಷಯವನ್ನು ಮನದಟ್ಟಾಗುವಂತೆ ವರ್ಣಿಸುವ ವೈಚಿತ್ರ್ಯವೂ ಪ್ರತ್ಯಕ್ಷಾನುಭವದಿಂದಲೂ ಗ್ರಹಿಸಲಸಾಧ್ಯವಾದುದನ್ನು ಶಬ್ದಗಳ ಸಂವಿಧಾನದಿಂದ ಚಿತ್ರಿಸುವ ನೈಪುಣ್ಯವೂ ಬಹು ಶ್ಲಾಘನೀಯವಾಗಿವೆ.

ಇನ್ನು ಮೇಲೆ ಕಥೆಯು ಹೆಚ್ಚು ವ್ಯತ್ಯಾಸವಾಗದೆ ಯಥಾಕ್ರಮವಾಗಿ ರಾಜಸೂಯಾರಂಭದಿಂದ ಪಾಂಡವರ ಅರಣ್ಯಪ್ರವೇಶದವರೆಗೆ ಬಹು ಜಾಗ್ರತೆಯಿಂದ ಜಾರುವುದು. ಮೂಲಭಾರತದ ಪ್ರಕಾರ ಧರ್ಮನಂದನನು ಅರಣ್ಯ ಪ್ರವೇಶ ಮಾಡಿದೊಡನೆಯೇ ಋಷಿಗಳು ಬಂದು ಧರ್ಮೋಪದೇಶ ಮಾಡಬೇಕು. ಪಂಪನು ಈ ರಗಳೆಯನ್ನು ಬಿಟ್ಟಿರುವನು. ಹೇಗೋ ಹನ್ನೆರಡು ವರ್ಷಗಳು ಕಳೆಯಬೇಕು. ಅದಕ್ಕಾಗಿ ಕೆಲವು ಆಖ್ಯಾನಗಳನ್ನು ಮಾತ್ರ ನಿರೂಪಿಸುವನು. ಇಷ್ಟರಲ್ಲಿ ಅರ್ಜುನನು ಇಂದ್ರಕೀಲದಲ್ಲಿ ಈಶ್ವರನಿಂದ ಪಾಶುಪತಾಸ್ತ್ರವನ್ನು ಸಂಪಾದಿಸಿ ಕೊಂಡು ಬರುವನು. ಮುಂದೆ ಅಜ್ಞಾತವಾಸ, ಗೋಗ್ರಹಣ, ಕೃಷ್ಣದೌತ್ಯ, ಯುದ್ಧನಿರ್ಣಯ ಮೊದಲಾದುವುಗಳೆಲ್ಲ ಬಹಳ ಸಂಕ್ಷೇಪವಾಗಿಯೂ ಲಲಿತವಾಗಿಯೂ ನಿರೂಪಿತವಾಗಿವೆ.

ಇವೆಲ್ಲವೂ ಹತ್ತು ಆಶ್ವಾಸಗಳಲ್ಲಿ ಮುಗಿಯುವುವು. ಪಂಪನು ಮುಂದಿನ ನಾಲ್ಕು ಆಶ್ವಾಸಗಳನ್ನು ಪೂರ್ಣವಾಗಿ ಯುದ್ಧಕ್ಕಾಗಿಯೇ ವಿನಿಯೋಗಿಸಿಕೊಂಡಿರುವನು. ಪಂಪನು ಮನಸ್ಸು ಮಾಡಿದ್ದರೆ ಇದನ್ನು ಇನ್ನೂ ಕಡಿಮೆ ಮಾಡಬಹುದಾಗಿದ್ದಿತು. ಆದರೆ ಸಾಹಸಾಭರಣನ ಯುದ್ಧಕೌಶಲವನ್ನು ವಿಸ್ತಾರವಾಗಿ ವರ್ಣಿಸಬೇಕೆಂದೋ ಅಥವಾ ಸಮಸ್ತ ಭಾರತವನ್ನೂ ತಪ್ಪದೆ ಹೇಳಬೇಕೆಂದೋ ಹೀಗೆ ಮಾಡಿರುವನು. ಕೊನೆಗೆ ಪಾಂಡವರಿಗೆ ಜಯವಾಗಿ ವಿಕ್ರಮಾರ್ಜುನನಿಗೆ ಪಟ್ಟಾಭಿಷೇಕವಾಗುವುದು.

**ಪಂಪನ ಶೈಲಿ:** ಒಬ್ಬ ಕವಿಯ ಮಹತ್ತ್ವವನ್ನು ಅವನು ಬರೆಯುವ ಗ್ರಂಥದ ಶೈಲಿಯಿಂದ ಕಂಡುಹಿಡಿಯಬಹುದು. ಅವನ ಆವೇಶ, ಅವನ ಮನೋಭಾವ, ಅವನ ಜ್ಞಾನ, ಅವನ ವ್ಯಕ್ತಿತ್ವ-ಪ್ರತಿಯೊಂದೂ ಶೈಲಿಯಲ್ಲಿ ಕಾಣುವುದು. ಕವಿಯು ಸಾಮಾನ್ಯವಾದ ಹುಲುಗವಿಯಾದರೆ ಹಿಂದಿನ ಕಾವ್ಯಗಳನ್ನೇ ಮಾದರಿಯನ್ನಾಗಿಟ್ಟುಕೊಂಡು ಅವುಗಳ ಸಾರವನ್ನು ಗ್ರಹಿಸದೆ ನಿರ್ಜೀವವಾದ ಕಟ್ಟಡವನ್ನು ತೆಗೆದುಕೊಂಡು ಶಬ್ದಗಳ ಜೋಡಣೆಯಿಂದ ಒಂದು ಪಡಿಯಚ್ಚನ್ನು ನಿರ್ಮಿಸುವನು. ಇದರಲ್ಲಿ ಸತ್ವವಿರುವುದಿಲ್ಲ. ಜೀವವಿರುವುದಿಲ್ಲ, ಮನುಷ್ಯನ ಭಾವ ನಾಡಿಗಳನ್ನು ಮೀಟುವ ಆವೇಶವಿರುವುದಿಲ್ಲ. ಕವಿಯು ಅರ್ಥವಿಲ್ಲದ ಕವಿ ಸಮಯಗಳನ್ನು ಒಂದರ ಮೇಲೊಂದನ್ನು ಮೂಟೆ ಮೂಟೆಯಾಗಿ ತುಂಬಿ ಜುಗುಪ್ಸೆಯನ್ನುಂಟು ಮಾಡುವನು. ಹಾಗಲ್ಲದೆ, ಕವಿಯು ಪ್ರಜ್ಞಾಶಾಲಿಯೂ ಕಲ್ಪನಾ ಚತುರನೂ ಆದ ಪಕ್ಷದಲ್ಲಿ ಕಾವ್ಯದಲ್ಲಿ ಒಂದು ವಿಧವಾದ ಆವೇಶವನ್ನು ತುಂಬಿ ವಾಚಕನನ್ನು ತನ್ನವನನ್ನಾಗಿ ಮಾಡಿಕೊಳ್ಳುವನು. ಸಾಧಾರಣವಾಗಿ

ಕನ್ನಡ ಕವಿಗಳಲ್ಲನೇಕರಿಗೆ ಕಾವ್ಯಮರ್ಮವು ತಿಳಿಯದೆಂದೂ ವಾಚಕರ ಹೃದಯವನ್ನು ಹೊಗುವ ಶಕ್ತಿಯಿಲ್ಲವೆಂದೂ ಒಂದು ದೂರು ಇದೆ. ಆದರೆ ಕವಿತಾಗುಣಾರ್ಣವನಾದ ಪಂಪನ ವಿಷಯವೇ ಬೇರೆ; ಅವನು ಉತ್ತಮ ಕವಿಗಳ ತರಗತಿಗೆ ಸೇರಿದವನು. ಇವನ ಶೈಲಿಯಲ್ಲಿ ಒಂದು ವೈಯಕ್ತಿಕತೆ ಇರುವುದು. ಇವನು ಯಾವುದನ್ನು ವರ್ಣಿಸಿದರೂ ಮನದಟ್ಟಾಗುವಂತೆ ವರ್ಣಿಸುತ್ತಾನೆ. ಇವನ ವರ್ಣನೆಯನ್ನು ಓದುತ್ತ ಓದುತ್ತ ನಾವು ಮುಗ್ಧರಾಗಿ ಪಾತ್ರಗಳ ಜೊತೆಯಲ್ಲಿ ಐಕ್ಯವಾಗುವೆವು; ಕಥಾ ಶರೀರದಲ್ಲಿ ನಾವೂ ಭೂಮಿಕೆಗಳಾಗಿ ಬಿಡುವೆವು. ಪಂಪನ ಯಾವ ವರ್ಣನೆಯನ್ನು ತೆಗೆದುಕೊಂಡರೂ ಹೀಗೆಯೇ. ಬನವಾಸಿಯ ವರ್ಣನೆಯನ್ನು ನೋಡಿರಿ; ಅದನ್ನು ಓದಿದ ಕೂಡಲೇ ವಾಚಕನೂ ಸಹ ಬನವಾಸಿಯಲ್ಲಿ ಮರಿದುಂಬಿಯಾಗಿಯಾದರೂ ಹುಟ್ಟಬೇಕೆಂದುಕೊಳ್ಳುವನು. ಸುಭದ್ರಾಪರಿಣಯಕ್ಕೆ ಮುಂಚಿನ ವೇಶ್ಯಾವಾಟಿಕೆಯ ವರ್ಣನೆಯನ್ನು ಓದುವಾಗ ನಾವೇ ಆ ಬೀದಿಯಲ್ಲಿ ಹೋಗುತ್ತಿರುವೆವೋ ಎಂದುಕೊಳ್ಳುವೆವು. ದುಶ್ಯಾಸನನು ದ್ರೌಪದಿಯ ಕೇಶಗ್ರಹಣವನ್ನು ಮಾಡಿ ಎಳೆತರುವುದನ್ನು ಓದುವಾಗ ಪಾಪಿ ದುಶ್ಯಾಸನನನ್ನು ಸೀಳಿ ಬಿಡೋಣವೇ ಎನ್ನಿಸುವುದು. ಭೀಮಸೇನನು ಕಾಲಮೇಘದಂತೆ ಗರ್ಜಿಸಿ ಪ್ರತಿಜ್ಞೆ ಮಾಡುವುದನ್ನು ಓದುತ್ತಿದ್ದರೆ ನಮ್ಮ ಹೃದಯದಲ್ಲಿ ನಡುಕ ಹತ್ತಿ ಸ್ತಬ್ಧರಾಗುವೆವು. ಹಾಗೆಯೇ, ಬಿಟ್ಟ ಚಕ್ರವರ್ತಿಯ ಮುಡಿಯನ್ನು ಭೀಮನು ಒದೆಯುತ್ತಿದ್ದರೆ, 'ಛೀ ಭೀಮ! ನಿನಗೆಷ್ಟು ದುರಹಂಕಾರ! ನೀನು ಮೂರ್ಛಿತನಾಗಿ ಬಿದ್ದಿದ್ದಾಗ ದುರ್ಯೋಧನನು ನಿನ್ನಲ್ಲಿ ಕರುಣವನ್ನು ತೋರಿಸದಿದ್ದಿದ್ದರೆ ನೀನೇನಾಗುತ್ತಿದ್ದೆ? ಅವನು ನಿನ್ನಲ್ಲಿ ತೋರಿಸಿದ ಕರುಣೆಗೆ ಇದೇ ಪ್ರತಿಫಲ?' ಎಂದು ಹೇಳಲು ದ್ಯಕ್ತರಾಗುವೆವು. ಗದಾಯುದ್ಧ ಪ್ರಾರಂಭದಲ್ಲಿ ಹಲಾಯುಧನು ದುರ್ಯೋಧನನ್ನು 'ನೀಂ ಮರುಳ್ತನಮನೇಕೆ ಮಾಡಿದಯ್' ಎಂದುದಕ್ಕೆ ದುರ್ಯೋಧನನು 'ಪಾಂಡು ತನಯರ್ ನಿರ್ದೋಷಿಗಳ್; ಮದ್ಬಂಧು ಶೋಕಾಗ್ನಿಯಿಂದುರಿದಪ್ಪೆಂ' ಎನ್ನುತ್ತಿದ್ದರೆ, 'ದುರ್ಯೋಧನ! ನೀನು ನಿಜವಾಗಿಯೂ ಮಹಾನುಭಾವವೇ ಅಹುದು' ಎನ್ನುವೆವು. ಕೊನೆಯಲ್ಲಿ ಪಂಪನು ವಿಕ್ರಮಾರ್ಜುನನ ಪಟ್ಟಾಭಿಷೇಕ ಮಹೋತ್ಸವವನ್ನು ವರ್ಣಿಸುತ್ತಿರುವಾಗ ನಾವೂ ಅದರಲ್ಲಿ ಭಾಗಿಗಳಾಗಿ, ಪಾಂಡವರು ಹಸ್ತಿನಪುರವನ್ನು ಪ್ರವೇಶಿಸುವಾಗ ಅವರಿಗೆ ಸ್ವಾಗತವನ್ನು ಬಯಸುವ ಪಲ್ಲವಿತವಾದ ಆಮ್ರವನವನ್ನು ಕಣ್ಣಾರೆ ನೋಡುವೆವು. ಗುಡಿ ತೋರಣಗಳಿಂದ ವಿರಾಜಿಸುತ್ತಿರುವ ಬೀದಿಗಳಲ್ಲಿ ಓಡಾಡುವೆವು. ಸಂಸಾರ ಸಾರೋದಯನ ಒಡ್ಡೋಲಗದಲ್ಲಿ ವೈತಾಳಿಕರೂ ಮಂಗಳ ಪಾಠಕರೂ ಒಂದೇ ಕೊರಳಿನಲ್ಲಿ ಮಂಗಳ ವೃತ್ತವನ್ನೋದುತ್ತ, "ಅರಿಗಂಗೀಗೆ ಮಂಗಳ ಮಹಾ ಶ್ರೀಯಂ ಜಯ ಶ್ರೀಯುಮಂ" ಎಂದು ಹೇಳುತ್ತಿದ್ದರೆ ನಾವು ಅವರೊಡನೆ "ಅರಿಕೇಸರಿಗೆ ಜಯ" ಎನ್ನುತ್ತೇವೆ. ಇದೆಲ್ಲ ಏತರಿಂದ? ಪಂಪನ ಅನ್ಯಾದೃಶ ಶಕ್ತಿಯಿಂದಲ್ಲವೇ? ಅವನು ಯಾವುದನ್ನು ವರ್ಣಿಸಬೇಕಾದರೂ ತಾನು ಅದನ್ನು ಮೊದಲು ತನ್ನ ಮನಸ್ಸಿನಲ್ಲಿ ಚಿತ್ರಿಸಿಕೊಂಡು ಅದರ ಪ್ರತಿಬಿಂಬವೇ ವಾಚಕರಿಗೆ ತೋರುವಂತೆ ಅದನ್ನು ಸಹಜವಾದ, ಸ್ವಾಭಾವಿಕವಾದ ಮಾತಿನಿಂದ ಹೇಳುತ್ತಹೋಗುವುದರಿಂದ

ಅವನ ಆಯಾ ವರ್ಣನೆಗಳನ್ನು ಓದುವಾಗ ಆಯಾ ಚಿತ್ರಗಳೇ ವಾಚಕರೆದುರಿಗೆ ಜೀವದುಂಬಿ ನಟಿಸಿದಂತೆ ಭಾಸವಾಗುವುದು.

ಕವಿತಾ ಗುಣಾರ್ಣವನು ಉಭಯ ಭಾಷಾ ಪಂಡಿತನು. ಪಂಪ ಭಾರತವನ್ನು ಬರೆದುದು ಪಂಡಿತರನ್ನು ಮೆಚ್ಚಿಸುವುದಕ್ಕಾಗಿಯೂ ಅಹುದು. ಅಚ್ಚಗನ್ನಡ ಶೈಲಿಯಲ್ಲಿ ಬರೆಯುವುದು ಅವನ ಕಾಲಕ್ಕೆ ಇನ್ನೂ ರೂಢಿಯಾಗಿರಲಿಲ್ಲ. ಅಷ್ಟೇ ಅಲ್ಲದೆ ಸಂಸ್ಕೃತ ಪಂಡಿತರಾದ ಕನ್ನಡ ಕವಿಗಳು ತಮ್ಮ ಕನ್ನಡ ಕಾವ್ಯಗಳಲ್ಲಿಯೂ ಸಂಸ್ಕೃತವನ್ನೇ ತುಂಬಿ ಅದನ್ನೇ ಒಂದು ಗುಣವನ್ನಾಗಿ ಎಣಿಸಿದ್ದರು. ಹೀಗಿರುವಾಗ ಪಂಪನ ಭಾರತವು ಸಂಸ್ಕೃತ ಶಬ್ದ ಮಯವಾಗಿರುವುದಷ್ಟೇನೂ ಆಶ್ಚರ್ಯವಲ್ಲ; ಎಂದರೆ, ಸಂಸ್ಕೃತ ಶಬ್ದಗಳನ್ನೇ ಉಪಯೋಗಿಸಕೂಡದೆಂಬುದು ನಮ್ಮ ಅಭಿಪ್ರಾಯವಲ್ಲ. ಕನ್ನಡ ಭಾಷೆಯ ಮರ್ಯಾದೆಯು ನಾಶವಾಗದಷ್ಟು ಮಾತ್ರ ಉಪಯೋಗಿಸುವುದು ಸೂಕ್ತವಾಗಿ ಕಾಣುತ್ತದೆ. ಈ ದೃಷ್ಟಿಯನ್ನು ಪಂಪನೂ ಇಟ್ಟುಕೊಂಡಿದ್ದನೆಂದು ತೋರುವುದು. ಅದಕ್ಕಾಗಿಯೇ ಅವನು ಪುರಾಣವಾದ ಪುರಾಣದಲ್ಲಿ ತುಂಬಿರುವಷ್ಟು ಸಂಸ್ಕೃತ ಶಬ್ದಗಳನ್ನು ಲೌಕಿಕ ಕಾವ್ಯವಾದ ವಿಕ್ರಮಾರ್ಜುನ ವಿಜಯದಲ್ಲಿ ತುಂಬಿಲ್ಲ. ಸಂಸ್ಕೃತ ಶಬ್ದಗಳಿಂದ ಒಂದು ವಿಧವಾದ ಘೋಷವೂ ಆರ್ಭಟವೂ, ಢಣ ಢಣತ್ಕಾರವೂ ಬರುವುದೆಂಬುದು ಅವನಿಗೆ ಗೊತ್ತು. ಆದುದರಿಂದ ವೀರ ರಸ ಪ್ರಧಾನಗಳಾದ ಭೇರಿಯ ನಾದ, ಧೀರ ಪ್ರತಿಜ್ಞೆ, ಘೋರ ಯುದ್ಧ, ಜಯ ಘೋಷಣ - ಈ ಸಂದರ್ಭಗಳಲ್ಲಿ ಮಾತ್ರ ವಿಶೇಷವಾಗಿ ಸಂಸ್ಕೃತವನ್ನು ಉಪಯೋಗಿಸಿಕೊಂಡು ಮಿಕ್ಕೆಡೆಗಳಲ್ಲೆಲ್ಲ ಕನ್ನಡ ಪದಗಳನ್ನೇ ಉಪಯೋಗಿಸಿ ಉತ್ಕೃಷ್ಟ ಭಾಷಾ ಸರಣಿಯಲ್ಲಿ ತನ್ನ ಕಾವ್ಯವನ್ನು ರಚಿಸಿರುವನು. ಇವನ ಈ ಗ್ರಂಥದಲ್ಲಿ ಸಿಕ್ಕುವಷ್ಟು ಅಪೂರ್ವವಾದ ಅಚ್ಚಗನ್ನಡ ಪದಗಳು ಇನ್ನಾವ ಕಾವ್ಯದಲ್ಲಿಯೂ ಸಿಕ್ಕುವುದಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಆದರೂ ಇವನು ಬಹಳ ಉದ್ದವಾದ ಸಂಸ್ಕೃತ ಸಮಾಸಗಳನ್ನು ಅನೇಕ ಕಡೆ ಉಪಯೋಗಿಸುವುದರಿಂದ ಪದಗಳ ಒಂದರೊಡನೊಂದು ಸೇರಿಕೊಂಡು ಅರ್ಥಕ್ಕೆ ಬಹಳ ತೊಡಕನ್ನುಂಟುಮಾಡುವುದಲ್ಲದೆ ಉಚ್ಚಾರಣೆಗೂ ಬಹು ಕಷ್ಟವಾಗುವುದು. ಈ ಸಂಸ್ಕೃತ ಸಮಾಸಗಳಿರುವುದನ್ನು ಬಿಟ್ಟರೆ ಉಳಿದ ಕಡೆಗಳಲ್ಲೆಲ್ಲ ಶೈಲಿಯು ಸುಶ್ರಾವ್ಯವಾಗಿಯೂ ಮನೋಹರವಾಗಿಯೂ ಇರುವುದು.

ಪಂಪನ ಕಾವ್ಯವು ಸರ್ವರಿಗೂ ಆನಂದವನ್ನುಂಟುಮಾಡುವುದಕ್ಕೂ ಅವನ ತರುವಾಯ ಬಂದ ಕವಿಗಳು ಜಾತಿ ಮತ ಪಕ್ಷಪಾತವಿಲ್ಲದೆ "ಸುಭಗ ಕವಿ ಪಂಪನಿಂ ವಾಗ್ವಿಭವೋನ್ನತಿ ನೆಗಳ್ದುದು", 'ರಸಿಕಾಗ್ರಣಿ ಹಂಪದೇವಂ', 'ಸತ್ಕವಿ ಹಂಪನ ಕೃತಿಸೌಂದರೀ ಸುಭಗಂ', 'ಪಂಪನ ರೀತಿ', 'ಪಂಪನಿಂಪು', 'ಪಂಪನ ಗುಣಂ', 'ಪಂಪನೊಂದಸದೃಶಮಪ್ಪಪೂರ್ವ ರಸಭಾವಂ' ಎಂಬುದಾಗಿ ಪಂಪನ ಅಸಾಧಾರಣ ಶಕ್ತಿಯನ್ನು ತಮ್ಮ ತಮ್ಮ ಅನುಭವಾನುಸಾರವಾಗಿ ಸ್ತೋತ್ರ ಮಾಡುವುದಕ್ಕೂ ಅವನಲ್ಲಿದ್ದ ಕವಿತಾಶಕ್ತಿಯೂ ಅವನ ಶೈಲಿಯಲ್ಲಿದ್ದ ಕೆಲವು ಅಪೂರ್ವವಾದ ಗುಣಗಳೂ ಕಾರಣವೆಂದು ತೋರುತ್ತದೆ. ಅವುಗಳಲ್ಲಿ ಕೆಲವನ್ನು ಮುಂದೆ ನೋಡಬಹುದು:-

ಗುಣಗಳಿಗೆ ಮಾತ್ರ ಪ್ರಾಧಾನ್ಯ, ಗೌರವ. ಕುಮಾರವ್ಯಾಸನು ಮಹಾಕವಿ, ಕನ್ನಡಿಗ. ಆತನ ಆರಾಧ್ಯದೈವವಾದ ಗದುಗಿನ ವೀರನಾರಾಯಣ ಕನ್ನಡನಾಡಿನ ಪ್ರಧಾನ ದೇವತೆ. ಆ ದೇವಾಲಯದಲ್ಲಿ ಕವಿಯು ಕುಳಿತು ಕಾವ್ಯರಚನೆ ಮಾಡುತ್ತಿದ್ದ ನೆನಪು ಇಂದೂ ಉಳಿದಿದೆ. ಅವನು ರಚಿಸಿದ ಕಾವ್ಯವು ಕನ್ನಡಿಗರ ಬಾಳ ಬೆಳಕಾಗಿ ಸಂಸ್ಕೃತಿಯ ಕುರುಹಾಗಿ ಜ್ವಾಜ್ವಲ್ಯಮಾನವಾಗಿ ಬೆಳಗುತ್ತಿದೆ. ಕವಿಯು ಕನ್ನಡಿಗರ ಕ್ಲೈಬ್ಯವನ್ನು ಹೋಗಲಾಡಿಸಿ ಹಿರಿಯ ಆದರ್ಶದ ಕಡೆ ನಡೆಸುವ ಸೇನಾನಿಯಾಗಿದ್ದಾನೆ. ಅವನ ಮುಂದಾಳತ್ವದಲ್ಲಿ ನಡೆಯುವ ಪುಣ್ಯ ನಮ್ಮದಾಗಿದೆ. ಕವಿಯ ಆದರ್ಶವನ್ನು ಸಾಧಿಸಿ ನಮ್ಮ ಆತ್ಮಶ್ರೀಯನ್ನು ಬೆಳಸೋಣ.



# ಗುರುಭಕ್ತ ಚಾರಿತ್ರ

ಕವಿಚರಿತೆಕಾರರು 'ಕರ್ಣಾಟಕ ಕವಿಚರಿತೆ'ಯ ಎರಡನೆಯ ಸಂಪುಟದಲ್ಲಿ ಒಬ್ಬ ವಿರುಪರಾಜನ ವಿಷಯವನ್ನು ಹೇಳಿ ಅವನು 'ತ್ರಿಭುವನ ತಿಲಕ'ವೆಂಬ ಗ್ರಂಥವನ್ನು ರಚಿಸಿರುವನೆಂಬದಾಗಿ ತಿಳಿಸಿದ್ದಾರೆ. ಈಚೆಗೆ ಇದೇ ಹೆಸರಿನ ಕವಿಯಿಂದ ರಚಿತವಾದ 'ಗುರುಭಕ್ತಚಾರಿತ್ರ' ಅಥವಾ 'ಗುರುಭಕ್ತ ಚಾರಿತ್ರ ಪರಮರಹಸ್ಯ'ವೆಂಬ ಮತ್ತೊಂದು ಗ್ರಂಥವು ದೊರೆತಿದೆ. ಈ ಗ್ರಂಥವನ್ನು ಸ್ವಲ್ಪ ಪರಿಚಯಮಾಡಿಕೊಡಲು ಇಲ್ಲಿ ಪ್ರಯತ್ನಿಸುತ್ತೇವೆ.

'ತ್ರಿಭುವನತಿಲಕ'ವು ಶಕ ೧೪೪೧ನೆಯ ಪ್ರಮಾಥಿಯಲ್ಲಿ ರಚಿತವಾದುದರಿಂದ ವಿರುಪರಾಜನ ಕಾಲವು ೧೫೧೯ ಎಂಬುದಾಗಿ ಕವಿಚರಿತೆಯಲ್ಲಿ ಹೇಳಿದೆ. `ಗುರುಭಕ್ತಚಾರಿತ್ರ'ದ ಕೊನೆಯಲ್ಲಿ "ಮೀಱೆ ಶಕಾಖ್ಯಹಾಯನ ಸಹಸ್ರದ ಮೇಲಣ ಸಂಖೆಯಪ್ಪ ನಾನೂರರವತ್ತು ಮೂರನೆಯ ಪ್ಲವಸಂವತ್ಸರದಿಷುಮಾಸ.......... ಪಕ್ಷ ದಶಮೀ ದಿನದೊಳ್ ವಿರುಪೇಂದ್ರನಿಂದೆ ಕಾಲೂರಿ ದರಿತ್ರಿಯೊಳ್ ನೆಗುಳ್ದುದೀ ಕೃತಿಯಾರವಿಚಂದ್ರತಾರಕಂ." ಎಂಬುದಾಗಿ ಗ್ರಂಥರಚನಾಕಾಲವು ಶಕ ೧೪೬೩ನೆಯ ಪ್ಲವಸಂವತ್ಸರ ಅಂದರೆ ೧೫೪೧ ಎಂದು ಸೂಚಿತವಾಗಿದೆ. ಇದರಿಂದ, ಈ ಎರಡು ಗ್ರಂಥಗಳ ರಚನೆಗೆ ಮಧ್ಯೆ ೨೨ ವರ್ಷ ಅಂತರವಿದೆ; ಆದುದರಿಂದ ಈ ಎರಡು ಗ್ರಂಥಗಳೂ ಭಿನ್ನಕರ್ತೃಕಗಳೆಂಬ ಸಂಶಯವು ಹುಟ್ಟಬಹುದು. ಆದರೆ, ಎರಡು ಗ್ರಂಥಗಳಲ್ಲಿಯೂ ಕೊಟ್ಟಿರುವ ಕವಿಯ ವಂಶಪರಂಪರೆಯೂ ಒಂದೇ ಆಗಿರುವುದರಿಂದ ಈ ಎರಡು ಗ್ರಂಥಗಳೂ ಒಬ್ಬನಿಂದಲೇ ರಚಿತವಾದುವೆಂದು ನಿಸ್ಸಂದೇಹವಾಗಿ ಹೇಳಬಹುದು.

'ಗುರುಭಕ್ತ ಚಾರಿತ್ರ'ವು ಕುಸುಮಷಟ್ಪದಿಯಲ್ಲಿ ಬರೆದಿದೆ. ಸಂಧಿ ೧೫; ಪದ್ಯ ೭೭೫. ಗ್ರಂಥಾದಿಯಲ್ಲಿ "ಈ ಕೃತಿವೆಸರು ಮಧುರ ಮಂದಾರಂ" ಎಂದೂ, ಗ್ರಂಥಾಂತ್ಯದಲ್ಲಿ "ಮಧುರಮಂದಾರ ಮಾಚಂದ್ರಾರ್ಕತಾರಂ ರಂಜಿಸುಗೆ" ಎಂದೂ ಹೇಳಿರುವುದರಿಂದ ಈ ಗ್ರಂಥಕ್ಕೆ 'ಮಧುರಮಂದಾರ'ವೆಂಬ ಮತ್ತೊಂದು ಹೆಸರಿದ್ದಂತೆ ತೋರುತ್ತದೆ. ಇದರಲ್ಲಿ ಕರ್ಣಾಟಕದೇಶದ ಬೆಜ್ಜವಾಡಪುರದ ವಿಜಯರಾಜನ ಮಗ ಗುರುಭಕ್ತನು ತಿಳಿಯದೆ ತನ್ನ ಗುರುವಿನ ವೇಶ್ಯೆಯನ್ನು

ಅಪೇಕ್ಷಿಸಿ, ಆ ವಿಷಯವು ತಿಳಿದ ಮೇಲೆ ತಾನು ಮಾಡಿದ ಗುರುದ್ರೋಹಕ್ಕೆ ಪಶ್ಚಾತ್ತಾಪಪಟ್ಟು, ಶಿರಚ್ಛೇದನವನ್ನು ಮಾಡಿಕೊಳ್ಳಲು, ನಂದಿಯು ಬಂದು ಅವನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗಿ ಗಣಪದವಿಯನ್ನು ಕೊಟ್ಟ ಕಥೆ ಹೇಳಿದೆ. ಕಥೆಯ ಮಧ್ಯೆ ಪ್ರಾಸಂಗಿಕವಾಗಿ ಮಲುಹಣ, ಕಲ್ಯಾಣದ ಸತ್ಯಣ್ಣ, ಸುಂದರನಂಬಿ, ಮಹಾದೇವಿಯಕ್ಕ, ಶ್ವೇತ ಮೊದಲಾದ ಗುರುಭಕ್ತರ ಕಥೆಗಳು ಉಕ್ತವಾಗಿವೆ.

ಗ್ರಂಥಾವತಾರದಲ್ಲಿಯೂ ಪ್ರತಿಸಂಧಿಯ ಪ್ರಾರಂಭದಲ್ಲಿಯೂ ಮಲ್ಲಿಕಾರ್ಜುನಸ್ತುತಿ ಇದೆ. ಬಳಿಕ ಕವಿ ನಂದಿ, ಭೃಂಗಿ, ವೀರೇಶ, ಷಣ್ಮುಖ, ಗಣೇಶ, ಸರಸ್ವತಿ ಇವರುಗಳನ್ನು ಸ್ತೋತ್ರ ಮಾಡಿದ್ದಾನೆ. ಪೂರ್ವಕವಿಗಳನ್ನು ಮುಂದಿನ ಪದ್ಯದಲ್ಲಿ ಹೊಗಳಿದ್ದಾನೆ-

ಜಾಣ ಮಲುಹಣ ವಾಕ್ಪ । ವೀಣನುದ್ಭಟ ಪದ । ಪ್ರಾಣಪ್ರತಿಷ್ಠಿತ ಮಯೂರ ಶಿವನ ।
ಕೇಣಿಗೊಂಡ ಮಹಾತ್ಮ । ಬಾಣಮುಖ ಸತ್ಕವಿ । ಶ್ರೇಣಿಗೆರಗೀಕೃತಿಯನುಸಿರ್ವೆನೊಲಿದು॥

ತನ್ನ ಕಾವ್ಯದ ಉತ್ಕೃಷ್ಟತೆಯನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:-

ವರ್ಣಕ ಕವಿತ್ವ ವಿ । ಸ್ತೀರ್ಣದೊಳಗುಳ್ಳ ಗುಣ। ನಿರ್ಣಯಗಳಿಂದೆ ಕೋವಿದ ವಿತತಿಗೆ ।
ಕರ್ಣಾವತಂಸ ಭಾ । ವಾರ್ಣವವೆನಿಪ್ಪಂತೆ । ವರ್ಣಿಸುವೆನೀ ಮಹಾಕೃತಿಬಂಧವ ॥
ಕೆಟ್ಟಕನ್ನಡಗಳಳ । ವಟ್ಟು ದುಸ್ಸಂಧಿಯಿಂ । ದಿಟ್ಟಣಿಸಿ ಶಿಥಿಲಪ್ರಯೋಗದಿಂದ ।
ಕಟ್ಟುವಡೆಯದೆ ಸವಿಗ । ಳೊಟ್ಟಿಲಂ ತುರುಗಿ ನೇ । ರ್ವಟ್ಟು ಸುಪ್ರಾಸದಿಂದುಸಿರ್ವೆನಿದನು ॥
ಆಹವಾಂಗಣದಲ್ಲಿ । ದೇಹಮಂ ಬಿಟ್ಟು ಸಂ । ದೇಹಪದವೆಯ್ದಿದರ ಕಥೆಗಳಲ್ತು ।
ಸಾಹಸದಿ ಪುಂಗವಾ । ರೋಹಕನ ತನ್ನ ನಿಜ । ದೇಹವಿಡಿದೈದಿದರ ಸತ್ಕೃತಿಯಿದು ॥
ವಸುಧೆಯೊಳ್ ಗುರುಚರಣ । ಕುಸುಮಷಟ್ಪದನೆನಿಸಿ । ಜಸವಡೆದ ಗುರುಭಕ್ತಚಾರಿತ್ರವಾ ।
ಕುಸುಮಷಟ್ಪದಿಯಿಂದ । ರಸಭಾವಚಿತ್ರಂಗ । ಳೊಸರ್ವಂತೆ ಪೇಳ್ವೆ ಸಂತಸದಿಂದಲಿ ॥
ನವರಸಂ ಮಕರಂದ । ಮವಿರಳಾಲಂಕಾರ । ನಿವಹವೇ ಪರಿಮಳಂ ಭ್ರಮರಂಗಳೇ ।
ಕವಿಕುಲಮದಾಗೆ ತೋ ।ರುವುದರಿಂ ಮಿಗೆಮೋಹಿ । ಸುವ ಕುಸುಮಷಟ್ಪದಿಯನುಸಿರ್ವೆನೊಲಿದು॥
ಶ್ರೀಕಂಠವಂಶಾಬ್ಧಿ । ರಾಕೇಂದು ಚಿಕವಿರುಪ । ಭೂಕಾಂತನಾತ್ಮಭವ ಕಾಮನೃಪನ ।
ಆ ಕುಮಾರಂ ಸದ್ವಿ । ವೇಕಿ ವಿರುಪೇಂದ್ರನುಸಿ । ರ್ದಾ ಕಾವ್ಯ ಸೆರೆವಿಡಿಯದಾರ ಮನವಾ ॥
ಕೃತಿಯನುಸಿರ್ದವನಧಿಕ । ಚತುರ ವಿರುಪೇಂದ್ರನೀ । ಕೃತಿವೆಸರು ಮಧುರಮಂದಾರವೆಸೆವ ।
ಕೃತಿಗಧಿಕ ಗುರುಭಕ್ತ । ನತಿಶಯಾರ್ಥದಿ ಜಗ । ನ್ನುತಮೆನಲ್ಕೀ ಕಾವ್ಯ ಮೆರೆದಿರ್ಪುದು ॥
ಈ ಮಧುರಮಂದಾರ । ರಾಮಣೀಯಕ ಪದೋ । ದ್ದಾಮದಿಂ ಕಿವಿಗೆ ಸವಿಯಂ ಸೂಸುತ ।
ಕಾಮಿತಾರ್ಥವ ಬುಧ । ಸ್ತೋಮಕೊಲ್ದೀಯೆ ತ । ನ್ನಾಮ ಸಾರ್ಥಕವಾದುದೇವೇಳ್ವೆನು ॥

* ಕವಿಚರಿತೆ ಮೂರನೆಯ ಸಂಪುಟದ ಅನುಬಂಧದಲ್ಲಿ 'ಮಧುರಮಂದಾರ'ವೆಂಬ ಒಂದು ಗ್ರಂಥವು ಉಕ್ತವಾಗಿದೆ. ಅದೂ ಇದೂ ಒಂದೇ ಆಗಿದ್ದರೂ ಇರಬಹುದು.

ಅಲರ್ವಿಲ್ಲ ದನಿ ಸೊಗಸು । ವಳಿಗಳುಲಿ ತಂಗದಿರ ।ಪೊಳಪು ಬಂದೆಸೆವ ತೆಂಕಣ ಗಾಳಿಯು ।
ಸುಳಿವೆಸಲ್ ಮೋಹನಂ ।........ ಸರೇಂದ್ರಕುಲ ।ತಿಲಕ ಹೊಸ್ನೊರೆ ವಿರುಪಸೊಳ್ನುಡಿಗಳು॥

ಪ್ರತಿ ಸಂಧಿಯ ಕೊನೆಯಲ್ಲಿಯೂ ಈ ಎರಡು ಪದ್ಯಗಳು ಬರುತ್ತವೆ :-

ಮುಳಿಯಲಗಜಾತೆ ಸಂ । ಚಳಿಪ ಜಾಹ್ನವಿಯ ಬಗೆ । ದಿಳಿದುಮೆಗೆರಗದೆ ಕಾಲ್ವಿಡಿದು ತಿಳುಪಿ।
ಬಳಿಕಬಾಂಬೊಳೆಯೆರ್ದೆಯ। ಕಳವಳವ ಕಳಲ್ಚಿದ। ಗ್ಗಳ ಶಾಂತಮಲ್ಲಿಕಾರ್ಜುನ ಜಯಜಯ॥
ಗುರುಭಕ್ತಚಾರಿತ್ರ । ಪರಮಸುರಹಸ್ಯಮಂ । ಬರೆದೋದಿ ಕೇಳಿ ಲಾಲಿಸಿದವರ್ಗೆ ।
ವಿರುಪೇಂದ್ರನೆರೆಯ ಶಂ । ಕರ ಶಾಂತಮಲ್ಲೇಶ । ನಿರದೀಗೆ ಕಾಮಿತಫಲಪ್ರತತಿಯ ॥

ಇವನ ಬಂಧವು ಲಲಿತವಾಗಿದೆ. ಪದ್ಯಗಳು ಸರಳವಾಗಿರುವುವಲ್ಲದೆ ಚೆನ್ನಾಗಿ ಓಡುತ್ತವೆ. ಭಾಷಾಶೈಲಿಯು ಕನ್ನಡಪದಭೂಯಿಷ್ಠವಾಗಿದೆ. ಕವಿಗೆ ಶಬ್ದಾಲಂಕಾರ ಅರ್ಥಾಲಂಕಾರಗಳಲ್ಲಿ ಬಹಳ ಪ್ರೀತಿಯಿರುವಂತೆ ತೋರುತ್ತದೆ. ಅನುಪ್ರಾಸ, ರೂಪಕ, ಮಾಲೋಪಮೆ ಮತ್ತು ವಿರೋಧಾಭಾಸ ಈ ಅಲಂಕಾರಗಳು ಕಾವ್ಯ ಮಧ್ಯದಲ್ಲಿ ಅಲ್ಲಲ್ಲೇ ಬರುವುವು. ಕವಿಸಮಯವನ್ನು ಕವಿಯು ಹೆಚ್ಚಾಗಿ ಉಪಯೋಗಿಸುತ್ತಾನೆ. ಮುಖ್ಯವಾಗಿ ಶಿವಭಕ್ತಿಯ ರಹಸ್ಯವನ್ನು ತಿಳಿಸುವುದಕ್ಕಾಗಿ ರಚಿಸಿದ ಗ್ರಂಥವಿದು.



## ಅನಂತನಾಥಚರಿತೆ

ಇದು ಹದಿನಾಲ್ಕನೆಯ ತೀರ್ಥಂಕರನಾದ ಅನಂತನಾಥನ ಚರಿತ್ರೆಯನ್ನು(ಕ್ರಿ.ಶ. ೧೫೮೧) ತಿಳಿಸುವ ಸಾಂಗತ್ಯಗ್ರಂಥ. ಇದನ್ನು ರಚಿಸಿದವನು ಸಂಕೀಘಟ್ಟದ ಚಿಕ್ಕಪದ್ಮಣ ಸೆಟ್ಟಿಯೆಂಬವನು. ಇವನು ಜೈನಮತದವನು. ಈತನು ತನ್ನ ಗ್ರಂಥದಲ್ಲಿ ಸ್ವವಿಷಯವನ್ನೂ ಪ್ರಕೃತಗ್ರಂಥದ ರಚನೆಗೆ ಕಾರಣವನ್ನೂ ಈ ರೀತಿ ಹೇಳಿಕೊಂಡಿದ್ದಾನೆ:- ಸಂಕೀಘಟ್ಟವೆಂಬ ಗ್ರಾಮದಲ್ಲಿ ದರ್ಶನಶುದ್ಧನೂ ಸತ್ಕುಲೀನನೂ ಸಚ್ಚಾರಿತ್ರವುಳ್ಳವನೂ ಆದ ಚೆಂದಣ್ಣಸೆಟ್ಟಿಯೆಂಬವನು ಲಕ್ಷ್ಮೀಸೇನಭಟ್ಟಾರಕರ ಶಿಷ್ಯನಾಗಿ ಅವರ ಸೇವೆಯನ್ನು ಮಾಡುತ್ತಿದ್ದನು. ಪತಿವ್ರತಾಶಿರೋಮಣಿಯಾದ ಅವನ ಪತ್ನಿಯು ಇಚ್ಛೆಯರಿದು ಸತ್ಪಾತ್ರಕ್ಕೆ ವಿಶೇಷವಾಗಿ ಅನ್ನವನ್ನೀಯುತ್ತಿದ್ದುದರಿಂದ ಜನರು ಅವಳನ್ನು ಇಚ್ಛೆಯಮ್ಮನೆಂದೇ ಕರೆಯುತ್ತಿದ್ದರು. ಈ ದಂಪತಿಗಳು ಅತ್ಯಂತ ಜಿನಭಕ್ತರಾದುದರಿಂದ ಪೊಂಬುಜಪುರದ (ಹೊಮ್ಮುಚ) ಪದ್ಮಾವತೀದೇವಿಯು ಇವರ ಭಕ್ತಿಗೆ ಮೆಚ್ಚಿ ಎರಡು ಗಂಡುಮಕ್ಕಳನ್ನೂ ಒಂದು ಹೆಣ್ಣುಮಗುವನ್ನೂ ಅನುಗ್ರಹಿಸಿದಳು. ಹೆಣ್ಣುಮಗುವಿನ ಹೆಸರು ಪದ್ಮೆಯೆಂದು. ಗಂಡುಮಕ್ಕಳಲ್ಲಿ ಕಿರಿಯವನೂ ಪ್ರಸಕ್ತ ಗ್ರಂಥಕರ್ತನೂ ಆದ ಚಿಕ್ಕಪದ್ಮಣಸೆಟ್ಟಿಯು ಬಾಲ್ಯದಲ್ಲಿಯೇ ಕವಿತಾಪ್ರೌಢಿಮೆಯನ್ನು ಸಂಪಾದಿಸಿ ವಜ್ರಕುಮಾರ ಚರಿತೆಯನ್ನು ಕನ್ನಡದಲ್ಲಿ ರಚಿಸಿದನು. ಈ ಗ್ರಂಥದ ಸ್ವಾರಸ್ಯವನ್ನು ನೋಡಿ ಸುಪ್ರೀತನಾದ ಅದೇ ಊರಿನ ವಣಿಜಶ್ರೇಷ್ಠನೂ ಪಾಪರಹಿತನೂ ಪಿರಿಯನಾಗಲ ಗೋತ್ರದಲ್ಲಿ ಖ್ಯಾತಿವೆತ್ತವನೂ ಕರೆದೀವದಾನಿಯೂ ಆದ ಬುಸ್ಸೆಟ್ಟಿಯು ಚಿಕ್ಕಪದ್ಮಣಸೆಟ್ಟಿಯನ್ನು ಕರೆದು ಅನಂತನಾಥಚರಿತೆಯನ್ನು ರಚಿಸೆಂದು ಪ್ರೋತ್ಸಾಹಿಸಿದುದರಿಂದ ಆತನ ಆಜ್ಞೆಯ ಪ್ರಕಾರ ಕವಿಯು ಹಿಂದೆ ಕವಿಭಾಳಲೋಚನನಾದ ಜನ್ನಮಯ್ಯನು ನವರಸ ಭರಿತಾಷ್ಟಾದಶ ವರ್ಣನಾಯುಕ್ತವಾಗಿ ಚಂಪೂಶೈಲಿಯಲ್ಲಿ ರಚಿಸಿದ್ದ "ಅನಂತನಾಥ ಪುರಾಣ"ವನ್ನೇ ಆಧಾರವಾಗಿಟ್ಟುಕೊಂಡು ಪ್ರಸಕ್ತ ಗ್ರಂಥವನ್ನು ಸಂಕೀಘಟ್ಟದ ವರ್ಧಮಾನಜಿನನ ಸನ್ನಿಧಿಯಲ್ಲಿ ರಚಿಸಿದನು.

"ಅನಂತನಾಥಚರಿತೆ"ಯ ರಚನೆಯು ಶಕ ೧೫೦೩ (ಕ್ರಿ. ಶ. ೧೫೮೧)ನೆಯ ವಿಷು ಸಂವತ್ಸರದ ಶ್ರಾವಣ ಶುದ್ಧ ೧೧ ಭಾರ್ಗವವಾರದ ದಿನ ಪ್ರಾರಂಭವಾಗಿ ಅದೇ ವರ್ಷದ ಮಾರ್ಗಶೀರ್ಷ ಬಹುಳ ಮಂಗಳವಾರದ ದಿನ ಮುಗಿಯಿತೆಂದು ಗ್ರಂಥದ ಕೊನೆಯ ಪದ್ಯಗಳಿಂದ ತಿಳಿದುಬರುತ್ತದೆ.

ಗ್ರಂಥಾದಿಯಲ್ಲಿ ಪಂಚಪರಮೇಷ್ಠಿಗಳು, ವೃಷಭಸೇನನಿಂದ ಗೌತಮಸ್ವಾಮಿಯವರೆಗಿನ ಗಣಧರರು, ಸರಸ್ವತಿ, ಅನಂತಮತಿಯಕ್ಷಿ, ಪಾತಾಳಯಕ್ಷ, ಪದ್ಮಾವತೀ ದೇವಿ, ಕುಂಡಕುಂದಾಚಾರ್ಯ, ಜಟಾಸಿಂಹನಂದಿ, ಪುಷ್ಪದಂತ, ಸಮಂತಭದ್ರ, ಗುಣಭದ್ರ, ಪೂಜ್ಯಪಾದ, ಅಕಲಂಕ, ಬಲ್ಲಾಳರಾಯನನುವನ್ನು ಕಾಯ್ದ ಸಲ್ಲಲಿತಾಂಗ ಪಂಡಿತ, ವಾದಿವಿದ್ಯಾನಂದ ಮೊದಲಾದವರ ಸ್ತುತಿಯಿದೆ.

ಪೂರ್ವ ಕವಿಗಳಲ್ಲಿ ಪಂಪ, ಗುಣನಂದಿ, ಅಗ್ಗಳ, ಗುಣವರ್ಮ, ನಾಗಚಂದ್ರ, ಸುಜನೋತ್ತಂಸ, ಮನಸಿಜ, ಮಧುರ ಇವರುಗಳ ಪ್ರಾರ್ಥನೆಯಿದೆ.

ಅನಂತನಾಥಚರಿತೆಯು ಸಾಂಗತ್ಯದಲ್ಲಿ ರಚಿತವಾಗಿದೆ. ಇದರಲ್ಲಿ ೨೬ ಸಂಧಿಗಳೂ ೩,೪೦೦ ಪದ್ಯಗಳೂ ಇವೆ. ಪ್ರತಿಯೊಂದು ಸಂಧಿಯ ಆದ್ಯಂತಗಳಲ್ಲಿಯೂ ಅನಂತನಾಥನ ಸ್ತೋತ್ರವಿದೆ. ಈ ಗ್ರಂಥದಲ್ಲಿ ಕವಿಯು ಅನಂತನಾಥ ತೀರ್ಥಂಕರನ ಗರ್ಭಾವತರಣಾದಿ ಪಂಚಕಲ್ಯಾಣಗಳು, ಜೈನತತ್ತ್ವೋಪದೇಶ, ಮೋಕ್ಷದಾಯಕಗಳಾದ ವ್ರತತಪಸ್ಸುಗಳು ಇವುಗಳನ್ನೂ ಅನಂತನ ಬಾಲ್ಯಲೀಲೆ, ಯೌವನಾವಿರ್ಭಾವ, ವಿವಾಹ, ಯೌವನವಿಲಾಸ, ವಿಷಯಾನುಭವ ಮತ್ತು ಅದಕ್ಕೆ ಉದ್ದೀಪನಗಳಾದ ವಸಂತಾದಿ ವರ್ಣನೆಗಳು ವಿಷಯಜಿಹಾಸೆ ಕೇವಲ ಜ್ಞಾನೋತ್ಪತ್ತಿ ಮೊದಲಾದುವುಗಳನ್ನೂ ಹಾಸುಹೊಕ್ಕಾಗಿ ನೆಯ್ದು ಸುಲಭವಾದ ಸಾಂಗತ್ಯಗಳಲ್ಲಿ ಹೃದಯಂಗಮವಾಗಿ ವರ್ಣಿಸಿದ್ದಾನೆ. ೧೬ನೆಯ ಶತಮಾನದ ಸಾಂಗತ್ಯವಾದುದರಿಂದ ಗ್ರಂಥದ ಶೈಲಿಯು ಸರಳವಾಗಿಯೂ ಲಲಿತವಾಗಿಯೂ ಇದೆ. ಕವಿಯೇ ತನ್ನ ಗ್ರಂಥವನ್ನು `ದಾರ್ಶನಿಕರ ಮನದನುರಾಗ', `ಸಚ್ಚಾರಿತ್ರ ಮದನಮಂಜರಿ', `ಸುಗುಣರ ಮೆಚ್ಚು', `ಪುಣ್ಯಚರಿತದ ಕೆಚ್ಚು', `ಹೃದಯದ ಮಿಥ್ಯಾಟವಿಗಿದು ಕಿಚ್ಚು', `ಭವ್ಯರ ಹೃತ್ಕಮಲಭಾಸ್ಕರ', `ಸುಕೃತದ ಸುಖದೇಳ್ಗೆ', `ಸದ್ಗತಿಗೆ ಸಂಧಾನ', `ಕರ್ಮಾಚಲದುರಿತವಜ್ರಕರಿಗಿದು ಕಂಠೀರವ' ಎಂದು ಹೇಳಿಕೊಂಡಿದ್ದಾನೆ. ಗ್ರಂಥಪರಿಚಯಕ್ಕಾಗಿ ಕೆಲವು ಪದ್ಯಗಳನ್ನು ಎತ್ತಿ ಬರೆದಿದೆ:-

**ಸೂರ್ಯಾಸ್ತಮಾನ**

ತಿಮಿರಬಲವು ಬೆಂಬತ್ತಿ ಬಿಡದೆ ಬರೆ । ದ್ಯುಮಣಿಪ್ರತಾಪದುಬ್ಬಿನೊಳು ।
ಸಮರಕೆ ಪೊಂಬರಿಗೆಯನೊಡ್ಡಿ ನಿಂದಂ । ತಮಮಪ್ಪೊಪ್ಪಿದುದರ್ಕಬಿಂಬ॥

ದಿನಕರನುಷ್ಣಕಾಯಲು ಲೋಕವೆಲ್ಲವು । ಘನನೊಂದು ಸುಯ್ಯಲಾದೋಷ ।
ತನಗಾಗೆ ಕಳೆಯಲೆಂದದ್ರಿಯನೇಱಿ ತಾ । ಮನವೋತು ಬಿದ್ದನೇನೆಂಬೆ ॥
ಉನ್ಮಾರ್ಗದೊಳು ಚರಿಸಿದ ದೋಷವನು ತಾ । ನೊಮ್ಮೆಯೇ ಕಳೆಯಲೆಂದಾಗ ।
ಸುಮ್ಮಾನದಿಂದರ್ಕಶರಧಿಸ್ನಾನವ ಮಾಡಿ । ಗಮ್ಮನೆ ಮುಳುಗಿದಂತಾಯ್ತು ॥

**ವಸಂತಾಗಮನ**

ತೆಂಕಣೆಲರ ತಂಪಾದ ಶೀತದೊಳುಬ್ಬಿ । ಕಂಕೆಲ್ಲಿಯದಿರ್ಗಂತಿ ಗೂಡಿ ।
ಬಿಂಕದ ನನೆಕೊನೆಯೋದ ವಸಂತದ । ಅಂಕುರವಾದ ವೇಳೆಯನು ॥

ನಗೆ ಪೊದಳ್ದಬ್ಜದೊಳೊಗ್ಗುಡಿಗೊಂಡುದು । ಮಿಗೆ ಚೂತದ ಕೊನರ್ಗಚ್ಚಿ ।
ಬಗೆಯುಣ್ಮೆ ಕೋಗಿಲೆ ನಿಸ್ವನಗೆಡೆದುದು । ವೊಗುಮಿಗಲಾ ವಸಂತದೊಳು ॥
ಇಮ್ಮಾವಿನೆಳಕಳಿಕೆಯನುಗುರೊತ್ತಿಂದ । ಚಿಮ್ಮಿಸಿ ರಸವ ಬಾಯ್ದೆಱೆಗೆ ।
ಗಮ್ಮನೆ ತಂದು ಕುಕಿಲ್ಪುಗಿಲ್ಪುಗಿಲೆಂ । ದುಣ್ಣುವ ಪರಪುಟ್ಟನಂದು ॥

**ಅಡ್ಡಗಟ್ಟಿ ತಡೆದ ಚಂಡಶಾಸನನಿಗೆ ಸುನಂದೆಯ ಉತ್ತರ**

ದೇಶಿಗಿತ್ತಿಯ ನುಡಿವಂತೆ ಭೋಗಂಗಳ । ಲೇಸನೊಪ್ಪಚಿಗಾಣದವಳ ।
ಭಾಸುರಭಾಗ್ಯವಿಲ್ಲದರ ನುಡಿವೊಲೆನ್ನ । ಘಾಸಿಮಾಡುವರೆನಿಸಿತಾಗ ॥
ನಿನ್ನ ಸಂಪದವ ತೋಱೆನ್ನ ಕಾಡುತಲಿರ್ಪ । ನಿನ್ನ ತಲೆಯ ವಸುಷೇಣ ।
ಮನ್ನಿ ಸದರಿದಾಗ ಎನ್ನೊಳು ನುಡಿಯೆಂದು । ಚೆನ್ನೆ ಮೂದಲಿಸಿದಳಾಗ ॥
ಪತಿಯಿರೆ ಪಾಣ್ಬಗೊಲಿವಳೆ ಪತಿವ್ರತೆ । ಸಿತಗ ನೀ ಕೇಳ್ಕಮಲಿನಿಯು ।
ಅತಿಶಯದಿಂ ರವಿಯೊಳು ಕೂರ್ಪಳಲ್ಲದೆ । ಖತಿಮಾಡದಿಹಳೇ ಚಂದ್ರನೊಳು ॥
ಸಹಕಾರವೇಱಿ ನಲಿವ ಪಿಕ ಬೇವಿನೊ । ಳಿಹವೇ ಮನದ ಬಯಕೆಯೊಳು ।
ಮಹೀಪತಿ ವಸುಷೇಣ ಮತ್ಪ್ರಿಯನಿರಲನ್ಯ । ಮಹೀಪತಿಗೆಳಸುವೆನೇ ॥
ಎಸೆವ ಸರೋವರದೊಳಗಿರ್ಪ ಕಳಹಂಸ । ಕಸದ ಕುಳಿಯೊಳು ಜೀವಿಪುದೇ ।
ಅಸಹಾಯ ವಸುಷೇಣನಿರೆ ನಿನಗೊಲಿವುದು । ಪುಸಿ ಪೋಗು ಕೇಳೆಲೆ ಪೊಲೆಯ ॥



ಕವಿ ಕಾವ್ಯ ವಿಚಾರ - ೩

## ನವಮೋಹನ ತರಂಗಿಣಿ*

ಇದು ಅಷ್ಟಾದಶ ವರ್ಣನೆಗಳಿಂದ ಕೂಡಿದ ಒಂದು ದೊಡ್ಡ ವರ್ಣಕ ಗ್ರಂಥ. ಇದನ್ನು ರಚಿಸಿದವನು ಕೋಳೂರ ಶಂಕರನೆಂಬವನು. ಇದರಲ್ಲಿ ಮನ್ಮಥವಿಜಯ, ಶಂಬರಾಸುರವಧೆ, ಉಷಾಪರಿಣಯ ಈ ಮೂರು ಕಥೆಗಳೂ ಒಟ್ಟಾಗಿ ವರ್ಣಿತವಾಗಿವೆ. ಕವಿಯೇ ಗ್ರಂಥಾಂತ್ಯದಲ್ಲಿ ಇದು ಕಲ್ಪನಾ ಕಥೆಯಲ್ಲವೆಂದೂ ಶಂಕರ ಸಂಹಿತೆ ಮತ್ತು ಭಾಗವತದ ಆಧಾರದ ಮೇಲೆ ರಚಿತವಾಗಿರುವುದೆಂದೂ ಹೇಳಿರುತ್ತಾನೆ. ಕವಿಯು ತನ್ನನ್ನು `ಕೋಳೂರ ರಾಮೇಶ್ವರನ ಬೆಸನಮನಾಂತು ಅತಿಪುಣ್ಯ ದಂಪತಿಗಳಹ ಬಸವರಸ ನಾಗಾಂಬೆಯರ ಗರ್ಭಸುಕ್ಷೀರವಾರ್ಧಿ ವರ್ಧಿಸುವ ಪೂರ್ಣಶಶಿಧರನು ಎನಿಪ ಶಂಕರನ್' ಎಂದು ಸಂಬೋಧಿಸಿಕೊಂಡಿದ್ದಾನೆ. ಈತನು ವೀರಶೈವ. "ಕೋಳೂರ ಕೊಡಗೂಸು ಚೆನ್ನಮ್ಮನುರುತರದ ಭಾವದ ಭಕ್ತಿಗಂ ಮೆಚ್ಚಿ ಕರುಣದಿಂದವಳಿತ್ತ ಪಾಲ್ಸವಿದ ರಾಮೇಶ್ವರನೆ" ಈತನ ಕುಲದೈವ. ಕವಿಯು ತಾನು ಕವಿತಾದಿ ಲಕ್ಷಣಗಳನ್ನು ಓದಿದವನಲ್ಲವೆಂದೂ "ಜಾತ್ಯಂಧಕನ ಬಿಡದೆ ಕೋಲಂ ಪಿಡಿದು ಮುಂದೆ ನಡೆಸಲವಂ ಪೋಪಂತೆ ಶಿವನೊಲಿದು ಮದ್ವದನದಿ ನಾಲಗೆಯೆ ತಾನಾಗಿ ನುಡಿಸಿದಡೆಯುಸುರುವೆನು" ಎಂದೂ ಆದುದರಿಂದ ಗ್ರಂಥದ ಗುಣದೋಷಗಳು ಪೂರ್ಣವಾಗಿ ಅವನಿಗೇ ಸಲ್ಲತಕ್ಕವುಗಳೆಂದೂ ಶಿವ ನುಡಿಸಿದಂದದಿ ನುಡಿಯುತ್ತಿರುವುದರಿಂದ ಇದರಲ್ಲಿ ಕವಿತಾದಿ ಲಕ್ಷಣ ಶಬ್ದ ಭೇದಮನೆಣಿಸಿ ಕಡೆಗಳೆಯದೆ ಬಾಲಕನ ತೊದಳ್ನುಡಿಯೆಂದು ತಿದ್ದಿ" ಸವಿಯಬೇಕೆಂದೂ ಕೇಳಿಕೊಂಡಿದ್ದಾನೆ.

---

* ಇದು ಮೈಸೂರು ಪ್ರಾಚ್ಯ ಕೋಶಾಗಾರದ ಕೆ. ಎ. ೩೦೫ನೆಯ ನಂಬರಿನ ಕಾಗದದ ಕೈಬರಹ ಪ್ರತಿ. ಇದು ಲೈಬ್ರೆರಿಯ ಕ್ಯೂರೇಟರವರು ಉತ್ತರ ಕರ್ನಾಟಕದಲ್ಲಿ ಸಂಚಾರಕ್ಕೆ ಹೋಗಿದ್ದಾಗ ಬಳ್ಳಾರಿಯ ಶ್ರೀ ಮರಿಸ್ವಾಮಿಗಳ ಮಠದಿಂದ ತಂದ ಕೈಬರಹದ ಪ್ರತಿಯಿಂದ ಪ್ರತಿಯಾದುದು. ಮೂಲಪ್ರತಿಯು ಶಾ॥ ೧೭೭೦ನೆಯ ಪ್ಲವಸಂವತ್ಸರದಲ್ಲಿ ಪ್ರತಿಯಾದುದು.

ಗ್ರಂಥಾದಿಯಲ್ಲಿ ಕವಿಯು ಕೋಳೂರ ರಾಮೇಶ, ಶಿವಪತ್ನಿ, ಸರಸ್ವತಿ, ಶಿವಪುತ್ರ, ಶಿವಪ್ರಮಥ, ಶಿವಭಕ್ತರುಗಳನ್ನು ಸ್ತುತಿಸಿ ಮುಂದಿನ ಪದ್ಯಗಳಲ್ಲಿ ಶಿವಗಣಗಳನ್ನೂ ಪ್ರಭುದೇವ, ಬಸವಣ್ಣ, ಚೆನ್ನಬಸವಣ್ಣ, ಹರಿಹರ, ರಾಘವ, ಪಾಲ್ಕುರಿಕೆ ಸೋಮ, ಚಾಮರಸ, ಪಂಡಿತಾರಾಧ್ಯ ಮುಂತಾದ ಶಿವಕವಿಗಳನ್ನೂ ಪ್ರಾರ್ಥನೆ ಮಾಡಿದ್ದಾನೆ.

ಪ್ರತಿಸಂಧಿಯ ಪ್ರಾರಂಭದಲ್ಲಿಯೂ ಕೋಳೂರ ರಾಮೇಶನ ಮತ್ತು ಗಿರಿಜೆಯ ಪ್ರಾರ್ಥನಾಪದ್ಯಗಳಿವೆ. ಇವುಗಳು ಸಾಮಾನ್ಯವಾಗಿ ಶಬ್ದಾಲಂಕಾರಾದಿ ಆಡಂಬರಗಳಿಂದ ಕೂಡಿ ಪೆಡಸಾಗಿದ್ದರೂ ಕೆಲವೆಡೆ ಮನೋರಂಜಕವಾಗಿವೆ.

ಪ್ರತಿಸಂಧಿಯ ಕೊನೆಯಲ್ಲಿಯೂ ಮುಂದಿನ ಪದ್ಯ ಬರುತ್ತದೆ-

ಇದುವೆ ಬಾಣಾಖ್ಯ ಸಾಯುಜ್ಯಪ್ರಬಂಧ ಮ
ತ್ತಿದುವೆ ನವಮೋಹನ ತರಂಗಿಣಿಯಭಿಧಾನ
ಯಿದನು ಶ್ರೀ ಕೋಳೂರ ರಾಮೇಶ ನುಡಿಸಿದೊಡೆ ಪೇಳ್ದ ಶಂಕರನು ನಲಿದು।
ಇದನು ಸರಸೋಕ್ತಿಯಿಂ ಬರದೋದಿ ಪೇಳ್ಕೇಳ್ವ
ಸದುಹೃದಯರಾದ ಸತ್ಪುರುಷರಿಗೆ ಸಂತಸದಿ
ಕುಧರಜಾರ್ಧಾಂಗ ಸೌಭಾಗ್ಯಸಂಪದಸೌಖ್ಯವಿತ್ತು ರಕ್ಷಿಸುವ ಬಿಡದೆ॥

ಗ್ರಂಥಾಂತ್ಯಪದ್ಯದಿಂದ ಈ ಗ್ರಂಥವು ಶಕ ೧೮೭೭ನೆಯ ಮನ್ಮಥ ಸಂವತ್ಸರದ ಫಾಲ್ಗುಣ ಶುದ್ಧ ತದಿಗೆ ರೇವತಿಯ ನಕ್ಷತ್ರದ ದಿವಸ ಅಂದರೆ ಕ್ರಿ. ಶ. ೧೭೭೫ನೆಯ ಮಾರ್ಚಿ ನಾಲ್ಕನೆಯ ತಾರೀಖಿನ ದಿನ ಸಂಪೂರ್ಣವಾಯ್ತೆಂದು ತಿಳಿದುಬರುತ್ತದೆ.

'ನವಮೋಹನ ತರಂಗಿಣಿ'ಯು ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿದೆ. ಇದರಲ್ಲಿ ೩೩ ಸಂಧಿಗಳೂ ೨,೦೧೧ ಪದ್ಯಗಳೂ ಇವೆ. ಇವುಗಳಲ್ಲಿ ಕ್ರಮವಾಗಿ ಬಾಣಾಸುರನ ರಾಜ್ಯವೈಭವ, ದೇವತೆಗಳಿಗೆ ತಾರಕಾಸುರನ ಬಾಧೆ, ಬ್ರಹ್ಮನಿಗೆ ವಿಷ್ಣುವಿನ ಉಪದೇಶ, ಬೃಹಸ್ಪತಿಯು ಶಿವನ ತಪಸ್ಸನ್ನು ಭಂಗಪಡಿಸಲು ಮನ್ಮಥನನ್ನು ಪ್ರೇರೇಪಿಸುವುದು, ಮನ್ಮಥನ ಪ್ರಯಾಣ ಮತ್ತು ಮರಣ, ರತಿಯ ಪ್ರಲಾಪ ಮತ್ತು ಈಶ್ವರನ ಅಭಯಪ್ರದಾನ, ಶಂಬರನ ಮನೆಯಲ್ಲಿ ರತಿಯ ವಾಸ ಮತ್ತು ಅವಳಲ್ಲಿ ಶಂಬರನ ವ್ಯಾಮೋಹ, ದ್ವಾರಕಾಪುರದಲ್ಲಿ ಕೃಷ್ಣರುಕ್ಮಿಣಿಯರ ವೈಭವ, ಪ್ರದ್ಯುಮ್ನನ ಜನನ, ಶಂಬರಾಸುರನ ವಧೆ, ರತೀಪ್ರದ್ಯುಮ್ನರ ವಿವಾಹ, ಬಾಣಾಸುರನ ಶಿವಪೂಜೆ, ಉಷಾಜನನ, ಉಷೆಯ ಶೈಶವ, ಅಂಬಿಕಾಪೂಜೆ ಮತ್ತು ವರಪ್ರಸಾದ, ಉಷಾವಿರಹ, ಉಷಾನಿರುದ್ಧರ ಸಮಾಗಮ, ಕೃಷ್ಣಬಾಣಾಸುರರ ಯುದ್ಧ, ಉಷಾ ಪರಿಣಯ - ಇವುಗಳು ಅಷ್ಟಾದಶವರ್ಣನೆಗಳೊಡನೆ ಕೂಡಿ ವಿಸ್ತಾರವಾಗಿ ವರ್ಣಿತವಾಗಿವೆ. ಕವಿಯು ಗ್ರಂಥವನ್ನು ಮಹಾಕಾವ್ಯವನ್ನಾಗಿ ಮಾಡಬೇಕೆಂಬ ಉದ್ದೇಶದಿಂದ ಅನಾವಶ್ಯಕವಾಗಿ ಬೆಳಸಿಕೊಂಡು

ಹೋಗಿರುವ ಭಾಗವನ್ನು ಬಿಟ್ಟು ಉಳಿದ ಭಾಗಗಳನ್ನು ನೋಡಿದರೆ ಗ್ರಂಥವು ಉತ್ತಮ ಷಟ್ಪದಿ ಗ್ರಂಥಗಳ ಮಟ್ಟಕ್ಕೆ ಏರುತ್ತದೆಂದು ಹೇಳಬಹುದು. ಕವಿಯು ತಾನೇ ಹೇಳಿಕೊಂಡಿರುವಂತೆ ಶಾಸ್ತ್ರಜ್ಞನಲ್ಲದಿರುವುದರಿಂದಲೋ ಏನೋ ಅನೇಕ ಕಡೆಗಳಲ್ಲಿ ವ್ಯಾಕರಣದ ಮರ್ಯಾದೆಗಳನ್ನು ಮೀರಿದ್ದಾನೆ. ಆದರೂ ಕವಿಗೆ ಒಳ್ಳೆಯ ವಾಕ್ಪಟುತ್ವವೂ ಶಬ್ದಶಕ್ತಿಯೂ ವರ್ಣನಾ ಚಾತುರ್ಯವೂ ಇವೆ. ಉತ್ತಮ ವೀರಶೈವನಾದುದರಿಂದ ಬಾಣಾಸುರನ ಶಿವಪೂಜೆಯನ್ನೂ ಉಷೆಯ ಅಂಬಿಕಾಪೂಜೆಯನ್ನೂ ಹೃದಯಂಗಮವಾಗಿ ವರ್ಣಿಸಿದ್ದಾನೆ.

ಇದು ಕೃಷ್ಣ ವನವಿಹಾರಗೃಹದ ವರ್ಣನೆ-

ಮರುಗಪಚ್ಚೆಯ ದವನದಿಂದೆ ತಡಿಕೆಯ ಬಿಗಿದು
ಸುರಚಿರಸುಲಾಮಚದಿಂದ ಪಂದಲ ರಚಿಸಿ
ವರಬಕುಳ ಚಂಪಕ ಮೊಲ್ಲೆ ಮಲ್ಲಿಗೆ ಜಾಜಿ ಯಿರವಂತಿ ಶಾಮಂತಿಯ ।
ಪರಿಪರಿಯ ಪುಷ್ಪಮಾಲೆಯ ಲೋವೆಯಿಂ ತೀವಿ
ಮೆಚೆವ ಪೊಂಗದಳಿಸ್ತಂಭಂಗಳಂ ನಿಲಿಸಿ ಬಂ
ಧುರ ಮಳಲ ವೇದಿಕೆಯ ಮೇಲೆ ಮಾಂದಳಿರ ಪಾಸಿಕೆಗೈದು ಕಸ್ತೂರಿಯ ॥
ಜಲದಿಂದ ಚೆಳಗೊಟ್ಟು ಕರ್ಪೂರ ಚೂರ್ಣದಿಂ
ದಲಿ ರಂಗವಲ್ಲಿಯಂ ರಚಿಸಿಯತಿಚಿತ್ರದಿಂ
ಸಲೆ ವಿರಾಜಿಪ ವಸಂತವನಮಂಟಪ ರಮ್ಯತರವೆತ್ತು ಕಂಗೊಳಿಸುವ ।
ಚೆಲುವ ಚಂಪಕಮಾಲೆ ನವಿಲಿನುಯ್ಯಾಲೆ ಮಂ
ಗಳವೆತ್ತು ವೊಪ್ಪುತಿರೆ ಲಲನೆಯರ ಕೂಡಿ ಶ್ರೀ
ನಳಿನನಾಭನು ಬಂದು ಪೊಗಲು ಬಹುಕಂಪುತಂಪಂ ಸೊಂಪನಿಮ್ಮಡಿಸಿತು ॥

ಗ್ರಂಥದ ಶೈಲಿಯು ಸರಸವಾಗಿಯೂ ಲಲಿತವಾಗಿಯೂ ಇದೆ. ವರ್ಣನೆಗಳಲ್ಲಿ ನಮ್ಮ ಸುತ್ತಲಿರುವ ಮತ್ತು ನಮಗೆ ಸುಲಭವಾಗಿ ಅರ್ಥವಾಗಬಹುದಾದ ಉಪಮಾನಗಳನ್ನೂ ಗಾದೆಗಳನ್ನೂ ಕವಿಯು ವಿಶೇಷವಾಗಿ ಉಪಯೋಗಿಸಿಕೊಂಡಿದ್ದಾನೆ.

ಕವಿಯು ಗ್ರಂಥವನ್ನು ತನ್ನ ಪ್ರಿಯಳಿಗೆ ಹೇಳುತ್ತಿರುವುದರಿಂದ ಗ್ರಂಥಕ್ಕೆ ಒಂದು ವೈಶಿಷ್ಟ್ಯವುಂಟಾಗಿದೆ. ಪ್ರತಿಸಂಧಿಯ ಪ್ರಾರಂಭದಲ್ಲಿಯೂ ಅವರ ಸಂಭಾಷಣೆಗಳಿವೆ. ಇವುಗಳನ್ನು ಓದಿದರೆ ಕವಿಯೂ ಅವನ ನಲ್ಲಳೂ ಸರಸಿಗಳೆಂದೂ ರಸಿಕರೆಂದೂ ವಿದ್ಯಾವಂತರೆಂದೂ ಕಾಣುತ್ತದೆ. ಕವಿಯು ಅವಳನ್ನು ವಾಚಕರ ಸ್ಥಾನದಲ್ಲಿರಿಸಿ ಅವಳ ಪ್ರಸಾದನದಲ್ಲಿ ವಿಶೇಷ ಆಸಕ್ತಿಯುಳ್ಳವನಾಗಿ ಅವಳಿಗೆ ಬೇಸರವಾಗದಂತೆ ಉತ್ತಮರೀತಿಯಲ್ಲಿ ಗ್ರಂಥವನ್ನು ರಚಿಸಬೇಕೆಂಬ ಧ್ಯೇಯವನ್ನಿಟ್ಟುಕೊಂಡಿರುವುದು ಕಂಡುಬರುತ್ತದೆ. ಕವಿಯು ತನ್ನಿನಿಯಳ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ ಆಗಾಗ ಅವಳನ್ನು ನಾನಾ ರೀತಿಯಲ್ಲಿ ಸಂಬೋಧಿಸಿ ಅವಳ

ನಾಡಿಯನ್ನು ಮಿಡಿದು ನೋಡುತ್ತಾನೆ. ಅವಳೂ ತನ್ನ ಸಂತೋಷಾದಿಗಳನ್ನು ಸೂಚಿಸುತ್ತಾಳೆ. ಇದರಿಂದ ವಾಚಕರಿಗೂ ಪ್ರಯೋಜನವಾಗದೇ ಇರುವುದಿಲ್ಲ. ಪಾಂಡಿತ್ಯಪ್ರದರ್ಶನದಿಂದುಂಟಾದ ಬೇಸರಿಕೆಯು ಅವರಿಗೂ-ಸ್ವಲ್ಪ ಕಡಿಮೆಯಾಗುವುದು. ಕೆಲವು ಸಂಭಾಷಣೆಗಳಲ್ಲಿ ಗಾಂಭೀರ್ಯದ ಎಲ್ಲೆಯು ಮೀರಿದ್ದರೂ ಸಂಭಾಷಣೆಗಳನ್ನೆಲ್ಲಾ ಒಟ್ಟುಗೂಡಿಸಿದರೆ ಒಂದು ಪುಟ್ಟ ರಸವತ್ಕಾವ್ಯವಾಗುವುದರಲ್ಲಿ ಸಂದೇಹವಿಲ್ಲ.

ಪ್ರಿಯಳ ಅನುರಾಗವನ್ನು ಕೂರ್ತು ಅವಳ ಹೊಗಳಿಕೆಯನ್ನು ಆಶಿಸುತ್ತಿರುವ ಕವಿಯು ತನ್ನ ಪ್ರಾಣೇಶ್ವರಿಯನ್ನು ಕುರಿತು -

ಚಿಕ್ಕಪ್ರಾಯದ ಚೆನ್ನೆ ಸೊಕ್ಕುಜವ್ವನರನ್ನೆ<br>
ಅಕ್ಕರಿಂ ಕೇಳೆನ್ನ ಸವಿಗಬ್ಬರಸದಾಳಿ<br>
ಚುಕ್ಕಿಮೆಲಲಾ ಮಧುರಕಿಂದಧಿಕಯಿನಿದಪ್ಪ ಸತ್ಕಥೆಸುಧಾರಸವನು ।<br>
ಒಕ್ಕು ಸವಿಸವಿದುಂಡು ಕ್ಷುಧೆಯ-ಹೋಗಾಡಿ ಮನ<br>
ಮಿಕ್ಕು ಮೈಮಱೆದು ಪರವಶಕ್ಷೀರಶರನಿಧಿಯ<br>
ಪೊಕ್ಕು ಮುಳುಮುಳುಗಿಯಾನಂದಿಪಂದದಿ ಪೇಳ್ವೆಸವಿಗಥೆಯ..........॥

ಎನ್ನುತ್ತಾನೆ. ಅದಕ್ಕೆ ಅವಳು-

ಎಲೆ ಕಾಂತ ನೀನೆನಗೆ ಪೇಳ್ವ ಸವಿ ಮಧುರನುಡಿ<br>
ಲಲಿತಮೃತ ರಸವನೇನೆಂದುಸುರ್ವೆ ತೇಂಗಾಯ<br>
ಬಲುಹಿಂದೆ ಭಿನ್ನಿಸೆಳನೀರ ಸೇವಿಸಬೇಕು ರಸದಾಳಿ ಕೆತ್ತಬೇಕು ।<br>
ಒಲಿದು ಪಿಂಡಲಿ ಬೇಕು ಮಾವಣ್ಣು ಬಾಳೆ ಪ<br>
ಣ್ಣುಲಿಯಬೇಕೊಡೆಯದೇ ಕೆತ್ತದೇ ಪಿಂಡದೇ<br>
ಸುಲಿಯದೇ ದ್ರಾಕ್ಷಪಳಮನ್ನು ಸವಿದಂತಾಯ್ತು.......॥

ಎಂದು ಪ್ರತ್ಯುತ್ತರವನ್ನೀಯುತ್ತಾಳೆ.

ಮುಂದೆ ಕೊಟ್ಟಿರುವ ಗಣಪ ಬಲರಾಮರ ಯುದ್ಧಮೂದಲಿಕೆಗಳು ಹಾಸ್ಯಕ್ಕೆ ಉದಾಹರಣೆ:-

ಅನಿತರೊಳ್ ಗಜವದನ ನೋಡಿ ಭುಜಗಾರಿಯನು<br>
ಕನಲಿ ಕೋಪದಿ ತನ್ನಯಿಲಿಗುದುರೆ ವಾಘೆಯವ<br>
ನನುವಾಗಿ ಪಿಡಿದು ತೊಡೆಸನ್ನೆಯಿಂ ಮೀಂಟಿ ಕುಣಿಸುತ್ತೆ ಬರುತಿರೆ ಮೂಷಕ ।<br>
ತನಗೆ ಲಂಘಿಪುದು ಖಗವೆನುತು ಹಿಂತಿರುಗುತಿರೆ<br>
ಬೆನಕ ಕಡಿವಾಣಮಂ ಬಿಗಿದು ಪಿಡಿದೊಡೆ ನಿಲದೆ<br>
ಜುಣುಗಿಯೊಡಮುರಿದು ವೋಡುತ್ತಿರಲು ಮೊಗನೇಣುವಿಂ ಪಿಡಿದು ಬಡಿದು ॥

ಜಡಿದೆಳೆದು ತಂದು ಮರಳೇರಿ ಮೀಂಟಲು ಮುಂದ
ಕಡಿಯಿಡದೆಯೊಡೆಮುರಿದು ಪರಿದೋಡುತಿರೆ ಕೋಪ
ವಡಸಿ ಕುಡಿಸೇಣುವಿಂ ಬಡಿಯೆ ಮೂಷಕ ಕೆಡಹಿಯೋಡೆ ಪೇರಾನೆಮೊಗನು ।
ಪೊಡೆಗೆಡೆದು ಸೊಂಡಿಲವನೂರಿ ಮೆಲ್ಲನೆಯೆದ್ದು
ಬಿಡುತ ವಾಜಿಯ ಪಾದಚರಿಯಿಂದ ಬರ್ಪ ಗಣ
ಪೊಡೆಯನಂ ನೋಡಿ ಬಲರಾಮ ಪರಿಹಾಸದಿಂ ನಗುತ್ತ ಮತ್ತಿಂತೆಂದನು ॥
ಸಕಲಸುಂದರಿಂದಲರ್ಚನೆಗೊಂಡು ಭಕ್ತಾದಿ
ನಿಖಿಳಕಜ್ಜಾಯವುಂಡಲಿಗೆ ಪಲಫಲತತಿಯ
ಪ್ರಕಟದಿಂದುಂಡು ಪಾನಕಗುಡಿದು ಸಂತೃಪ್ತಿಗೊಂಡು ಢರ‍್ರೆಂದು ತೇಗಿ ।
ಸುಖಿಸಿ ಸರ್ವರಿಗೆ ಬಹ ಯೆಡರು ಕಂಟಕ ವಿಘ್ನ
ನಿಕರಮಂ ಪರಿಹರಿಸುವಂತಲ್ಲ ಕ್ರೂರಸಾ
ಯಕದ ಪಾಯಸ ನಿನ್ನ ಗಂಟಲಿಗೆ ಯಿಳಿವುದಿಲ್ಲವು ಮರಳಿ ಪೋಗೆನಲ್ಕೆ ॥
ಕೇಳಿ ಗಣನಾಥ ಕೋಪವನಾಂತು ರಣರಂಗ
ದೊಳೆನ್ನ ಕೈಗಾರಿಕೆಯನು ವಿಚಾರಿಸದೆ
ಆಳಿಗಳೆವುತ್ತ ಮೂದಲಿಸುವರೆ ನೇಗಲಿನ ಮೇಳಿ ಪಿಡಿದಂತಲ್ಲವೋ ।
ಬಾಲಪೌರುಷವನಾಡುವನಲ್ಲ ನೋಡೆನ್ನ
ತೋಳ ಬಲುಮೆಯನೆನುತ ಧನುಗೆ ಸರಲೂಡಿ ಕಿವಿ
ಯಾಲೆಪರಿಯಂತರಂ ಸೆಳೆದಿಡಲು ಬಲರಾಮನೆದೆಯನಿಬ್ಬಗಿಮಾಡುವ ॥



| ಕವಿ ಕಾವ್ಯ ವಿಚಾರ - ೪ |
|---|



## ರಸಿಕ ಮನೋರಂಜನ ವಿಲಾಸ [1]

ಇದು ಕಾವ್ಯಾಂಗಗಳಾದ ಅಷ್ಟಾದಶವರ್ಣನೆಗಳೊಡನೆ ಕೂಡಿದ ಶೃಂಗಾರ ರಸಪ್ರಧಾನವಾದ ಕನ್ನಡ ಚಂಪೂಕಾವ್ಯ. ಇದನ್ನು ರಚಿಸಿದವನು ಕುಂಡಲಗಿರಿಯೆಂಬವನು. ಇವನು ಸ್ವವಿಷಯವಾಗಿ ಕಾವ್ಯದಲ್ಲಿ ವಿಶೇಷವಾಗಿ ಹೇಳಿಕೊಂಡಿಲ್ಲ. ಆದರೂ ಆಶ್ವಾಸಾಂತ್ಯದ ಗದ್ಯದಿಂದಲೂ ಗ್ರಂಥಾಂತ್ಯದಲ್ಲಿ ಬರುವ

ವರ ದಿಗ್ಗಾವಿ[2] ಪುರಪ್ರಭುಪ್ರಥಿತ ಧರ್ಮಾಮಾತ್ಯಪೌ
ತ್ರಂ ಮಹೇಶ್ವರಪೂಜಾಪರ ತಿಮ್ಮಮಂತ್ರಿತನುಜಂ ಗೌರಾಂಬಿಕಾ ಭರ್ತೃ ಜಾ ।
ಯರಸಂ ಶಿಷ್ಟ ವಸಿಷ್ಠ ಗೋತ್ರಕಲಿತಂ ಗೌತಮೀಕಾನ್ತನಾ
ವಿರುಪಣ್ಣಾವರಜಾತ ಕೊಂಡಗಿರಿಯಂ ಪೆತ್ತಂ ಮಹಾಪ್ರೌಢನಂ ॥
ವಿಲಸತ್ ಸದ್ಗುಣಶಾಲಿ ಕೊಂಡಲಗಿರಿ ಪ್ರಖ್ಯಾತನಾಮಂ ಮಹಾ
ಬಲವದ್ಭೂರಿ ತುರುಷ್ಕಕಾನ್ತ ಸಮರಾಕೃಷ್ಟಾಶ್ವದಂತಾವಲಾ
ವಲಿ ಭೂಮಿಪ್ರಭೃತೀಷ್ಟದಾನವಿಧಿ ಭೂಪಾಲೀಕೃತಾರ್ಥವ್ರಜೋ
ಜ್ವಲ ಹಂಡೇಮಲುಕೇಂದ್ರ ಮಾನ್ಯಸಚಿವಂ ಪಂಪಾಧಿಪಂಗಿಷ್ಟಮ
ಪ್ಪೊಲೆ ಪೇಳ್ದಂ ಕವಿಸೇವ್ಯಮಂ ಸಕಲ ವಿದ್ವಚ್ಛ್ರಾವ್ಯಮಂ ಕಾವ್ಯಮಂ ॥

ಎಂಬ ಎರಡು ಪದ್ಯಗಳಿಂದಲೂ ಇವನು ದಿಗ್ಗಾವಿಯವನೆಂದೂ ಧರ್ಮಾಮಾತ್ಯ ಪೌತ್ರನೂ ಮಹೇಶ್ವರ ಪೂಜಾನಿರತನಾದ ತಿಮ್ಮಾಮಾತ್ಯನ ಪುತ್ರನೂ ಆದ ಜಾಯರಸ ಮತ್ತು ಗೌರಾಂಬಿಕೆಯರ ಪುತ್ರನೆಂದೂ ಗೌತಮೀಕಾಂತನಾದ ವಿರುಪಣ್ಣನ ತಮ್ಮನೆಂದೂ ವಸಿಷ್ಠಗೋತ್ರದವನೆಂದೂ ಹಂಡೆಮಲುಕೇಂದ್ರನ ಮಾನ್ಯ ಸಚಿವನೆಂದೂ ತಿಳಿದುಬರುತ್ತದೆ.

---

೧. ಇದು ಮೈಸೂರು ಪ್ರಾಚ್ಯಕೋಶಾಗಾರದಲ್ಲಿರುವ ಕೆ. ಎ. ೩೧೧ನೆಯ ಕೈಬರಹದ ಕಾಗದದ ಪ್ರತಿ.

೨. ದಿಗ್ಗಾವಿಯು ಹೈದರಾಬಾದ್ ಸಂಸ್ಥಾನದಲ್ಲಿದೆ.

ಇವನ ಅಥವಾ ಗ್ರಂಥರಚನೆಯ ಕಾಲದ ವಿಷಯವಾಗಿ ಗ್ರಂಥದಲ್ಲಿ ಯಾವ ಸೂಚನೆಯೂ ಇಲ್ಲ. ಆದುದರಿಂದ ಹಂಡೆಮಲುಕೇಂದ್ರನ ಕಾಲದ ಆಧಾರದ ಮೇಲೆ ಇವನ ಕಾಲವನ್ನು ನಿಷ್ಕರ್ಷಿಸಬೇಕಾಗಿದೆ. ಹಂಡೆ ಅನಂತಾಪುರದ ಚರಿತ್ರೆಯಲ್ಲಿ[೩] ಮಲುಕಪ್ಪನ ವಿಷಯವಾಗಿ ಹೀಗೆ ಹೇಳಿದೆ:- "ಹಂಡೆ ಹನುಮಪ್ಪನಾಯಕನ ಮಗನಾದ ಮಲುಕಪ್ಪನು ಶಾ. ಶ. ೧೫೦೬ರಿಂದ ೧೫೧೮(ಕ್ರಿ.ಶ. ೧೫೮೪-೯೬)ರ ವರೆಗೆ ರಾಜ್ಯವಾಳಿದನು.

ಈ ಕಾಲದಲ್ಲಿ ವಿಜಯನಗರದ ಶ್ರೀರಂಗರಾಯನ ಮೇಲೆ ಆದಿಲ್‌ಷಾಹಿ ಸುಲ್ತಾನರು ದಂಡೆತ್ತಿ ಬರಲು ಮಲುಕಪ್ಪನು ಶ್ರೀರಂಗರಾಯನ ಸಹಾಯಾರ್ಥವಾಗಿ ದೊಡ್ಡ ಸೈನ್ಯದೊಡನೆ ಹೊರಟು ಸುಲ್ತಾನರ ಸೈನ್ಯವನ್ನು ನಿರ್ಮೂಲಮಾಡಿ ಓಡಿಸಿ ಬುಕ್ಕರಾಯ ಸಮುದ್ರವೆಂಬ ಪಟ್ಟಣವನ್ನು ನಿರ್ಮಿಸಿ ಅದನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದನು. ಈ ಮಧ್ಯೆ ಸುಲ್ತಾನರು ಪುನಃ ದಂಡೆತ್ತಿ ಬಂದು ಶ್ರೀರಂಗರಾಯನನ್ನು ಸೋಲಿಸಲು ಮಲುಕಪ್ಪನು ಶ್ರೀರಂಗರಾಯನನ್ನು ಆಶ್ರಯಿಸಿರುವುದು ಪ್ರಯೋಜನವಿಲ್ಲವೆಂದು ಸುಲ್ತಾನರ ಪಕ್ಷವನ್ನು ವಹಿಸಿದನು. ಇದರಿಂದ ಸುಪ್ರೀತರಾದ ಸುಲ್ತಾನರು ಇವನಿಗೆ ವಿಸ್ತಾರವಾದ ರಾಜ್ಯವನ್ನೂ 'ಪಾದಷಹಾ ವಜೀರಾ' ಎಂಬ ಬಿರುದನ್ನೂ ಕೊಟ್ಟರು." ಕೊಂಡಲಗಿರಿಯು ಈ ಮಲುಕಪ್ಪದಲ್ಲಿ ಸಚಿವನಾಗಿದ್ದಿರಬೇಕು. ತನ್ನ ಕಾವ್ಯದಲ್ಲಿ ಮಲುಕಪ್ಪನು ತುರುಕರ ಮೇಲೆ ತೋರಿಸಿದ ಪರಾಕ್ರಮಾದಿಗಳನ್ನು ಕವಿ ವರ್ಣಿಸಿರುವುದರಿಂದ ಅವನು ತುರುಕರ ಪಕ್ಷವನ್ನು ವಹಿಸುವುದಕ್ಕೆ ಪೂರ್ವಭಾವಿಯಾಗಿ ಈತನು ಈ ಗ್ರಂಥವನ್ನು ರಚಿಸಿರಬೇಕು. ಹಾಗಾದ ಪಕ್ಷದಲ್ಲಿ ಇವನ ಕಾಲವು ಸುಮಾರು ಕ್ರಿ. ಶ. ೧೫೯೦ ಆಗಬಹುದು.

ಈತನು ಹಂಪೆಯ ವಿರೂಪಾಕ್ಷನನ್ನು (ಇತರ ಅನೇಕ ವೀರಶೈವ ಕವಿಗಳಂತೆ) ವಿಶೇಷವಾಗಿ ಸ್ತುತಿಸಿರುವುದರಿಂದಲೂ ಗ್ರಂಥದಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ರುದ್ರಾಕ್ಷಿ, ವಿಭೂತಿ ಮೊದಲಾದುವುಗಳ ಮಹಿಮೆಯನ್ನು ಅಲ್ಲಲ್ಲಿಯೇ ವರ್ಣಿಸಿರುವುದರಿಂದಲೂ ವೀರಶೈವನೆಂದು ತೋರುತ್ತದೆ. ಪೂರ್ವಕವಿಗಳಲ್ಲಿ ಹಂಪೆಯ ಹರಿದೇವನನ್ನು ಮಾತ್ರ ಸ್ತೋತ್ರಮಾಡಿದ್ದಾನೆ. ಗ್ರಂಥದ ಪ್ರತಿಯೊಂದಾಶ್ವಾಸದ ಕೊನೆಯಲ್ಲಿಯೂ ಮುಂದಿನ ಗದ್ಯವಿದೆ:-

ಇದು ಪ್ರಣುತ ಸುರಾಸುರಪಟಲ ನಿಟಿಲತಟಘಟಿತ ಕಸ್ತೂರಿಕಾಸಾರಷಟ್ಪದ ವಿರಾಜಿತ ಪಂಪಾವಿರೂಪಾಕ್ಷ ಶ್ರೀಪಾದಪದ್ಮ ಪರಾಗತಿಲಕ ವಿಭ್ರಾಜಿತ ಫಾಲಫಲಕ ಜಾಯಾಮಾತ್ಯ ಗೌರಾಂಬಿಕಾ ಗರ್ಭಪಾರಾವಾರಸುಧಾಕರ ಮಂತ್ರಿಮಾಣಿಕ್ಯ ಮಕುಟಾಲಂಕಾರ ಕೊಂಡಲಗಿರಿ ವಿರಚಿತ ರಸಿಕಮನೋರಂಜನ ಮಹಾಪ್ರಬಂಧದೊಳ್-

---

೩. Sources of Vijayanagar History by S. Krishnaswamy Ayyanagar, pages ೨೩೩-೫.

ಕವಿಯು ತನ್ನ ಕವಿತಾಪ್ರೌಢಿಮೆಯನ್ನು ಮುಂದಿನ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:-

ರಸಿಕ ಮನೋರಂಜನಮೆಂ
ಬಸದೃಶಕೃತಿ ಯುಕ್ತಿರಸಿಕರಂ ಮೋಹಿಸುಗುಂ ।
ವಸಮಾದ ಪೆಣ್ಣ ಸನ್ನೆಯ
ರಸಗೇಯದ ಸವಿ ಭುಜಂಗರಂ ಮೋಹಿಸುವೊಲ್ ॥
ಪದ್ಯಂಗಳ್ ಸಲ್ಲಕ್ಷಣ
ಪದ್ಯಂಗಳ್ ಸುಕವಿನಿಕರವಿಮಲಮನೀಷಾ ।
ವೇದ್ಯಂಗಳ್ ಶಂಕರನೈ
ವೇದ್ಯಂಗಳ್ ಮೆಱೆವುತಿರ್ಪುವೀ ನುತ ಕೃತಿಯೊಳ್ ॥

'ರಸಿಕಮನೋರಂಜನವಿಲಾಸ'ವು ಹನ್ನೊಂದು ಆಶ್ವಾಸಗಳನ್ನುಳ್ಳ ಕಾವ್ಯ. ಇದರ ಪ್ರತಿಯೊಂದು ಆಶ್ವಾಸಾದ್ಯಂತಗಳಲ್ಲಿ ವಿರೂಪಾಕ್ಷಸ್ತುತಿಯಿದೆ. ಗ್ರಂಥಾರಂಭದಲ್ಲಿ ಶಿವ, ಪಾರ್ವತಿ, ವಿನಾಯಕ, ಷಣ್ಮುಖ, ಸರಸ್ವತಿ - ಇವರುಗಳ ಪ್ರಾರ್ಥನೆಯಿದೆ. ಇದರ ಕಥೆಯನ್ನು ಶಂಕರನು ತನ್ನ ಅರ್ಧಾಂಗಿಯಾದ ಪಾರ್ವತಿಗೆ ಹೇಳಿದನೆಂದೂ ಅದನ್ನೇ ತಾನು ಕನ್ನಡದಲ್ಲಿ ಸೊಗಸಾಗುವ ಹಾಗೆ ರಚಿಸಿರುವನೆಂದೂ ಕವಿಯ ಹೇಳಿಕೆ. ವೇಶ್ಯೆಯೊಬ್ಬಳು ಜನರೆಲ್ಲರನ್ನೂ ಮುಗ್ಧಗೊಳಿಸಿ ದ್ರವ್ಯೋಪಾರ್ಜನೆಯನ್ನು ಮಾಡಬೇಕೆಂಬ ಉದ್ದೇಶದಿಂದ ಶಿವರಾತ್ರಿಯ ದಿನ ಕಾಶಿಯ ರತ್ನೇಶ್ವರ ದೇವಾಲಯಕ್ಕೆ ಹೋಗಿ ಅಲ್ಲಿ ನೆರೆದಿದ್ದ ಜನರ ಮಧ್ಯದಲ್ಲಿ ಹಾವಭಾವವಿಲಾಸಗಳಿಂದ ಹಾಡಲು ರತ್ನೇಶ್ವರನು ಅದನ್ನೇ ತನ್ನ ಸೇವೆಯೆಂದು ಭಾವಿಸಿ ಅವಳಿಗೆ ಸದ್ಗತಿಯನ್ನಿತ್ತು ಸಕಲ ಸೌಭಾಗ್ಯಗಳನ್ನು ದಯಪಾಲಿಸಿದನೆಂದು ವರ್ಣಿಸುವುದರ ಮೂಲಕ ರತ್ನೇಶ್ವರ ಲಿಂಗದ ಮಾಹಾತ್ಮ್ಯವನ್ನು ವಿಶದಪಡಿಸುವುದು ಈ ಗ್ರಂಥದ ಉದ್ದೇಶ. ಆದರೆ ರತ್ನೇಶ್ವರನ ಅನುಗ್ರಹದಿಂದ ವೇಶ್ಯಾಜನ್ಮವನ್ನು ನೀಗಿ ರಾಜಕುಮಾರಿಯಾಗಿ ಹುಟ್ಟಿದ ರತ್ನಾವಳಿಯ ಶೃಂಗಾರಕಥೆ ಇದರ ಪ್ರಧಾನವಸ್ತು. ಇದು ನೇಮಿಚಂದ್ರನ ಲೀಲಾವತಿ, ದೇವಚಂದ್ರನ ಕುಸುಮಾವಳಿ ಮೊದಲಾದ ಗ್ರಂಥಗಳ ಪಂಗಡಕ್ಕೆ ಸೇರಿದುದು. ಇದರ ಕಥೆ ಹೀಗಿದೆ:- ಶ್ರೀ ವಿಲಾಸಪುರದ ರಾಜನಾದ ವಸುಭೂತಿಗೆ ಕಾಶಿಯ ರತ್ನೇಶ್ವರನ ಅನುಗ್ರಹದಿಂದ ರತ್ನಾವಳಿಯೆಂಬ ಮಗಳು ಜನಿಸುವಳು. ಶಶಿಲೇಖೆ, ಚಿತ್ರಲೇಖೆ, ಅನಂಗಲೇಖೆ ಎಂಬ ಮೂವರು ರತ್ನಾವಳಿಯ ಕೆಳದಿಯರು. ಇವರೊಡನೆ ರತ್ನಾವಳಿಯು ಏಳ್ಗೆವಾಡಿವದ ತಣ್ಗದಿರನಂತೆ ಅಭಿವೃದ್ಧಿಯನ್ನೈದಿ ಪ್ರಾಪ್ತವಯಸ್ಕಳಾಗಲು ಒಂದು ದಿನ ಕನಸಿನಲ್ಲಿ ಒಬ್ಬ ರಾಜಕುಮಾರನನ್ನು ಕಂಡು ಅವನಲ್ಲಿ ಮೋಹಿತಳಾಗಿ ವಿರಹವೇದನೆಯಿಂದ ತಪಿಸಿ ಅವನನ್ನು ಎಲ್ಲೆಡೆಯಲ್ಲಿಯೂ ಹುಡುಕಿಸುವಳು. ಅವಳ ಪ್ರೀತಿಗೆ ಪಾತ್ರನಾದ ಆ ಯುವಕನು ಎಲ್ಲಿಯೂ ಸಿಕ್ಕದಿರಲು ಅವಳ ಸಖಿಯಾದ ಚಿತ್ರಲೇಖೆಯು ಸ್ವರ್ಗಮರ್ತ್ಯಪಾತಾಳಗಳಲ್ಲಿರುವ ಎಲ್ಲ ಯುವಕರನ್ನೂ

ಚಿತ್ರಪಟಗಳಲ್ಲಿ ಬರೆದು ತೋರಿಸುವಳು. ಅದರಿಂದ ನಾಗಲೋಕದ ಶಂಖಚೂಡನ ಮಗನಾದ ರತ್ನಚೂಡನೇ ರತ್ನಾವಳಿಯ ಪ್ರಿಯನೆಂಬುದು ತಿಳಿದು ಬರುವುದು. ಅವನನ್ನು ಹುಡುಕಿಕೊಂಡು ತನ್ನ ಸಖಿಯರೊಡನೆ ರತ್ನಾವಳಿಯು ಹೊರಟು ಅನೇಕ ದಿನ ಸಂಚಾರಮಾಡಿ ನಾಗಲೋಕವನ್ನು ಪ್ರವೇಶಿಸಲು ಅಲ್ಲಿ ಸುಬಾಹುವೆಂಬ ರಾಕ್ಷಸನು ಅವರನ್ನು ಅಡ್ಡಗಟ್ಟಿ ಸೆಳೆದೊಯ್ಯುವನು. ರಾಕ್ಷಸನ ಹಿಂಸೆಯಿಂದ ಭೀತರಾದ ಸ್ತ್ರೀಯರ ಆಕ್ರಂದನವನ್ನು ಸಮೀಪದಲ್ಲಿಯೇ ಇದ್ದ-ರತ್ನಾವಳಿಯನ್ನು ಸ್ವಪ್ನದಲ್ಲಿ ಕಂಡು ಅವಳಂತೆಯೇ, ಅವಳಿಗಾಗಿಯೇ ತವಕಪಡುತ್ತಿದ್ದ - ರತ್ನಚೂಡನು ಕೇಳಿ ಓಡಿಬಂದು ರಾಕ್ಷಸನನ್ನು ಸಂಹಾರಮಾಡಿ ನಾಯಿಕಾ ಸಮಾಗಮವನ್ನು ಪಡೆಯುವನು. ಕೊನೆಗೆ ರತ್ನಾವಳಿಗೂ ರತ್ನಚೂಡನಿಗೂ ವಿವಾಹವಾಗುವುದು. ಈ ರೀತಿಯಲ್ಲಿ ಕಥೆ ಕಿರಿದಾದರೂ ಕವಿಯು ತನ್ನ ವರ್ಣನಾವೈಖರಿಯಿಂದಲೂ ವಾಗ್ವೈಖರಿಯಿಂದಲೂ ಗ್ರಂಥವನ್ನು ಮಹಾಕಾವ್ಯವನ್ನಾಗಿ ಮಾಡಬೇಕೆಂಬ ಕುತೂಹಲದಿಂದಲೂ ಹಿರಿದಾಗಿ ಬೆಳಸಿದ್ದಾನೆ. ಕವಿಯ ಶೈಲಿಯು ಪ್ರೌಢವಾಗಿದೆ. ತಿಳಿಯಾಗಿ ರಸವತ್ತಾಗಿ ಹೃದಯಂಗಮವಾಗಿ ಬರೆಯಲು ಶಕ್ತಿಯಿದ್ದರೂ ಪಾಂಡಿತ್ಯ ಪ್ರದರ್ಶನದ ದೃಷ್ಟಿಯಿಂದ ಶಬ್ದಾಲಂಕಾರ ಮತ್ತು ಚಿತ್ರ ಕವಿತೆಗಳಿಗೆ ಮನಸೋತಿದ್ದಾನೆ. ಕಥೆಯಲ್ಲಿ ಕಾವ್ಯಮಯವಾದ ಸನ್ನಿವೇಶಗಳು ಕಡಿಮೆ. ಕನ್ನಡ ಸಂಸ್ಕೃತ ಭಾಷೆಗಳೆರಡರಲ್ಲಿಯೂ ಈತನಿಗೆ ಉದ್ದಾಮ ಪಾಂಡಿತ್ಯವೇನೋ ಇದೆ. ಆದುದರಿಂದಲೇ ಅವನ ಗ್ರಂಥದಲ್ಲಿ ಸಾಮಾನ್ಯವಾಗಿ ಕನ್ನಡ ಗ್ರಂಥಗಳಲ್ಲಿ ಉಪಯೋಗವಾಗುವ ಕಂದವೃತ್ತಗಳೇ ಅಲ್ಲದೆ ಅಪೂರ್ವವಾದ ಮಹೀವೃತ್ತ, ತರಳ, ಲಯಗ್ರಾಹಿ, ಉತ್ಸಾಹ, ವಸನ್ತತಿಲಕ, ಮತ್ತಕೋಕಿಲ, ಸ್ಫೋಟಕ, ಪರಿವರ್ಧಿನಿ, ಸೀಸಪದ್ಯ, ಗೀತಿಕೆ ಮೊದಲಾದ ವೃತ್ತಜಾತಿಗಳೂ ವಿಶೇಷವಾಗಿ ಉಪಯೋಗವಾಗಿವೆ. ಸಂಸ್ಕೃತಪದಪ್ರಯೋಗವು ಕಾವ್ಯಕ್ಕೆ ಶೋಭಾಯಮಾನವಾದುದೆಂದು ಈತನ ಅಭಿಪ್ರಾಯ. ಆದುದರಿಂದ ಈತನ ಅನೇಕ ಕನ್ನಡ ಪದ್ಯಗಳಲ್ಲಿ ಸಂಸ್ಕೃತ ಪದಗಳು ಅತಿಯಾಗಿವೆ. ಉದಾಹರಣೆಗೆ ಪಂಪಾವಿರೂಪಾಕ್ಷನ ಸ್ತೋತ್ರರೂಪವಾದ ಈ ಮುಂದಿನ ಪದ್ಯವನ್ನು ನೋಡಬಹುದು.

ಉದ್ಯದ್ಗೌರವ ಭಂಗ ಸಂಗತತ ಕ್ರೋಧಾರ್ಜಿತಾ ಸತ್ಕ್ರಿಯಾ
ಮಾದ್ಯದ್ದಕ್ಷಕೃತಕ್ರತೂತ್ಸವಹವಿರ್ಭುಗ್ಗರ್ವ ಸರ್ವಸ್ವಹಂ ।
ಸದ್ಯೋಲೋಕ ಜಿಘಾಂಸು ಭೂತ ಪರಿಷತ್ಕಾರ್ಯಾಂತರಾಯಾರ್ಥಲಾ
ಸ್ಯೋದ್ಯೋಗಪ್ರಿಯನೊಲ್ದು ರಕ್ಷಿಕೆ ವಿರೂಪಾಕ್ಷಂ ಭವಾನೀಧವಂ ॥

ಚಂಪೂ ಗ್ರಂಥಗಳಲ್ಲಿ ಷಟ್ಪದಿಯನ್ನು ಉಪಯೋಗಿಸಿರುವುದು ಈತನ ವೈಶಿಷ್ಟ್ಯ. ಭಾಮಿನಿ ಮತ್ತು ಪರಿವರ್ಧಿನಿ ಷಟ್ಪದಿಗಳನ್ನು ಮಾತ್ರ ಒಂದೆರಡು ಕಡೆಗಳಲ್ಲಿ ಉಪಯೋಗಿಸಿದ್ದಾನೆ. ಅವುಗಳೂ ಇತರ ವೃತ್ತಗಳ ಹಾಗೆಯೇ ಅರ್ಥಪೂರ್ಣವಾಗಿರುವುದನ್ನು ಮುಂದಿನ ಷಟ್ಪದಿಯಲ್ಲಿ ಕಾಣಬಹುದು.

ಎಲೆಗಳುಡಿಗೆಯ ಗುಂಜೆದೊಡಿಗೆಯ
ಬಲೆಯನೌಂಕಿದ ಹತ್ತುಗೌಂಕುಳ
ಬಲಿದು ಬಿಗಿದೆಕ್ಕಡದ ಪಿರಿದುಂ ಕೊರ್ಬಿದವಯವದ ।
ಕಿಲುಬುಗತ್ತಿಯ ಮರದ ಬಿಲ್ಗಳ
ತಲೆಯ ಬದನಿಕೆಸರದ ಬೇಟೆಯ
ಕೆಲಸದಱಿವಿನ ಬೇಡವಡೆ ಮುಕ್ಕುಱಿಸಿ ಮೋಹಿಸಿತು॥

ಕುಂಡಲಗಿರಿಯ ಗದ್ಯವು ಕನ್ನಡಮಯವಾಗಿದೆ. ಭಾವಗರ್ಭಿತವಾಗಿದೆ. ಸರಾಗವಾಗಿ ಓಡುತ್ತದೆ. ಅದರಲ್ಲಿ ಪೂರ್ಣವಾದ ಓಜಸ್ಸಿದೆ. ಮುಂದಿನ ವನವರ್ಣನೆಯು ಇದಕ್ಕೆ ಉತ್ತಮನಿದರ್ಶನ:-

ಅಂತುಮಲ್ಲದೆಯುಂ ನಲ್ಲರೊಳೆ ಲಲ್ಲೆವಾತಿಂ ಚಲ್ಲವಾಡುತೆ ಮೆಲ್ಲಮೆಲ್ಲನೆ ಸುಳ್ಳು ಮುಳಿಸಂ ನಟಿಸಲೆಂದಿಲ್ಲದಪರಾಧಮನಾರೋಪಿಸಿ ಕುಡಿವುರ್ವಂ ಕುಣಿದಾಡಿಸಿ ಕಣ್ದೆರಪಂ ಕೂರ್ಗೆಯ್ದು ಗೊಣಗುವಾತಿಂ ಸೆಣಸುದೆಗೆದು ಹಸ್ತಮನೆತ್ತಿ ಮೆತ್ತನೆ ಬಡಿಯೆ ಕಣ್ಣಾನಂದಿಸಿ ಮೆಯ್ಗೆ ಜುಮ್ಮೆಱಿ ಸುಖಪರವಶತೆ ಪೋದ ತಜ್ಜೀವಿತೇಶರನಗಲ್ದು ಬೇಱೊಂದೂ ಕಪ್ಪುರವಾಳೆಯ ತಣ್ಣೆಳಲ ನುಣ್ಣನಪ್ಪೆಡೆಯೊಳ್ ಕುಳ್ಳಿರ್ದು ಮುಳಿಸಂ ನಿಲಿಸಲಱಿಯದೆ ಕಳವಳಿಪ ಚಿತ್ತದೊಳ್ ತೋಳಲೊಗೆದೆರ್ದೆಹಾರಂ ಬಳಯಿಸೆಯುಂ ಲವಲವಿಕೆಪೊತ್ತೇಳಿಸುತ್ತಿರೆಯುಂ ಸಿಡಿಮಿಡಿಗೊಂಬ ವಿಧ್ಯಾಧರಿಯರಿಂ, ಆ ವಿದ್ಯಾಧರಿಯರ್ಗಾದರದಿಂ ರಾಗಮನಾಳಾಪಿಸಿ ಸಂಗೀತಮಂ ಸಾಲ್ಗೊಳಿಸಿ ಮುಗಿಲ ಮೊಗ್ಗರಮನೆಳ್ಚಿಸಿ ನವಿಲ್ಗಳ ನರ್ತನಮುಮಂ ಚಾದಗೆಗಳ ಬಾಯ್ದೆರಪುಮುಮಂ, ಹಂಸಿಗಣದೋಡಾಟಮುಮಂ ತೋರ್ದುತೋರ್ದು ಪೋಗದ ಪೊಳ್ತಂ ಪೋಗಿಸುವ ಕಿನ್ನರ ವಿದಗ್ಧೆಯರಿಂ, ಆ ಕಿನ್ನರ ವಿದಗ್ಧೆಯರ ಜಾಣ್ಮೆಗೆ ಮೆಚ್ಚನುಚ್ಚರಿಪಂತೆ ಶಾಖಾನ್ಯೋನ್ಯ ಸಂಘರ್ಷಣದಿಂ ನುಣ್ಚರಮನುಗುಳ್ವ ವಂಶಂಗಳಿಂ, ಆ ವಂಶಂಗಳ ನುಣ್ಚರಮಂ ಮೊರೆವ ಮೌವರಿಗೆ ಗೆತ್ತು ಪೆಡೆಗಳನೊಲೆದೊಲೆದಾಡುವ ಗೋಧೂಮವರ್ಣಸರ್ಪಂಗಳಿಂ, ಆ ಸರ್ಪಂಗಳಾಟಮಂ ದಿಟ್ಟಿಸಲಳ್ತಿವಟ್ಟು ಪರಿದು ಬರ್ಪಂತೆ ಸೂಸುವ ಪೂವುಡಿಯೊಳ್ ಪೊರಳ್ದುರುಳ್ದೋಡುವ ಮಾರುತೀ ಕಿಶೋರದಿಂ, ಆ ಮಾರುತೀ ಕಿಶೋರಮಂ ಪಾವಗಿಗು ಪೋಗದಿರೆಂದು ಝುಂಕಿಸುವಂತೆ ಝೇಂಕರಿಸುತೆ ಪಿಡಿದೆಳೆತರಲ್ಪೋಪಂತೆ ಬೆಂಬಳಿವೋಪ ಭೃಂಗಾಂಗನಾಸಂಘದಿಂ ..... ಆ ವನಮೊಪ್ಪಿರ್ದುದು.

ಈತನ ಸ್ತೋತ್ರಗಳೂ ದಂಡಕಗಳೂ ಸಂಸ್ಕೃತಪದ ಭೂಯಿಷ್ಠವಾಗಿದ್ದರೂ ಪ್ರತ್ಯೇಕವಾದ ಖಂಡಕಾವ್ಯಗಳಂತಿವೆ. ಮುಂದಿನ 'ಸುಪ್ರಭಾತ'ವನ್ನು ನೋಡಿ.

ವರ ಕಾಸಾರದ ವಾರಿಯಲ್ಲಿ ಜಳಕಂಗೆಯ್ದುಂ ದಳನ್ಮಲ್ಲಿಕೋ

ತ್ಕರ ಘೋಳೀನಪಘಸ್ರಮಂ ಧರಿಸಿ ಮೀಸಲ್ ಪೋಗದಪ್ಟಾಬ್ಜಬಂ ।
ಧುರ ಸೌರಭ್ಯಮನೊಪ್ಪಿಸಲ್ಕೆ ಧೃತರಂಗದ್ಭೃಂಗ ರುದ್ರಾಕ್ಷಕಂ
ಬರುತಿರ್ಕುಂ ಸುಳಿಗಾಳಿ-ಉಪ್ಪವಡಿಸಾ ಕಾಶೀಶ ವಿಶ್ವೇಶ್ವರಾ ॥
ಪದಪಿಂ ವಾರುಣಿಯಂ ನಿಜೇಶವಿಧು ಬೇಗಂ ಕೂಡೆ ತಾಂ ನೋಡಲಾ
ಜಿದೆ ನೇತ್ರೋತ್ಪಲದಿಂ ನಿಶಾತರುಣಿ ಪೋದಳ್, ಪ್ರೀತಿಯಿಂದಾಕೆಯಂ ।
ಬೆದಕಲ್ ಚಂದ್ರಿಕೆಯೆಂಬ ಚೇಟಿ ತಳರ್ದಳ್ ತತ್ತಾತನಾದಪ್ಪಿಯು
ಣ್ಮಿದ ವೈಕಲ್ಯದೆ ಜೋಲ್ದನ್-ಉಪ್ಪವಡಿಸಾ ಕಾಶೀಶ ವಿಶ್ವೇಶ್ವರಾ॥
ತವಕಂ ತೆಕ್ಕನೆ ತೀವೆ ಪುಷ್ಪಕುಲಧೂಳೀಶಯ್ಯೆಯೊಳ್ ಕೂರ್ತು ಕೂ
ಡುವ ಕಾಮಾಂಧ ರಥಾಂಗದಂಪತಿಗಳಂ ಕಣ್ಗೊಳ್ಳುದತ್ತೆಂದು ಕೈ ।
ರವಿಣೀ ಸಾಧ್ವಿಯೆ ಮುಚ್ಚಿಕೊಂಡಳಲರ್ಗಣ್ಣಂ ಪದ್ಮಿನೀ ಧೂರ್ತೆಗು
ತ್ಸವಮೇನೋ ನಗುತಿರ್ಪಳ್-ಉಪ್ಪವಡಿಸಾ ಕಾಶೀಶ ವಿಶ್ವೇಶ್ವರಾ ॥
ಭರದಿಂ ಲೋಕಮನೌಂಕಿ ಬೀಳ್ಗೆಡಪಿ ಪೋರುತ್ತಿರ್ಪ ನಿದ್ರಾನಿಶಾ
ಚರಿ ಪೋಪಂತಿರೆ ಲೋಕಬಂಧು ಪಟುಕೋಪಾರಕ್ತನೇತ್ರಂಗಳಿಂ ।
ದಿರದಾಲೋಕಿಸೆ ಪರ್ಬಿದತ್ತದಱ ಕೆಂಪೆಂಬಂತೆ ಪ್ರಾಚೀಮುಖಾಂ
ತರದೊಳ್ ಕೆಂಪಿಡಿದಿರ್ಪುದು-ಉಪ್ಪವಡಿಸಾ ಕಾಶೀಶ ವಿಶ್ವೇಶ್ವರಾ ॥

ಕವಿಯು ತನ್ನ ಕಾವ್ಯವನ್ನು `ಶೃಂಗಾರಸಾರ'ವನ್ನಾಗಿ ಮಾಡಬೇಕೆಂಬ ಚಲದಿಂದ ಅನೇಕ ಕಡೆಗಳಲ್ಲಿ ಆಭಾಸಶೃಂಗಾರಕ್ಕೆ ಕೈಹಾಕಿದ್ದಾನೆ. ಗಾಂಭೀರ್ಯದ ಎಲ್ಲೆಯನ್ನೂ ಮೀರಿದ್ದಾನೆ. ಆದರೂ ಕೆಲವು ಉತ್ತಮ ಸನ್ನಿವೇಶಗಳೂ ಇವೆ. ಈತನ ವರ್ಣನಾಶಕ್ತಿಯ ಪರಿಚಯಕ್ಕಾಗಿ ಕೆಲವು ಪದ್ಯಗಳನ್ನು ಉದ್ಧರಿಸುತ್ತೇವೆ:-

**ಜೋಯಿಸ**

ಹೆಡಿಗೆ ಜಿಂದಿಯ ಮೆತ್ತುಗಂಧದ ಬಿಳ್ಪುವಲ್ಗಳ ನೀರ ಕೆಂ
ಪಿಡಿದ ಧೋತ್ರದ ನೇಲ್ವ ಕಚ್ಚೆಯ ಕಯ್ಯೊಳುಪ್ಪುವ ಮುಷ್ಟಿಯೊ ।
ರ್ಪಿಡಿಕೆದೀವುವ ಯಜ್ಞಸೂತ್ರದ ಕಾಶಿಯುಂಗುರದೊಪ್ಪದಿಂ
ನಡೆದು ಜೋಯಿಸನೆಯ್ದಿ ಶಂಭು ಕೃಪಾಸ್ತುವೆಂದೆನುತೋದಿದಂ ॥

**ಕುದುರೆಯ ನಡಿಗೆ**

ಘಲಕು ಘಲಘಲ ಘಲಕು ಘಲಘಲ ಗರ್ಜದಂಚಿತ ಕಿಂಕಿಣೀ
ಕಲಿತ ಸುರಚಿರ ಚರಣಗತಿತತಿ ನೃತ್ಯಕೌಶಲ ಮಂಡಿತಂ ।
ಮಿಲಿತ ಬಲ ಬಲಜಲಧಿ ಕಲಶಜವಾಹ ಪಾಟವಸಂಗಮಂ
ನಲಿವುತೆಸೆದುದು ಹರಿಣಜವ ನವ ಶೈಲರಾಜ ತುರಂಗಮಂ ॥

**ತಾರಾಳಿ**

ಬಿಡುಗಣ್ಣ ನಿಬ್ಬಣಿಗರೊ
ಲ್ಪೊಡನೆ ನಿಶಾವಧುಗೆ ವಿಧುಗೆ ಸೇಸಿಡೆ ಭರದಿಂ ।
ಕಡೆಸೂಸಿದಾಣಿಮುತ್ತುಗ
ಳಿಡೆಯೆಡೆಯೊಳ್ ತಳ್ತುವೆಂಬೊಲುಡುಗಣಮೆಸೆಗುಂ ॥
ಸುರಕಲ್ಲೋಲಿನಿಯೊಳ್ ಸಮಂತೊಗೆದ ಶುಂಭದ್ಬುದ್ಬುದವ್ರಾತಮೋ
ಬರೆ ಶುಭ್ರಾಂಶು ಸುಸಿಲ್ಗೆ ಕಾಮುಕನಿಶಾಸ್ತ್ರೀ - ಅಭ್ರಶಯ್ಯಾಗ್ರದೊಳ್ ।
ಪರಪಿರ್ದಚ್ಛಸುಮಾಳಿಯೋ ತಿಮಿರರಕ್ಷಚ್ಛೇದಿಗಂ ದೇವಿಯರ್
ಭರದಿಂದೆತ್ತುವ ಮಂಗಳಾರತಿಗಳೋ ತಾರಾಳಿಯೋ ಬಲ್ಲರಾರ್ ॥

**ಚಂದ್ರನ ಕಳಂಕ**

ಎಸೆವೀ ರಾಜನ ಕಂಠಮಾಲಿಕೆಯ ಮಧ್ಯಸ್ಥೇಂದ್ರ ನೀಲಾಂಶುವೋ
ಲಸದಬ್ಧೀಶನ ಬಾಲನೊಳ್ಪಣೆಯ ರಕ್ಷಾನ್ಯಸ್ತ ಕಸ್ತೂರಿಯೋ ।
ಪಸೆಯಿಂದುತ್ಪಲಿನೀವಿಟಂ ತಳೆದ ಸಲ್ಲೀಲಾಸಿತಾಂಭೋಜಮೋ
ಉಸುರಲ್ ಬಲ್ಲವನಾವನಿಂದುವಿನ ಕರ್ಪಂ ನೋಡಿ ತಥ್ಯಾರ್ಥಮಂ ॥

**ಬಾಲಕಿಯಾದ ರತ್ನಾವಳಿ**

ಬೆರಲಂ ಹಿಪ್ಪುತೆ ಕಾಲ್ಗಳಂ ಬಿದಿರುತುಂ ಬೆಳ್ಳಕ್ಕಿಯಂ ಮಾಣುತಾ
ದರದಿಂ ಜೋಗುಳನಾಲಿಸುತ್ತಯನಿಮಿತ್ತಂ ಮಂದಹಾಸಂಗುಡು ।
ತ್ತರಿದಂ ಕಂಡವೊಲೀಕ್ಷಿಸುತ್ತೆ ವಿಗತಾರ್ಥಂಬೆತ್ತ ಸೀವಾತಿನಿಂ
ಚರದಿಂದಾಡುತೆ-ಚೆಲ್ವು ಮುದ್ದುವಡೆದಂತೊಪ್ಪಿತ್ತು ಮುಗ್ಧಾರ್ಭಕಂ ॥

**ಪುಷ್ಪಾಪಚಯ**

ನಿಱಿಯಂ ನುಣ್ಪೊಡೆಯಲ್ಲಿಱುಂಕಿ ತುದಿಗಾಲಿಂ ನಿಂದು ತುಂಗಸ್ತನಂ
ಪೊಱಗೆಯ್ದಿರ್ದುರುಹಾರಮೊರ್ಗುಡಿಸೆ ದೋರ್ಮೂಲಂ ಸುಸೌರಭ್ಯಮಂ ।
ಬಱಿಕೆಯ್ಯುತ್ತಿರೆ ನಿಲ್ಕಿ ಕೈನೆಗಪಿ ಪುನ್ನಾಗಪ್ರಸೂನಾಳಿಯಂ
ಮುಱಿಯುತ್ತಿರ್ದಳ ಕಣ್ಣ ಬೆಳ್ಪಿನುದಿಸಿತ್ತಭ್ರಾಪಗಾವಿಭ್ರಮಂ ॥



ಕವಿ ಕಾವ್ಯ ವಿಚಾರ - ೫

# ಶ್ರೀ ವರ್ಧಮಾನ ಪುರಾಣಂ

ಮದ್ರಾಸು ವಿಶ್ವವಿದ್ಯಾನಿಲಯವು ಕಳೆದ ಕಾಲು ಶತಮಾನಗಳಿಂದ ಕನ್ನಡ ಸಾಹಿತ್ಯದ ಉದ್ಗ್ರಂಥಗಳನ್ನು ಸಂಶೋಧಿಸಿ ಪ್ರಕಟಮಾಡುವ ಪವಿತ್ರ ಕಾರ್ಯವನ್ನು ಕೈಗೊಂಡು ಈಗಾಗಲೇ 'ಕವಿರಾಜಮಾರ್ಗ' 'ರಸರತ್ನಾಕರ' ವಸ್ತುಕೋಶ, ಪುಷ್ಪದಂತಪುರಾಣ, ಶಬ್ದಮಣಿದರ್ಪಣ, ಖಗೇಂದ್ರಮಣಿದರ್ಪಣ, ಕವಿಹ್ವಾಬಂಧನ ಮೊದಲಾದ ಪ್ರಾಚೀನ ಗ್ರಂಥಗಳನ್ನು ಪ್ರಕಾಶಪಡಿಸಿ ಕನ್ನಡಿಗರ ಕೃತಜ್ಞತೆಗೆ ಪಾತ್ರವಾಗಿದೆ. ಪ್ರಸಕ್ತವಾದ `ವರ್ಧಮಾನ ಪುರಾಣ'ವು ಅದರ ೧೧ನೆಯ ಕುಸುಮ. ಆ ಮಾಲೆಯ ಈಗಿನ ಸಂಪಾದಕರಾದ ಶ್ರೀ ಎಂ. ಮರಿಯಪ್ಪಭಟ್ಟ, ಎಂ.ಎ., ಎಲ್.ಟಿ.; ಮತ್ತು ಶ್ರೀ ಎಂ. ಗೋವಿಂದರಾವ್, ಎಂ. ಎ., ಬಿ.ಓ.ಎಲ್., ಅವರು ತಮಗೆ ಹಿಂದೆ ಆ ಮಾಲೆಯ ಸಂಪಾದಕರಾಗಿದ್ದ ಶ್ರೀ ಎ. ವೆಂಕಟರಾವ್, ಶ್ರೀ ಎಚ್. ಶೇಷಯ್ಯಂಗಾರ್ ಮತ್ತು ಶ್ರೀ ಎಚ್. ಚನ್ನಕೇಶವಯ್ಯಂಗಾರ್ ಅವರುಗಳಂತೆಯೇ ವಿಶೇಷ ಉತ್ಸಾಹದಿಂದ ಮಾಲೆಯ ಕಾರ್ಯವನ್ನು ನಡೆಸಿಕೊಂಡು ಬರುತ್ತಿರುವುದರಿಂದ ಅವರು ಎಲ್ಲ ಕನ್ನಡಿಗರ ಧನ್ಯವಾದಗಳಿಗೆ ಪಾತ್ರರಾಗಿರುತ್ತಾರೆ.

ಈ ಗ್ರಂಥವು ಆರಾ ಸೆಂಟ್ರಲ್ ಲೈಬ್ರೆರಿಯ ಶಕ ೧೩೫೧ರಲ್ಲಿ ಪ್ರತಿಯಾದ ಒಂದೇ ಪ್ರತಿಯ ಆಧಾರದ ಮೇಲೆ ಸಂಶೋಧಿತವಾಗಿದೆಯೆಂದೂ ಅದು ಒಂದು ಸಾಹಸವೆಂದೂ ಸಂಪಾದಕರು ಮುನ್ನುಡಿಯಲ್ಲಿ ಸೂಚಿಸಿದ್ದಾರೆ. ನಮಗೇನೋ ಅದು ಸಾಹಸವೆಂದೇ ತೋರುತ್ತದೆ. ಪ್ರಾಚೀನ ಗ್ರಂಥಗಳ ಸಂಶೋಧನೆಗೆ - ಅವು ಶುದ್ಧವಾಗಿ ಶಾಸ್ತ್ರೀಯವಾಗಿ ಸಂಶೋಧಿತವಾಗಬೇಕಾದರೆ - ಆದಷ್ಟು ಪ್ರತಿಗಳನ್ನು ಶೇಖರಿಸಿಯೇ ತೀರಬೇಕು. ಉದಾಸೀನ ಮಾಡಿದರೆ ಒಂದು ಕಡೆ ಪ್ರಕಾಶಿತ ಗ್ರಂಥದಲ್ಲಿ ತಪ್ಪುಗಳೂ ಸ್ಖಾಲಿತ್ಯಗಳೂ ಪಾಠಗಳೂ ಉಳಿದುಕೊಳ್ಳುತ್ತವೆ. ಇನ್ನೊಂದು ಕಡೆ ಇಂತಹ ಗ್ರಂಥಗಳ ಪುನರ್ಮುದ್ರಣದ ಸಂಭವ ಬಹು ಅಪೂರ್ವವಾಗಿರುವುದರಿಂದ ಉತ್ತಮ ಪ್ರತಿಗಳ ಪಾಠ ವಾಚಕರಿಗಿಲ್ಲದೇ ಹೋಗುತ್ತದೆ. ಪ್ರತಿಗಳು ಸಿಕ್ಕದೇ ಇರುವವುಗಳ ವಿಷಯ ಅನಿವಾರ್ಯ. ಪ್ರಸಕ್ತ ವರ್ಧಮಾನ ಪುರಾಣದ ವಿಷಯದಲ್ಲಿ

ಹಾಗಲ್ಲ. ಕೆಲವೆಡೆಗಳಲ್ಲಿ ಉತ್ತಮ ಪ್ರತಿಗಳಿವೆ.[1] ಒಂದೇ ಪ್ರತಿ ಇರುವುದರಿಂದ ಮಾಲೀಕರು ಅದನ್ನು ಹೊರಕ್ಕೆ ಕೊಡದಿರಬಹುದು. ಅಂತಹ ಸಂದರ್ಭಗಳಲ್ಲಿ ಅವರಿಂದ ಒಂದು ಪ್ರತಿಯನ್ನು ಮಾಡಿಸಿ ತರಿಸಿಕೊಳ್ಳಬಹುದು. ಅಥವಾ ಪ್ರತಿಗಳಿರುವ ಸ್ಥಳಕ್ಕೇ ಹೋಗಿ ತೋಲನಮಾಡಿ-ಪಾಠಾಂತರಗಳನ್ನು ಗುರುತು ಮಾಡಿಕೊಂಡು ಬರಬಹುದು. ಮದ್ರಾಸ್ ವಿಶ್ವವಿದ್ಯಾನಿಲಯದಂತಹ ದೊಡ್ಡ ಸಂಸ್ಥೆಗೆ ಇವೆರಡೂ ಅಸಾಧ್ಯವಲ್ಲ.

ಮುನ್ನುಡಿಯಲ್ಲಿ ಸಂಪಾದಕರು ತಾವು ಉಪಯೋಗಿಸಿರುವ ಪ್ರತಿಯಲ್ಲಿ ಕಂಡು ಬಂದ ವೈಶಿಷ್ಟ್ಯವನ್ನು ಈ ರೀತಿ ವಿವರಿಸಿದ್ದಾರೆ: ``ಗ್ರಂಥದಲ್ಲಿ ಉಪಯೋಗಿಸಲ್ಪಟ್ಟಿರುವ ಕೆಲವು ಕಠಿಣ ಶಬ್ದಗಳಿಗೆ ಓಲೆಯ ಪಕ್ಕದಲ್ಲಿ ಅರ್ಥ ಬರೆದಿದೆ. ಕೆಲವು ಸಂದರ್ಭಗಳಲ್ಲಿ ಆ ಅರ್ಥಗಳಿಗೆ ಆಕರಗಳಾಗಿರುವ ಗ್ರಂಥಗಳ ಹೆಸರನ್ನು ಹೇಳಿದೆ. ಹಲವು ಕಡೆಗಳಲ್ಲಿ ಕವಿಯ ಮಾತುಗಳನ್ನು ಸಮರ್ಥಿಸುವುದಕ್ಕಾಗಿ ಉತ್ತರ ಪುರಾಣವೇ ಮುಂತಾದ ಸಂಸ್ಕೃತ ಗ್ರಂಥಗಳಿಂದ ಶ್ಲೋಕಗಳನ್ನು ಎತ್ತಿ ಬರೆದಿದೆ. ಒಂದು ಸಂದರ್ಭದಲ್ಲಿ ನಾಗವರ್ಮಕೃತ ವರ್ಧಮಾನ ಪುರ್ರಾಣದಿಂದ ಒಂದು ಕಂದ ಪದ್ಯವು ಉದ್ಧರಿಸಲ್ಪಟ್ಟಿದೆ." ಈ ಅಂಶಗಳು ಸಂಶೋಧನೆಯ ದೃಷ್ಟಿಯಿಂದ ಬಹು ಮುಖ್ಯವಾದುವು. ಮಾದರಿಗಾಗಿ ಅಂತಹ ಕೆಲವು ಪುಟಗಳ ಪಡಿಯಚ್ಚುಗಳನ್ನು ಕೊಡಬಹುದಾಗಿತ್ತು. ಮತ್ತು ಆ ಪ್ರಯೋಗಗಳಲ್ಲಿ ಕೆಲವನ್ನೂ ಮತ್ತು ನಾಗವರ್ಮನ ಕಂದಪದ್ಯದ ಪೂರ್ಣಭಾಗವನ್ನೂ ಕೊಟ್ಟಿದ್ದರೆ ಹೆಚ್ಚು ಪ್ರಯೋಜನವಾಗುತ್ತಿತ್ತು.

ಗ್ರಂಥದ ಆದಿಯಲ್ಲಿ ಕವಿಕಾವ್ಯದ ವಿಚಾರವಾಗಿ ಸುಮಾರು ೪೪ ಪುಟದಷ್ಟು ದೀರ್ಘವಾದ ಉಪೋದ್ಘಾತವಿದೆ. ಇದರಲ್ಲಿ ಕವಿಯ ವಿಷಯ, ಗ್ರಂಥರಚನಾ ಕಾಲ, ಆತನ ಪೋಷಕನ ವಿಷಯ, ಆತನ ಕವಿತಾಧೋರಣೆ ಮೊದಲಾದವು ವಿಸ್ತಾರವಾಗಿ ಚರ್ಚಿತವಾಗಿವೆ. ಕವಿಯು ಉಪಯೋಗಿಸಿರುವ ಯಮಕ ಅನುಪ್ರಾಸ, ಏಕಾಕ್ಷರಿ, ದ್ವ್ಯಕ್ಷರಿ ಮೊದಲಾದ ಶಬ್ದಾಲಂಕಾರಗಳಿಗೂ ಪರಿಸಂಖ್ಯ ಉಪಮಾ ಮೊದಲಾದ ಅರ್ಥಾಲಂಕಾರಗಳಿಗೂ ವಿಪ್ರಲಂಬ ಶೃಂಗಾರ, ಕರುಣ ಮೊದಲಾದ ರಸಗಳಿಗೂ ಉದಾಹರಣೆಗಳನ್ನು ಕೊಟ್ಟು ಇಲ್ಲಿ ಉಪಯುಕ್ತವಾಗಿರುವ ಅಪೂರ್ವವಾದ ಕನ್ನಡಪದಗಳು ಮತ್ತು ಗಾದೆಗಳನ್ನು ನಿರ್ದೇಶಿಸಿ-ಈ ಗ್ರಂಥದಲ್ಲಿ ಕಾವ್ಯಧರ್ಮವೂ ಧರ್ಮವೂ ಮಿಳಿತವಾಗಿ ಇದೊಂದು ಮಹಾಕಾವ್ಯವಾಗಿದೆ ಎಂದು ಶ್ಲಾಘಿಸಲ್ಪಟ್ಟಿದೆ. ಇಂತಹ ವಿಮರ್ಶೆಯಲ್ಲಿ ರುಚಿಮಾಂದ್ಯವಿದೆಯೆಂದು ಬಹು ಸಂಕೋಚದಿಂದ ಹೇಳಬೇಕಾಗಿದೆ. ಬರಿಯ ಶಬ್ದಾಲಂಕಾರ, ಚಿತ್ರಕವಿತೆಗಳಿಂದ ಕೂಡಿದ ಗ್ರಂಥಗಳು ಕಾವ್ಯಮೀಮಾಂಸಕರಿಂದ ಅಧರ್ಮಗೋಷ್ಠಿಗೆ ಸೇರಿಸಲ್ಪಟ್ಟಿರುವುದು ನಿರ್ವಿವಾದವಾದ ವಿಷಯ. ಈ ಬಾಹ್ಯಾಲಂಕಾರಗಳು ಆಂತರ್ಯವಾದ ಭಾವರಸಪುಷ್ಟಿಗೆ ಸಹಾಯವಾಗದಿದ್ದ ಪಕ್ಷದಲ್ಲಿ ಅವು

---

1 ನಮಗೆ ತಿಳಿದ ಮಟ್ಟಿಗೆ ಮೂಡಬಿದ್ರೆಯ ಶ್ರೀಮಠದ ಭಂಡಾರದಲ್ಲಿ ೨೫೫, ೫೪೦ ಮತ್ತು ೬೧೮ನೆಯ ನಂಬರುಗಳ ಮೂರು ಪ್ರತಿಗಳಿವೆ. ಇವುಗಳಲ್ಲಿ ೨೫೫ನೆಯ ನಂಬರಿನ ಪ್ರತಿಯು ಸಂಪಾದಕರು ಉಪಯೋಗಿಸಿಕೊಂಡಿರುವ ಆರಾ ಲೈಬ್ರೆರಿಯ ಪ್ರತಿಯ ಕಾಲವನ್ನೇ ಅಂದರೆ ಶಕ

ಬರಿಯ ಶಬ್ದಗಳ ಕಸರತ್ತು ಮಾತ್ರ. ಕೇವಲ ಪಾಂಡಿತ್ಯದೃಷ್ಟಿಯಿಂದ ಅವಕ್ಕೆ ಮನ್ನಣೆ ದೊರಕಬಹುದು. ಕವಿ ಆಚಣ್ಣ ಪಂಡಿತ. ಶಬ್ದಜಾಲದ ಪೂರ್ಣ ಹಿಡಿತವಿದೆ ಆತನಿಗೆ. ಉದ್ದಕ್ಕೂ ಸಾಧನೆ ಮಾಡಿದ್ದಾನೆ. ಅವನ ಕವಿತಾ ಧೋರಣೆಗೆ ಉದಾಹರಣೆಯಾಗಿ ಕೊಟ್ಟಿರುವ

ಕಲಿ ಕೊಂಕಲ್ಕೇಕಕ್ಕುಂ
ಕೆಲಕ್ಕೆ ಕೋಲಿಕ್ಕೆ ಲಕ್ಕೆ ಲೆಕ್ಕಕ್ಕೆಲ್ಲಂ।
ಕಲಿ ಕೊಲಲೆ ಕಲಲ್ಕಕ್ಕುಂ
ಕುಲಕಕ್ಕುಂ ಕಲಿ ಕಲಂಕಿ ಕೊಂಕೆ ಕಲಂಕಂ ॥
ಎಂಬ ದ್ವ್ಯಕ್ಷರೀಪದ್ಯವೂ
ಕುಂದಿನಿಂದೆಚ್ಚನದು ಬಂ। ಟಂದ ಮಲ್ಲದೆ ನಿಂದುದೆಂ
ದೆಂದು ನಿಂದೆಲ್ಲಮದಟಂ । ಬಂದುನಚ್ಚದೆ ನಿಂದಿಕುಂ ।

ಎಂಬ ಗತಪ್ರತ್ಯಾಗತ ಪದ್ಯವೂ ಯಾವ ಭಾವದೌನ್ನತ್ಯವನ್ನು ಪಡೆಬಲ್ಲುದು?

ಅಲ್ಲದೆ ವರ್ಧಮಾನ ತೀರ್ಥಂಕರನು ಇತರ ೨೩ ಪೌರಾಣಿಕ ವ್ಯಕ್ತಿಗಳಂತಿರದೆ ಸಜೀವವಾಗಿ ಬಾಳಿಬದುಕಿದ ಐತಿಹಾಸಿಕ ವ್ಯಕ್ತಿ.[1] ಆತನ ಜೀವಮಾನದಲ್ಲಿ ಮಾನವರನ್ನು ನಗಿಸಿ ಕುಣಿಸಿ ಅಳಿಸಿ ಆತನಲ್ಲಿ ವಿಶೇಷ ಪೂಜ್ಯತೆಯನ್ನುಂಟುಮಾಡುವ ಅನೇಕ ರಸನಿಮಿಷಗಳೂ,

---

೧೩೫೧ನೆಯ ಕೀಲಕಸಂ । ಚೈ । ಶು॥೭ ಸ್ವಚ್ಛವಾರ (ಆರಾ ಲೈಬ್ರೆರಿಯಲ್ಲಿ ವಾರ ಹೇಳಿಲ್ಲ) ಉಳ್ಳದ್ದು. ಮೂಡಬಿದ್ರೆಯ ಪ್ರತಿಯು ಲಿಪಿಶಾಸ್ತ್ರದೃಷ್ಟಿಯಿಂದ ಬಹು ಪ್ರಾಚೀನವಾಗಿ ಕಾಣುವುದರಿಂದ ಬಹುಶಃ ಆರಾ ಪ್ರತಿಗೆ ಇದೇ ಮೂಲವಿರಬೇಕು. ಲಿಪಿಕಾರನು ಪ್ರತಿಯಾದ ಕಾಲವನ್ನೂ (ತಾನೇ ಬೇರೆ ದಿನ ಪ್ರತಿ ಮಾಡಿದ್ದರೂ) ಮೂಲದಲ್ಲಿರುವಂತೆಯೇ ಪ್ರತಿ ಮಾಡಿದ್ದಿರಬಹುದು. (ಹಾಗೆ ಮಾಡುವುದು ಅಸಂಭವವೇನೂ ಅಲ್ಲ. ಮೈಸೂರು ಪ್ರಾಚ್ಯಕೋಶಾಗಾರದ ಅನೇಕ ಪ್ರತಿಗಳಲ್ಲಿ ಬರವಣಿಗೆಯು ಬೇರೇ ಸಾಧನಗಳಿಂದ ೧೮ನೆಯ ಶತಮಾನಕ್ಕೆ ಸೇರಿದುದೆಂದು ಸ್ಪಷ್ಟವಾಗಿದ್ದರೂ ಪ್ರತಿಮಾಡಿದ ಕಾಲ ೧೫-೧೬ನೆಯ ಶತಮಾನಗಳಿಗೆ ಅನ್ವಯಿಸಿರುವಂತೆ ಲಿಖಿತವಾಗಿರುತ್ತವೆ. ಇದಕ್ಕೆ ಕಾರಣ ಲಿಪಿಕಾರನು ಮೂಲಪ್ರತಿಯಲ್ಲಿರುವ ಪ್ರತಿ ಮಾಡಿದ ಕಾಲವನ್ನು ತಿಳಿಸುವ ಭಾಗವನ್ನೂ ಗ್ರಂಥದ ಭಾಗವೆಂದೇ ತಿಳಿದು ಪ್ರತಿ ಮಾಡಿರುತ್ತಾನೆ) ನಾವು ಎರಡು ಪ್ರತಿಗಳನ್ನೂ ತೋಲನಮಾಡಿ ನೋಡಿಲ್ಲವಾದುದರಿಂದ ಅದರ ಪ್ರತಿಯೇ ಇದು ಇದ್ದರೂ ಇರಬಹುದು. ಎರಡು ಪ್ರತಿಗಳನ್ನೂ ಒಂದೇ ದಿನ ಪ್ರತಿಮಾಡಿ ಮುಗಿಸಿರುವುದು ಅಸಂಭವ. ಅಂತೂ ಮೂಡಬಿದ್ರೆಯ ಪ್ರತಿ ಪ್ರಾಚೀನವಾದ ಶುದ್ಧವಾದ ಪ್ರತಿ. ಹಾಗೆಯೇ ಶ್ರವಣಬೆಳುಗೊಳದ ಮಠದಲ್ಲಿ ೨೩೫ನೆಯ ನಂಬರಿನ ಶುದ್ಧವಾದ ಪ್ರತಿಯೊಂದಿದೆ. ಹಾಸನದ ಪಾಯಪ್ಪಶೆಟ್ಟರಲ್ಲಿ ಪ್ರಾಚೀನವಲ್ಲದಿದ್ದರೂ ಬಹು ಉತ್ತಮ ರೀತಿಯಲ್ಲಿ ರಕ್ಷಿತವಾಗಿರುವ ಚಿತ್ರಗಳಿಂದ ಕೂಡಿದ ಒಂದು ಪ್ರತಿಯಿದೆ. ಮೈಸೂರು ಪ್ರಾಚ್ಯಕೋಶಾಗಾರದಲ್ಲಿ ಕೆ. ಎ. ೫ನೆಯ ನಂಬರಿನ ಕಾಗದ ಪ್ರತಿ ಇದೆ. ಇವುಗಳನ್ನೆಲ್ಲಾ ಉಪಯೋಗಿಸಿಕೊಂಡಿದ್ದರೆ ಈ ಸಂಸ್ಕರಣವು ಬಹು ಉತ್ತಮವಾಗುತ್ತಿತ್ತೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಭಾವಸಮಾಧಿಗಳೂ ಆಗಿ ಹೋಗಿರಬೇಕು. ಕವಿಗೆ ಒಳಗಣ್ಣು ಮಾತ್ರ ಇದ್ದಿದ್ದರೆ ಇಂತಹ ಅನೇಕ ಸನ್ನಿವೇಶಗಳನ್ನು ಆರಿಸಿಕೊಂಡು ಗ್ರಂಥವನ್ನು ಸಜೀವವನ್ನಾಗಿಯೂ ಆತ್ಮೀಯವನ್ನಾಗಿಯೂ ಮಾಡಬಹುದಾಗಿತ್ತು. ಅದಕ್ಕೆ ಬದಲಾಗಿ ಗ್ರಂಥದ ೧೬ ಆಶ್ವಾಸಗಳಲ್ಲಿ ಹನ್ನೆರಡೂವರೆ ಆಶ್ವಾಸಗಳನ್ನು ನಾಯಕನ ಭವಾವಳಿಗೆ ಮೀಸಲಾಗಿರಿಸಿ ಉಳಿದ ಮೂರೂವರೆ ಆಶ್ವಾಸಗಳಲ್ಲಿ ಸಾಂಪ್ರದಾಯಿಕವಾದ ನೀರಸವಾದ ಪುರಾಣವೊಂದನ್ನು ನೆಯ್ದಿರುವ ಈ ಗ್ರಂಥವನ್ನು ಉತ್ತಮ ಗ್ರಂಥವೆಂದು ಹೇಳುವುದು ಅನುಚಿತವೇ ಅಲ್ಲದೆ ನಿಜವಾದ ಉತ್ತಮ ಕವಿಗಳಿಗೆ ಅನ್ಯಾಯ ಮಾಡಿದಂತಾಗುತ್ತದೆ.

ಗ್ರಂಥಪಾಠದ ವಿಷಯವಾಗಿ ಒಂದು ಮಾತು. ಒಂದೇ ಪ್ರತಿಯ ಆಧಾರದ ಮೇಲೆ ಸಂಶೋಧಿತವಾಗಿರುವುದರಿಂದ ಇಲ್ಲಿ ಪಾಠಾಂತರಕ್ಕೆ ಅವಕಾಶವೇ ಇಲ್ಲ. ಗ್ರಂಥದ ಉದ್ದಕ್ಕೂ ಕಂಸಗಳಲ್ಲಿ [.....] ಕೊಟ್ಟಿರುವ ಭಾಗದಲ್ಲೆಲ್ಲಾ ಓಲೆಯ ಪ್ರತಿಯಲ್ಲಿ ಪಾತಗಳಿತ್ತೆಂದೂ ಕಂಸದಲ್ಲಿರುವ ಭಾಗವನ್ನು ಸಂಪಾದಕರು ಸ್ವಂತವಾಗಿ ಊಹಿಸಿ ನಿರ್ಮಾಣಮಾಡಿ ಸೇರಿಸಿದ್ದಾರೆಂದು ಊಹಿಸಿಕೊಳ್ಳಬೇಕಾಗಿದೆ. ಮೂಲ ಪ್ರತಿಯಲ್ಲಿ ತಪ್ಪಿದ್ದು ಅದನ್ನು ಸ್ವಂತವಾಗಿ ಸರಿಪಡಿಸಿ ಮೇಲೆ ತಮ್ಮ ಪಾಠವನ್ನು ಕಂಸದಲ್ಲಿ ಕೊಟ್ಟಿದ್ದಾರೆಂದು ಊಹಿಸಿಕೊಳ್ಳೋಣವೆಂದರೆ ಅಪದ್ಧವಾದ ಅಥವಾ ಸಂಪಾದಕರ ಪಾಠಕ್ಕೆ ಮೂಲಭೂತವಾದ ಕಲುಷಿತ ಪಾಠವನ್ನು ಪುಟದಡಿಯಲ್ಲಿ ಕೊಟ್ಟಿಲ್ಲ. ಆದುದರಿಂದ ಅಲ್ಲಿ ಗ್ರಂಥಪಾತವೇ ಇರಬೇಕು. ಹಾಗಾದರೆ ಇಲ್ಲಿ ಸಂಪಾದಕರ ಶಕ್ತಿಯ ವಿಷಯದಲ್ಲಿ ಅತ್ಯಾಶ್ಚರ್ಯವುಂಟಾಗುತ್ತದೆ. ಸಾಧಾರಣವಾಗಿ ಸಂಪಾದಕರು ಸಂದರ್ಭಾನುಸಾರ ಒಂದಕ್ಷರವನ್ನೋ ಒಂದು ಶಬ್ದವನ್ನೋ ನಾಲ್ಕಾರು ಶಬ್ದಗಳಿಂದ ಕೂಡಿದ ಒಂದು ಶಬ್ದಜಾಲವನ್ನೋ ಬಹು ಕಷ್ಟಪಟ್ಟು ಊಹಿಸಿ ಸೇರಿಸಬಹುದು. ಮುಂದಿನ ಪ್ರಕ್ರಿಯಾಭಾಗವನ್ನು ನೋಡಿ:-

ನಿಂದ [ಸೂಕ್ಷ್ಮಕ್ರಿಯಾಪ್ರತೀಕನಾಗಿ ಮೂಲಶರೀರಪ್ರಮಾಣಾವಸ್ಥಿತಾತ್ಮ ಪ್ರದೇಶಂ ಬಟಿಯುಮಂತರ್ಮುಹೂರ್ತದಿಂ ಬಾದರಮನೋವಚನೋಚ್ಛ್ವಾಸಂ ಬಾದರಕಾಯೋಗ] ಸೂಕ್ಷ್ಮ ಇತ್ಯಾದಿ (ಪುಟ ೨೮೦).

ಈ ಭಾಗವನ್ನು ಯಾವ ಆಧಾರದ ಮೇಲೆ ರಚನೆ ಮಾಡುವುದು? ಈ ಭಾಗವು ಮೈಸೂರು ಪ್ರಾಚ್ಯಕೋಶಾಗಾರದ ಕೆ. ಎ. ೫೫ನೆಯ ಪ್ರತಿಯ ಈ ಭಾಗಕ್ಕೆ ಒಂದಕ್ಷರವೂ ವ್ಯತ್ಯಾಸವೇ ಇಲ್ಲದೆ ಇದೆ.

ಅಷ್ಟೇ ಅಲ್ಲ. ಈ ಗ್ರಂಥದಲ್ಲಿ ಕಂಸದಲ್ಲಿ ಕೊಟ್ಟಿರುವ ಭಾಗಗಳೆಲ್ಲ (ಒಂದೆರಡು ಕಡೆ ವಿನಾ) ಮೇಲಿನ ಪ್ರತಿಯ ಭಾಗಗಳಿಗೆ ಅಕ್ಷರಶಃ ಹೊಂದಿಕೊಳ್ಳುತ್ತವೆ. ಅಲ್ಲದೆ ಅಲ್ಲಿರುವ ಹಾಗೆಯೇ ಇಲ್ಲಿಯೂ ಎಂಟನೆಯ ಆಶ್ವಾಸದ ೪೮ನೆಯ ಪದ್ಯದ 'ಮುಕ್ಕುಳಿಸೆ' ಎಂಬ ಪದದಿಂದ

1 ಜೈನಧಾರ್ಮಿಕರ ದೃಷ್ಟಿಯಲ್ಲಿ ಎಲ್ಲ ತೀರ್ಥಂಕರರೂ ಸಜೀವವಾಗಿ ಇಹಲೋಕದಲ್ಲಿ ಬಾಳಿ ಬದುಕಿದವರೇ. ಮೇಲಿನ ವಾಕ್ಯ ಆಧುನಿಕ ಐತಿಹಾಸಿಕ ದೃಷ್ಟಿಯಿಂದ ಮಾತ್ರ ಹೇಳಿದುದು.

ಮುಂದಕ್ಕೆ ಮತ್ತು 'ಪ' ll ಮುಂದಕ್ಕೆ 'ಖಿಟ್ಠ ಖಿಟ್ಠಿ' ಎನ್ನುವವರೆಗೆ ಗ್ರಂಥಪಾತವಿದೆ. ಆದುದರಿಂದ ಕಂಸವಲ್ಲಿರುವ ಪಾಠಗಳು ಕೆ. ಎ. ೫ನೆಯ ಪ್ರತಿಯ ಪಾಠಗಳೇ ಇರಬೇಕಲ್ಲವೇ? ಹಾಗಿದ್ದರೆ ಅದರ ಸೂಚನೆಯನ್ನು ಕೊಟ್ಟಿದ್ದರೆ ಆ ಪಾಠಗಳಿಗೆ ಹೆಚ್ಚು ಪ್ರಾಶಸ್ತ್ಯವು ಬರುತ್ತಿರಲಿಲ್ಲವೆ?

ಪಾಠಾಂತರಗಳ ಸಹಾಯವಿಲ್ಲದಿರುವುದರಿಂದ ಕೆಲವೆಡೆಗಳಲ್ಲಿ ಸರಿಯಾಗಿ ಅರ್ಥವಾಗುವುದಿಲ್ಲ. ಕೆಲವೆಡೆಗಳಲ್ಲಿ ಅಪಶಬ್ದಗಳ ಪ್ರಯೋಗವಿದೆ - ಜನಾರ್ಧನ (XXIX, ೨೭) ವೃತಭಂಗ (XXXII, ೯) ದುಃಕೃತ (೧ ಆ, ೨ ಪ) ಪುಪ್ಪವತಿ (೧೩-೫೭). ಮತ್ತೆ ಕೆಲವೆಡೆಗಳಲ್ಲಿ ಮುದ್ರಣದೋಷಗಳಿವೆ. - ವಿಮಳಸಂಧೋದಕ (೧೪-೫೧) ಬಂದುರತರ (೧೪-೩೦) ಶಶಶೇಖರ (೮-೫); ಬೇರೆ ಕೆಲವೆಡೆಗಳಲ್ಲಿ ಱಟಕುಳಗಳ ತಪ್ಪು ಪ್ರಯೋಗವಿದೆ. ತಣ್ಬುಳಿಲ್ ೧-೩೭, ತೊಳಲ್ (೧-೬೭) ಇಲ್ಲಿ ಱಟವಿರಬೇಕು; ಏಟಿಸು (೧-೬೯) ಅಟ್ಟು (೧-೬೫) ಇಲ್ಲಿ ಕುಳವಿರಬೇಕು. ಹೆಚ್ಚು ಪ್ರತಿಗಳ ಸಹಾಯವಿದ್ದಿದ್ದರೆ ಇಂತಹ ಅನೇಕ ತಪ್ಪುಗಳು ಕಡಿಮೆಯಾಗುತ್ತಿದ್ದವು. ಇಂತಹ ಪ್ರಾಚೀನ ಗ್ರಂಥಗಳನ್ನು ಪ್ರಕಟಮಾಡುವಾಗ ಶಬ್ದಕೋಶ, ಪದ್ಯಗಳ ಅಕಾರಾದಿ, ಈ ಮಾಲೆಯ ಎಲ್ಲ ಗ್ರಂಥಗಳ ಒಂದು ಪರಿಚಯ - ಇವೆಲ್ಲ ಇರುವುದು ಒಳ್ಳೆಯದು. ಸಂಪಾದಕರು ಬಹು ಕಷ್ಟಪಟ್ಟು ಗ್ರಂಥವನ್ನು ಸಂಶೋಧಿಸಿ ಒಳ್ಳೆಯ ಬೆಂಡುಕಾಗದದಲ್ಲಿ ಅಂದವಾದ ರೀತಿಯಲ್ಲಿ ಪ್ರಕಟಿಸಿರುವುದು ಶ್ಲಾಘನೀಯ. ಆದರೂ ೧೫ ರೂ. ಬೆಲೆ ಮಾತ್ರ ಹೆಚ್ಚೆಂದು ಹೇಳಬೇಕಾದುದು ಅನಿವಾರ್ಯ. ಕೆಲವು ಪ್ರತಿಗಳನ್ನಾದರೂ ಸಾಮಾನ್ಯ ಕಾಗದದಲ್ಲಿ ಸುಲಭಬೆಲೆಗೆ ಸಿಕ್ಕುವಂತೆ ಅಚ್ಚುಮಾಡಿಸಿದ್ದರೆ ಚೆನ್ನಾಗಿತ್ತು.

ಇಂತಹ ಸ್ತುತ್ಯವಾದ ಕಾರ್ಯವನ್ನು ಮದ್ರಾಸ್ ವಿಶ್ವವಿದ್ಯಾನಿಲಯ ಹೆಚ್ಚಿನ ರೀತಿಯಲ್ಲಿ ನಡೆಸಲೆಂದೂ ಸಂಪಾದಕರ ಕಾರ್ಯ ಮತ್ತಷ್ಟು ಜನಪ್ರಿಯವಾಗಲೆಂದೂ ಹಾರೈಸುತ್ತೇವೆ.



ಕವಿ ಕಾವ್ಯ ವಿಚಾರ - ೬

# ಖಗೇಂದ್ರಮಣಿದರ್ಪಣಂ

ಮಂಗರಾಜವಿರಚಿತಂ ಖಗೇಂದ್ರಮಣಿದರ್ಪಣಂ (ಮದ್ರಾಸ್ ಯೂನಿವರ್ಸಿಟಿಯ ಕರ್ಣಾಟಕ ಗ್ರಂಥಮಾಲಾ, ಸಂಖ್ಯೆ ೯) - ಸಂಪಾದಕರು: ಎ. ವೆಂಕಟರಾವ್, ಬಿ.ಎ., ಎಲ್. ಟಿ. ಮತ್ತು ಎಚ್. ಶೇಷಯ್ಯಂಗಾರ್; ರಾಯಲ್ ಅಷ್ಟಪತ್ರ ೧೦+xvi+xvii+ ೩೩೩, ಬೆಲೆ, ರೂ. ೫-೦-೦.

ಸಾಹಿತ್ಯ ಮತ್ತು ಧರ್ಮಗ್ರಂಥಗಳಂತೆಯೇ ಜನೋಪಯುಕ್ತವಾದ ಶಾಸ್ತ್ರ ಗ್ರಂಥಗಳನ್ನು ರಚಿಸುವುದೂ ಕನ್ನಡದಲ್ಲಿ ಬಹು ಕಾಲದಿಂದಲೂ ರೂಢಿಯಲ್ಲಿರುವ ವಿಷಯ. ಈ ದೃಷ್ಟಿಯಿಂದ ಇದುವರೆಗೆ ತಿಳಿದಿರುವವರಲ್ಲಿ ಮೊದಲು ಗ್ರಂಥರಚನೆ ಮಾಡಿದವನು ಚಾವುಂಡರಾಯ. ಈತನು ಪಂಚಾಂಗಫಲ, ನವಪಟಲ, ಉತ್ಪಾತ ಶಾಂತಿ, ವಾಸ್ತುವಿಚಾರ, ಉದಕಾರ್ಗಳ, ವೃಕ್ಷಾಯುರ್ವೇದ, ಸುಗಂಧವಾದ, ಸೂಪಶಾಸ್ತ್ರ, ವೈದ್ಯ, ವಿಷತತ್ತ್ವ, ಲಕ್ಷಣ, ಶಕುನ - ಎಂಬ ಹನ್ನೆರಡು ವಿಷಯಗಳನ್ನೊಳಗೊಂಡ 'ಲೋಕೋಪಕಾರ'ವೆಂಬ ಒಂದು ಗ್ರಂಥವನ್ನು ಕ್ರಿ. ಶ. ೧೦೨೫ರಲ್ಲಿ ರಚಿಸಿದ್ದಾನೆ. ಬಹುಶಃ ಇದರಿಂದಲೇ ಪ್ರೇರಿತರಾಗಿ ಇವನ ತರುವಾಯ ಬಂದ ಶ್ರೀಧರಾಚಾರ್ಯ (ಕ್ರಿ. ಶ. ೧೦೪೯) ಕೀರ್ತಿವರ್ಮ (ಕ್ರಿ.ಶ. ೧೧೨೫), ಜಗದ್ದಳ ಸೋಮನಾಥರು (ಕ್ರಿ.ಶ. ೧೧೫೦) 'ಲೋಕೋಪಕಾರ'ದ ಒಂದೊಂದು ವಿಷಯವನ್ನು ಆರಿಸಿಕೊಂಡು ಕ್ರಮವಾಗಿ `ಜಾತಕತಿಲಕ' 'ಗೋವೈದ್ಯ' 'ಕರ್ಣಾಟಕ ಕಲ್ಯಾಣಕಾರಕ' ಎಂಬ ಸ್ವತಂತ್ರ ಗ್ರಂಥಗಳನ್ನು ರಚಿಸಿದ್ದಾರೆ.[1] ಇವರಂತೆಯೇ ಪ್ರಸಕ್ತ ಗ್ರಂಥಕರ್ತೃವಾದ ಮಂಗರಸನೂ 'ಲೋಕೋಪಕಾರ'ದ ವಿಷತತ್ತ್ವಭಾಗವನ್ನು ಜನೋಪಕಾರಕವಾಗುವ ಹಾಗೆ ವಿಸ್ತಾರವಾಗಿ ಬರೆಯಬೇಕೆಂದು ಹೊರಟು ತನ್ನ 'ಖಗೇಂದ್ರಮಣಿದರ್ಪಣ'ವನ್ನು ರಚಿಸಿರಬಹುದು.[2]

1 ಇವರ ಗ್ರಂಥಗಳಲ್ಲೆಲ್ಲಾ 'ಲೋಕೋಪಕಾರ'ದ ಪದ್ಯಗಳು ಉದ್ಧೃತವಾಗಿರುವುದು ಈ ಊಹೆಗೆ ಕಾರಣ.

2 ಈ ಅಭಿಪ್ರಾಯದ ಸಮರ್ಥನೆಗೆ ಮುಂದೆ ನೋಡಿ.

ಖಗೇಂದ್ರಮಣಿದರ್ಪಣವು ವಿಷವೈದ್ಯವನ್ನು ವಿಸ್ತಾರವಾಗಿ ಪ್ರತಿಪಾದಿಸುವ ಕನ್ನಡ ಚಂಪೂಗ್ರಂಥ. ಇದರಲ್ಲಿ ಸಂಜ್ಞಾಪ್ರಕರಣ, ಸ್ಥಾವರವಿಷಪ್ರಕರಣ, ಸಂಗ್ರಹ ಪ್ರಕರಣ, ಗಾರುಡಮಂತ್ರ, ನಿರ್ವಿಷಪಾನ, ಅಂಜನ, ನಸ್ಯ, ಲೇಪ, ಅಂಜನಪಾನ, ನಸ್ಯಲೇಪನ, ಮಂಡಲಸರ್ಪವಿಷಾಪಹರಣ, ವೃಶ್ಚಿಕವಿಷಹರಣ, ಮೂಷಕವಿಷ ನಿವಾರಣ, ಸರ್ವಜಂಗಮವಿಷಮವಿಷಚಿಕಿತ್ಸಾ, ಕೃತ್ರಿಮವಿಷಚಿಕಿತ್ಸಾ, ಬಾಷ್ಪ ಚಿಕಿತ್ಸಾ, ಸಮಸ್ತನಿರ್ವಿಷಚಿಕಿತ್ಸಾ ಎಂಬ ಹದಿನಾರು ಅಧಿಕಾರಗಳಿವೆ.

ಇವುಗಳಲ್ಲಿ ಹೇಳಿರುವ ವಿಷಯಗಳು ತುಂಗಗುಣರೆನಿಪ ಮುನಿವರ ಸಂಗತಿಯಿಂದಱಿದು ಪೇೞ್ದ ಸಂಗ್ರಹ'; 'ಶ್ರೀಪೂಜ್ಯಪಾದೋಕ್ತಿಯುಸಾರ'; 'ಧರ್ಮಾರ್ಥಕಾಮವನೊರ್ಮೊದಲೊಳೆ ಬಯಸಿ' ಕವಿಯು ಈ ಗಾರುಡಶಾಸ್ತ್ರವನ್ನು ರಚಿಸಿದ್ದಾನೆ. ಈ ಗ್ರಂಥದಲ್ಲಿ ಸಾಮಾನ್ಯವಾಗಿ ಎಲ್ಲ ತೆರನಾದ ವಿಷಗಳಿಗೂ ಪರಿಹಾರಕ್ರಮವು ಸೂಚಿತವಾಗಿದೆ. ಪ್ರತಿಯೊಂದು ಚಿಕಿತ್ಸೆಗೂ ಮಣಿಮಂತ್ರೌಷಧಿಗಳ ಪ್ರಯೋಗಗಳು ನಿರೂಪಿತವಾಗಿವೆ. ಔಷಧಿಗಳಲ್ಲಿ ನಸ್ಯ, ಪಾನ, ಲೇಪನ, ಕರ್ಣಪೂತ್ಕಾರ ಮೊದಲಾದ ಭೇದಗಳಿವೆ. ಇಷ್ಟು ವಿಸ್ತಾರವಾದ ವಿಷವೈದ್ಯಗ್ರಂಥ ಕನ್ನಡದಲ್ಲಿ ಮತ್ತೊಂದಿಲ್ಲ. ಎಂದ ಮೇಲೆ ಈ ಗ್ರಂಥದ ಉಪಯೋಗವೆಷ್ಟೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇಂತಹ ಗ್ರಂಥವನ್ನು ಪ್ರಕಾಶಪಡಿಸಲು ಸಹಾಯಕರಾದ ಮದ್ರಾಸ್ ವಿಶ್ವವಿದ್ಯಾನಿಲಯದ ಅಧಿಕಾರಿಗಳೂ ಶೋಧಿಸಿ ಪ್ರಕಟಿಸಿದ ಸಂಪಾದಕರೂ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಮುದ್ರಣವೂ ಪುಸ್ತಕದ ಆಕಾರವೂ ಪ್ರಕಾಶಕರಿಗೆ ಗೌರವವನ್ನು ತರುವಂತಹುದೇ ಆಗಿದೆ. ಸಂಪಾದಕರಾದ ಶ್ರೀಮಾನ್ ಶೇಷಯ್ಯಂಗಾರ್ಯರು ಉತ್ತಮಸಾಹಿತಿಗಳು. ಮದ್ರಾಸ್ ವಿಶ್ವವಿದ್ಯಾನಿಲಯದ ಕನ್ನಡಗ್ರಂಥಮಾಲೆಯು ಆರಂಭವಾದಂದಿನಿಂದ ಏಕರೀತಿಯಾಗಿ ದುಡಿಯುತ್ತಿರುವವರು. ತಮ್ಮ ಸಹೋದ್ಯೋಗಿಗಳಾದ ಶ್ರೀಮಾನ್ ವೆಂಕಟರಾಯರು ಈ ಗ್ರಂಥದ ಶೋಧನೆಯ ಮಧ್ಯಕಾಲದಲ್ಲಿ ಕಾಲವಶವಾದರೂ ಎದೆಗುಂದದೆ ಅನೇಕ ಹೊಸ ಕೈಬರಹದ ಪ್ರತಿಗಳನ್ನು ಸಂಪಾದಿಸಿ ಶ್ರದ್ಧೆಯಿಂದ ಶೋಧನಕಾರ್ಯವನ್ನು ನಡೆಸಿದ್ದಾರೆ. ಪ್ರಧಾನ ಸಂಪಾದಕರಾದ ಎಂ. ಮರಿಯಪ್ಪಭಟ್ಟರ ಇಂಗ್ಲೀಷ್ ಭಾಷೆಯ ಉಪೋದ್ಘಾತ, ಸಂಪಾದಕರ ಮುನ್ನುಡಿ, ಕವಿಕಾವ್ಯವಿಚಾರ, ಸಂಸ್ಕೃತದಲ್ಲಿ ವಿಷವೈದ್ಯವನ್ನು ಪ್ರತಿಪಾದಿಸುವ ಕಾಶ್ಯಪಸಂಹಿತೆಯ ವಿಷಯಸಂಗ್ರಹ, ಪದ್ಯಗಳ ಅಕಾರಾದಿ, ಕಾಶ್ಯಪಸಂಹಿತೆಗೂ ಪ್ರಕೃತಗ್ರಂಥಕ್ಕೂ ಇರುವ ಸಂವಾದಿವಿಸಂವಾದಿ ಭಾಗಗಳು, ಗ್ರಂಥದಲ್ಲಿ ಉಪಯುಕ್ತವಾಗಿರುವ ವೃತ್ತಜಾತಿ ಸಂಖ್ಯೆಗಳನ್ನು ತೋರಿಸುವ ಪಟ್ಟಿ, ಶುದ್ಧಿಪತ್ರ ಮೊದಲಾದುವುಗಳಿಂದ ಕೂಡಿ ಗ್ರಂಥವು ಉಪಯುಕ್ತವಾಗಿದೆ. ಕೈಬರಹದ ಪ್ರತಿಯನ್ನು ಆಯುರ್ವೇದಿಕ್ ಕಾಲೇಜು ಪ್ರಿನ್ಸಿಪಾಲರಾದ ಡಾಕ್ಟರ್ ಗೊರೂರು ಶ್ರೀನಿವಾಸಮೂರ್ತಿಗಳು ಪರಿಶೀಲಿಸಿರುವುದರಿಂದ ಅದಕ್ಕೆ ಮತ್ತಷ್ಟು ಘನತೆಯುಂಟಾಗಿದೆ. ಆದರೂ ಪ್ರಸಕ್ತ ಮುದ್ರಣದ ವಿಷಯದಲ್ಲಿ ನಮಗೆ ಕಂಡುಬಂದ ಕೆಲವಂಶಗಳನ್ನು ಪ್ರಸ್ತಾಪಿಸಲು ಬಯಸುತ್ತೇವೆ.

೧. **ಪ್ರಮಾಣಗ್ರಂಥಗಳು:-** ಈ ಗ್ರಂಥವು ವಿಷವೈದ್ಯ ಮತ್ತು ಮಂತ್ರಶಾಸ್ತ್ರಕ್ಕೆ ಸಂಬಂಧಪಟ್ಟುದು. ಈಗ ಇವುಗಳ ಪರಿಚಯವುಳ್ಳವರು ಅತಿವಿರಳ. ಇದರ ಶೋಧನೆಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಾದರೂ ಉಪಕಾರಕ್ಕಿಂತ ಅಪಕಾರವು ಹೆಚ್ಚಾಗುವುದೆಂಬುದು ಸರ್ವವೇದ್ಯವಾದ ವಿಷಯ. ಆದುದರಿಂದ ಈ ಗ್ರಂಥದ ಪರಿಷ್ಕಾರಕಾರ್ಯದಲ್ಲಿ ಈ ಗ್ರಂಥದ ಕೈಬರಹದ ಪ್ರತಿಗಳನ್ನೇ ಅಲ್ಲದೆ ಇದಕ್ಕೆ ಸಂಬಂಧಪಟ್ಟ ಪ್ರಮಾಣಗ್ರಂಥಗಳನ್ನು ಸಾಧ್ಯವಾದ ಮಟ್ಟಿಗೆ ಉಪಯೋಗಿಸಿಕೊಳ್ಳುವುದು ಮೇಲು. ಗ್ರಂಥಕರ್ತನೇ ಇದು ಆದ್ಯರ ಗ್ರಂಥಗಳ ಸಂಗ್ರಹವೆಂಬುದನ್ನು ವಿಶದಗೊಳಿಸಿದ್ದಾನೆ. ಅವುಗಳಲ್ಲಿ ಕೆಲವಾದರೂ ಈಗ ಸಿಕ್ಕಬಹುದು. ಅವುಗಳನ್ನು ಉಪಯೋಗಿಸಿಕೊಂಡಿದ್ದರೆ ಶೋಧನೆಗೆ ಬಹಳ ಸಹಾಯವಾಗುತ್ತಿತ್ತು. ಸಂಪಾದಕರೇನೋ ಈ ದೃಷ್ಟಿಯಿಂದ ಕಾಶ್ಯಪಸಂಹಿತೆಯ ವಿವರವನ್ನೂ ಅದರ ಸಂವಾದಿಭಾಗಗಳನ್ನೂ ತಿಳಿಸಿದ್ದಾರೆ. ಆದರೆ ಪ್ರಧಾನ ಸಂಪಾದಕರು ತಮ್ಮ ಮೊದಲ ಮಾತಿನಲ್ಲಿ ಸೂಚಿಸಿರುವಂತೆ ಕಾಶ್ಯಪಸಂಹಿತೆಯನ್ನು ಮಂಗರಸನು ವಿಶೇಷವಾಗಿ ಉಪಯೋಗಿಸಿಕೊಂಡಿರುವಂತೆ ಕಾಣುವುದಿಲ್ಲ. ಮಂಗರಾಜನ ಗ್ರಂಥಕ್ಕೆ ಪ್ರತ್ಯಕ್ಷವಾಗಿ ಸಂಬಂಧಪಟ್ಟಿರಬಹುದಾದ ಕೆಲವು ಸಂಸ್ಕೃತ ಕನ್ನಡ ಗ್ರಂಥಗಳನ್ನು ಮುಂದೆ ಸೂಚಿಸಲು ಬಯಸುತ್ತೇವೆ.

(i) **ವಾಗ್ಭಟನ ಅಷ್ಟಾಂಗಹೃದಯ[1]:** ಇದು ಸಂಸ್ಕೃತ ಭಾಷೆಯಲ್ಲಿರುವ ಪ್ರಾಚೀನವಾದ ವೈದ್ಯಗ್ರಂಥ. ಇದರಲ್ಲಿ ಎಲ್ಲ ವಿಧವಾದ ರೋಗಗಳಿಗೂ ಚಿಕಿತ್ಸೆಯನ್ನು ಹೇಳಿದೆ. ಇದರ ೩೫ರಿಂದ ೩೮ನೆಯ ಅಧ್ಯಾಯಗಳಲ್ಲಿ ವಿಷವೈದ್ಯವು ಪ್ರಸ್ತಾಪಿಸಿದೆ. ಈ ಭಾಗಗಳಿಗೆ ಕ್ರಮವಾಗಿ ವಿಷವಿಪ್ರತಿಷೇಧ, ಸರ್ವವಿಷಪ್ರತಿಷೇಧ, ಕೀಟಲತಾದಿ ವಿಷಪ್ರತಿಷೇಧ, ಮೂಷಕಾಲರ್ಕಪ್ರತಿಷೇಧ ಎಂಬ ಹೆಸರಿದೆ. ಇಲ್ಲಿಯ ಭಾಗಗಳು ಖಗೇಂದ್ರಮಣಿದರ್ಪಣದ ಆಯಾ ಭಾಗಗಳಿಗೆ ಬಹುಮಟ್ಟಿಗೆ ಆಕರವಾಗಿವೆ. ಕೆಲವು ಶ್ಲೋಕಗಳಂತೂ ಪ್ರತ್ಯಕ್ಷಾನುವಾದವಿದ್ದಂತೆಯೇ ಇವೆ. ಮುಂದಿನ ಶ್ಲೋಕವನ್ನು ಹೋಲಿಸಿ.

**ಅಷ್ಟಾದಶ ಮೂಷಕಭೇದಗಳು**

ಲಾಲನಶ್ಚಪಲಃ ಪುತ್ರೋ ಹಸಿರಶ್ಚಿಕ್ಕಿರೋಜರಃ ।
ಕಷಾಯದಂತಃ ಕುಲಕಃ ಕೋಕಿಲಃ ಕಪಿಲೋಸಿತಃ ॥
ಅರುಣಃ ಶಬಲಃ ಶ್ವೇತಃ ಕಪೋತೋಪಲಿತೋಂದುರಃ ।
ಚುಚುಂದುರೋ ರಸಾಲಾಖ್ಯೋ ದಶಾಷ್ಟೌಚೇತಿ ಮೂಷಕಾಃ ॥

(ಅಷ್ಟಾಂಗ ಹೃದಯ, ೩೮-೧)

---

1 ವಾಗ್ಭಟನ ಕಾಲವನ್ನು ಅಷ್ಟಾಂಗ ಹೃದಯದ ಸಂಪಾದಕರಾದ ಅಣ್ಣಾಮೋರೇಶ್ವರ ಕುಂಟೆ, ಬಿ.ಎ., ಎಂ.ಡಿ. ಅವರು ಕ್ರಿ. ಪೂ. ೨ನೆಯ ಶತಮಾನವೆಂದು ನಿಷ್ಕರ್ಷಿಸಿದ್ದಾರೆ.

ಶ್ವೇತಂ ಕೃಷ್ಣನಲಕ್ತಕಂ ಕಪಿಲನುಂ ನೀಲಾಭ ಧೂಮ್ರಾಭಮಾ
ಪೀತಂ ಪಿಂಗಲ ಲೂತಿ ದಂಷ್ಟ್ರಕಪಿಲಂ ಕ್ರೋಡಾಸ್ಯದೀರ್ಘಾಸ್ಯ ಸಂ ।
ಭೂತಂ ಕಾವಳ ದೀರ್ಘಕರ್ಣಕಳಕಂಠಂ ರೇಣುಕಾಂಗ ಲಸ
ತ್ಖ್ಯಾತಂ ಪುಚ್ಛವಿಹೀನನೆಂದು ಪದಿನೆಣ್ಭೇದಂಗಳಕ್ಕಾಖುಗಳ್ ॥

(ಖಗೇಂದ್ರಮಣಿದರ್ಪಣಂ, ೧೨-೩೦)

(ii) **ವಿದ್ಯಾನುಶಾಸನ**[1]:- ಇದೊಂದು ಸಂಸ್ಕೃತ ಸಂಗ್ರಹ ಗ್ರಂಥ. ಜೈನಪಂಥಕ್ಕೆ ಸೇರಿದುದು. ಇದರ ನವಮ ದಶಮ ಏಕಾದಶ ದ್ವಾದಶ ಸಮುದ್ದೇಶಗಳಲ್ಲಿ ಕ್ರಮವಾಗಿ ವಿಷವೈದ್ಯಕ್ಕೆ ಸಂಬಂಧಪಟ್ಟ ಸಂಗ್ರಹತ್ಯಾಗವಿಧಾನ, ನಿರ್ವಿಷೀಕರಣ, ಫಣಿದಷ್ಟಚಿಕಿತ್ಸೆ, ಮಂಡಲ್ಯಾದಿವಿಷಹರಣ ಎಂಬ ಭಾಗಗಳು ಉಕ್ತವಾಗಿವೆ. ಈ ಭಾಗಕ್ಕೂ ಮಂಗರಸನ ಗ್ರಂಥಕ್ಕೂ ನಿಕಟಸಂಬಂಧವಿದೆ. ಯಂತ್ರಮಂತ್ರಗಳ ವಿಷಯದಲ್ಲಿ ಎರಡಕ್ಕೂ ಬಹುಮಟ್ಟಿಗೆ ಸಾಮರಸ್ಯವಿದೆ. ಅಧಿದೇವತೆ, ಅಂಗನ್ಯಾಸ, ಘಟೀಕರಣ, ಮೂಲಮಂತ್ರ ಇವುಗಳಲ್ಲಿಯೂ ಹಾಗೆಯೇ. ದರ್ಪಣದಲ್ಲಿರುವ ಹಾಗೆಯೇ ಇಲ್ಲಿಯೂ ಅಧಿದೇವತೆ ಪಾರ್ಶ್ವನಾಥ. ನಿರ್ವಿಷೀಕರಣದಲ್ಲಿ ಉಪಯೋಗಿಸಬೇಕಾದ ಪ್ರಧಾನ ಗರುಡಮಂತ್ರ `ಕ್ಷಿಪಓಂಸ್ವಾಹಾ' ಎಂಬುದೇ. ಚಿಕಿತ್ಸಾಸ್ವರೂಪವೂ ವಿಶೇಷತಃ ಒಂದೇ. ಮಂಗರಸನು ಕೆಲವು ಭಾಗಗಳನ್ನಾದರೂ ಇಲ್ಲಿಂದ ಸಂಗ್ರಹಿಸಿರಬೇಕು. ಈ ಭಾಗಗಳನ್ನು ಹೋಲಿಸಿ ನೋಡಿ:-

---

1 ಇದು ಮೈಸೂರು ಪ್ರಾಚ್ಯಕೋಶಾಗಾರದ ಕೆ. ಎ. ೫೩೭ನೆಯ ನಂಬರಿನ ಪ್ರತಿ. ಗ್ರಂಥ ಸೂಚಿಯಲ್ಲಿ ಭಟ್ಟಾಕಳಂಕವಿರಚಿತವೆಂದು ಸೂಚಿತವಾಗಿದೆ. ಗ್ರಂಥಸಮಾಪ್ತಿಯಾದ ಮೇಲೆ ಪ್ರತ್ಯೇಕವಾಗಿ ಕೊನೆಯ ಪತ್ರದಲ್ಲಿ ಭಟ್ಟಾಕಳಂಕನ ಸ್ತೋತ್ರರೂಪವಾದ ಒಂದು ಶ್ಲೋಕವಿದೆ. ಇದರ ಆಧಾರದ ಮೇಲೆ ಸೂಚಿಯ ನಿರ್ಮಾಪಕರು ಗ್ರಂಥವು ಭಟ್ಟಾಕಳಂಕ ವಿರಚಿತವೆಂದು ಬರೆದಿರಬಹುದು. ಗ್ರಂಥದ ಆಂತರ್ಯ ಪ್ರಮಾಣದಿಂದ ಇದು ಮಲ್ಲಿಷೇಣ ವಿರಚಿತವೆಂದು ಊಹಿಸುವುದಕ್ಕೆ ವಿದ್ಯಾನುಶಾಸನದ ಅಂತರ್ಗತವಾದ ದೇವೀಸ್ತೋತ್ರದ ಅಂತ್ಯದಲ್ಲಿರುವ ಈ ಮುಂದಿನ ಶ್ಲೋಕವು ಸಾಧಕವಾಗಿದೆ.

ಪದ್ಮಾವತೀ ಸೋತ್ರಮಿದಂ ತ್ರಿಸಂಧ್ಯಂ ಶ್ರೀ ಮಲ್ಲಿಷೇಣೇನ ಕೃತಂ ಪಠೇದ್ಯಃ
ಸಸಿದ್ಧಿವಾಕ್ಸರ್ವಜನಾನುರಾಗೀ ಸರ್ವಾರ್ಥಕಾಮಾಂಶ್ಚ ಸದಾ ಲಭೇತ

(ವಿದ್ಯಾನುಶಾಸನ ೪-೨೭೬)

ಈ ಮಲ್ಲಿಷೇಣನು ಶ್ರವಣಬೆಳಗೊಳದ ೬೭ನೆ ಶಾಸನದಲ್ಲಿನ ಮಲ್ಲಿಷೇಣನಾದ ಪಕ್ಷದಲ್ಲಿ ಈ ಗ್ರಂಥದ ಕಾಲವು ಹನ್ನೊಂದನೆಯ ಶತಮಾನವಾಗುತ್ತದೆ. ಇದು ಸಂಗ್ರಹ ಗ್ರಂಥವಾದುದರಿಂದ ದೇವೀಸ್ತೋತ್ರ ಮಾತ್ರ ಮಲ್ಲಿಷೇಣಕೃತವಾಗಿದ್ದು ಇತರ ಭಾಗವು ಭಿನ್ನ ಕರ್ತೃಕವಾಗಿರಬಹುದು. ಆದರೆ ಭಿನ್ನಕೃರ್ತೃಕವೆನ್ನುವುದಕ್ಕೆ ಗ್ರಂಥ ಪ್ರಮಾಣವಿಲ್ಲದಿರುವುದರಿಂದ ಸದ್ಯಕ್ಕೆ ಪೂರ್ಣಗ್ರಂಥವು ಏಕಕರ್ತೃವೆಂದೇ ಭಾವಿಸಿದೆ.

**ಕೃತ್ರಿಮ ವಿಷವ್ಯಾಪ್ತನ ಲಕ್ಷಣ**

ದಾಹಃ ಕಂಪಃ ಶೂಲಃ ಕೃಷ್ಣೋದಂಶಶ್ಚ ಸರ್ಪದಂಶಾಂತೇ ।
ಪ್ರಲಪನಮಂಗ್ಗೋದ್ವೇಗಃ ಸ್ರವಣಂಲಾಲಾಜಲಸ್ಯಾಸ್ಯಾತ್ ॥
ಹೃದಯಾಸ್ಯಾವಿಘಟೇನಾ ಕೃಷ್ಣಸೃಕ್ ಶ್ಯಾಮದಂತತ್ವಂ ।
ರಕ್ತಸ್ಯಚಪ್ರವೃತ್ತಿಃ ದೃಙ್ನಾಸಾ ಲೋಮ ಕೂಪ ಗುಹ್ಯಾದಾ[1] ॥

(ವಿದ್ಯಾನುಶಾಸನ)

ಕೋಪಂ ಶ್ವಾಸಂ ಖಾಸಂ । ತಾಪಂ ದಾಹಂ ಕ್ಷಯಂ ಮಹಾಚಿಂತೆ ಮನ ।
ಸ್ತಾಪಂ ಮಂದಾಗ್ನಿ ವೃಥಾ । ಲಾಪಂಗಳಿವಕ್ಕುಮೆಂಬರಿಳೆಯೊಳಭಿಜ್ಞರ್ ॥
ಮನದುದ್ವೇಗಂ ದೃಗ್ವಂ । ತ ನಖಾಂಘ್ರಿತಳಂಗಳೊಪ್ಪುವಂಗೆಯ್ಗಳ್ ಮು ।
ನ್ನಿನ ತೇಜಿನಲ್ಲದ್ಮೆಮತ್ತೊಂ । ದೆನೆ ಕಂಡಿರಲಱಿವುದದಱಿನಾ ಕೃತ್ರಿಮಮಂ ॥
ವಾಂತಿ ಶಿರೋರೋಗ ಮಹಾ । ಭ್ರಾಂತಿ ತನೂದ್ಭೂತ ರಕ್ತಮೂತ್ರಸ್ರಾವಂ ।
ಸ್ವಾಂತಸ್ತಾಪಂ ಶೋಷಂ । ಕಾಂತಾಜನಕೃತ್ರಿಮಂಗಳಿಂ ತಲೆದೋರ್ಕುಂ ॥ [1]

(ಖ.ಮ.ದ. -೧೪-೬, ೭, ೮)

(iii) **ಉಗ್ರಾದಿತ್ಯನ ಕಲ್ಯಾಣಕಾರಕ:** [2]- ಇದೂ ಒಂದು ವೈದ್ಯಗ್ರಂಥ. ಜಗದ್ದಳಸೋಮನಾಥನು ಕನ್ನಡಿಸಿರುವುದಾಗಿ ಹೇಳುವ ಪೂಜ್ಯಪಾದಕೃತ ಕಲ್ಯಾಣಕಾರಕಕ್ಕೂ ಇದಕ್ಕೂ ಯಾವ ಸಂಬಂಧವಿದೆಯೆಂಬುದನ್ನು ಹೇಳುವಂತಿಲ್ಲ. ಉಗ್ರಾದಿತ್ಯನು ತನ್ನ ಗ್ರಂಥದಲ್ಲಿ ಈ ವಿಷಯವನ್ನಾಗಲಿ ಪೂಜ್ಯಪಾದನ ಹೆಸರನ್ನಾಗಲಿ ತಿಳಿಸಿಲ್ಲ. ತನ್ನ ಗ್ರಂಥವು 'ಜಿನವಕ್ತ್ರನಿರ್ಗತ ಸುಶಾಸ್ತ್ರಮಹಾಂಬುನಿಧಿಯ ಶೀಕರ'ವೆಂದು ಮಾತ್ರ ಹೇಳಿದ್ದಾನೆ. ಅಲ್ಲದೆ ಮಂಗರಸನಿಗೆ ಆಕರವಾಗಿರುವ ಪೂಜ್ಯಪಾದ ನಿರ್ಮಿತ ವಿಷಚಿಕಿತ್ಸಾಭಾಗವು ಕಲ್ಯಾಣಕಾರಕದ ಭಾಗವೋ ಅಥವಾ ಬೇರೊಂದು ಸ್ವತಂತ್ರ ಗ್ರಂಥವೋ ಹೇಳಲು ಸಾಧ್ಯವಿಲ್ಲ.

---

1 ಸಂಸ್ಕೃತ ಶ್ಲೋಕಗಳ ಪಾಠವನ್ನು ನಾವು ತಿದ್ದಿಲ್ಲ.

2 ಇದು ಮೈಸೂರು ಪ್ರಾಚ್ಯಕೋಶಾಗಾರದ ಬಿ. ೨೪೩ನೆಯ ಕೈಬರಹದ ಪ್ರತಿ. ಉಗ್ರಾದಿತ್ಯನು ತನ್ನ ಗ್ರಂಥದಲ್ಲಿ ಗ್ರಂಥನಿರ್ಮಾಣಕಾಲವನ್ನು ನಿರೂಪಿಸಿರುವುದಿಲ್ಲ. ಗ್ರಂಥಾಂತ್ಯದ
ಶ್ರೀವಿಷ್ಣುರಾಜಪರಮೇಶ್ವರಮೌಳಿಮಾಲಾಸಂಲಾಲಿತಾಂಘ್ರಿಯುಗಳಃ ಸಕಲಾಗಮಜ್ಞಃ ।
ಆಲಾಪನೀಯಗಣಮುನ್ನತ ಸನ್ಮುನೀಂದ್ರಃ ಶ್ರೀ ನಂದಿನಂದಿತಗುರುರ್ಗುರುರೂರ್ಜಿತೋಹಂ ॥
ತಸ್ಯಾಜ್ಞಯಾ ವಿವಿಧಭೇಷಜ ದಾನಸಿದ್ಧ್ಯೈ ಸದ್ವೈದ್ಯವತ್ಸಲತಪಃ ಪರಿಪೂರಣಾರ್ಥಂ ।
ಶಾಸ್ತ್ರಂ ಕೃತಂ ಜಿನಮತೋದ್ಧತಮೇತದುದ್ಯತ್ಕಲ್ಯಾಣಕಾರಕಮಿತಿ ಪ್ರಥಿತಂ ಧರಾಯಾಂ ॥
ಎಂಬ ಶ್ಲೋಕದಲ್ಲಿ ವಿಷ್ಣುರಾಜನಿಂದ ಸ್ತುತನಾದ ನಂದಿಮುನಿಯ ಆಜ್ಞೆಯ ಪ್ರಕಾರ ಈ ಗ್ರಂಥವನ್ನು ರಚಿಸಿದ್ದೇನೆಂದು ಹೇಳಿದ್ದಾನೆ. ಈ ಇಬ್ಬರು ಯಾರೆಂಬುದು ನಿಷ್ಪಷ್ಟವಾಗಿ ತಿಳಿದಿಲ್ಲ. ಇದು ೧೨ನೆಯ ಶತಮಾನಕ್ಕೆ ಹಿಂದಿನ ಗ್ರಂಥವೆಂದು ಹೇಳಬಹುದು. ವಿಷ್ಣುರಾಜ ವಿಷ್ಣುವರ್ಧನನಿರಬಹುದೆ?

ಉಗ್ರಾದಿತ್ಯನ ಕಲ್ಯಾಣಕಾರಕದ ೧೯ನೆಯ ಅಧ್ಯಾಯದಲ್ಲಿ ವಿಷಚಿಕಿತ್ಸೆಯ ನಿರೂಪಣೆ ಇದೆ. ಇದರ ಬಹುಭಾಗವು ಮಂಗರಸನ ಗ್ರಂಥಕ್ಕೆ ಆಕರವಾಗಿರಬೇಕು. ದರ್ಪಣದ ಅನೇಕೆಡೆಗಳಲ್ಲಿ ಇದರ ಛಾಯೆಯು ಕಾಣುವುದಲ್ಲದೆ ಹದಿಮೂರನೆಯ ಆಶ್ವಾಸದ ೧೩೦ನೆಯ ಪದ್ಯದಿಂದ ೧೫೬ನೆಯ ಪದ್ಯದವರೆಗಿನ ಭಾಗವು ಈ ಕಲ್ಯಾಣಕಾರಕದ ಅನುವಾದದಂತೆಯೇ ಇದೆ. ಮುಂದಿನ ಪದ್ಯಗಳನ್ನು ಹೋಲಿಸಿ.

**ಸರ್ವವಿಷಚಿಕಿತ್ಸೆ**

ಮಂಜೀಷಾ ಮಧುಕತ್ರಿವೃತ್ಸುರಸುರಾ ವಕ್ರಾಹರಿದ್ರದ್ವಯಂ । ಛಾಟಿವ್ಯೋಷವಿಲಂಗ ಹಿಂಗುಲ ವರ್ಣ್ಯೈಃ ಸರ್ವಂಸಮಂಚೂರ್ಣಿತಂ । ಚಾದ್ಯೇನಾ ಲುಲಿತಂ ವಿಷಾಣನಿಹಿತಂ ನಸ್ಯಾಂಜನಾ ಲೇಪನ್ಯೈಃ । ಹನ್ಯಾತ್ಸರ್ವವಿಷಾಣಿ ಸರ್ಪರಿಪುವತ್ಯೇಷಾಗತಃ ಪ್ರಸ್ತುತಃ ॥ ಪಾಠಾಹಿಂಗು ಫಲ ತ್ರಯಂ ತ್ರಿಕಟುಕಂ ವಕ್ರಾಜಮೋದಾಗ್ನಿಕಂ । ಸಿಂಧೂತ್ಥಂ ಸಬಿಡಂ ವಿಡಂಗಹಸಿತಂ ಗೌವರ್ಚಲಂ ಚೂರ್ಣಿತಂ । ಸರ್ವಂ ಗವ್ಯಘೃತೇನ ಮಿಶ್ರಿತಮಿದಂ ಶೃಂಗೇ ನಿಧಾಯಸ್ಥಿತಂ । ಸರ್ವಾ ಣ್ಯೇವ ವಿಷಾಣಿ ನಾಶಯತಿ ತತ್ಸರ್ಪಾತ್ಮನಾಯೋಜಿತಂ ॥ (ಕಲ್ಯಾಣಕಾರಕಂ, ೧೯-೧೧೭, ೮)

ಗೋವಿನ ತುಪ್ಪದೊಳಂ ತಾಂ । ಭಾವಿಸಿ ಕುಡಿಸಲ್ಕೆ ಮೇಘನಾದಿಯಬೇರಂ ।
ಸ್ಥಾವರಜಂಗಮಕೃತ್ರಿಮ । ದಾವಾವವಿಷಂಗಳಾದೊಡಂ ಪಱಿಪಡುಗುಂ ॥
ಬಜೆಯತಿಬಜೆಯೆರಡರಸಿನ । ಗಜಹಿಪ್ಪಲಿ ಹಿಂಗು ಸೈಂಧವಂ ತ್ರಿಕಟುಕಮಂ ।
[ತಜಮೋದ][1]ನರೆದು ಪೂಸಲ್ । ಸೃಜಿಸಿದ ಕೀಟಕದ ವಿಷಮದೆಲ್ಲಂ ಕಿಡುಗುಂ ॥

(ಖ.ಮ.ದ-೧೩-೧೩೩, ೪)

(iv) **ಲೋಕೋಪಕಾರ:-** ಇದು ಚಾವುಂಡರಾಯನಿಂದ ರಚಿತವಾದ ಕನ್ನಡ ಭಾಷೆಯಲ್ಲಿರುವ ಸರ್ವವಿಷಯಸಂಗ್ರಹ.[2] ಕನ್ನಡ ಸರ್ವಜನೋಪಕಾರಕ ಗ್ರಂಥಗಳಲ್ಲಿ ಇದುವರೆಗೆ ತಿಳಿದಮಟ್ಟಿಗೆ ಇದೇ ಮೊದಲನೆಯದು. ಈ ಗ್ರಂಥವನ್ನು ಮಂಗರಸನು ಉಪಯೋಗಿಸಿಕೊಂಡಿರುವುದರಲ್ಲಿ ಸಂದೇಹವೇ ಇಲ್ಲ. ಬಹುಶಃ ಇದೇ ಅವನಿಗೆ ಪ್ರೇರಕವಾಗಿರಬೇಕು. ಮುಂದಿನಂಶಗಳು ಈ ವಾದವನ್ನು ದೃಢಪಡಿಸುತ್ತವೆ.

(ಅ) ಮಂಗರಾಜನು ತನ್ನನ್ನು ವಿಶೇಷಿಸಿಕೊಂಡಿರುವ ಬಿರುದುಗಳಲ್ಲಿ ಬುಧ ಬಂಧು, ಬುಧೈಕಾಶ್ರಯ, ಶಿಷ್ಟಕಲ್ಪದ್ರುಮ, ಸರಸ್ವತೀಮುಖತಿಲಕ ಎಂಬುವು ಚಾವುಂಡರಾಯನ ಬಿರುದುಗಳು.

---

1 ಅಚ್ಚಿನ ಪುಸ್ತಕದಲ್ಲಿ ಈ ಭಾಗಕ್ಕೆ `ನಿಜಮೊಂದ' ಎಂಬ ಪಾಠವಿದೆ. ಅಜಮೋದ ಎಂಬುದೇ ಸರಿಯಾದ ಪಾಠವಿರಬಹುದೆಂದು ತಿದ್ದಿದೆ.

2 ಪ್ರಧಾನ ಸಂಪಾದಕರು ಮೊದಲನೆಯ ಪುಟದಡಿಯಲ್ಲಿ ಜಯಬಂಧುನಂದನವಿರಚಿತವೆಂದು ಸೂಚಿಸಿರುವ ಸೂಪಶಾಸ್ತ್ರವೂ ಇದರ ಒಂದು ಭಾಗ ಮಾತ್ರ. ಈ ವಿಷಯದಲ್ಲಿ ಪ್ರ. ಕ. ೧೮-೨-೫೯ ನೋಡಿ.

(ಆ) ಲೋಕೋಪಕಾರದ ವಿಷತತ್ತ್ವಭಾಗದ ಅಭಿಪ್ರಾಯವನ್ನು ಪೂರ್ಣವಾಗಿ ಮಂಗರಸನು ಉಪಯೋಗಿಸಿಕೊಂಡಿರುವುದಲ್ಲದೆ ಆ ಭಾಗದ ೫೦ ಪದ್ಯಗಳಲ್ಲಿ ೧೨ನ್ನು ಅಕ್ಷರಶಃ ತನ್ನ ಗ್ರಂಥದಲ್ಲಿ ಉದ್ಧಾರ ಮಾಡಿದ್ದಾನೆ.[1]

(ಇ) ಆ ಗ್ರಂಥದ ಹೆಸರನ್ನು ತನ್ನ ಗ್ರಂಥದ ೩-೧೦ಳನೆಯ ಪದ್ಯದಲ್ಲಿ ಪ್ರಕಾರಾಂತರವಾಗಿ ಸೂಚಿಸಿದ್ದಾನೆ.

(v) **ಜಗದ್ದಳಸೋಮನಾಥಕೃತ ಕಲ್ಯಾಣಕಾರಕ:-** ಇದೂ ಕನ್ನಡ ವೈದ್ಯಗ್ರಂಥ. ಹಿಂದೆಯೇ ಸೂಚಿಸಿರುವಂತೆ ಪೂಜ್ಯಪಾದ ಗ್ರಂಥದ ಅನುವಾದ. ಇದರ ಗ್ರಹಾಧಿಕಾರದಲ್ಲಿ ಸರ್ವವಿಷಚಿಕಿತ್ಸೆಯೆಂಬ ೧೨ ಪದ್ಯಗಳಿವೆ. ಅವುಗಳ ವಿಷಯಗಳೇ ಅಲ್ಲದೆ ೫ ಪೂರ್ಣ ಪದ್ಯಗಳು ಪ್ರಕೃತ ಗ್ರಂಥದಲ್ಲಿ ಉದ್ಧೃತವಾಗಿವೆ.[2]

ಈ ಮೇಲೆ ಹೇಳಿದ ಗ್ರಂಥಗಳನ್ನೂ ಇಂತಹ ಇತರ ಗ್ರಂಥಗಳನ್ನೂ ಉಪಯೋಗಿಸಿಕೊಂಡಿದ್ದ ಪಕ್ಷದಲ್ಲಿ ಶೋಧನೆಯ ಕಾರ್ಯವು ಇನ್ನೂ ಯಶಸ್ವಿಯಾಗುತ್ತಿತ್ತೆಂಬುದು ನಮ್ಮ ಸೂಚನೆ.

**೨. ಱಟ, ಕುಳಗಳು:-** ಕನ್ನಡ ಭಾಷೆಯಲ್ಲಿ ೧೪ನೆಯ ಶತಮಾನದ ಹೊತ್ತಿಗೆ ಱಕಾರವು ಉಚ್ಚಾರಣೆಯಿಂದಲೂ ಬರವಣಿಗೆಯಿಂದಲೂ ಲೋಪವಾಗಿದ್ದಿರಬೇಕು. ಖಗೇಂದ್ರಮಣಿದರ್ಪಣದಲ್ಲಿ ಲಕಾರ ಳಕಾರಪ್ರಾಸಗಳು ಶುದ್ಧವಾಗಿದ್ದರೂ ಱಕಾರ ಪ್ರಾಸವು ಒಂದೆಡೆಯಲ್ಲಿ ವಿನಾ ಉಳಿದೆಡೆಗಳಲ್ಲೆಲ್ಲಾ ಮಿಶ್ರವಾಗಿಯೇ ಇದೆ. ಹಾಗೆಯೇ ಲಕಾರ ಳಕಾರಪ್ರಾಸಗಳಲ್ಲಿಯೂ ಕೆಲವೆಡೆ ಮಿಶ್ರವಿದೆ. ಗ್ರಂಥದ ಒಟ್ಟಿನಲ್ಲಿ ೧೩ ಲಕಾರದ ೭ ಳಕಾರದ ೨೦ ಱಕಾರದ ಮಿಶ್ರಪ್ರಾಸಗಳಿವೆ. ಱಕಾರಪ್ರಾಸವು ಶುದ್ಧವಾಗಿರುವುದು ಒಂದೆಡೆಯಲ್ಲಿ ಮಾತ್ರ (೧೦-೬೦). ಮಂಗರಸನು ಈ ಅಕ್ಷರಗಳ ವ್ಯತ್ಯಾಸವನ್ನು ಅಂಗೀಕಾರಮಾಡಿರಲಿಲ್ಲವೇನೋ! ಈ ದೃಷ್ಟಿಯಿಂದ ಈ ಗ್ರಂಥದಲ್ಲಿ ಆಗಿನ ಕಾಲದ ಷಟ್ಪದಿ ಗ್ರಂಥಗಳ ಹಾಗೆ ಱಟಾಕ್ಷರಪ್ರಯೋಗವನ್ನು ಬಿಟ್ಟಿದ್ದರೂ ಬಾಧಕವಿರುತ್ತಿರಲಿಲ್ಲ.

**೩. ದ್ವಿತೀಯಾಕ್ಷರಪ್ರಾಸ :-** ಈ ಗ್ರಂಥದಲ್ಲಿ ಅನೇಕ ಕಡೆ ಕನ್ನಡದ ದ್ವಿತೀಯಾಕ್ಷರದ ಪ್ರಾಸ ಭಂಗವಾಗಿರುವಂತಿದೆ. ೨-೧೧೮, ೯-೮ರಲ್ಲಿ ರಲಗಳಿಗೂ ೨-೧೨೭ರಲ್ಲಿ ರಸಗಳಿಗೂ ೫-೬೬ರಲ್ಲಿ ಡಟಗಳಿಗೂ ೮-೫೧ ಮತ್ತು ೧೨-೪೨ರಲ್ಲಿ ರಡಗಳಿಗೂ, ೧೬-೯೬ರಲ್ಲಿ ರಕಗಳಿಗೂ

---

1 ಲೋಕೋಪಕಾರದ ಪದ್ಯಗಳು:- ಖಗೇಂದ್ರಮಣಿದರ್ಪಣದ ೨-೯೮, ೨-೧೧೧-೨, ೩-೮೯, ೫-೫೭, ೮-೩೦, ೧೦-೬೯, ೧೦-೭೬, ೧೩-೩೭, ೧೩-೧೨೦, ೧೬-೧೪೧.

2 ಕಲ್ಯಾಣಕಾರಕದ ಪದ್ಯಗಳು-ಖಗೇಂದ್ರಮಣಿದರ್ಪಣದ ೩-೨೭, ೭-೧೦-೧೧ ೧೧-೩೯, ೧೧-೪೦.

ಪ್ರಾಸವಾಗಿದೆ. ಮಂಗರಸನು ಪ್ರಾಸನಿಯಮವನ್ನು ಸರ್ವಥಾ ಪಾಲಿಸಲಿಲ್ಲವೆ? ಈ ವಿಷಯದಲ್ಲಿ ಸಂಪಾದಕರು ಒಂದು ವಿವರವಾದ ಟಿಪ್ಪಣಿಯನ್ನು ಬರೆದಿದ್ದರೆ ಚೆನ್ನಾಗಿತ್ತೆಂದು ತೋರುತ್ತದೆ.

೪. ಶಬ್ದಕೋಶ :- ಇದು ವೈದ್ಯಶಾಸ್ತ್ರಗ್ರಂಥವಾದುದರಿಂದ ಇದರಲ್ಲಿ ಬರುವ ಓಷಧಿಗಳ ವಿಷಯಕವಾದ ಶಬ್ದಕೋಶವೊಂದನ್ನು ಪರಿಶಿಷ್ಟದಲ್ಲಿ ಕೊಟ್ಟಿದ್ದರೆ ಉಪಕಾರವಾಗುತ್ತಿತ್ತು. ಓಷಧಿಕೋಶವನ್ನು ಶೋಧಿಸಿ ಪ್ರಕಾಶಪಡಿಸಿರುವ ಸಂಪಾದಕರಿಗೆ ಇದು ವಿಶೇಷ ಶ್ರಮವಾಗುತ್ತಿರಲಿಲ್ಲ.

೫. **ಗ್ರಂಥಪರಿಷ್ಕರಣ ಮತ್ತು ಪಾಠಭೇದಗಳು** :- ಸಂಪಾದಕರು ಶುದ್ಧಪಾಠವನ್ನು ನಿಷ್ಕರ್ಷೆ ಮಾಡುವುದಕ್ಕೆ ಸಹಾಯವಾಗುವಂತೆ ಅನೇಕ ಕೈಬರಹದ ಪಾಠಾಂತರಗಳನ್ನು ಸಂಗ್ರಹಿಸಿ ಪ್ರತಿ ಪುಟದಡಿಯಲ್ಲಿಯೂ ಕೊಟ್ಟಿದ್ದಾರೆ. ಸಾಮಾನ್ಯವಾಗಿ ಪಾಠಾಂತರಗಳು ಅಂಗೀಕೃತಪಾಠವನ್ನು ದೃಢಪಡಿಸುವುದಕ್ಕಾಗಲಿ ಬೇರೆಯ ಶುದ್ಧ ಪಾಠವನ್ನು ಊಹಿಸುವುದಕ್ಕಾಗಲಿ ಶಬ್ದಾರ್ಥಗಳಲ್ಲಿ ವೈಶಿಷ್ಟವನ್ನು ಸೂಚಿಸುವುದಕ್ಕಾಗಲಿ ಪ್ರಯೋಜನವಾಗುವಂತಿರಬೇಕು. ಅವುಗಳಲ್ಲಿ ಸಿಷ್ಪಷ್ಟವಾದ ಕ್ರಮವಿರಬೇಕು. ಪಾಠಾಂತರಗಳು ಛಂದೋದೋಷವಿಲ್ಲದಿದ್ದ ಪಕ್ಷದಲ್ಲಿ ಅಂಗೀಕೃತಪಾಠಕ್ಕೆ ಪ್ರತಿಯಾಗಿ ಉಪಯೋಗಿಸಿಕೊಳ್ಳಲು ಹೊಂದುವಂತಿರಬೇಕು. ಪ್ರಸಕ್ತಗ್ರಂಥದಲ್ಲಿ ಪಾಠಾಂತರಗಳು ವಿಪುಲವಾಗಿದ್ದರೂ ಅವುಗಳಿಂದ ಆಗಿರುವ ಉಪಯೋಗವು ಹೆಚ್ಚಲ್ಲ. ಅನೇಕಕಡೆ ಪೂರ್ವೋತ್ತರವ್ಯಾಹತಿಗಳಿವೆ. ಮುನ್ನುಡಿಯಲ್ಲಿ (ಕ) ಪ್ರತಿಯಲ್ಲಿ ೧೪ನೆಯ ಅಧಿಕಾರಗಳೂ ೧೫ನೆಯದರಲ್ಲಿ ಸ್ವಲ್ಪಭಾಗವೂ, (ಘ) ಪ್ರತಿಯಲ್ಲಿ ೧೩ ಆಶ್ವಾಸಗಳೂ (ತ) ಪ್ರತಿಯಲ್ಲಿ ೩ ಅಧಿಕಾರಗಳೂ ಇವೆಯೆಂದೂ ಸೂಚಿತವಾಗಿವೆ. ಆದರೆ (ಕ) ಪಾಠವು ಗ್ರಂಥಾಂತ್ಯದವರೆಗೂ (ಘ) ಪಾಠವು ೧೪-೧೫-೧೬ನೆಯ ಅಧಿಕಾರಗಳಲ್ಲಿಯೂ (ತ) ಪಾಠವು ೫-೬ನೆಯ ಅಧಿಕಾರಗಳಲ್ಲಿಯೂ ಸೂಚಿತವಾಗಿವೆ. ಪಾಠಾಂತರಗಳನ್ನು ಸೂಚಿಸುವುದರಲ್ಲಿಯೂ ಒಂದು ಕ್ರಮವು ಕಂಡುಬರುವುದಿಲ್ಲ. ಪ್ರತಿಗಳ ಖಚಿತವಾದ ಸಂಕೇತಗಳನ್ನು ಸೂಚಿಸಿ ಪಾಠಾಂತರಗಳನ್ನು ಕೊಡುವುದರಲ್ಲಿ ಒಂದು ಗೊತ್ತಾದ ಕ್ರಮವನ್ನು ಉದ್ದಕ್ಕೂ ಅನುಸರಿಸುವುದು ಮೇಲು. ಕೆಲವು ಸಲ ಒಂದು ಪಾಠಕ್ಕೆ ಒಂದೇ ಪ್ರತಿಯ ಎರಡು ಪಾಠಗಳು ಸೂಚಿತವಾಗಿವೆ; ಪ್ರಾಸಕ್ಕೆ ಹೊಂದುವ ಪಾಠವಿದ್ದರೂ ಅದನ್ನು ಅಂಗೀಕಾರಮಾಡದೆ ಪ್ರಶ್ನೆ ಚಿಹ್ನೆಯನ್ನು ಹಾಕಿರುವುದುಂಟು (ಪು. ೨೮೨). ಕೆಲವು ಪ್ರತಿಗಳಲ್ಲಿ ಇಲ್ಲವೆಂದು ಟಿಪ್ಪಣಿ ಬರೆದು ಆ ಪ್ರತಿಯ ಪಾಠವನ್ನೇ ಸೂಚಿಸಿರುವುದೂ ಉಂಟು (ಪು. ೧೯೫, ೧೯೧, ೨೪೬). ಒಂದು ಪ್ರತಿಯಲ್ಲಿ ಮಾತ್ರ ಒಂದು ಪದ್ಯವಿರುವುದೆಂದು ಸೂಚಿಸಿ ಬೇರೆಯ ಪ್ರತಿಗಳ ಪಾಠಗಳನ್ನು ಕೊಟ್ಟಿರುವುದೂ ಉಂಟು (ಪು. ೨೯೪). ಅನೇಕೆಡೆಯಲ್ಲಿ ಪಾಠಾಂತರಗಳಿಗೆ ಪ್ರತಿಗಳ ಹೆಸರನ್ನೇ ಸೂಚಿಸಿಲ್ಲ. (ಪು. ೧೪-೧೫) ಟಿಪ್ಪಣಿಗಳಲ್ಲಿಯೂ ಹೀಗೆಯೇ (ಪು. ೨೨೮, ೧೯೨ ನೋಡಿ). ಒಂದೇ ತೆರನಾದ ಅನೇಕ ವಿಷಯಗಳಲ್ಲಿ ಒಂದಕ್ಕೆ ಟಿಪ್ಪಣಿಯನ್ನು ಕೊಟ್ಟು ಉಳಿದುದಕ್ಕೆ ಹಾಗೆಯೇ ಬಿಟ್ಟಿದೆ (ಉದಾ:- ಛಂದೋದೋಷದ ವಿಷಯದಲ್ಲಿ ೩-೧೦೪ಕ್ಕೆ ಟಿಪ್ಪಣಿಯಿದೆ. ೮-೧೦, ೧೩-೨೧ರಲ್ಲಿ ಇಲ್ಲ). ಅಂಗೀಕೃತವಾದ ಪಾಠಗಳು

ಒಂದೊಂದು ಕಡೆಯಲ್ಲಿ ಒಂದೊಂದು ರೀತಿಯಾಗಿದೆ. ಇಂತಹ ಕೆಲವು ಸಣ್ಣಪುಟ್ಟ ವಿಷಯಗಳನ್ನು ಎಚ್ಚರಿಕೆಯಿಂದ ನೋಡುವುದು ಮೇಲು.

ಮೇಲೆ ಹೇಳಿರುವುದರಲ್ಲಿ ಅನೇಕ ಎಲ್ಲ ಸಂಶೋಧಕರಿಗೂ ಸಾಮಾನ್ಯವಾಗಿ ಸಂಭವಿಸತಕ್ಕುವು. ಇವು ಕೇವಲ ಅಲ್ಪ ವಿಷಯಗಳು. ಪ್ರಕೃತ ಸಂಪಾದಕರಿಗೆ ತಿಳಿಯದವಲ್ಲ. ಅವಿಚ್ಛಿನ್ನವಾಗಿ ಕನ್ನಡ ಸಂಸ್ಕೃತ ಭಾಷೆಗಳ ಅಭಿವೃದ್ಧಿಗಾಗಿ ದುಡಿಯುತ್ತಿರುವ ಉಭಯಭಾಷಾಪಂಡಿತರಾದ ಶ್ರೀಮಾನ್ ಶೇಷಯ್ಯಂಗಾರ್ಯರಿಗೆ ಇವುಗಳನ್ನು ಸರಿಪಡಿಸುವುದು ಅಸಾಧ್ಯವಾದ ಕೆಲಸವೇನೂ ಅಲ್ಲ. ಸಾಧ್ಯವಾದಮಟ್ಟಿಗೂ ದೋಷರಹಿತವಾದರೆ ಗ್ರಂಥವು ಮತ್ತಷ್ಟು ಶೋಭಿಸುತ್ತದೆಯೆಂಬ ಅಭಿಪ್ರಾಯದಿಂದ ನಮಗೆ ತೋರಿದ ಕೆಲವಂಶಗಳನ್ನು ಸೂಚಿಸಿದ್ದೇವೆ. ಅಪೂರ್ವವಾದ ಜನೋಪಯುಕ್ತವಾದ ಈ ಗ್ರಂಥವನ್ನು ಸಂಶೋಧನೆ ಮಾಡಿ ಪ್ರಕಟಿಸಿದ ಶ್ರೀಮಾನ್ ಶೇಷಯ್ಯಂಗಾರ್ಯರಿಗೂ ಪ್ರಕಟಿಸಿದ ಮದರಾಸ್ ವಿಶ್ವವಿದ್ಯಾನಿಲಯದವರಿಗೂ ಕನ್ನಡಿಗರೆಲ್ಲರೂ ಋಣಿಗಳು. ಅವರ ಭಾಷಾ ಸೇವೆಯು ಇತೋಪ್ಯತಿಶಯವಾಗಿ ಅಭಿವೃದ್ಧಿಯಾಗಲೆಂದು ಹಾರೈಸುತ್ತೇವೆ.

❐



## ಕಲೆ, ಸಾಹಿತ್ಯಗಳಿಗೆ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರ ಪ್ರೋತ್ಸಾಹ

ತಾಳಿಕೋಟೆ ಯುದ್ಧವಾದ ಮೇಲೆ ಆ ರಾಜ್ಯಕ್ಕೆ ಉತ್ತರಾಧಿಕಾರಿಗಳಾದ ಮೈಸೂರು ಒಡೆಯರು ವಿಜಯನಗರದ ಅರಸರು ಪ್ರೋತ್ಸಾಹಿಸುತ್ತಿದ್ದ ಕಲಾ ಸಾಹಿತ್ಯಗಳಿಗೂ ಉತ್ತರಾಧಿಕಾರಿಗಳಾದರು. ರಾಜಒಡೆಯರ ಕಾಲದಿಂದ ಜಯಚಾಮರಾಜ ಒಡೆಯರ ಕಾಲದವರೆಗೆ ಒಬ್ಬೊಬ್ಬರು ತಮಗೆ ಸಾಧ್ಯವಾದಷ್ಟು ಸಾಹಿತ್ಯ ಕಲಾಭಿವೃದ್ಧಿಗೆ ತಮ್ಮ ಶಕ್ತಿ ಮೀರಿದಷ್ಟು ಕೆಲಸವನ್ನು ಮಾಡಿದ್ದಾರೆ. ಅವರಲ್ಲಿ ಚಿಕ್ಕ ದೇವರಾಜ ಒಡೆಯರು, ಕಂಠೀರವ ನರಸಿಂಹರಾಜ ಒಡೆಯರು, ಮುಮ್ಮಡಿ ಕೃಷ್ಣರಾಜ ಒಡೆಯರು ಸ್ವತಃ ಕವಿಗಳೂ ಕವಿ ಜಿನಾಶ್ರಯರೂ ಆಗಿ ಸಾಹಿತ್ಯ ಸೇವೆಯನ್ನು ಸಲ್ಲಿಸಿದ್ದಾರೆ. ಚಾಮರಾಜ ಒಡೆಯರ ಕಾಲದಲ್ಲಿ ಒಂದು ಹೊಸ ಯುಗವೇ ಪ್ರಾರಂಭವಾಗಿ ದೇಶದ ಬಹುಮುಖವಾದ ಬೆಳವಣಿಗೆಯು ಪ್ರಾರಂಭವಾಯಿತು. ಅವರ ಉತ್ತರಾಧಿಕಾರಿಗಳಾದ ನಾಲ್ವಡಿ ಕೃಷ್ಣರಾಜ ಒಡೆಯರು ೧೯೦೨ರಿಂದ ೧೯೪೦ರವರೆಗೆ ರಾಜ್ಯವಾಳಿದರು. ಅದಕ್ಕೆ ಹಿಂದೆಯೇ ಅವರಿಗೆ ರಾಜ್ಯ ಪ್ರಾಪ್ತಿಯಾಗಿದ್ದರೂ ಅವರು ಇನ್ನೂ ಪ್ರಾಪ್ತವಯಸ್ಕರಾಗಿರಲಿಲ್ಲವಾದುದರಿಂದ ಅವರು ವಯಸ್ಕರಾಗುವವರೆಗೆ ಅವರ ಮಾತೃಶ್ರೀ ವಾಣಿವಿಲಾಸ ಸನ್ನಿಧಾನದ ಕೆಂಪನಂಜಮ್ಮಣ್ಣಿಯವರು ರಾಜ್ಯಪರಿಪಾಲನೆ ಮಾಡಿದರು. ಇವರುಗಳ ಕಾಲದಲ್ಲಿ ಮೈಸೂರು ರಾಜ್ಯವು ಬಹು ಮೇಧಾವಿಗಳಾದ ದಿವಾನರುಗಳ ಸಹಾಯದಿಂದ ಮಾದರಿ ರಾಜ್ಯವೆನಿಸಿಕೊಂಡಿತು.

ಕೃಷ್ಣರಾಜ ಪ್ರಭುಗಳ ಕರ್ತವ್ಯನಿಷ್ಠೆ, ಪ್ರಜಾವಾತ್ಸಲ್ಯ, ದೈವಭಕ್ತಿ, ಅನುಪಮವಾದ ಸದ್ಗುಣಗಳು ಇವುಗಳ ಪ್ರಭಾವದಿಂದ ರಾಜ್ಯದ ಸರ್ವತೋಮುಖವಾದ ಅಭಿವೃದ್ಧಿಯುಂಟಾಯಿತು. ವ್ಯವಸಾಯೋಭಿವೃದ್ಧಿಗೆ ಕಲೆಗಳೇ ಅಲ್ಲದೆ ಮೈಸೂರು ವಿಶ್ವವಿದ್ಯಾನಿಲಯ, ಕೃಷ್ಣರಾಜಸಾಗರ, ಗಂಧದ ಎಣ್ಣೆ ಕಾರ್ಖಾನೆ, ಭದ್ರಾವತಿ ಕಬ್ಬಿಣದ

ಕಾರ್ಖಾನೆ ಮೊದಲಾದ ಅನೇಕ ಬೃಹದುದ್ಯಮಗಳ, ಜಲಾಶಯಗಳ, ಕೈಗಾರಿಕೆಗಳ ಪ್ರಾರಂಭದಿಂದ ರಾಜ್ಯದ ಪ್ರಗತಿಯು ದೃಢವಾಗಿ ಬೆಳೆಯಿತು. ಬೃಹತ್ ಕಟ್ಟಡಗಳಾದ ಆಲನಹಳ್ಳಿಯ ಅರಮನೆ, ಪ್ರತಾಪಕುಮಾರಿ-ಮ್ಯಾನ್‌ಶನ್ - ಈಗಿನ ಲಲಿತಮಹಲ್ ಅರಮನೆ, ಸೆಂಟ್ ಫಿಲೋಮಿನಾ ಚರ್ಚ್, ಕೃಷ್ಣರಾಜ ಆಸ್ಪತ್ರೆ ಮೊದಲಾದುವು ಅಸ್ತಿತ್ವಕ್ಕೆ ಬಂದದ್ದು ಇವರ ಕಾಲದಲ್ಲಿಯೇ. ಸುಮಾರು ನಾಲ್ಕು ಕೋಟಿ ರೂಪಾಯಿಗಳ ವೆಚ್ಚದಲ್ಲಿ ಮೈಸೂರು ಅರಮನೆಯ ಮುಂಭಾಗದ ದರ್ಬಾರ್ ಹಾಲ್ ನಿರ್ಮಾಣವಾಯಿತು. ಸ್ತ್ರೀವಿದ್ಯಾಭ್ಯಾಸವು ಅಭಿವೃದ್ಧಿಗೊಂಡಿತು. ಸಂಸ್ಕೃತ, ಕನ್ನಡ, ಭಾಷಾಭಿವೃದ್ಧಿ ಖಚಿತವಾಗಿ ರೂಪುಗೊಂಡಿತು. ಶಾಸ್ತ್ರೀಯ ವಿಜ್ಞಾನವು ಬಹುವೇಗವಾಗಿ ಬೆಳೆಯಿತು. ಶಿಲ್ಪ, ಸಂಗೀತ, ನಾಟ್ಯಕಲೆಗಳು ಅಭಿವೃದ್ಧಿಗೊಂಡವು. ಪ್ರಪಂಚದಲ್ಲಿ ಮೈಸೂರಿನ ಕೀರ್ತಿ ಪ್ರಸರಿಸಿತು. ಮೈಸೂರು ಭಾರತದಲ್ಲಿ ಆದರ್ಶರಾಜ್ಯವೆನಿಸಿಕೊಂಡಿತು. ಮಹಾತ್ಮಗಾಂಧಿ ಮತ್ತು ಸ್ಯಾಂಕಿ ಮೊದಲಾದವರು ರಾಜರನ್ನು ರಾಜರ್ಷಿಗಳೆಂದು ಕರೆದುದಲ್ಲದೆ ಅವರ ರಾಜ್ಯವನ್ನು ರಾಮರಾಜ್ಯವೆಂದು ಕರೆದರು. ಇವುಗಳಲ್ಲಿ ವಿಶೇಷ ಗಮನಿಸಬೇಕಾದುದು ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ ಸಾಹಿತ್ಯ ಮತ್ತು ಕಲಾ ಪ್ರೋತ್ಸಾಹ.

ಒಡೆಯರಿಗೆ ಕನ್ನಡ, ಸಂಸ್ಕೃತ, ಇಂಗ್ಲೀಷ್, ಪಾರ್ಸಿ, ಉರ್ದು, ತಮಿಳು ಮತ್ತು ಮರಾಠಿ ಭಾಷೆಗಳಲ್ಲಿ ಪಾಂಡಿತ್ಯವಿತ್ತು. ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ವಿಶೇಷ ಪ್ರೇಮ, ಇವುಗಳ ಅಭಿವೃದ್ಧಿಯಿಂದಲೇ ರಾಜ್ಯದ ಉದ್ಧಾರವಾಗುವುದೆಂದು ಒಡೆಯರು ಭಾವಿಸಿದ್ದರು. ಅದ್ದರಿಂದ ಅವರು ಸಾಹಿತ್ಯಭಕ್ತರಿಗೆ ನಾನಾ ರೀತಿಯಲ್ಲಿ ಪ್ರೋತ್ಸಾಹಿಸುತ್ತಿದ್ದರು. ಮೈಸೂರು ಬೆಂಗಳೂರುಗಳಲ್ಲಿದ್ದ ಸಂಸ್ಕೃತಪಾಠಶಾಲೆಗಳು, ಕನ್ನಡ ಸಾಹಿತ್ಯ ಪರಿಷತ್ತು ಮೊದಲಾದ ಸಂಸ್ಥೆಗಳಿಗೆ ವಿಶೇಷವಾಗಿ ದ್ರವ್ಯಸಹಾಯಮಾಡಿದರು. ಉತ್ತಮವಾದ ಗ್ರಂಥರಚನೆಗಳಿಗೆ ಸಂಭಾವನೆಯನ್ನು ನೀಡಿದರು. ಪ್ರಾಂತಭೇದವಿಲ್ಲದೆ ವಿದ್ವಾಂಸರನ್ನು ಆಹ್ವಾನಿಸಿ ಪ್ರೋತ್ಸಾಹಿಸಿದರು. ಪಂಡಿತವರ್ಗವನ್ನು ಸಾಮಾನ್ಯ ವಿದ್ವಾನ್, ಮಹಾವಿದ್ವಾನ್, ಟೈಟಲ್ ವಿದ್ವಾನ್, ಧರ್ಮಾಧಿಕಾರಿ ಎಂದು ವಿಭಾಗಿಸಿ ಅಂತಹವರಿಗೆ ಸೂಕ್ತ ರೀತಿಯಲ್ಲಿ ಸುಮಾರು ೬೦೦ ವಿದ್ವಾಂಸರಿಗೆ ಮಾಸಾಶನವನ್ನು ಕೊಡುತ್ತಿದ್ದರು. ಸಂಸ್ಕೃತ ಭಂಡಾರವೊಂದನ್ನು ಸ್ಥಾಪಿಸಿ ಅಲ್ಲಿ ಅಮೂಲ್ಯವಾದ ಕೈಬರಹ ಮತ್ತು ಮುದ್ರಿತ ಗ್ರಂಥಗಳನ್ನು ಶೇಖರಿಸಿದರು. (ಅದು ಈಗ ಮೈಸೂರುಸಂಸ್ಕೃತ - ಮಹಾಪಾಠಶಾಲೆಯ ಗ್ರಂಥಭಂಡಾರ ಭಾಗವಾಗಿದೆ) ಸಂಸ್ಕೃತ ವಿದ್ವಾಂಸರಿಗೆ ವಿದ್ಯಾನಿಧಿ, ಸಾಹಿತ್ಯರತ್ನಂ, ಪಂಡಿತರತ್ನಂ, ಪೌರಾಣಿಕರತ್ನಂ, ಜ್ಯೋತಿಷ್ಯರತ್ನಂ, ಅರ್ಥಶಾಸ್ತ್ರವಿಶಾರದ ಮೊದಲಾದ ಬಿರುದುಗಳನ್ನು ಸೂಕ್ತ ಸಂಭಾವನೆಗಳ ಜೊತೆಯಲ್ಲಿ ದಯಪಾಲಿಸಿದರು.

ಜ್ಞಾನವೇ ಪರಮ ಭೂಷಣವೆಂದು ಅವರು ವಿದ್ಯಾಪ್ರಸಾರಕ್ಕೆ ಆದ್ಯ ಗಮನವನ್ನಿತ್ತರು. ಸರ್ ಎಂ. ವಿಶ್ವೇಶ್ವರಯ್ಯ ಮೊದಲಾದ ಮೇಧಾವಿಗಳ ನೇತೃತ್ವದಲ್ಲಿ ೧೯೧೬ನೆಯ ವರ್ಷದಲ್ಲಿ ಮೈಸೂರು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿ ಅಲ್ಲಿಂದ ಸುಮಾರು

೨೫ ವರ್ಷಗಳ ಕಾಲ ಅದರ ಕುಲಪತಿಗಳಾಗಿ ನಡೆಸಿದರು. ಅದರ ಪ್ರಥಮಘಟಿಕೋತ್ಸವದಲ್ಲಿ ವಿದ್ಯಾಭ್ಯಾಸದ ಪರಮಾವಶ್ಯಕತೆಯನ್ನು ಸ್ಪಷ್ಟೀಕರಿಸಿದುದಲ್ಲದೆ ನಮ್ಮ ವಿಶ್ವವಿದ್ಯಾಲಯದಲ್ಲಿ ಕನ್ನಡಕ್ಕೆ ಸೂಕ್ತಸ್ಥಾನವನ್ನು ಕೊಡಬೇಕೆಂದು ನಿರ್ದೇಶ ಮಾಡಿದರು. ಹಾಗೆಯೇ ವಿಶ್ವವಿದ್ಯಾಲಯಮಟ್ಟದ ವ್ಯಾಸಂಗವನ್ನು ಪಡೆಯಲು ಅದೃಷ್ಟವಿಲ್ಲದ ಲಕ್ಷಾಂತರ ಜನಗಳಿಗೆ ಉಪನ್ಯಾಸ ಮತ್ತು ಪುಸ್ತಕ ಪ್ರಕಟಣೆಗಳ ಮೂಲಕ ಸೂಕ್ತಜ್ಞಾನಪ್ರಸಾರ ಮಾಡಬೇಕೆಂದು ಒತ್ತಾಯ ಪಡಿಸಿದರು. ಆ ವರ್ಷವೇ ಶ್ರೀ ಪಂಡಿತ ಮದನಮೋಹನ ಮಾಳವೀಯ ಅವರ ಕೋರಿಕೆಯಂತೆ ಕಾಶಿಯ ಹಿಂದೂ ವಿಶ್ವವಿದ್ಯಾಲಯದ ಸ್ಥಾಪನೆಗೆ ಅಪಾರವಾದ ದ್ರವ್ಯಸಹಾಯ ಮಾಡಿದುದಲ್ಲದೆ ಅದರ ಪ್ರಥಮ ಕುಲಪತಿಗಳಾಗಿ ಸೇವೆ ಸಲ್ಲಿಸಿದರು.

ಮೇಲೆಯೇ ತಿಳಿಸಿರುವಂತೆ ಅವರಿಗೆ ಕನ್ನಡವೆಂದರೆ ಪ್ರಾಣ. ಕನ್ನಡ ಸಾಹಿತ್ಯಪರಿಷತ್ತಿನ ಸ್ಥಾಪನೆಗೆ ಕಾರಣಭೂತರಾಗಿ ಅದರ ಮಹಾಪೋಷಕರಾಗಿದ್ದು ತಮ್ಮ ಸರ್ಕಾರದಿಂದ ಉದಾರವಾಗಿ ಧನಸಹಾಯ ಮಾಡಿಸಿ ಅದರ ರಜತ ಮಹೋತ್ಸವ ಸಂದರ್ಭದಲ್ಲಿ ಅಧ್ಯಕ್ಷರಾಗಿದ್ದು ಅಂದಿನ ಭಾಷಣದಲ್ಲಿ ಪರಿಷತ್ತಿನ ಕಾರ್ಯವನ್ನು ಮುಕ್ತ ಕಂಠದಿಂದ ಹೊಗಳಿ ಮುಂದಿನ ಕಾರ್ಯಮಾರ್ಗದ ವಿಷಯವಾಗಿ ಉತ್ತಮ ಸೂಚನೆಯನ್ನಿತ್ತಿದ್ದಾರೆ.

ಕನ್ನಡಿಗರನೇಕರು ತಮ್ಮ ಗ್ರಂಥಗಳನ್ನು ಅವರಿಗೆ ಅರ್ಪಣೆ ಮಾಡಿದ್ದಾರೆ. ಕರ್ನಾಟಕ ಕವಿಚರಿತ್ರೆಕಾರರಾದ ರಾವ್-ಬಹದ್ದೂರ್ ಆರ್ ನರಸಿಂಹಾಚಾರ್ಯರು ತಮ್ಮ ಗ್ರಂಥದ ಮೂರು ಸಂಪುಟವನ್ನು ಅವರಿಗೆ ಅಂಕಿತ ಮಾಡಿದ್ದಾರೆ. ಶ್ರೀ. ಸಿ. ಕೆ. ವೆಂಕಟರಾಮಯ್ಯನವರು ಶ್ರೀಕೃಷ್ಣರಾಜ ಒಡೆಯರವರ ಚರಿತ್ರೆಯನ್ನು ರಚಿಸಿ ಅವರಿಗೆ ಅರ್ಪಿಸಿದ್ದಾರೆ. ಪಂಡಿತ ತಿರು, ತಿರು, ಶ್ರೀನಿವಾಸರಂಗಾಚಾರ್ಯರು ಕೃಷ್ಣರಾಜ ಒಡೆಯರ ರಾಜ್ಯದ ವೈಭವವನ್ನು ಕುರಿತು 'ಮೈಸೂರು ಮೆಯ್ಸಿರಿ' ಅಥವಾ `ನಾಲ್ವಡಿ ಕೃಷ್ಣರಾಜ ಒಡೆಯರ ಮಹಿಮೆ' ಎಂಬ ಗ್ರಂಥವನ್ನು ರಚಿಸಿ ಪ್ರಭುಗಳಿಗೆ ಅರ್ಪಿಸಿದ್ದಾರೆ. ಆ ಗ್ರಂಥದಲ್ಲಿ ಅವರು ನಾಲ್ವಡಿ ಕೃಷ್ಣರಾಜ ಒಡೆಯರವರ ಸಾಹಿತ್ಯಲೋಕದ ಪರಿಚಯವನ್ನು ಮುಂದಿನ ಪದ್ಯಗಳಲ್ಲಿ ಶ್ರುತಪಡಿಸಿದ್ದಾರೆ.

ನಾನಾವೇದ ವಿಶಾರದರ್ ಕವಿವರರ್ ವೇದಾಂತವಿದ್ಯಾಧರನ್ ।
ನಾನಾಶಾಸ್ತ್ರ ಕಲಾವಿಲಾಸರಸಿಕರ್ ಸಾಹಿತ್ಯವಾಣೀಪ್ರಿಯರ್ ॥
ನಾನಾಗಾನ ಸುನಾಟ್ಯ ನರ್ತನಚಣರ್ ಚಿತ್ರಾದಿ ಶಿಲ್ಪಜ್ಞರುಂ ।
ನಾನಾದೇಶದೆ ಬಂದು ರಾಜ ಸಭೆಯೊಳ್ಕಾಪಾಂತು ರಾರಾಜಿಪರ್ ॥

ಬಗೆಬಗೆಯ ಶಾಸ್ತ್ರಿಗಣಕಂ
ಬಗೆಬಗೆಯ ಕುಶಲಕಲಾನಿಪುಣ ಗಣಕಂ ಮೇಣ್
ಬಗೆದೆಣಿವಂತೆಂದೆಂದುಂ
ಜಗಮೆಚ್ಚುವ ತೆರದೆ ಬೀಱು ವೇತನಮೆನಿತೋ

ಭೋಜಂ ಮೌಕ್ತಿಕಹಾರಮಂ ಬಿರುದುಮಂ ಪೊಂಬಟ್ಟೆಶಾಲ್ಜೋಡಿಯಂ
ನೈಜೋದಾರನೆಯಿತ್ತನಕ್ಕುಮಿವನುಂ ಕರ್ಣಾಕುತಾಧೀಶ್ವರಂ
ರಾಜಾಗ್ರೇಸರ ಕೃಷ್ಣರಾಜನರಪಂ ವಿದ್ಯಾವಿದರ್ಗೇಗಳುಂ
ಸಾಜಂಬೀಱುತೆ ಕರ್ಣನಂ ಮಸುಳಿಪಂ ಸತ್ಕೀರ್ತಿಯೌದಾರ್ಯದಿಂ

ರಾಜಮಾನ್ಯರಾಜಮಂತ್ರ ಕೋವಿದಾದಿ ಲೌಕಿಕೋ
ತ್ತೇಜಕಾಂಶಿತುಗಳಂ ಕವೀಂದ್ರ ಪಂಡಿತೇಂದ್ರರೆಂ
ಭೋಜೆದಾಳ್ದರೋಳಿಗಾಂತ ಪಂಡಿತೇಂದ್ರ ರತ್ನಮೆಂ
ಬೀಜಯಾಂಕಮಂ ನೃಪೇಂದ್ರ ನೋವಿಯಿತ್ತು ಮನ್ನಿಪಂ

ಸರಸಂಪಂಡಿತರತ್ನವೆಂಬ ಬಿರುದು ಸಾಹಿತ್ಯ ರತ್ನಾಕಮಂ ।
ವರ ಸಂಗೀತ ಕಲಾವಿಶಾರದವರಂ ವೇದಾನ್ತಿರತ್ನಂ ಕವೀ ॥
ಶ್ವರ ರತ್ನಂ ಕವಿರಾಜನೆಂಬ ಬಿರುದಂ ತತ್ತ ನ್ಮಹಾಂತರ್ಗೆ ತಾಂ।
ಬಿರುದಂತೆಂಬರಗಂಡನಿತ್ತು ಮೆಱೆವಂ ಶ್ರೀಕೃಷ್ಣರಾಡ್ಭೂಮಿಪಂ ॥

ಅವರ ಆದರ್ಶ ರಾಜ್ಯಪಾಲನೆಯ ೨೫ ವರ್ಷವು ಮುಗಿದ ಮೇಲೆ ೧೯೨೭ರಲ್ಲಿ ಅವರ ರಾಜ್ಯಪಾಲನೆಯ ಬೆಳ್ಳಿಹಬ್ಬದ ಉತ್ಸವವು ಬಹು ವಿಜೃಂಬಣೆಯಿಂದ ನಡೆಯಿತು. ಆಗ ಆ ಸಂದರ್ಭದಲ್ಲಿ ಕನ್ನಡ-ಕಣ್ವರೆಂದು ಪ್ರಸಿದ್ಧರಾದ ಬಿ. ಎಂ. ಶ್ರೀಯವರು 'ಕೃಷ್ಣರಾಜ ರಜತಮಹೋತ್ಸವ ಪ್ರಗಾಥಾ' ಎಂಬ ಒಂದು ನೀಳ್ ಕವಿತೆಯನ್ನು ರಚಿಸಿದ್ದಾರೆ. ಅದರಲ್ಲಿ ಅವರು ಕೃಷ್ಣರಾಜರನ್ನು 'ಕನ್ನಡದ ವೈರ್‌ಮುಡಿ, ಕಾವ್ಯರಸಭೋಜ,' "ತನ್ನ ಬಾಳನು ನಾಡ ಮೇಲ್ಮೆಗೆ ಮುಡಿಪುಕಟ್ಟಿದ ಧೀರನು, ತನ್ನ ಗುರಿಯನ್ನು ಬಿಡದೆ ತೊಡುವನು, ಆತ್ಮಗುಣದಲಿ ವೀರನು" ಎಂದು ವರ್ಣಿಸಿದ್ದಾರೆ. ಅದೇ ಕಾಲದಲ್ಲಿ ಶ್ರೀಮಾನ್ ಕೆ.ವಿ. ಪುಟ್ಟಪ್ಪನವರು ತಮ್ಮ ಕವನದಲ್ಲಿ

ಓ ಪವಿತ್ರರಾಜಋಷಿಯೆ
ದೇವರನ್ನು ಬಿಂಬಿಸುವುದು
ಶುಭ್ರವಾದ ನಿನ್ನ ಅಮಲ
ಎದೆಯ ಕನ್ನಡಿ
ದೊರೆಯು ದೇವರೆಂಬ ನುಡಿಯು ಧನ್ಯವಾಯಿತು.

ಎಂದು ಕೃಷ್ಣರಾಜರ ಮೇಲ್ಮೆಯನ್ನು ಹಾಡಿದ್ದಾರೆ.

ಕೃಷ್ಣರಾಜರು ಕನ್ನಡ ವಿದ್ವಾಂಸರುಗಳಿಗೂ ಉದ್ದಾಮವಾದ ಬಿರುದುಗಳನ್ನಿತ್ತು ಸೂಕ್ತ ಖಿಲ್ಲತ್ತುಗಳನ್ನು ದಯಪಾಲಿಸಿದ್ದಾರೆ. ರಾವ್, ಬಹದ್ದೂರ್ ಆರ್ ನರಸಿಂಹಾಚಾರ್ಯರು (ಪ್ರಾಶನವಿಮರ್ಶವಿದಕ್ಷಣ) ಬಿ. ಎಂ. ಶ್ರೀಕಂಠಯ್ಯ (ರಾಜಸೇವಾಸಕ್ತ) ಮಾಸ್ತಿ ವೆಂಕಟೇಶ

ಅಯ್ಯಂಗಾರ್ (ರಾಜಕಾರ್ಯ ಪ್ರಸಕ್ತ), ಸಿ.ಕೆ. ವೆಂಕಟರಾಮಯ್ಯ (ರಾಜಸೇವಾ ಸಕ್ತ), ಬೆಳ್ಳಾವಿ ವೆಂಕಟನಾರಾಯಣಪ್ಪ (ರಾಜಸೇವಾಸಕ್ತ) ಮೊದಲಾದವರು ಅಂತಹವರಲ್ಲಿ ಕೆಲವರು.

ಕೃಷ್ಣರಾಜರು ವ್ಯಾಸಂಗದಲ್ಲಿ ಜೀವನದ ಅಂತ್ಯದವರೆಗೂ ಬಹಳ ಆಸಕ್ತರಾಗಿದ್ದವರು. ಅವರು ಉಚ್ಚ ವೇದಾಂತಿಗಳು. ಕೊನೆಯುವರೆಗೂ ಕೂಡಲಿ ಮಠಾಧೀಶರಾಗಿದ್ದ ಶ್ರೀ ವಿರೂಪಾಕ್ಷ ಶಾಸ್ತ್ರಿಗಳು, ಪ್ರೊ. ಎ. ಆರ್. ವಾಡಿಯ ಮತ್ತು ವಿ. ಸುಬ್ರಹ್ಮಣ್ಯ ಅಯ್ಯರ್ ಅವರಲ್ಲಿ ವೇದಾಂತ ಶಾಸ್ತ್ರವನ್ನು ವ್ಯಾಸಂಗ ಮಾಡುತ್ತಿದ್ದರು. ಪ್ರಿನ್ಸಿಪಾಲ್ ಚಕ್ರವರ್ತಿ ರಾಮಾನುಜ ಅಯ್ಯಂಗಾರ್ ಮತ್ತು ಇನ್ಸ್‌ಪೆಕ್ಟರ್ ರಂಗಾಚಾರ್ ಅವರುಗಳು ಇವರ ವ್ಯಾಸಂಗ ಮಿತ್ರರು.

ಇವರಿಗೆ ಭಿನ್ನ ಸಾಹಿತ್ಯ ಪ್ರಚಾರಕಾರ್ಯದಲ್ಲಿಯೂ ವಿಶೇಷ ಆಸಕ್ತಿಯಿತ್ತು. "ಕೃಷ್ಣ ಭೂಪಾಲೀಯಂ" ಎಂಬ ಒಂದು ತೆಲುಗು ಗ್ರಂಥವನ್ನು ತಾವೇ ಪಂಡಿತ ರಾಳಪಲ್ಲಿ ಅನಂತ ಕೃಷ್ಣ ಶರ್ಮರವರಿಂದ ಸಂಶೋಧಿಸಿ ಪ್ರಕಟಿಸಿದ್ದಾರೆ.

ಸಂಗೀತ ಮತ್ತು ನಾಟ್ಯ ಕಲೆಗಳ ಅಭಿವೃದ್ಧಿಕಾರ್ಯದಲ್ಲಿ ಕೃಷ್ಣರಾಜ ಒಡೆಯರ ಕಾರ್ಯವು ಚಿರಸ್ಮರಣೀಯವಾದುದು. ಅವರ ಪಿತೃ ಪಿತಾಮಹರುಗಳಾದ ಚಾಮರಾಜ ಒಡೆಯರು ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರು ಈ ಕ್ಷೇತ್ರದಲ್ಲಿ ವಿಶೇಷ ಕೆಲಸ ಮಾಡಿದ್ದರು. ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ಅನೇಕ ವಿದ್ವನ್ಮಣಿಗಳಿದ್ದರು. ಅವರು ಯಕ್ಷಗಾನಗಳ ಅಭಿವೃದ್ಧಿಗಾಗಿ ವಿಶೇಷ ಶ್ರಮಿಸಿದರು. ಅವರು ಕರಾವಳಿಯಿಂದ ಅನೇಕ ಯಕ್ಷಗಾನ ತಜ್ಞರನ್ನು ಬರಮಾಡಿಸಿ ಅರಮನೆಯಲ್ಲೇ ಒಂದು ಯಕ್ಷಗಾನ ಮಂಡಳಿಯನ್ನು ಸ್ಥಾಪಿಸಿ ತಮ್ಮ ಆಸ್ಥಾನವಿದ್ವಾಂಸರಾಗಿದ್ದ ಅಳಿಯ ಲಿಂಗರಾಜ ಅರಸುರವರಿಂದ ಅನೇಕ ಯಕ್ಷಗಾನಗಳನ್ನು ಬರೆಸಿ ಆ ಕಲೆಗೆ ವಿಶೇಷ ಪ್ರೋತ್ಸಾಹವನ್ನಿತ್ತರು. ಚಾಮರಾಜ ಒಡೆಯರ ಕಾಲವು ಸಂಗೀತ ಮತ್ತು ನಾಟಕಗಳ ದೃಷ್ಟಿಯಿಂದ ಬಹು ಉಚ್ಛ್ರಾಯ ಕಾಲ. ಅವರು ಇಂಗ್ಲೀಷ್ ಮತ್ತು ಸಂಸ್ಕೃತ ಭಾಷೆಗಳಿಂದ ಅನೇಕ ನಾಟಕಗಳನ್ನು ವಿದ್ವಾಂಸರಿಂದ ಕನ್ನಡಕ್ಕೆ ಭಾಷಾಂತರಿಸಿ ಅರಮನೆಯಲ್ಲೇ ಒಂದು ನಾಟಕಸಂಸ್ಥೆಯನ್ನು ಸ್ಥಾಪಿಸಿ ತಾವೂ ಪಾತ್ರವಹಿಸಿ ತಾವು ಅಭ್ಯಾಸ ಮಾಡಿದ ನಾಟಕಗಳನ್ನು ಪರದೇಶದಲ್ಲಿ ಪ್ರದರ್ಶಿಸಿ ಆ ಕಲೆಗೆ ವಿಶೇಷ ಮಾನ್ಯತೆಯನ್ನು ಉಂಟುಮಾಡಿದರು. ತಮ್ಮ ಆಸ್ಥಾನದಲ್ಲಿ ಅನೇಕ ಸಂಗೀತ ಕಲಾವಿದರಿಗೆ ಆಶ್ರಯವನ್ನು ಕೊಟ್ಟು ವಿಶೇಷ ಪ್ರೋತ್ಸಾಹಿಸಿದರು. ವೀಣೆ ಶೇಷಣ್ಣನವರು ಇವರ ಕಾಲದ ಉದ್ದಾಮ ಸಂಗೀತ ತಜ್ಞರು. ಜಲತರಂಗ ವಾದ್ಯವನ್ನು ರೂಢಿಗೆ ತಂದವರೇ ಇವರು. ವಾಸುದೇವಾಚಾರ್ಯರು ತಿರುವಯ್ಯಾರ್‌ಗೆ ಹೋಗಿ ವ್ಯಾಸಂಗ ಮಾಡುವುದಕ್ಕೆ ಸಹಾಯ ಮಾಡಿದವರೂ ಚಾಮರಾಜರೇ. ಸಂಗೀತದ ಶ್ಯಾಮರಾಯರು, ವೀಣೆಶಾಮಣ್ಣ, ಅವಧೂತದ ಚೆನ್ನಮಲ್ಲಪ್ಪ, ರಾಮಲಿಂಗಯ್ಯ, ಭರತನಾಟ್ಯದ ತಿರುಮಕೂಡಲು ಸುಂದರಮ್ಮ

ಇವರ ಆಸ್ಥಾನದ ವಿದ್ವಾಂಸರು. ಚಿಟ್ಟಿ ತಾಯಮ್ಮ ಮತ್ತು ಗಿರಿಬಸಪ್ಪನವರು ಪ್ರಖ್ಯಾತ ನಾಟ್ಯವಿದರು. ಚಾಮರಾಜರು ಮೊತ್ತಮೊದಲು ತಮ್ಮ ಆಸ್ಥಾನದಲ್ಲಿದ್ದ ಸಂಗೀತ ತಜ್ಞರನ್ನು ವಾದ್ಯಗಾರರನ್ನು ಒಟ್ಟುಗೂಡಿಸಿ ಒಂದು ಖಾಸಗೀ ನಾಟ್ಯ ಸಂಸ್ಥೆಯನ್ನು ಸ್ಥಾಪಿಸಿದರು. ಅವರ ಕಾರ್ಯವು ಕಲಾಕ್ಷೇತ್ರವನ್ನು ವಿಶೇಷವಾಗಿ ವಿಸ್ತರಿಸಿತ್ತು.

ಅವರ ಉತ್ತರಾಧಿಕಾರಿಗಳಾದ ನಾಲ್ವಡಿ ಕೃಷ್ಣರಾಜ ಒಡೆಯರು ಮೈಸೂರು ರತ್ನಸಿಂಹಾಸನಾಧೀಶರಾದ ಮೇಲೆ ಸಂಗೀತ ಮತ್ತು ನಾಟ್ಯ ಪ್ರಪಂಚಕ್ಕೆ ಸುವರ್ಣಯುಗ ಉಂಟಾಯಿತೆಂದು ಹೇಳಬಹುದು. ಇವರ ಅದ್ವಿತೀಯವಾದ ಕಲಾಪ್ರೋತ್ಸಾಹದಿಂದ ಮೈಸೂರು ಸಕಲಕಲಾ ಕೇಂದ್ರವಾಯಿತು. ಇವರ ಎದುರಾಶ್ರಯದಿಂದ ಅನೇಕ ಪರಸ್ಥಳೀಯರು ಬಂದು ಮೈಸೂರಿನಲ್ಲಿ ನೆಲೆಸಿದರು. ರಾಜರ ಸಂಗೀತಪ್ರೇಮವು ಅವರ ಬಂಧು ವರ್ಗದಲ್ಲೆಲ್ಲಾ ಪ್ರಸರಿಸಿತ್ತು. ಅವರ ಸಹೋದರಿಯರಾದ ಕೃಷ್ಣಾಜಮ್ಮಣ್ಣಿ ಮತ್ತು ಜಯಲಕ್ಷಮ್ಮಣ್ಣಿಯವರು ಪ್ರಸಿದ್ಧ ವೈಣಿಕರು. ಅವರಲ್ಲಿ ಜಯಲಕ್ಷಮ್ಮಣ್ಣಿಯವರು ಒಂದು ಕೈಯಲ್ಲಿ ಪಿಯಾನೋ ವಾದ್ಯವನ್ನು ಬಾರಿಸುತ್ತ ಮತ್ತೊಂದು ಕೈಯಲ್ಲಿ ಪಿಟೀಲನ್ನು ಬಾರಿಸುತ್ತಿದ್ದರು. ಅವರ ತಮ್ಮಂದಿರಾದ ಕಂಠೀರವ ನರಸಿಂಹರಾಜರು ೧೯೦ಗಳರಷ್ಟು ಹಿಂದೆಯೇ ಪುಂಡರೀಕವಿಠಲನ ಕೃತಿಯನ್ನು ಪ್ರಕಾಶಪಡಿಸಿ ಖ್ಯಾತಿ ಪಡೆದಿದ್ದರು.

ನಾಲ್ವಡಿ ಕೃಷ್ಣರಾಜರ ಕಾಲದಲ್ಲಿ ಪಾಶ್ಚಾತ್ಯ ಪೌರಸ್ತ್ಯ ಮತ್ತು ಹಿಂದೂಸ್ಥಾನಿ ಗಾಯನಗಳ ತ್ರಿವೇಣೀಸಂಗಮವಾಯಿತು. ಅವರು ಸ್ವಯಂ ವೈಣಿಕರು. ಅವರಿಗೆ ಪಟ್ಟಾಭಿಷೇಕವಾದ ತಕ್ಷಣವೇ ವೀಣೆ ಶೇಷಣ್ಣನವರಿಗೆ `ವೈಣಿಕ ಶಿಖಾಮಣಿ' ಎಂಬ ಬಿರುದನ್ನು ಸೂಕ್ತ ಖಿಲ್ಲತ್ತುಗಳೊಡನೆ ದಯಪಾಲಿಸಿದರು. ಕೃಷ್ಣರಾಜರ ವಿದ್ವತ್ತಿನ ಆಳ ಮತ್ತು ಗುಣಗಳು ಅವರ್ಣನೀಯವಾಗಿತ್ತು. ಅವರು ಕರ್ಣಾಟಕ ಹಿಂದೂಸ್ಥಾನೀ ಮತ್ತು ಪಾಶ್ಚಾತ್ಯ ಸಂಗೀತವಾದ್ಯಗಳನ್ನು ಸರಾಗವಾಗಿ ಬಾರಿಸುತ್ತಿದ್ದರು. ಪಾಶ್ಚಾತ್ಯ ಸಂಗೀತವನ್ನು ಪಿಟೀಲಿನ ಮೂಲಕ ಅಭ್ಯಸಿಸಿದರು. ಪ್ರಖ್ಯಾತ ವಿದ್ವಾಂಸರಾದ ಡೆಫ್ರಿಸ್ ಮತ್ತು ಕರ್ನಲ್ ಪೌಲಲ್ಸ್ ಅವರ ಗುರುಗಳು. ಅವರು ಚಿಕ್ಕ ವಯಸ್ಸಿನಲ್ಲಿಯೇ ಅವರ ವಿದ್ವಾಂಸರ ಸ್ವರ ದೋಷಗಳನ್ನು ಗುರುತಿಸುತ್ತಿದ್ದರು. ಅವರು ಲಂಡನ್ನಿನ ಟ್ರಿನಿಟಿ ಕಾಲೇಜಿನ ಸಂಗೀತಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾಗಿದ್ದರು. ಪ್ರಸಿದ್ಧರಾದ ಮಿಸ್ಟೊವ್‌ಸ್ಕಿ ಅವರು ಆಗ ಅವರ ಪರೀಕ್ಷಕರಾಗಿದ್ದರು. ಕರ್ನಾಟಕ, ಹಿಂದೂಸ್ಥಾನಿ ಮತ್ತು ಪಾಶ್ಚಾತ್ಯ ಸಾಮೂಹಿಕಗಾನ ಗೋಷ್ಠಿಯನ್ನು ಪ್ರತ್ಯೇಕವಾಗಿ ಏರ್ಪಡಿಸಿದ ಪ್ರಥಮ ರಾಜರು ಅವರೇ. ವಾರಕ್ಕೊಂದು ಸಲ ಕ್ಷಯರೋಗದ ಆಸ್ಪತ್ರೆಯಲ್ಲಿ ರೋಗಿಗಳ ರೋಗ ಪರಿಹಾರಕ್ಕಾಗಿ ಸೂಕ್ತ ಸಾಮೂಹಿಕಗಾನವನ್ನೇರ್ಪಡಿಸಿದರು. ರೋಗ ಪರಿಹಾರಕ್ಕಾಗಿ ಸಂಗೀತವನ್ನು ಸುವ್ಯವಸ್ಥಿತ ರೀತಿಯಲ್ಲಿ ಭಾರತದಲ್ಲಿ ಮೊತ್ತಮೊದಲು ನಡೆಸಿದ ಪ್ರಯೋಗವಿದು. ಅರಮನೆಗೆ ಸೇರಿದಂತೆ ಉತ್ತಮ ಉಚಿತ ಸಂಗೀತ ಶಾಲೆಯನ್ನು ಪ್ರಾರಂಭಿಸಿದವರೂ ಅವರೇ.

ಕೃಷ್ಣರಾಜರು ವೀಣೆಶೇಷಣ್ಣ ಮತ್ತು ವೀಣೆಸುಬ್ಬಣ್ಣನವರಲ್ಲಿ ಕರ್ನಾಟಕ ಸಂಗೀತವನ್ನು ಕಲಿತರು. ಅನೇಕ ಸಲ ಅವರ ಗುರುಗಳೇ ಅವರ ಅದ್ಭುತ ಸಂಗೀತ ಪ್ರತಿಭೆಗೆ ಬೆರಗಾಗುತ್ತಿದ್ದರು. ಆ ಕಾಲದ ಕರ್ನಾಟಕ ಮತ್ತು ಹಿಂದೂಸ್ತಾನಿ ಸಂಗೀತಗಾರರೆಲ್ಲಾ ಅವರೆದುರಿಗೆ ತಮ್ಮ ವಿದ್ವತ್ತನ್ನು ಪ್ರದರ್ಶಿಸಿ ಅವರ ಮೆಚ್ಚುಗೆಯನ್ನು ಪಡೆಯಲು ಹಾತೊರೆಯುತ್ತಿದ್ದರು. ಅದೊಂದು ದೊಡ್ಡ ಗೌರವವೆಂದು ಭಾವಿಸಿದ್ದರು. ಆದುದರಿಂದಲೇ ಭಾರತದ ಸುಪ್ರಸಿದ್ಧ ಸಂಗೀತಗಾರರೆಲ್ಲ ಮೈಸೂರಿನಲ್ಲಿ ಬಂದುಸೇರಿ ಕಚೇರಿಯನ್ನು ನಡೆಸುತ್ತಿದ್ದರು. ತಮ್ಮ ಆಸ್ಥಾನ ವಿದ್ವಾಂಸರೆಲ್ಲ ಅಖಿಲಭಾರತ ಕೀರ್ತಿಯನ್ನು ಪಡೆಯಬೇಕೆಂಬುದು ಮಹಾರಾಜರ ಉದಾರಧ್ಯೇಯ. ಅದಕ್ಕಾಗಿ ಅವರು ಅವರಿಗೆ ಸೂಕ್ತ ಸಹಾಯಗಳನ್ನೊದಗಿಸುತ್ತಿದ್ದರು. ತಮ್ಮ ಅರಮನೆಯಲ್ಲಿ ನಡೆಯುತ್ತಿದ್ದ ಗಾನಗೋಷ್ಠಿಗಳ ಪ್ರಯೋಜನವನ್ನು ಧ್ವನಿವರ್ಧಕಗಳ ಮೂಲಕ ಪ್ರಜಾಸಾಮಾನ್ಯಕ್ಕೆ ಒದಗಿಸಿಕೊಟ್ಟರು. ಅಲ್ಲದೆ ವಿದ್ವಾಂಸರನ್ನು ವೈಣಿಕ ಶಿಖಾಮಣಿ, ನಾಟಕ ಶಿರೋಮಣಿ, ಗಾಯಕ ಶಿಖಾಮಣಿ, ವೈಣಿಕ ಪ್ರವೀಣ, ಗಾನವಿಶಾರದ, ಸಂಗೀತಶಾಸ್ತ್ರರತ್ನ, ಸಂಗೀತರತ್ನ ಮೊದಲಾದ ಪ್ರಶಸ್ತಿಗಳಿಂದ ಗೌರವಿಸಿದರು. ಎಲ್ಲಾ ವಿದ್ವಾಂಸರ ಅತ್ಯುಚ್ಚ ಕೃತಿಗಳನ್ನು ಸಂಗ್ರಹಿಸಿ ತಮ್ಮ ಭಂಡಾರದಲ್ಲಿ ಸೇರಿಸಿದರು. ಈ ಶೇಖರಣೆ ಭಾರತದಲ್ಲೆಲ್ಲಾ ಅತ್ಯಂತ ಬೃಹತ್ತೆಂದು ಹೇಳಬಹುದು.

ವೀಣೆಸುಬ್ಬಣ್ಣ, ವೀಣೆ ಶಿವರಾಮಯ್ಯ, ವೀಣೆ ವೆಂಕಟಗಿರಿಯಪ್ಪ, ಗಾಯಕಗುರುಗಳಾದ ಚಿಂತಲಪಲ್ಲಿ ವೆಂಕಟರಾಯರು ಅವರ ಮಕ್ಕಳಾದ ರಾಮಚಂದ್ರರಾಯರು, ಗಾನವಿಶಾರದ ಚಿಕ್ಕಸುಬ್ಬರಾಯರು, ಬಿಡಾರಂ ಕೃಷ್ಣಪ್ಪನವರು, ಅನಂತ ಶಾಸ್ತ್ರಿಗಳು, ಸುಂದರಶಾಸ್ತ್ರಿಗಳು, ಚಿಕ್ಕರಾಮರಾಯರು, ಬೆಳಕವಾಡಿ ಶ್ರೀನಿವಾಸಯ್ಯಂಗಾರ್ಯರು, ಗಾನವಿಶಾರದ ಬಿ. ದೇವೇಂದ್ರಪ್ಪನವರು, ಶಿವಪ್ಪನವರು, ಲಕ್ಷ್ಮೀನಾರಾಣಪ್ಪನವರು, ಬೆಂಗಳೂರು ನಾಗರತ್ನಮ್ಮ, ಆರ್. ಎಸ್. ಕೇಶವ ಮೂರ್ತಿ, ಪಾಲ್‌ಘಾಟ್ ಅನಂತರಾಮ ಭಾಗವತರ್, ಹರಿಕೇಶ ನೆಲ್ಲೂರ್, ಗಾಯಕ ಶಿಖಾಮಣಿ ಮುತ್ತಯ್ಯ ಭಾಗವತರ್, ಅರಿಯಾಕುಡಿ ರಾಮಾನುಜೈಯ್ಯಂಗಾರ್, ಶಿವರುದ್ರಪ್ಪ, ಡಿ. ಎಂ. ಪುಟ್ಟಸ್ವಾಮಯ್ಯ, ಪಿಟೀಲ್ ತಾಯಪ್ಪ, ಟೈಗರ್ ವರದಾಚಾರ್, ಟಿ. ಚೌಡಯ್ಯ, ತಬಲರಂಗಪ್ಪ, ಲಕ್ಷ್ಮಲಕ್ಷ್ಮಣ ಪಂಡಿತ, ವಾಸುದೇವಾಚಾರ್ಯ ಮೊದಲಾದವರು ಅವರ ಆಸ್ಥಾನ ಸಂಗೀತ ವಿದ್ವಾಂಸರಾಗಿದ್ದರು. ಸುಪ್ರಸಿದ್ಧ ಗಾಯಕರಾಗಿದ್ದ ರಾಮನಾಡು ಶ್ರೀನಿವಾಸಯ್ಯಂಗಾರ್ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್, ಪಿಟೀಲು ವಿದ್ವಾಂಸರಾಗಿದ್ದ ತಿರುಕ್ಕೋಡಿ ಕಾವಲ್ ಕೃಷ್ಣಅಯ್ಯಂಗಾರ್, ಚೆಂಬೆ ವೈದ್ಯನಾಥ ಭಾಗವತರ್, ಘಟಂ ಸುಂದರರಾಮಯ್ಯರ್, ದಕ್ಷಿಣಾಮೂರ್ತಿಪಿಳ್ಳೈ, ಪಾಲ್‌ಘಾಟ್ ರಾಮ ಭಾಗವತರ್, ಅಳಗನಂಬಿ ಮುಂತಾದ ಅನೇಕರು ಅವರಿಂದ ಸನ್ಮಾನಿತರಾಗಿದ್ದಾರೆ. ಹಾರ್ಮೋನಿಯಂ ಅರುಣಾಚಲಪ್ಪನವರು, ಬಿ.ಎಸ್. ರಾಜಯ್ಯಂಗಾರ್ಯರ ಕಛೇರಿಗಳು ಪ್ರತಿವರ್ಷವೂ ತಪ್ಪದೇ ಎರಡು ಸಲ ನಡೆಯುತ್ತಿತ್ತು. ಮಹಾರಾಜರ ಸನ್ಮಾನಕ್ಕೆ

ಪಾತ್ರರಾಗಿದ್ದ ವೀಣೆ ವೆಂಕಟಗಿರಿಯಪ್ಪನವರ ನೇತೃತ್ವದಲ್ಲಿ ಪ್ರಪ್ರಥಮವಾಗಿ ವಾದ್ಯವೃಂದವು ಏರ್ಪಟ್ಟಿತ್ತು. ಅರಮನೆಯಲ್ಲಿ ನಾಟ್ಯಶಾಲೆ ಮತ್ತು ಸಂಗೀತಶಾಲೆಗಳು ಸ್ಥಾಪಿತವಾದವು. ಉತ್ತರ ಭಾರತದ ಸಂಗೀತಗಾರರು ಆಹ್ವಾನಿತರಾಗಿ ಗೌರವಿಸಲ್ಪಟ್ಟಿದ್ದರು. ಪ್ರಖ್ಯಾತ ಹಿಂದೂಸ್ಥಾನಿ ಗಾಯಕರಾಗಿದ್ದ ಪ್ರಯುಜ್‌ಖಾನರಿಗೆ ಆಪ್ತುದ್ ವಿ ಮೌಸಕಿ (ಸಂಗೀತಸೂರ್ಯ) ಎಂಬ ಬಿರುದನ್ನು ನೀಡಿ ಗೌರವಿಸಿದರು. ಮತ್ತೊಬ್ಬ ಖ್ಯಾತ ಕಲಾವಿದ ಉಸ್ತಾದ್ ಅಬ್ದುಲ್ ಕರೀಂಖಾನ್ ಇವರಿಂದ ಸನ್ಮಾನಿತರಾದರು. ಹಿಂದೂಸ್ಥಾನಿ ಗಾಯಕಿಯರಾದ ಇಂದುಬಾಲಾ ಮತ್ತು ಗೋಹಶ್ಚಾನ್ ಎಂಬುವರು ಆಸ್ಥಾನ ಸಂಗೀತ ವಿದುಷಿಯರಾಗಿದ್ದರು. ಇವರ ಕಾಲವು ಮೈಸೂರಿನ ಸಂಗೀತದ ಇತಿಹಾಸದಲ್ಲಿ ಸುವರ್ಣಯುಗವೆನ್ನುವುದರಲ್ಲಿ ಅತಿಶಯೋಕ್ತಿಯೇನಲ್ಲ.

ಕೃಷ್ಣರಾಜರಿಗೆ ದೇಶ ವಿದೇಶೀಯ ಕ್ರೀಡಾಭಿವೃದ್ಧಿಯಲ್ಲಿ ಬಹಳ ಆಸಕ್ತಿ. ಅವರು ಸ್ವತಃ ಪೋಲೋ ಆಟದಲ್ಲಿ ಪ್ರವೀಣರು. ಮೈಸೂರಿನ ರೇಸ್‌ಕೋರ್ಸ್ ಆವರಣದಲ್ಲಿ ಆ ಆಟಕ್ಕೆ ಸೂಕ್ತ ಸೌಲಭ್ಯಗಳನ್ನು ಕಲ್ಪಿಸಿದರು. ದೇಶೀಯ ಮಲ್ಲಯುದ್ಧಗಳಲ್ಲಿ ಅವರಿಗೆ ವಿಶೇಷ ಆಸಕ್ತಿ. ಅವರು ಅನೇಕ ಗರಡಿಗಳಿಗೆ (ವ್ಯಾಯಾಮ ಶಾಲೆಗಳಿಗೆ) ಪೋಷಕರಾಗಿದ್ದುದಲ್ಲದೆ ತಮ್ಮ ಆಸ್ಥಾನದಲ್ಲಿ ಅನೇಕ ಪ್ರಖ್ಯಾತ ಪೈಲ್ವಾನರುಗಳಿಗೆ ಆಶ್ರಯ ಕೊಟ್ಟಿದ್ದಾರೆ. ನವರಾತ್ರಿಯ ದರ್ಬಾರ್ ಕಾಲದಲ್ಲಿ ಸಾಯಂಕಾಲದ ಹೊತ್ತು ದಿನಕ್ಕೆ ಹತ್ತಾರು ಕುಸ್ತಿಗಳಂತೆ ಹತ್ತು ದಿನಗಳಲ್ಲಿ ನೂರಾರು ಕುಸ್ತಿ ಪಂದ್ಯಗಳನ್ನು ನಡೆಸಿ ಗೆದ್ದವರಿಗೂ ಸೋತವರಿಗೂ ಬಹುಮಾನವಿತ್ತು ಪ್ರೋತ್ಸಾಹಿಸಿದರು. ಗುಣವೆಲ್ಲಿದ್ದರೂ ಅದನ್ನು ಗುರುತಿಸಿ ಅದಕ್ಕೆ ಮಾನ್ಯತೆಯನ್ನು ಕೊಡುತ್ತಿದ್ದರು. ಒಂದು ಸಲ ಶ್ರೀನಿವಾಸಣ್ಣ ಎಂಬುವರು ಬೆಟ್ಟ ಹತ್ತುವ ಪಂದ್ಯದಲ್ಲಿ ಪ್ರಖ್ಯಾತರೆಂಬುದನ್ನು ತಿಳಿದು ಅವರನ್ನು ಬರಮಾಡಿ ಅವರು ಎರಡು ಗಂಟೆಗಳ ಕಾಲದಲ್ಲಿ ಚಾಮುಂಡಿ ಬೆಟ್ಟದ ೭೦೦ ಮೆಟ್ಟಿಲುಗಳನ್ನು ಏಕ ಪ್ರಕಾರವಾಗಿ ೧೨ ಸಲ ಹತ್ತಿ ಇಳಿದುದನ್ನು ಪ್ರತ್ಯಕ್ಷ ನೋಡಿ ಸಂತೋಷಪಟ್ಟು ಅವರಿಗೆ ೧೨ ಸವರನ್ ಸುವರ್ಣವನ್ನೂ ಸುಮಾರು ಒಂದು ಸಾವಿರ ರೂಪಾಯಿ ಬೆಲೆಬಾಳುವ ಒಂದು ಷೀಲ್ಡನ್ನೂ ದಾನಮಾಡಿದ್ದಾರೆ.

ಅವರ ಸೌಂದರ್ಯ ಮಿಮಾಂಸಾ ದೃಷ್ಟಿ ಬಹು ಶ್ಲಾಘ್ಯವಾದುದು. ಪ್ರಪಂಚದ ಯಾವ ಭಾಗದ ಸುಂದರ ವಸ್ತುವನ್ನಾದರೂ ತಮ್ಮ ರಾಜ್ಯಕ್ಕೆ ತಂದು ಅದರ ಉಪಯೋಗವನ್ನು ತಮ್ಮ ಜನಗಳ ಉಪಯೋಗಕ್ಕೆ ಅಳವಡಿಸಬೇಕೆಂಬುದು ಅವರ ಮಹತ್ವಾಕಾಂಕ್ಷೆ. ಅವರ ಯುರೋಪ್ ದೇಶದ ಪ್ರವಾಸ ಕಾಲದಲ್ಲಿ ಅವರು ಪ್ಯಾರಿಸ್ ನಗರದಲ್ಲಿ ಬಹು ಸುಂದರವಾದ ಪ್ಲಾಸ್ಟಿಕ್‌ನಲ್ಲಿ ತಯಾರಾದ ಬೋಜನೋಪಕರಣ ಸಾಮಗ್ರಿಗಳನ್ನು ಕಂಡು ತಕ್ಷಣ ಅದರ ೨೫೦ ಸೆಟ್ಟುಗಳನ್ನು ಕೊಂಡು ಮೈಸೂರಿನ ತಮ್ಮ ಅತಿಥಿಗೃಹದಲ್ಲಿ ಬಳಕೆಗೆ ತಂದರು.

ಮತ್ತೊಂದು ಸಲ ಅವರು ಕಾಶ್ಮೀರಕ್ಕೆ ಹೋಗಿದ್ದಾಗ ಅಲ್ಲಿಯ ಟಾಂಗಾಗಾಡಿ (ಕುದುರೆಗಾಡಿ) ಗಳ ಸೌಲಭ್ಯ ಮತ್ತು ಸೌಂದರ್ಯಗಳಿಗೆ ಮಾರುಹೋಗಿ ಅಲ್ಲಿಂದ ಒಂದು

ನೂರು ಅಂತಹ ಗಾಡಿಯನ್ನು ಮೈಸೂರಿಗೆ ತರಿಸಿ ಚಾಲಕರಿಗೆ ಸುಲಭ ಕಂತುಗಳಲ್ಲಿ ಒವಗಿಸಿಕೊಟ್ಟರು.

ಈ ದೃಷ್ಟಿಯಿಂದಲೇ ಅವರು ತಮ್ಮ ಆವರಣವನ್ನು ಬಹು ಆಕರ್ಷಣೀಯವನ್ನಾಗಿ ಮಾಡಿದರು. ತಮ್ಮ ಊಳಿಗದವರಿಗೆ, ವಾದ್ಯಗಾರರಿಗೆ, ಅಂಗರಕ್ಷಕರಿಗೆ, ಪದಾತಿಬಲಕ್ಕೆ, ಅಶ್ವಾರೋಹಿಗಳಿಗೆ ಗಜಾರೋಹಕರಿಗೆ ಕೊನೆಗೆ ದೇವಸ್ಥಾನದ ಶ್ರೀಪಾದತಾಂಗಿಗಳಿಗೂ ಬಣ್ಣ ಬಣ್ಣದ ಚಿತ್ರ ವಿಚಿತ್ರವಾದ ಸಮವಸ್ತ್ರಗಳನ್ನು ಏರ್ಪಡಿಸಿದ್ದರು. ಅದರ ವೈಭವವನ್ನು ನವರಾತ್ರಿ ಮತ್ತು ದರ್ಬಾರ್ ಹಾಲಿನಲ್ಲಿ ಕಾಣಬಹುದಾಗಿತ್ತು. ಅವರ ವಿಜಯದಶಮಿ ಜಂಬೂಸವಾರಿಯ ಮೆರವಣಿಗೆಯಲ್ಲಿ ಅದರ ಪರಮ ವೈಭವವು ಪ್ರದರ್ಶನವಾಗುತ್ತಿತ್ತು.

ಮಹಾರಾಜರನ್ನು ಶಿಸ್ತಿನ ಅಪರಾವತಾರವೆಂದು ಕರೆಯಬಹುದು. ಕಾಲ ನಿಷ್ಕರ್ಷೆಯನ್ನು ಅವರು ಕಟ್ಟುನಿಟ್ಟಾದವರು. ಅವರು ಒಂದು ನಿಮಿಷವನ್ನೂ ಮೀರುತ್ತಿರಲಿಲ್ಲ. ಸ್ಥಳ ಪರಸ್ಥಳಗಳ ಯಾವ ಉತ್ಸವದಲ್ಲಿ ಅವರು ಭಾಗವಹಿಸಬೇಕಾದರೂ ಪೀಠೋಪಕರಣಗಳು, ನಡೆಮುಡಿ ಮೊದಲಾದ ಸಮಸ್ತ ಪದಾರ್ಥಗಳು ಅರಮನೆಯಿಂದಲೇ ಹೋಗಬೇಕಾಗಿತ್ತು. ರಾಜರಿಗೂ ಸಂದರ್ಭಕ್ಕೂ ಉತ್ಸವಕ್ಕೂ ಅನುಗುಣವಾಗಿ ನಿಷ್ಕರ್ಷಿತವಾದ ಉಡಿಗೆ ತೊಡಿಗೆಗಳು. ಸಭಾಸದರಿಗೂ ಅಷ್ಟೇ ನಿಷ್ಕರ್ಷವಾದ ಉಡುಪು.

ಈ ಸೌಂದರ್ಯದೃಷ್ಟಿಯೇ ಅವರ ನಗರಾಲಂಕರಣ ಕಾರ್ಯಕ್ಕೆ ಪ್ರೇರಕ. ಮೈಸೂರು ಅರಮನೆಯು ವಿದ್ಯುದ್ದೀಪಗಳಿಂದ ಅಲಂಕೃತವಾದುದು ಇವರ ಪ್ರೇರಣೆಯಿಂದಲೇ. ಈ ರೀತಿಯ ವಿದ್ಯುದ್ದೀಪಾಲಂಕರಣವು ಭಾರತದ ಮತ್ತಾವ ಆಶ್ರಿತ ಸಂಸ್ಥಾನಗಳಲ್ಲಿಯೂ ನಡೆದಿರಲಿಲ್ಲ. ಈಗಲೂ ಅದು ಎಲ್ಲ ಪ್ರವಾಸಿಗಳಿಗೂ ಏಕೈಕ ಆಕರ್ಷಕ ವಸ್ತುವೇ ಆಗಿದೆ. ರಾಜರು ನಗರದಲ್ಲಿ ಕರ್ಸನ್ ಪಾರ್ಕ್ ನಿಷಾದ್‌ಬಾಗ್‌ಗಳಂತಹ ಉದ್ಯಾನವನಗಳನ್ನು ನಿರ್ಮಿಸಿ ಮೈಸೂರನ್ನು ಉದ್ಯಾನಗಳ ನಗರ ಎಂಬ ಖ್ಯಾತಿಗೇರಿಸಿದರು.

ಕೃಷ್ಣರಾಜರ ನಿಗ್ರಹಾನುಗ್ರಹಗಳು ಬಹು ಖಚಿತವಾದುದು. ಅದಕ್ಕೆ ಅವರ ಆತ್ಮೀಯ ಬಂಧುಗಳಲ್ಲಿಯಾಗಲಿ ಅಪವಾದವಿರಲಿಲ್ಲ. ಆದುದರಿಂದಲೇ ಅವರು ರಾಜರ್ಷಿಗಳೆಂದೂ ಆದರ್ಶರಾಜರೆಂದೂ ಪರಿಗಣಿತರಾಗಿ ಅವರ ಸಾಹಿತ್ಯ ಮತ್ತು ಕಲಾ ಪ್ರೋತ್ಸಾಹವು ಚಿರಸ್ಮರಣೀಯವಾಗಿ ಮೈಸೂರಿನ ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡಲು ಯೋಗ್ಯವಾಗಿದೆ.



## ಶ್ರೀಯವರು ಮತ್ತು ಪ್ರಬುದ್ಧ ಕರ್ನಾಟಕ

`ಪ್ರಬುದ್ಧ ಕರ್ನಾಟಕ'ವು ೧೯೧೮ರಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳ ತ್ರೈಮಾಸಿಕ ಪತ್ರಿಕೆಯಾಗಿ ಪ್ರಾರಂಭವಾಯಿತು. ಅದರ ಸ್ಥಾಪಕ ಸಂಪಾದಕರಾದ ಎ. ಆರ್. ಕೃಷ್ಣಶಾಸ್ತ್ರಿಗಳು ತಮ್ಮ ಆಪ್ತ ಮಿತ್ರರಾದ ಟಿ. ಎಸ್. ವೆಂಕಣ್ಣಯ್ಯನವರ ಸಹಾಯದಿಂದ ಸವ್ಯಸಾಚಿಯಾಗಿ ೧೩ ವರ್ಷಗಳ ಕಾಲ ಅದನ್ನು ನಡೆಸಿಕೊಂಡು ಬಂದರು. ವಿಶೇಷ ಪ್ರಯತ್ನದಿಂದ ಕನ್ನಡದಲ್ಲಿ ಉದ್ದಾಮ ಲೇಖಕರಾದ ಶ್ರೀಗಳಾದ ಡಿ. ವಿ. ಗುಂಡಪ್ಪ, ಮಾಸ್ತಿ, ವೆಂಕೋಬರಾವ್, ಸಿ. ಕೆ. ವೆಂಕಟರಾಮಯ್ಯ ಮುಂತಾದವರ ಲೇಖನಗಳನ್ನು ಸಂಗ್ರಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿದರು. ಆ ಲೇಖಕ ವರ್ಗದಲ್ಲಿ ಆಚಾರ್ಯ ಬಿ.ಎಂ. ಶ್ರೀಯವರೂ ಒಬ್ಬರು. ಪ್ರಬುದ್ಧ ಕರ್ನಾಟಕದಲ್ಲಿ ಅವರ ಹಲವಾರು ಕೃತಿಗಳು ಪ್ರಕಟವಾಗಿದ್ದು, ಪತ್ರಿಕೆಯ ಗೌರವವನ್ನು ಬಹುಮಟ್ಟಿಗೆ ಹೆಚ್ಚಿಸಿದುವು. ಉತ್ತಮ ಲೇಖನಗಳು ಪ್ರಕಟವಾಗಿ ಪತ್ರಿಕೆ ಕ್ಲ್ಪಪ್ತಕಾಲದಲ್ಲಿ ಹೊರ ಬರುತ್ತಿತ್ತು. ಸಂಪಾದನೆಯ ಕಾರ್ಯ ಬಹು ತೃಪ್ತಿಕರವಾಗಿ ನಡೆಯುತ್ತಿದ್ದರೂ ಪತ್ರಿಕೆಯ ಆರ್ಥಿಕ ಪರಿಸ್ಥಿತಿ ಬಿಗಡಾಯಿಸಿಕೊಂಡು ಬಂದಿತು. ಸಂಪಾದಕರ ಪ್ರಯತ್ನವಾವುದೂ ಫಲಕಾರಿಯಾಗಲಿಲ್ಲ. ತುಂಬ ಕಷ್ಟಪಟ್ಟು ೧೩ ಸಂಪುಟಗಳನ್ನು ಬಹು ತೃಪ್ತಿಕರವಾಗಿ ನಡೆಸಿ ಮುಂದೆ ಪತ್ರಿಕೆಯನ್ನು ಅನಿವಾರ್ಯವಾಗಿ ತಮಗೆ ಇಷ್ಟವಿಲ್ಲದಿದ್ದರೂ ನಿಲ್ಲಿಸಿಬಿಡಲು ಯೋಚಿಸುತ್ತಿದ್ದರು.

೧೯೩೧ರಲ್ಲಿ ಬಿ. ಎಂ. ಶ್ರೀಯವರು ಬೆಂಗಳೂರು ಸೆಂಟ್ರಲ್ ಕಾಲೇಜಿನ ಇಂಗ್ಲೀಷ್ ಪ್ರಾಧ್ಯಾಪಕರಾಗಿ ಹೋಗಿ ಸೇರಿದರು. ಆಗ ಪತ್ರಿಕೆಯು ಕಾಲೇಜಿನ ಪತ್ರಿಕೆಯಾಗಿತ್ತು. ಅದನ್ನು ನಿಲ್ಲಿಸಲು ಅವರಿಗೂ ಇಷ್ಟವಿರಲಿಲ್ಲ. ಅದಕ್ಕಿಂತ ಮೇಲಾಗಿ ವಿಶ್ವವಿದ್ಯಾಲಯದ ಮಟ್ಟದ ಕನ್ನಡ ಪತ್ರಿಕೆಯೊಂದು ಪ್ರಕಟವಾಗುವುದು ಸೂಕ್ತವೆಂದು ಅವರಿಗೂ ಅನಿಸಿತ್ತು. ಆ ಸಂದರ್ಭದಲ್ಲಿ ಎ. ಆರ್. ಕೃ. ಅವರು ಪ್ರಬುದ್ಧ ಕರ್ನಾಟವನ್ನು ವಿಶ್ವವಿದ್ಯಾನಿಲಯವು ವಹಿಸಿಕೊಳ್ಳುವುದು ಸೂಕ್ತವೆಂದೂ ಅದರಿಂದ ಪತ್ರಿಕೆಯ ಮುನ್ನಡೆಯನ್ನು ಸಾಧಿಸುವುದು ಸುಲಭವೆಂದೂ ಸೂಚಿಸಿದರು. ಆಗ ಶ್ರೀಯವರು ಮೈಸೂರು ಮತ್ತು ಬೆಂಗಳೂರು ಕಾಲೇಜುಗಳ ಕರ್ನಾಟಕ ಸಂಘಗಳ ಅಧ್ಯಕ್ಷರಾಗಿದ್ದರು. ಈ ಪತ್ರಿಕೆಯು

ಉಭಯಸಂಘಗಳ ಪತ್ರಿಕೆಯಾಗಿ ವಿಶ್ವವಿದ್ಯಾನಿಲಯದಿಂದಲೇ ಪ್ರಕಟವಾಗುವುದು ಸಾಧುವೂ ಗೌರವವೂ ಎಂದು ನಿಷ್ಕರ್ಷಿಸಿದರು. ತಕ್ಷಣವೇ ಮೈಸೂರು ಸಂಘದ ಮುಖ್ಯಾಧಿಕಾರಿಗಳಾಗಿದ್ದ ವೆಂಕಣ್ಣಯ್ಯನವರನ್ನೂ ಬೆಂಗಳೂರು ಸಂಘದ ಪ್ರಧಾನಾಧಿಕಾರಿಗಳಾಗಿದ್ದ ಎ. ಆರ್. ಕೃಷ್ಣಶಾಸ್ತ್ರಿಗಳನ್ನೂ ಒಟ್ಟುಗೂಡಿಸಿ ಅವರಿಂದ ಈ ಸೂಚನೆಯನ್ನು ಪ್ರಾರ್ಥನಾರೂಪದಲ್ಲಿ ವಿಶ್ವವಿದ್ಯಾನಿಲಯಕ್ಕೆ ಕಳುಹಿಸಿಕೊಟ್ಟರು. ಆಗ ಉಪಕುಲಪತಿಗಳಾಗಿದ್ದವರು ಇ.ಪಿ. ಮೆಟ್‌ಕಾಫ್ ಎಂಬ ಪಾಶ್ಚಾತ್ಯ ಅಧಿಕಾರಿಗಳು. ಅವರು ಸುಲಭವಾಗಿ ಒಪ್ಪಲಿಲ್ಲ. ಅದರ ಖರ್ಚುವೆಚ್ಚಗಳು, ಆಡಳಿತವಿಚಾರ ಮೊದಲಾದ ಅನೇಕ ವಿಷಯಗಳನ್ನು ಕುರಿತು ದೀರ್ಘ ಚರ್ಚೆ ನಡೆಸಿದರು. ಶ್ರೀಯವರು ಅದಕ್ಕೆಲ್ಲ ಸೂಕ್ತ ಸಮಾಧಾನವನ್ನು ಕೊಟ್ಟು ಒಪ್ಪಿಸಿದರು. ವಿಶ್ವವಿದ್ಯಾನಿಲಯದ ಆಡಳಿತಕ್ಕೆ ಬಂದ ಮೇಲೆ ಅಂದರೆ ೧೪ನೆಯ ಸಂಪುಟದಿಂದ (೧೯೩೨ನೆಯ ವರ್ಷದಿಂದ) ಅದರ ಪ್ರಕಟಣೆ, ಯೋಗ್ಯತೆ ಮೊದಲಾದವುಗಳು ಬಹುಮಟ್ಟಿಗೆ ಹೆಚ್ಚಿದೆ. ಅಂದಿನಿಂದ ೧೦ ವರ್ಷಗಳ ಕಾಲ (೧೯೩೨ ರಿಂದ ೧೯೪೨ರವರೆಗೆ) ಬಿ. ಎಂ. ಶ್ರೀಯವರೇ ಪ್ರಧಾನ ಸಂಪಾದಕರಾಗಿಯೂ ಸಂಪಾದಕ ಮಂಡಳಿಯ ಅಧ್ಯಕ್ಷರಾಗಿಯೂ ಪತ್ರಿಕೆಯನ್ನು ನಡೆಸಿದರು. ಇಷ್ಟು ಮಹತ್ವದ ಕೆಲಸ ಯಾವ ಖಾಸಗಿ ಸಂಸ್ಥೆಗೂ ಸಾಧ್ಯವಾಗುತ್ತಿರಲಿಲ್ಲ. ಇವಿಷ್ಟೂ ಸಾಧ್ಯವಾದುದು ಬಿ. ಎಂ. ಶ್ರೀಯವರ ಪ್ರತ್ಯಕ್ಷ ಮತ್ತು ಪರೋಕ್ಷ ವ್ಯವಸಾಯದಿಂದ.



# ಭಾರತ ಭಾರತೀ

ಭಾರತೀಯರ ಪರಮಪೂಜ್ಯವಾದ ಇತಿಹಾಸ ಮಹಾಭಾರತ. ಇದು ಭಾರತೀಯ ಸಂಸ್ಕೃತಿಯ ಮೂಲಸ್ತಂಭ. 'ಛಾಂದೋಗ್ಯ ಉಪನಿಷತ್ತೂ' ಕೌಟಿಲ್ಯನ ಅರ್ಥಶಾಸ್ತ್ರವೂ ಇದನ್ನು ಪಂಚಮವೇದವೆಂದು ಕರೆದಿದೆ. ಇದು ವಾಸ್ತವವಾಗಿ ಪುರಾಣ, ಚರಿತ್ರೆ, ಕಥೆ, ಆಖ್ಯಾನ, ಉಪಾಖ್ಯಾನ, ಧರ್ಮಶಾಸ್ತ್ರ, ಅರ್ಥಶಾಸ್ತ್ರ, ಎಲ್ಲವೂ ಆಗಿದೆ. ಅದರ ಫಲಶ್ರುತಿಯಲ್ಲಿ ಹೇಳಿರುವಂತೆ ಅಲ್ಲಿರುವ ವಿಷಯವು ಇತರೆಡೆಗಳಲ್ಲಿರಬಹುದು. ಅಲ್ಲಿಲ್ಲದ ವಿಷಯ ಮತ್ತೆಲ್ಲಿಯೂ ಇಲ್ಲ - `ಯದಿಹಾಸ್ತಿ ತದನ್ಯತ್ರ, ಯನ್ನೇಹಾಸ್ತಿ ನ ಕುತ್ರ ಚಿತ್'. ಹಾಗೆಯೇ ಅದರ ಮಹತ್ವ ಮತ್ತು ಭಾರವತ್ವದಿಂದ ಅದಕ್ಕೆ ಮಹಾಭಾರತವೆಂಬ ಹೆಸರು ಬಂದಿದೆ. ಕನ್ನಡ ಭಾರತಕಾರನಾದ ಗದಗಿನ ನಾರಣಪ್ಪನು `ಇದು ಅರಸುಗಳಿಗೆ ವೀರ, ದ್ವಿಜರಿಗೆ ಪರಮವೇದದಸಾರ, ಯೋಗೀಶ್ವರರ ತತ್ತ್ವವಿಚಾರ, ಮಂತ್ರೀಜನಕೆ ಬುದ್ಧಿಗುಣ, ವಿರಹಿಗಳ ಶೃಂಗಾರ, ವಿದ್ಯಾಪರಿಣತರಲಂಕಾರ, ಕಾವ್ಯಕ್ಕೆ ಗುರು' ಎಂದಿದ್ದಾನೆ. ತೆಲುಗು ಭಾಷೆಯ ಪ್ರಸಿದ್ಧ ಭಾರತಕರ್ತನಾದ ನನ್ನಯ್ಯನು `ಧರ್ಮತತ್ತ್ವಜ್ಞರು ಇದು ಧರ್ಮ ಶಾಸ್ತ್ರವೆಂದೂ ಆಧ್ಯಾತ್ಮವಿದರು ಇದು ವೇದಾಂತವೆಂದೂ ನೀತಿವೇತ್ತರು ಇದು ನೀತಿಶಾಸ್ತ್ರವೆಂದೂ ಕವೀಶ್ವರರು ಇದು ಮಹಾಕಾವ್ಯವೆಂದೂ ಲಾಕ್ಷಣಿಕರು ಇದು ಸರ್ವಲಕ್ಷ್ಯಸಂಗ್ರಹವೆಂದೂ ಐತಿಹಾಸಿಕರು ಇತಿಹಾಸವೆಂದೂ ಪೌರಾಣಿಕರು ಇದು ಬಹುಪುರಾಣಗಳ ಸಮುಚ್ಚಯವೆಂದೂ ಕೊಂಡಾಡುವ ಹಾಗೆ ಇದು ವಿವಿಧ ತತ್ತ್ವವೇದಿ. ಪರಾಶರರ ಪುತ್ರರೂ ಮುನಿಗಳಲ್ಲಿ ಅಗ್ರಗಣ್ಯರೂ ವಿಷ್ಣುಸಮಾನರೂ ಆದ ವೇದವ್ಯಾಸರು ವಿಶ್ವಜನಗಳಿಗೆ ಹಿತವಾಗುವಂತೆ ಮಹಾಭಾರತವನ್ನು ರಚಿಸಿದ್ದಾರೆ' ಎಂದಿದ್ದಾನೆ. ಸುಪ್ರಸಿದ್ಧ ಸಾಹಿತ್ಯಚರಿತ್ರೆಕಾರನಾದ ವಿಂಟರ್ ನಿಟ್ಸ್ ಇದೊಂದು ಅದ್ಭುತ ಗ್ರಂಥವೆಂದಿದ್ದಾನೆ. ವೇದವಿದ್ವಾಂಸನಾದ ಮ್ಯಾಕ್ಸ್‌ಮುಲರನು ಈ ಗ್ರಂಥವನ್ನು ಜೀರ್ಣಸಿಕೊಳ್ಳುವುದಕ್ಕೆ ಒಂದು ಆಯುಸ್ಸು ಸಾಲದು ಎಂದಿದ್ದಾನೆ. ಅಮೇರಿಕದ ಪ್ರೊ. ಎ. ಆರ್. ಆರೆಂಜ್ ಎಂಬ ವಿದ್ವಾಂಸನ ಮಾತಿದು. `ಸಾಹಿತ್ಯದ ಮೂಲಕ ಸಂಸ್ಕೃತಿಯನ್ನು ಸೃಷ್ಟಿಮಾಡುವ ಪ್ರಯತ್ನಗಳಲ್ಲಿ

ಮಹಾಭಾರತವು ಮಾನವ ಇತಿಹಾಸದಲ್ಲಿಯೇ ಏಕೈಕವೂ ಅತ್ಯಂತ ಮಹತ್ವಪೂರಿತವೂ ಆಗಿದೆ. ಅದನ್ನು ರಚಿಸಿದ ಮಹಾಪುರುಷನ ಮೇಧಾಶಕ್ತಿಯನ್ನು ಅಳೆಯುವುದು ಎಂಥವರಿಗೂ ಸುಲಭವಲ್ಲ. ಅದನ್ನು ಅರಿತುಕೊಳ್ಳಲು ಮಾಡುವ ಪ್ರಯತ್ನವೇ ಉದಾರವಾದ ಒಂದು ಅಭ್ಯಾಸವಾದೀತು. ಅದರ ವಿಷಯಾನುಕ್ರಮಣಿಯ ಪರಿಚಯವೇ ಸಾಕು. ಬಹು ಮಹತ್ವಪೂರಿತವಾದುದು. `ಇಲಿಯಡ್' `ಒಡೆಸ್ಸಿಗಳು' ಅದರ ಉಪಕತೆಗಳಿಗೆ ಸಮಾನ. ಜಗತ್ಪ್ರಸಿದ್ಧವಾದ ಭಗವದ್ಗೀತೆಯು ಅದರಲ್ಲಿ ಬಂದಿರುವ ಅನೇಕ ಯುದ್ಧಗಳಲ್ಲಿ ಒಂದು ಯುದ್ಧದ ಪೂರ್ವಭಾವಿಯಾಗಿ ನಡೆದ ಒಂದು ಸಂಭಾಷಣೆ ಮಾತ್ರ-ನೂರಾರು ಪಾತ್ರಗಳು, ಘಟನೆಗಳ ಮೇಲೆ ಘಟನೆಗಳು - ಅವುಗಳಲ್ಲಿ ಅನಂತ ಕಾಲದ ವ್ಯಾಪ್ತಿ-ಅವನ್ನು ಕೇವಲ ಸಾಹಿತ್ಯವೆಂದು ಕರೆದರೂ ಅದರ ಬೃಹತ್ತು ಮಹತ್ತುಗಳು ಅನ್ಯಾದೃಶವಾದವು. ಅದರಲ್ಲಿನ ಉದಾಹರಣೆಗಳೂ ಉಪದೇಶಗಳೂ ಕಾಲದಷ್ಟು ಅನಂತ ವಿಸ್ತಾರವಾಗಿ ಬೆಳೆದಿದೆ. ಇದರ ಪಠನದಿಂದ ಮಾನವನು ಸತ್ಯಾನುಭವದಿಂದ ಹೇಗೋ ಹಾಗೆ ಬೇರೊಬ್ಬ ವ್ಯಕ್ತಿಯೇ ಆಗಿಹೋಗುತ್ತಾನೆ.'

ಒಂದು ಲಕ್ಷ ಗ್ರಂಥ ಪರಿಮಿತಿಯುಳ್ಳ ಈ ಗ್ರಂಥದಷ್ಟು ಬೃಹತ್ಪ್ರಮಾಣದ ಗ್ರಂಥ ರಚನೆ ಪ್ರಪಂಚದ ಇನ್ನಾವ ಭಾಷೆಯಲ್ಲಿಯೂ ಆಗಿಲ್ಲ. ಇದು ಪ್ರಾಚೀನಭಾರತದ ನಾಗರೀಕತೆಯ ಏಕೈಕ ಪ್ರತೀಕ. ಭರತವಂಶದ ರಾಜರುಗಳಾದ ಕೌರವ ಪಾಂಡವರ ಕತೆ ಇದರ ಪ್ರಧಾನ ವಸ್ತುವಾದರೂ ಇದರಲ್ಲಿ ರಾಜರು, ದೇವತೆಗಳು, ಋಷಿಗಳು ಮೊದಲಾದವರ ವಿವಿಧ ಚರಿತ್ರೆಗಳು ಉಕ್ತವಾಗಿವೆ. ಆನುಷಂಗಿಕವಾಗಿ ವಿಶ್ವಸೃಷ್ಟಿ, ಧರ್ಮ, ಮತ, ದರ್ಶನ, ವರ್ಣಾಶ್ರಮ, ಪುರುಷಾರ್ಥಗಳು-ಮೊದಲಾದುವು ವಿಸ್ತಾರವಾಗಿ ವರ್ಣಿತವಾಗಿವೆ.

೨೧೯೮ ಅಧ್ಯಾಯಗಳಿಂದ ಕೂಡಿದ ಮಹಾಭಾರತದಲ್ಲಿ ಆದಿ, ಸಭಾ, ವನ, ವಿರಾಟ, ಉದ್ಯೋಗ, ಭೀಷ್ಮ, ದ್ರೋಣ, ಕರ್ಣ, ಶಲ್ಯ, ಸೌಪ್ತಿಕ, ಸ್ತ್ರೀ, ಶಾಂತಿ, ಆನುಶಾಸನಿಕ, ಆಶ್ವಮೇಧಿಕ, ಆಶ್ರಮವಾಸಿಕ, ಮೌಸಲ, ಮಹಾಪ್ರಸ್ಥಾನಿಕ, ಸ್ವರ್ಗಾರೋಹಣ ಎಂಬ ೧೮ ಪರ್ವಗಳಿವೆ. ೧೨೦೦೦ ಗ್ರಂಥ ಪರಿಮಿತಿಯುಳ್ಳ ಇದರ ಅನುಬಂಧವಾದ `ಹರಿವಂಶ'ವೂ ಸೇರಿ ಒಂದು ಲಕ್ಷ ಗ್ರಂಥ ಪರಿಮಿತಿಯಿಂದ ಕೂಡಿದೆ. ಇದಕ್ಕೆ `ಶತಸಾಹಸ್ರಿ' ಎಂಬ ಹೆಸರೂ ಉಂಟು.

ಈ ೧೮ ಪರ್ವಗಳಲ್ಲಿ ಕ್ರಮವಾಗಿ ಕೌರವ ಪಾಂಡವರ ಜನನ, ವಿದ್ಯಾಭ್ಯಾಸ, ದ್ರೌಪದೀ ಸ್ವಯಂವರ, ಅಕ್ಷಕ್ರೀಡೆ, ದ್ರೌಪದೀವಸ್ತ್ರಾಪಹರಣ, ಭೀಮಸೇನನ ಊರುಭಂಗ ಪ್ರತಿಜ್ಞೆ, ಪಾಂಡವರ ಅರಣ್ಯವಾಸ, ಅರ್ಜುನನಿಂದ ಪಾಶುಪತಾಸ್ತ್ರ ಸಂಪಾದನೆ, ಪಾಂಡವರ ಅಜ್ಞಾತವಾಸ, ಉತ್ತರಗೋಗ್ರಹಣ, ಕೃಷ್ಣದೌತ್ಯ, ಉಭಯ ಪಕ್ಷಗಳ ಯುದ್ಧಸನ್ನದ್ಧತೆ, ಭಗವದ್ಗೀತೋಪದೇಶ, ಭೀಷ್ಮ ರಸೇನಾಪತ್ಯಾಭಿಷೇಕ, ಯುದ್ಧ ಮತ್ತು ಪತನ,

ದ್ರೋಣಾಚಾರ್ಯರ ಯುದ್ಧ, ಪದ್ಮವ್ಯೂಹರಚನೆ, ಅಭಿಮನ್ಯು ಮರಣ, ದ್ರೋಣಾವಸಾನ, ಕರ್ಣಸೇನಾಧಿಪತ್ಯ, ಕರ್ಣಾರ್ಜುನರ ಕಾಳಗ ಮತ್ತು ಕರ್ಣನ ಮರಣ, ಶಲ್ಯಯುದ್ಧ ಮತ್ತು ಸಾವು, ಭೀಮ ದುರ್ಯೋಧನರ ಗದಾಯುದ್ಧ ಮತ್ತು ದುರ್ಯೋಧನನ ಊರುಭಂಗ-ಅಂತ್ಯ, ಉಪಪಾಂಡವರ ನಾಶ, ಕೌರವಸ್ತ್ರೀ ಪ್ರಲಾಪ, ಧರ್ಮರಾಜ ಪಟ್ಟಾಭಿಷೇಕ, ಭೀಷ್ಮರಿಂದ ಯುಧಿಷ್ಠಿರನಿಗೆ ಧರ್ಮೋಪದೇಶ, ಭೀಷ್ಮಾವಸಾನ, ಯುಧಿಷ್ಠಿರನ ಅಶ್ವಮೇಧಯಾಗ, ಧೃತರಾಷ್ಟ್ರನ ವಾನಪ್ರಸ್ಥಾಭಿಗಮನ ಮತ್ತು ಮರಣ, ಕೃಷ್ಣ ಬಲರಾಮರ ಅಂತ್ಯ; ಯಾದವೀಕಲಹ ಮತ್ತು ನಾಶ, ಪಾಂಡವರ ರಾಜ್ಯತ್ಯಾಗ, ದ್ರೌಪದೀ ಸಹಿತ ಸ್ವರ್ಗಾರೋಹಣ ಮೊದಲಾದುವುಗಳು ವಿಸ್ತಾರವಾಗಿ ವರ್ಣಿತವಾಗಿವೆ.

'ಹರಿವಂಶ' ಸಹಿತವಾದ ಭಾರತವನ್ನು ವೇದವ್ಯಾಸರೇ ಪಾಂಡವರು ಜೀವಂತರಾಗಿರುವಾಗಲೇ ದ್ವಾಪರಯುಗಾಂತ್ಯದಲ್ಲಿ (ಅಂದರೆ ಕ್ರಿ. ಪೂ. ૩೧೦೨ ರಲ್ಲಿ ಆದಿಯಾದ ಕಲಿಯುಗಕ್ಕೆ ೩೦ ವರ್ಷಗಳ ಹಿಂದೆ) ರಚಿಸಿದರೆಂಬುದು ಸಂಪ್ರದಾಯಾಭಿಪ್ರಾಯ.

ಆದರೆ ಒಂದು ನೂರು ವರ್ಷದ ಪೌರಸ್ತ್ಯ ಪಾಶ್ಚಾತ್ಯ ವಿದ್ವಾಂಸರ ಸಂಶೋಧನೆಯ ಫಲವಾಗಿ ಮಹಾಭಾರತವು ಏಕಕರ್ತೃಕವಲ್ಲವೆಂದೂ ಏಕಕಾಲಿಕವಲ್ಲವೆಂದೂ ನಿಶ್ಚಿತವಾಗಿದೆ. ಕಾಲಕಾಲಕ್ಕೆ ಮೂಲವಸ್ತುವಿನೊಡನೆ ಅನೇಕ ಪ್ರಕ್ಷಿಪ್ತಗಳು ಸೇರಿಕೊಂಡು ವಿಸ್ತಾರವಾಗಿ ಬೆಳೆದಿದೆ. ಈಗಿನ ಬಹುಮತದ ಪ್ರಕಾರ ಅದು ಕ್ರಿ. ಪೂ. ೪೦೦ ನೆಯ ವರ್ಷದಿಂದ ಕ್ರಿ.ಶ. ೪೦೦ನೆಯ ವರ್ಷದವರೆಗೆ (ಸುಮಾರು ೮೦೦ ವರ್ಷಗಳ ಕಾಲದಲ್ಲಿ) ಬೆಳೆದು ಈಗಿನ ಆಕಾರವನ್ನು ತಳೆದಿದೆ ಎಂದು ಹೇಳಬಹುದು. ಮೂಲವಸ್ತುವಿನೊಡನೆ ಲೆಕ್ಕವಿಲ್ಲದಷ್ಟು ಕಾವ್ಯೇತರ ವಿಷಯಗಳು ನೆಯ್ದುಕೊಂಡಿವೆ. ಭಿನ್ನ ಭಿನ್ನ ಕಾಲದ ವಿಚಾರ ಪರಂಪರೆಗಳೂ ಸಂಪ್ರದಾಯಗಳೂ ಸೇರಿಕೊಂಡಿವೆ. ಮೂಲ ಮತ್ತು ಪ್ರಕ್ಷೇಪಗಳನ್ನು ಬೇರ್ಪಡಿಸಲಾಗುವುದಿಲ್ಲ, ಅದು ಒಂದು ಪ್ರಾಚೀನ ಭಾರತೀಯ ವಿಶ್ವಕೋಶ, ಸಕಲವಿದ್ಯಾಸಾರ ಸಂಗ್ರಹ, ಚರಿತ್ರೆ, ಭೂಗೋಳ, ವೇದಾಂತ, ತತ್ವ, ನೀತಿ ಸಮಾಜಶಾಸ್ತ್ರ, ವಿಜ್ಞಾನ, ರಾಜನೀತಿ, ಧರ್ಮ, ಕಥೆ ಇತ್ಯಾದಿ- ಅದರಲ್ಲಿ ಅಡಕವಾಗದ ವಿಷಯವೇ ಇಲ್ಲ. ಕಾವ್ಯದೃಷ್ಟಿಯಿಂದ ಅದು ಒಂದು ಕಾವ್ಯಮಂಜರಿ. ಅದರಲ್ಲಿ ಬರುವ ಒಂದೊಂದು ಉಪಾಖ್ಯಾನಗಳೂ ಒಂದೊಂದು ಸ್ವತಂತ್ರ ಕಾವ್ಯವೇ.

ಈ ಬೃಹದ್ಗ್ರಂಥವು ಜಯ, ಭಾರತ, ಮತ್ತು ಮಹಾಭಾರತ ಎಂಬ ಮೂರು ಹಂತಗಳಲ್ಲಿ ಬೆಳೆದಿದೆ. ಅವುಗಳು ಕ್ರಮವಾಗಿ ೮೮೦೦, ೨೪೦೦೦ ಮತ್ತು ಒಂದು ಲಕ್ಷ ಗ್ರಂಥ ಪರಿಮಿತಿಗಳುಳ್ಳದ್ದಾಗಿರಬೇಕು. ಆದುದರಿಂದ ಅದು ಏಕಕರ್ತೃಕವೂ ಅಲ್ಲ; ಏಕ ಕಾಲಿಕವೂ ಅಲ್ಲ. ಅದು ಒಂದು ಗ್ರಂಥವೂ ಅಲ್ಲ, ಒಂದು ಸಂಪೂರ್ಣ ಸಾಹಿತ್ಯ, ಬಹು ದೀರ್ಘಕಾಲಕ್ಕೆ ಸೇರಿದುದು. ಪುರಾಣ ದೃಷ್ಟಿಯಿಂದಲೂ ಅದು ವಿಸ್ತೃತ ದೃಷ್ಟಿಯಿಂದ ಅನ್ವಯಿಸತಕ್ಕುದು.

ದಾರ್ಶನಿಕ ದೃಷ್ಟಿಯಿಂದ ಬಹು ಮುಖ್ಯವಾದ ಭಾಗ ಅದರಲ್ಲಿ ಅಂತರ್ಗತವಾಗಿರುವ ಭಗವದ್ಗೀತೆ. ಅದು ಭೀಷ್ಮಪರ್ವದ ಒಂದು ಭಾಗ. ಕಳೆದ ನೂರೈವತ್ತು ವರ್ಷಗಳಿಂದ ಅದು ಭಾರತೀಯರಿಂದಲೂ ಇತರರಿಂದಲೂ ಅನೇಕ ಸಲ ಅಭ್ಯಸ್ತವಾಗಿ ಮುದ್ರಿತವಾಗಿ, ವ್ಯಾಖ್ಯಾನಿತವಾಗಿ, ವಿಮರ್ಶಿತವಾಗಿ, ಭಾಷಾಂತರಿತವಾಗಿ, ಉಪನ್ಯಸ್ತವಾಗಿ ಭಾರತೀಯರ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿದೆ. ಕೃಷ್ಣಪರಮಾತ್ಮನಿಂದ ಉಪದಿಷ್ಟವಾಗಿದೆ. ಇದರಲ್ಲಿ ೧೮ ಅಧ್ಯಾಯಗಳಿವೆ. ಭಾಗವತಧರ್ಮದ, ಪ್ರಪ್ರಾಚೀನವಾದ ಪ್ರತಿಪಾದನೆ ಇದರಲ್ಲಿದೆ. ಇದಕ್ಕೆ ಅನೇಕ ವ್ಯಾಖ್ಯಾನಗಳಿವೆ.

ಭಾರತದ ಅನುಬಂಧವಾದ `ಹರಿವಂಶ'ವು ಮೂರು ಪರ್ವಗಳುಳ್ಳ ವೈಷ್ಣವ ಪಾರಮ್ಯವನ್ನು ನಿರೂಪಿಸುವ ಗ್ರಂಥ. ಇದರಲ್ಲಿ ಕೃಷ್ಣನ ಅದ್ಭುತಚರಿತ್ರೆ ಮತ್ತು ಪ್ರೇಮಲೀಲೆಗಳ ವರ್ಣನೆಯಿದೆ.

ಭಾರತವೆಂಬ ಹೆಸರಿನಿಂದ ಅದು ಭರತವಂಶದವರಾದ ಧರ್ಮರಾಜಾದಿಗಳು ಅದರ ನಾಯಕರೆಂದು ಸ್ಥೂಲವಾಗಿ ಹೇಳಬಹುದಾದರೂ, ಮಹಾಭಾರತದ ನಿಜವಾದ ನಾಯಕ ಶ್ರೀಕೃಷ್ಣ. ಅವನೇ ಮಹಾಭಾರತದ ಎಲ್ಲ ಕಾರ್ಯಗಳಿಗೂ ಸೂತ್ರಧಾರ-ಪ್ರೇರಕಶಕ್ತಿ. ಅವನ ಸಂದೇಶ, ಅವನ ಕಾರ್ಯ, ಅವನ ಬುದ್ಧಿಚಾತುರ್ಯ, ಅವನ ಧ್ಯೇಯ ಸಾಧನೆಗಳ ವರ್ಣನಾರೂಪವಾದ ಮಹಾಕಾವ್ಯವೇ ಮಹಾಭಾರತ. ಭೂತ ಭವಿಷ್ಯತ್ತುಗಳ ಸಮನ್ವಯಾಚಾರ್ಯನವನು. ದುಷ್ಟಶಿಕ್ಷಣ ಶಿಷ್ಟರಕ್ಷಣದ್ವಾರಾ ಶಾಂತಿಪ್ರಧಾನವಾದ ಮೋಕ್ಷ ಸಾಧನೋಪಾಯವನ್ನು ಜಗತ್ತಿಗೆ ಉಪದೇಶಿಸುವುದೇ ಅವನ ಪರಮಧ್ಯೇಯ.

ಇಂತಹ ಸರ್ವ ವಿಷಯಸಂಗ್ರಹವಾದ ಭಾರತ ತೀರ್ಥದಲ್ಲಿ ಮಿಂದು ಪುನೀತರಾದವರು ಬಹುಮಂದಿ. ಭಾರತದ ಪೂರ್ಣವಸ್ತು, ಭಾಗ, ಉಪಾಖ್ಯಾನ, ಮೊದಲಾದವುಗಳ ಆಧಾರದ ಮೇಲೆ ಮುಂದಿನ ಅನೇಕ ಕವಿಗಳು ಉದ್ದಾಮ ಗ್ರಂಥಗಳನ್ನು ರಚಿಸಿದ್ದಾರೆ. ಅವರಲ್ಲಿ ಕಾವ್ಯಗಳನ್ನು ರಚಿಸಿದ ಮಾಘ (ಶಿಶುಪಾಲವಧ) ಭಾರವಿ (ಕಿರಾತಾರ್ಜುನೀಯ) ವಾಮನಭಟ್ಟ ಬಾಣ (ನಳಾಭ್ಯುದಯ) ಅಗಸ್ತ್ಯ (ಬಾಲಭಾರತ) ಕ್ಷೇಮೇಂದ್ರ (ಭಾರತಮಂಜರಿ) ಚಿದಂಬರ (ರಾಘವಪಾಂಡವೀಯ) ಮೊದಲಾದವರನ್ನೂ ನಾಟಕಗಳನ್ನು ರಚಿಸಿದ ಭಾಸ (ಪಂಚರಾತ್ರ, ಮಧ್ಯಮ ವ್ಯಾಯೋಗ, ಕರ್ಣಭಾರ, ಧೂತವಾಕ್ಯ, ಊರುಭಂಗ) ಕಾಳಿದಾಸ (ಶಾಕುಂತಲ) ಭಟ್ಟ ನಾರಾಯಣ (ವೇಣೀಸಂಹಾರ) ರಾಜಶೇಖರ (ಬಾಲಭಾರತ) ಕ್ಷೇಮೇಶ್ವರ (ನೈಷಧಾನಂದ) ಮೊದಲಾದವರನ್ನೂ ಚಂಪೂಕರ್ತೃಗಳಾದ ತ್ರಿವಿಕ್ರಮಭಟ್ಟ (ನಳಚಂಪು) ಅನಂತಭಟ್ಟ. ಚಂದ್ರಚೂಡಾಮಣಿ ದೀಕ್ಷಿತ (ಭಾರತ ಚಂಪು) ಮೊದಲಾದವರನ್ನು ಹೆಸರಿಸಬಹುದು.

ಮಹಾಭಾರತಕ್ಕೆ ಅನೇಕರು ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಅವರಲ್ಲಿ ಆನಂದ ತೀರ್ಥ, ಸರ್ವಜ್ಞನಾರಾಯಣ, ಅರ್ಜುನಮಿಶ್ರ, ನೀಲಕಂಠ ಇವರು ಪ್ರಸಿದ್ಧರು.

ಭಾರತೀಯ ದೇಶಭಾಷೆಗಳಲ್ಲಿ ಭಾರತಕ್ಕೆ ಸಂಬಂಧಪಟ್ಟ ಕೃತಿಗಳು ಅಸಂಖ್ಯಾತವಿವೆ. ಅವುಗಳಲ್ಲಿ ಅನೇಕವು ಮೂಲದ ಭಾಷಾಂತರಗಳು. ಕೆಲವು ಸಂಗ್ರಹಗಳು, ಹಲವು ಅಳವಡಿಕೆಗಳು, ಮತ್ತೆ ಕೆಲವು ನಾಟಕಗಳು. ಇನ್ನೂ ಕೆಲವು ರೂಪಾಂತರಗಳು, ಬಹು-ಸಂಖ್ಯಾತವು ವಿಮರ್ಶೆಗಳು. ಕೆಲವು ಪದ್ಯರೂಪದಲ್ಲಿವೆ, ಕೆಲವು ಗದ್ಯ ರೂಪದಲ್ಲಿವೆ. ಕ್ರಿ.ಶ.ದ ಆದಿಯಿಂದ ಪ್ರಸಕ್ತ ಕಾಲದವರೆಗೆ ಭಿನ್ನ ಭಿನ್ನವಾದ ರೀತಿಯಲ್ಲಿ ರಚಿತವಾಗಿವೆ. ಅವುಗಳನ್ನೆಲ್ಲ ಹೆಸರಿಸುವುದೂ ಅಸಾಧ್ಯವಾದ ಕೆಲಸ. ಆದುದರಿಂದ ಅವುಗಳಲ್ಲಿ ಚಿರಪರಿಚಿತವಾದ ಕೆಲವನ್ನು ಮಾತ್ರ ಕಿರುಪರಿಚಯದೊಡನೆ ಹೆಸರಿಸಲು ಮುಂದೆ ಪ್ರಯತ್ನ ಪಟ್ಟಿದೆ.

ಭಾರತಕಥೆಯನ್ನು ತಮ್ಮ ಧರ್ಮಕ್ಕನುಗುಣವಾಗಿ ಮೊದಲು ಅಳವಡಿಸಿಕೊಂಡವರು ಜೈನರು. ಆದಿಕಾಲದ ಇವರ ಗ್ರಂಥಗಳು ಪ್ರಾಕೃತ, ಅಪಭ್ರಂಶ ಮತ್ತು ಸಂಸ್ಕೃತ ಭಾಷೆಗಳಲ್ಲಿರುತ್ತವೆ. ವೈದಿಕ ಸಂಪ್ರದಾಯದ ಭಾರತಕಥೆಯು ಜೈನಸಂಪ್ರದಾಯದಲ್ಲಿ ರೂಪಾಂತರಗೊಂಡಿದೆಯೆಂಬುದನ್ನು ತಿಳಿಯಲು ಜೈನರ ೨೨ನೆಯ ತೀರ್ಥಂಕರನಾದ ನೇಮಿಜಿನೇಶನಿಗೆ ಸಂಬಂಧಿಸಿದ ಗ್ರಂಥಗಳನ್ನು ಆಶ್ರಯಿಸಬೇಕು. ಜೈನರು ಹರಿವಂಶ ಕುರುವಂಶಗಳ ಕಥೆಯನ್ನು ನೇಮಿಜಿನೇಶನ ಕಥೆಯೊಡನೆ ಸಮನ್ವಯಗೊಳಿಸಿ ನಿರೂಪಿಸಿದ್ದಾರೆ. ಈ ಕಥೆಯು ಸಾಮಾನ್ಯವಾಗಿ ಹರಿವಂಶಪುರಾಣ ಮತ್ತು ಮಹಾಪುರಾಣಗಳಲ್ಲಿ ಸಿಕ್ಕುತ್ತದೆ. ಇವುಗಳು ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳಲ್ಲಿವೆ. ಇವುಗಳಿಗೆ ವೈದಿಕ ಸಂಪ್ರದಾಯದ ಭಾಗವತ ಭಾರತಗಳೇ ಮೂಲ. ಈ ಕಥೆಯನ್ನು ಜೈನರು ತಮ್ಮ ಧರ್ಮದ ಆಯಕಟ್ಟಿನಲ್ಲಿ ಅಳವಡಿಸಿಕೊಂಡು ಭಾರತಕ್ಕೆ ಒಂದು ಹೊಸರೂಪವನ್ನು ಕೊಟ್ಟಿದ್ದಾರೆ. ಜೈನರ ಆದಿಕಾಲದ ಕೂಚಿಭಟ್ಟಾರಕ, ನಂದಿಮುನಿ, ಕವಿಪರಮೇಷ್ಠಿಗಳ `ಹರಿವಂಶ'ಗಳು ಉಪಲಬ್ಧವಲ್ಲ. ಮಹಾಪುರಾಣಗಳಲ್ಲಿ ನೇಮಿನಾಥಭಟ್ಟಾರಕರ ಕತೆಯ ಅಂಗವಾಗಿ ಕುರುವಂಶದ ಕಥೆಯು ಬರುತ್ತದೆ. ಪ್ರಾಕೃತ ಭಾಷೆಯಲ್ಲಿ ಶೀಲಾಂಕ (ಚಪ್ಪನ್ನ ಮಹಾಪುರುಷ ಚರಿಯು) ಮತ್ತು ಪುಷ್ಪದಂತ (ಮಹಾಪುರಾಣ) ರನ್ನು ಹೆಸರಿಸಬಹುದು. ಹೇಮಚಂದ್ರನೂ ಒಂದು 'ಮಹಾಪುರಾಣ'ವನ್ನು ರಚಿಸಿದ್ದಾನೆ. ಸಂಸ್ಕೃತದಲ್ಲಿ ಜಿನಸೇನ (ಹರಿವಂಶ) ಗುಣಭದ್ರ ( ಉತ್ತರ ಪುರಾಣ)ರ ಕೃತಿಗಳನ್ನು ಸೂಚಿಸಬಹುದು. ಅಪಭ್ರಂಶದಲ್ಲಿ ಚತುರ್ಮುಖ ಸ್ವಯಂಭುವಿನ (ರಿಠ್ಠನೇಮಿಚರಿಯು) ಉಪಲಬ್ಧವಾಗಿದೆ. ಇದುವರೆಗೆ ಸುಮಾರು ೩೫ ನೇಮಿನಾಥಪುರಾಣಗಳು ಸಿಕ್ಕಿವೆ. ಅವುಗಳಲ್ಲೆಲ್ಲ ಕುರುವಂಶದ ಕಥೆಯಿದೆ. ಇವಲ್ಲದೆ ಜೈನಸಂಪ್ರದಾಯಕ್ಕೆ ಸೇರಿದ ಪ್ರತ್ಯೇಕವಾದ ಕುರುವಂಶಗಳ ಕತೆಯಿವೆ. ಅವುಗಳಿಗೆ ಪಾಂಡವಕತೆಯೆಂದು ಹೆಸರು. ಇಂತಹ ಕಥೆಯನ್ನು ಬರೆದವರಲ್ಲಿ ವಿಜಯಗಣಿ ದೇವಪ್ರಭಾಸೂರಿಗಳು ಮುಖ್ಯರಾದವರು. ಜೈನಸಂಪ್ರದಾಯದ ಕುರುವಂಶಕಥೆಗಳಲ್ಲೆಲ್ಲ ಕಥಾಶರೀರ, ಪಾತ್ರರಚನೆ, ಧ್ಯೇಯಧೋರಣೆಗಳು ವ್ಯಾಸಭಾರತಕ್ಕಿಂತ ಬಹುಮಟ್ಟಿಗೆ ಭಿನ್ನವಾಗಿರುತ್ತವೆ.

ತಮಿಳು ಭಾಷೆಯಲ್ಲಿ ೧೧ನೆಯ ಶತಮಾನದಲ್ಲಿ ರಚಿತವಾದ ಪೆರುಂದೇವನಾರ್ ಅವರ ತಮಿಳು ಮಹಾಭಾರತವೂ ೧೬ನೆಯ ಶತಮಾನದಲ್ಲಿ ರಚಿತವಾದ ವಿಲ್ಲಿಪುತ್ತೂರರ ಭಾರತವೂ ಪ್ರಸಿದ್ಧವಾಗಿವೆ. ವಿಲ್ಲಿಪುತ್ತೂರರ ಭಾರತವು ಬಹು ರಸವತ್ತಾಗಿದೆ. ಈಗ ತಮಿಳಿನಲ್ಲಿರುವ ಭಾರತಗಳಲ್ಲೆಲ್ಲಾ ಶ್ರೇಷ್ಠವಾಗಿದೆ. ಶೈಲಿಯು ಆಕರ್ಷಕವಾಗಿದೆ. ಮೂಲವನ್ನು ಬಹುಮಟ್ಟಿಗೆ ಅನುಸರಿಸುತ್ತದೆ. ತಮಿಳು ಮತ್ತು ಸಂಸ್ಕೃತ ಶಬ್ದಗಳು ಬಹು ಸಮಂಜಸವಾಗಿ ಹೊಂದಿಕೊಂಡಿವೆ. ೨೦ನೆಯ ಶತಮಾನದಲ್ಲಿ ಜಾಫ್ನದ ಆರ್ಮುಗಂ ನಾವಲಾರರು ಸರಳ ಗದ್ಯದಲ್ಲಿ ಭಾರತವನ್ನು ರಚಿಸಿದ್ದಾರೆ.

ಕನ್ನಡದಲ್ಲಿ ಕುಮಾರವ್ಯಾಸನು `ತಿಣಿಕಿದನು ಫಣಿರಾಯ ರಾಮಾಯಣದ ಕತೆಗಳ ಭಾರದಲಿ, ಕಾಲಿಡಲು ತೆರಪಿಲ್ಲ' ಎಂದು ಹೇಳಿದ್ದರೂ ಭಾರತದ ಕೃತಿ ಕೊರತೆಯೇನಿಲ್ಲ. ಇಲ್ಲಿ ಜೈನ ಮತ್ತು ವೈದಿಕ ಸಂಪ್ರದಾಯಗಳ ಭಾರತ ಕೃತಿಗಳೂ ಉಪಲಬ್ಧವಾಗಿವೆ. ಕನ್ನಡದ ಮೊದಲನೆಯ ಕೃತಿಯೇ (ಉಪಲಬ್ಧವಲ್ಲದಿದ್ದರೂ) ಒಂದನೆಯ ಗುಣವರ್ಮನ `ಹರಿವಂಶ'. ಈತನು ಹತ್ತನೆಯ ಶತಮಾನದ ಆದಿಯಲ್ಲಿದ್ದಿರಬೇಕು. ಶತಮಾನಾಂತ್ಯದಲ್ಲಿ ಚಾವುಂಡರಾಯನು ತನ್ನ `ತ್ರಿಷಷ್ಠಿಶಲಾಕಾಪುರುಷಪುರಾಣಾಂತ'ರ್ಗತವಾದ ನೇಮಿಭಟ್ಟಾರಕರ ಕತೆಯಲ್ಲಿ ಕುರುವಂಶದ ಕಥೆಯನ್ನು ನಿರೂಪಿಸಿದ್ದಾನೆ. ಮುಂದೆ ೧೩ನೆಯ ಶತಮಾನದಲ್ಲಿ ಕರ್ಣಪಾರ್ಯ ಮತ್ತು ನೇಮಿಚಂದ್ರರು ನಮ್ಮ `ನೇಮಿನಾಥಪುರಾಣ'ಗಳನ್ನು ರಚಿಸಿದ್ದಾರೆ. ಸಾಳುವನ ಭಾರತವೂ ಈ ಸಂಪ್ರದಾಯಕ್ಕೆ ಸೇರಿದುದು.

ಹತ್ತನೆಯ ಶತಮಾನದ ಮಧ್ಯದಲ್ಲಿ ಪಂಪನು 'ವಿಕ್ರಮಾರ್ಜುನ ವಿಜಯ' ಅಥವಾ `ಪಂಪಭಾರತ'ವನ್ನು ರಚಿಸಿದನು. ಅವನು ತನ್ನ ಗ್ರಂಥದಲ್ಲಿ 'ವ್ಯಾಸಮುನೀಂದ್ರರುಂದ್ರ ವಚನಾಮೃತವಾರ್ಧಿಯನೀಸುವೆಂ' ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಇದು ಆ ಸಂಪ್ರದಾಯದ್ದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. `ಸಮಸ್ತ ಭಾರತಮನಪೂರ್ವತರಮಾಗಿ ಪೇಳ್ದ ಕವಿಗಳಿಲ್ಲ' ಎಂದಿರುವುದರಿಂದ ಅವನ ಹಿಂದೆ ಇತರ ಭಾರತಗಳೂ ಇದ್ದಿರಬೇಕು. `ಕವಿವ್ಯಾಸನೆಂಬ ಗರ್ವಮೆನಗಿಲ್ಲ' ಎಂಬ ವಾಕ್ಯದಿಂದ ಅವನ ಹಿಂದೆ ಕವಿವ್ಯಾಸನೆಂಬುವನೂ ಒಂದು ಭಾರತವನ್ನು ರಚಿಸಿದ್ದಿರಬೇಕು. ಆದರೆ ಅವುಗಳ ಸ್ವರೂಪ ಮಾತ್ರ ತಿಳಿಯದು. ಪಂಪನ ಕೃತಿರಚನಾ ದೃಷ್ಟಿ ಮಾತ್ರ ಲೌಕಿಕ. ತನ್ನ ಆಶ್ರಯದಾತನಾದ ಅರಿಕೇಸರಿಯ ವೈಭವ ಪ್ರಚಾರ ಅದರ ಪ್ರಧಾನ ದೃಷ್ಟಿ. ಕಥೆಯ ಸಾಮಾನ್ಯ ರೀತಿ ವೈದಿಕ ಸಂಪ್ರದಾಯದ್ದೇ ಆದರೂ ಜೈನ ಪ್ರಭಾವವಿಲ್ಲದೇ ಇಲ್ಲ. `ಪಂಪ ಭಾರತ' ಮೊದಲ ಹತ್ತು ಪರ್ವದ ಕತೆಯನ್ನು ಮಾತ್ರ ಒಳಗೊಂಡಿದೆ.

ಪಂಪನನ್ನನುಸರಿಸಿ ಶತಮಾನಾಂತ್ಯದಲ್ಲಿ ರನ್ನನು ಭಾರತದ ಒಂದು ಭಾಗವಾದ ಭೀಮ ದುರ್ಯೋಧನರ ಗದಾಯುದ್ಧದ ವಸ್ತುವನ್ನುಳ್ಳ `ಸಾಹಸಭೀಮವಿಜಯ'ವನ್ನು ರಚಿಸಿದನು. ಮೂಲ ವ್ಯಾಸಭಾರತದ ನಾಯಕ ಧರ್ಮರಾಜ, ಪಂಪನ ನಾಯಕ ಅರ್ಜುನ, ರನ್ನನ ನಾಯಕ, ಸಾಹಸ ಭೀಮ.

ಹದಿನೈದನೆಯ ಶತಮಾನದಲ್ಲಿ, ಗದುಗಿನ ನಾರಣಪ್ಪನು (ಕುಮಾರವ್ಯಾಸ) ತನ್ನ ಕರ್ಣಾಟಕ ಭಾರತಮಂಜರಿ'ಯನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸಿದನು. ಅವನೇ ಹೇಳಿಕೊಂಡಿರುವಂತೆ ಅದು ಕೃಷ್ಣಚರಿತೆ, ಅವನೇ ಅದರ ನಾಯಕ. ಇದು ಕನ್ನಡದಲ್ಲಿ-ಬಹುಜನಪ್ರಿಯವಾದ ಭಾರತ. ಇದರಲ್ಲಿಯೂ ಹತ್ತು ಪರ್ವಗಳ ಕಥೆಯು ಮಾತ್ರ ವರ್ಣಿತವಾಗಿದೆ. ಉಳಿದ ೮ ಪರ್ವಗಳನ್ನು ವಿಜಯನಗರದ ಕೃಷ್ಣದೇವರಾಯನ ಆಶ್ರಯದಲ್ಲಿದ್ದ ತಿಮ್ಮಣ್ಣ ಕವಿಯು ರಚಿಸಿದ್ದಾನೆ. ೧೭ನೆಯ ಶತಮಾನದಲ್ಲಿ ಲಕ್ಷ್ಮೀಶನು ಜೈಮಿನಿ ಭಾರತವನ್ನು ರಚಿಸಿದನು.

ಮುಂದೆ ಚಿಕ್ಕದೇವರಾಜ (ಶಾಂತಿಪರ್ವ ಮಾತ್ರ) ಚಿಕ್ಕಭೂಪಾಲ (ಭಾರತ ಕಥಾ ಸಂಗ್ರಹ) ಮುಮ್ಮಡಿಕೃಷ್ಣರಾಜ (೧೯ನೆಯ ಶತಮಾನದ ಆದಿಭಾಗ) ದೇವಶಿಖಾಮಣಿ ಅಳಸಿಂಗರಾಚಾರ್ಯ (೨೦ನೆಯ ಶತಮಾನದ ಪೂರ್ವಾರ್ಧ) ಎ. ಆರ್. ಕೃಷ್ಣಶಾಸ್ತ್ರಿ ಮೊದಲಾದವರು ಭಾರತದ ಗದ್ಯಾನುವಾದಗಳನ್ನು ರಚಿಸಿದ್ದಾರೆ. ಕೃಷ್ಣರಾಜಒಡೆಯರ ಭಾರತಕ್ಕೆ 'ವಾಣೀವಿಲಾಸಭಾರತ'ವೆಂದು ಹೆಸರು ಕೃಷ್ಣಶಾಸ್ತ್ರಿಗಳ ಭಾರತಕ್ಕೆ 'ವಚನ ಭಾರತ'ವೆಂದು ಹೆಸರು. ಈಗ ಬೆಂಗಳೂರಿನ ಭಾರತ ಪ್ರಕಾಶನ ಸಮಿತಿಯವರು ಮೂಲ ವ್ಯಾಸಭಾರತದ ಗದ್ಯಾನುವಾದವನ್ನು (ಟಿಪ್ಪಣಿಯೊಡನೆ) ಭಾಷಾಂತರಿಸುತ್ತಿದ್ದಾರೆ. ಕೃಷ್ಣರಾಜ, ಅಳಹಿಯ ಸಿಂಗರಾಚಾರ್ಯ ಮತ್ತು ಭಾರತ ಪ್ರಕಾಶನ ಇವರದು ಸಂಪೂರ್ಣ ವ್ಯಾಸಭಾರತದ ಗದ್ಯಾನುವಾದ.

ತೆಲುಗುಭಾಷೆಯ ಸಾಹಿತ್ಯಚರಿತ್ರೆ ಪ್ರಾರಂಭವಾದುದೇ ಭಾರತದ ಭಾಷಾಂತರದಿಂದ. ಈ ಕಾರ್ಯವು ಕ್ರಿ. ಶ. ೧೧ನೆಯ ಶತಮಾನದಿಂದ ೧೪ನೆಯ ಶತಮಾನದ ಮಧ್ಯಭಾಗದವರೆಗೆ ನಡೆಯಿತು. ನನ್ನಯ್ಯನೇ ಇದರ ಪ್ರಥಮಪ್ರವರ್ತಕ. ರಾಜರಾಜ ನರೇಂದ್ರನ ಕೋರಿಕೆಯ ಮೇಲೆ ನನ್ನಯ್ಯನು ಭಾರತದ ಮೊದಲನೆಯ ಎರಡು ಪರ್ವಗಳನ್ನು ಮಾತ್ರ ಭಾಷಾಂತರಿಸಿದನು. ಮುಂದೆ ೧೩ನೆಯ ಶತಮಾನದಲ್ಲಿ ತಿಕ್ಕನ ಸೋಮಯಾಜಿಯು ವಿರಾಟಪರ್ವದಿಂದ ಕ್ರಮವಾಗಿ ೧೫ ಪರ್ವಗಳನ್ನು ಪೂರ್ಣಮಾಡಿದನು. ಶುಭುದಾಸನು ನನ್ನಯ್ಯನು ಉಳಿಸಿದ್ದ ಅರಣ್ಯಪರ್ವದ ಭಾಗವನ್ನು ೧೪ನೆಯ ಶತಮಾನದ ಪೂರ್ವಾರ್ಧದಲ್ಲಿ ನನ್ನಯ್ಯನ ಹೆಸರಿನಲ್ಲಿಯೇ ರಚಿಸಿದನು. ಈ ಮೂವರೂ ಮಹಾಪ್ರಾಜ್ಞರಾದ ಕವಿಗಳು. ಎಲ್ಲರೂ ಮೂಲದ ಮುಖ್ಯ ವಿಷಯಗಳಿಗೆ ಲೋಪ ಬರದಂತೆ, ವಿರೋಧವಿಲ್ಲದಂತೆ ಸಂಗ್ರಹಿಸಿದ್ದಾರೆ. ೧೫ನೆಯ ಶತಮಾನದಲ್ಲಿ ಪಿಲ್ಲಲಮರ್ರಿಪಿನ ವೀರಭದ್ರನು ಜೈಮಿನಿಭಾರತವನ್ನು ತೆಲುಗಿನಲ್ಲಿ ರಚಿಸಿದನು. ಮುಂದೆ ತೆಲುಗು ಭಾಷೆಯಲ್ಲಿ ಭಾರತಕ್ಕೆ ಸಂಬಂಧಪಟ್ಟಂತೆ ಅನೇಕ ಕೃತಿಗಳು ರಚಿತವಾಗಿವೆ. ರಘುನಾಥನಾಯಕನ ಕಾಲದಲ್ಲಿ ಚಮಕೂರಿ ವೆಂಕಟಕವಿಯು 'ವಿಜಯವಿಲಾಸ'ವೆಂಬ ಕಾವ್ಯದಲ್ಲಿ ಅರ್ಜುನನ ವಿಜಯಯಾತ್ರೆಯ ಕಾಲದಲ್ಲಿ ನಡೆದ ಉಲೂಪಿ, ಚಿತ್ರಾಂಗದೆ ಮತ್ತು ಸುಭದ್ರಾ

ವಿವಾಹಗಳನ್ನು ವರ್ಣಿಸಿದ್ದಾನೆ. ಅನ್ನಮಾಚಾರ್ಯರ ಹಿರಿಯ ಹೆಂಡತಿ ತಿಮ್ಮಕ್ಕ ಎಂಬುವಳು `ಸುಭದ್ರಾ ಪರಿಣಯ'ದ ಕರ್ತೃ. ವಿಜಯರಾಘವನಾಯಕನಿಂದ ಕನಕಾಭಿಷಿಕ್ತಳಾದ ಕವಯಿತ್ರಿ ಪಶುಪರ್ತಿ ರಂಗಾಜಮ್ಮಳು ಗದ್ಯಭಾರತವನ್ನು ರಚಿಸಿದ್ದಾಳೆ. ವಿಜಯರಂಗಚೊಕ್ಕನಾಥನ ಆಶ್ರಯದಲ್ಲಿ ಸಾಮುಖಮು ವೆಂಕಟಕೃಷ್ಣಪ್ಪನೆಂಬುವನು `ಜೈಮಿನಿಭಾರತ'ವನ್ನು ತೆಲುಗಿಗೆ ಭಾಷಾಂತರ ಮಾಡಿದನು. ಗೋಲ್ಕೊಂಡದ ನವಾಬರ ಆಶ್ರಯದಲ್ಲಿ ತಿರುಕ್ಕೊಚ್ಚಿ ಬಾಲಸರಸ್ವತಿಯು `ರಾಘವಪಾಂಡವೀಯಂ' ಎಂಬ ದ್ವಿಸಂಧಾನಕಾವ್ಯವನ್ನು ರಚಿಸಿದಳು. ರಾಮಾನುಜಾಚಾರ್ಯನೆಂಬುವನು ನನ್ನಯ್ಯನ ಭಾರತವನ್ನು ಗದ್ಯರೂಪದಲ್ಲಿ ರಚಿಸಿದನು. ೧೯ನೆಯ ಶತಮಾನದ ಪರಿವರ್ತನ ಯುಗದಲ್ಲಿ ಅಕುಂಡಿ ವ್ಯಾಸಮೂರ್ತಿಶಾಸ್ತ್ರಿಯು `ಭಾರತನವನೀತಮ್' ಎಂಬ ಕಾವ್ಯವನ್ನು ರಚಿಸಿದನು. ೨೦ನೆಯ ಶತಮಾನದಲ್ಲಿ ಶತಾವಧಾನಿ ತಿರುಪತಿಶಾಸ್ತ್ರಿ, ಪರಿಪುಂಡಿ ಅಪ್ಪಾಲ ಸ್ವಾಮಿ, ಶ್ರೀಪಾದಕೃಷ್ಣಮೂರ್ತಿ ಇವರು ಸಂಸ್ಕೃತ ಭಾರತವನ್ನು ಭಾಷಾಂತರಿಸಿದರು. ಕಮ್ಮೆಕುಂಡ ತ್ರಿಪುರದೇವಿ ರಾಮಸ್ವಾಮಿ ಚೌಧುರಿಯು ಭಾರತದ ಕಥೆಗೆ ನೇರ ವಿರೋಧವಾಗಿ ಧಾರ್ತರಾಷ್ಟ್ರರನ್ನು ನಾಯಕರನ್ನಾಗಿ ಮಾಡಿ ಕೃತಿರಚನೆ ಮಾಡಿದ್ದಾನೆ. ಇತ್ತೀಚಿಗೆ ಕೇಸರಿ ಸುವರ್ಣಪದಕವನ್ನು ಪಡೆದ ಕಲ್ಲೂರಿ ವಿಶಾಲಾಕ್ಷಮ್ಮ ಎಂಬುವಳು 'ಭಾರತ ಕಥಾಮೃತಮ್' ಎಂಬುದನ್ನು ರಚಿಸಿದ್ದಾಳೆ.

ಮಲೆಯಾಳ ಭಾಷೆಯಲ್ಲಿ ಸಂಪೂರ್ಣ ಭಾರತ ಕೃತಿಗಳು ವಿಶೇಷವಾಗಿಲ್ಲ. ತಿರುವಾಂಕೂರಿನ ನರಣಮ್ ಎಂಬ ಊರಿನ ಕವಿಮನೆತನದವರು ಕನ್ನಸ್ಸನ್ ಪಾಟ್ಟುಹಳ್ ಎಂಬ ಕವನ ಸಂಗ್ರಹವನ್ನು ರಚಿಸಿದ್ದಾರೆ. ಈ ವಂಶದ ಶಂಕರಪಣಿಕ್ಕರ್ ಎಂಬುವನು `ಭಾರತಮಾಲೆ'ಯನ್ನು ರಚಿಸಿದ್ದನೆಂದು ಪ್ರತೀತಿ. ಇವರ ಕಾಲ ೧೩೭೫ ರಿಂದ ೧೪೭೫. ಇವರು `ನಿರಣವೃತ್ತಮ್' ಎಂಬ ತಮ್ಮದೇ ಆದ ಛಂದಸ್ಸುಗಳಲ್ಲಿ ಗ್ರಂಥರಚನೆ ಮಾಡಿದ್ದಾರೆ. ಇವು ಬಹಳ ಸರಳ ಶೈಲಿಯಲ್ಲಿದೆ. ಮಲೆಯಾಳ ಸಾಹಿತ್ಯದಲ್ಲಿ ಚಂಪೂ ಗ್ರಂಥಗಳಿಗೆ ವಿಶೇಷ ಸ್ಥಾನ. ಈ ರೀತಿಯಲ್ಲಿ ಕಟ್ಟುತ್ತುನಾಟ್ ಕೃಷ್ಣವಾರಿಯರ್ ಮತ್ತು ಚಣಕ್ಕರ ಉನ್ನಿ ಕೃಷ್ಣವಾರಿಯರ್ ಎಂಬುವರು `ರಾಯಸೂಯಮ್' ಮತ್ತು `ಕಿರಾತಮ್' ಎಂಬ ಎರಡು ಮಲೆಯಾಳಿ ಚಂಪೂಕೃತಿಗಳನ್ನು ರಚಿಸಿದ್ದಾರೆ. ೧೭ನೆಯ ಶತಮಾನದಲ್ಲಿ ಭಾರತಕ್ಕೆ ಸಂಬಂಧಪಟ್ಟಂತೆ ಕಾರ್ತಿಕ ತಿರುನಾಳ್ `ಸುಭದ್ರಾಹರಣಮ್' `ಗಂಧರ್ವ ವಿಜಯಮ್' `ಪಾಂಚಾಲೀ ಸ್ವಯಂವರಂ' ಮೊದಲಾದ ಏಳು ಅಟ್ಟಕಥೆಗಳನ್ನೂ ಸ್ವಾತೀತಿರುನಾಳ್ `ಕೀಚಕಮ್' ಎಂಬ ಅಟ್ಟಕಥೆಯನ್ನೂ ರಚಿಸಿದ್ದಾರೆ. ಇಕ್ಕಾವು ಅಮ್ಮಾವಿನ `ಸುಭದ್ರಾರ್ಜುನ' ಎಂಬುದೇ ಮಲೆಯಾಳ ಭಾಷೆಯಲ್ಲಿ ರಚಿತವಾದ ಮೊದಲನೆಯ ನಾಟಕ. ೧೯ನೆಯ ಶತಮಾನದಲ್ಲಿ. ಕುನ್ನಿಕುಡುತ್ತನ್ ಎಂಬುವವನು ಅಲ್ಪಕಾಲದಲ್ಲಿ ಮಹಾಭಾರತವನ್ನು ಮಲೆಯಾಳಿಭಾಷೆಗೆ ಪರಿವರ್ತಿಸಿದ್ದಾನೆ.

ಔತ್ತರೇಯ ಭಾಷೆಗಳಲ್ಲಿ ಭಾಗವತ ಪಂಥ'ಗಳು ವಿಶೇಷ ಪ್ರಭಾವಶಾಲಿಯಾಗಿದ್ದುದರಿಂದ ಅಲ್ಲಿ ರಾಮಕೃಷ್ಣರಿಗೆ ಅಗ್ರಸ್ಥಾನ. ಆದುದರಿಂದ ಅಲ್ಲಿ ವಿಶೇಷವಾಗಿ ರಾಮಾಯಣ, ಭಗವದ್ಗೀತೆ ಮತ್ತು ಭಾಗವತಗಳು ಪ್ರಧಾನ ಸ್ಥಾನವನ್ನಾಕ್ರಮಿಸಿದೆ. ಅಪೂರ್ವವಾಗಿ ಭಾರತಕ್ಕೆ ಸಂಬಂಧಪಟ್ಟ ಕೃತಿಗಳೂ ರಚಿತವಾಗಿವೆ. ದಕ್ಷಿಣ ಭಾರತಕ್ಕೆ ನಿಕಟ ಸಂಬಂಧವುಳ್ಳ ಒರಿಯ ಭಾಷೆಯಲ್ಲಿ ಹಾಗಿಲ್ಲದೆ ಅನೇಕ ಭಾರತಗಳು ರಚಿತವಾಗಿವೆ. ಅಲ್ಲಿಯೂ ಮೊದಲನೆಯ ಭಾರತಕೃತಿ ರಚಿತವಾದುದು ೧೫ನೆಯ ಶತಮಾನದಲ್ಲಿ ಆ ಶತಮಾನದಲ್ಲಿ ಕವೀಂದ್ರದೇವನ ಆಶ್ರಯದಲ್ಲಿದ್ದ ಸರಳದಾಸನು ರಚಿಸಿದ ಭಾರತವೇ ಇಂದಿಗೂ ವಿಶೇಷ ಜನಪ್ರಿಯವಾಗಿದೆ. ಸರಳದಾಸನು ವಿದ್ಯಾವಂತನಲ್ಲ. ಅಂಬಿಗರ ಜಾತಿಯವನು. ಅವನಿಗೆ ಸಂಸ್ಕೃತದ ಪರಿಚಯವೇ ಇರಲಿಲ್ಲ. ಸಾಯಂಕಾಲದ ವೇಳೆಯಲ್ಲಿ ಬ್ರಾಹ್ಮಣರು ನಡೆಸುತ್ತಿದ್ದ ಪುರಾಣ ಶ್ರವಣದಿಂದ ಪ್ರೇರಿತನಾಗಿ ಕಾವ್ಯರಚನೆ ಮಾಡಿದ್ದಾನೆ.

ಮೂಲದ ಪರಿಚಯವಿಲ್ಲದುದರಿಂದ ಸರಳದಾಸನು ರಚಿಸಿದ ಭಾರತವು ಒಂದು ಸ್ವತಂತ್ರ ಕೃತಿಯಂತೆಯೇ ಇದೆ. ಇಲ್ಲಿ ವರ್ಣಿತವಾಗಿರುವ ಅನೇಕ ದೃಶ್ಯಗಳು ಓಢ್ರ ದೇಶದವೇ. ಪರ್ವಗಳ ಕ್ರಮವೂ ಸಂಖ್ಯೆಯೂ ವ್ಯತ್ಯಾಸವಾಗಿದೆ. ಮೂಲದ ಅನೇಕ ಭಾಗಗಳು ಲುಪ್ತವಾಗಿರುವುದಲ್ಲದೆ ಅನೇಕ ಹೊಸ ವಿಷಯಗಳು ಸೇರಿಕೊಂಡಿವೆ. ಮೂಲದಲ್ಲಿ ದೇವಾಂಶಸಂಭೂತರಾದ ನಾಯಕ ನಾಯಕಿಯರು ಇಲ್ಲಿ ತಮ್ಮ ದೈವಾಂಶಗಳನ್ನು ಕಳೆದುಕೊಂಡು ಸುಖದುಃಖಗಳಿಂದ ಕೂಡಿದ ಸಾಮಾನ್ಯ ಓಢ್ರರಾಗಿದ್ದಾರೆ. ದುರ್ಯೋಧನನು ಅರಣ್ಯದಲ್ಲಿದ್ದ ಪಾಂಡವರನ್ನು ಗುರುತಿಸಲು ಕಳುಹಿಸಿದ ಗುಪ್ತಚಾರನ ಹೆಸರು ಅರ್ಜುನ ಘಂಡ. ಕವಿಯು ಪಾಂಡವರು ಸ್ವರ್ಗಾರೋಹಣ ಮಾಡುವಾಗ ದಾರಿಯಲ್ಲಿ ಅವರನ್ನು ಓಢ್ರದೇಶಕ್ಕೆ ಬರಮಾಡಿಕೊಂಡಿರುವುದಲ್ಲದೆ ಶಾಪವಿಮೋಚನಕ್ಕಾಗಿ ಹರಿಸಾವು ಎಂಬ ವರ್ತಕನ ಮಗಳನ್ನು ಯುಧಿಷ್ಠಿರನು ಮದುವೆಯಾಗುವಂತೆ ಮಾಡಿದ್ದಾನೆ. ಒಟ್ಟಿನಲ್ಲಿ ಸರಳದಾಸನ ಭಾರತವು ದೇಶಭಕ್ತಿಯುತವಾದ ರಾಷ್ಟ್ರೀಯ ಕಾವ್ಯವಾಗಿ ಪರಿಣಮಿಸಿದೆ. ಸರಳದಾಸನನ್ನು ಒರಿಯ ಸಾಹಿತ್ಯದ ಜನಕನೆಂದೇ ಹೇಳಬಹುದು. ಅವನ ಭಾರತವು ಜನಗಳಲ್ಲಿ ಒಂದು ಕ್ರಾಂತಿಯನ್ನುಂಟುಮಾಡಿ ಆ ಭಾಷೆಯಲ್ಲಿ ಸಂಸ್ಕೃತದ ಆಧಾರವಿಲ್ಲದೆ ಸ್ವತಂತ್ರ ಗ್ರಂಥವನ್ನು ರಚಿಸಲು ಪ್ರೇರಕವಾಯಿತು.

ಒರಿಯ ಭಾಷೆಯಲ್ಲಿ ಭಾಷಾಂತರಿತ ಗ್ರಂಥಗಳಲ್ಲಿ ೧೯ನೆಯ ಶತಮಾನದಲ್ಲಿ ಫಕೀರ ಮೋಹನ ಸೇನಾಪತಿಯು ಮೂಲದಿಂದ ಒರಿಯಾ ಭಾಷೆಗೆ ಪರಿವರ್ತಿಸಿದ ಭಾರತ ಕೃತಿಯು ಉತ್ತಮವಾದುದು. ಸೇನಾಪತಿಯು ಒರಿಯಾ ಭಾಷೆಯಲ್ಲಿ ವಿವಿಧ ರೀತಿಯ ಕೃತಿಗಳನ್ನು ರಚಿಸಿ ಆಧುನಿಕ ಒರಿಯಾ ಸಾಹಿತ್ಯದ ನಾಯಕವ್ಯಕ್ತಿಯಾಗಿದ್ದಾನೆ. ಆತನ ಗ್ರಂಥಗಳು ಬಹುಜನಪ್ರಿಯವಾಗಿದೆ. ಸೇನಾಪತಿಯಂತೆಯೇ ಅವನ ಸಮಕಾಲೀನನಾದ ರಾಧಾನಾಥನು ಒರಿಯಾ ಸಾಹಿತ್ಯದಲ್ಲಿ ಪ್ರಖ್ಯಾತನಾದ ವ್ಯಕ್ತಿ. ಅವನು ಒರಿಯಾ ಸಾಹಿತ್ಯದಲ್ಲಿ

ಒರಿಯರ ಜೀವನಸರ್ವಸ್ವವನ್ನು ಪ್ರತಿಬಿಂಬಿಸಿದ ಕೃತಿಕಾರ. ಅವನ ಕೃತಿಗಳಲ್ಲೆಲ್ಲಾ (ಪಾಂಡವರ) `ಮಹಾಯಾತ್ರೆ'ಯೇ ಪರಮೋತ್ತಮವೆಂದು ಹೇಳಬಹುದು. ಇದು ಸರಳರಗಳೆಯ ಬಹು ಸುಲಭ ಶೈಲಿಯಲ್ಲಿ ರಚಿತವಾಗಿದ್ದರೂ ಪುರಾಣಗಳ ಗಾಂಭೀರ್ಯವರಲ್ಲಿದೆ. ಅದು ಪುರುಷಾರ್ಥಗಳ ಸ್ಪಷ್ಟವಾದ ಅರಿವನ್ನುಂಟು ಮಾಡುವುದಲ್ಲದೆ ಉಚ್ಚದೇಶಾಭಿಮಾನವನ್ನೂ ವಿದೇಶೀಯರ ದಾಸ್ಯದಲ್ಲಿ ಜುಗುಪ್ಸೆಯನ್ನೂ ಏಕಕಾಲದಲ್ಲುಂಟುಮಾಡುತ್ತದೆ. ಇದನ್ನು ೨೦ ಸರ್ಗಗಳಲ್ಲಿ ರಚಿಸಬೇಕೆಂದು ಹೊರಟ ಕವಿ ಏಳು ಸರ್ಗಗಳು ಮುಗಿಯುವುದರಲ್ಲಿಯೇ ಕಾಲವಾದನು. ಈ ಅಸಂಪೂರ್ಣ ಸ್ಥಿತಿಯಲ್ಲಿಯೂ ಅದು ಒಂದು ಉದ್ದ ಕೃತಿಯೇ ಆಗಿದೆ. ಇದು ಪಾಂಡವ ಸಂಬಂಧಿಯಾದ ಕಥೆಯೇ ಆದರೂ ಇದರಲ್ಲಿ ಕವಿಯು ಭಾರತದ ಅನುಕ್ರಮವಾದ ಭೂತಭವಿಷ್ಯತ್ ವಿಷಯಗಳನ್ನು ವಿವರಿಸಲು ಹೊರಟಿದ್ದಾನೆ. ಪಾಂಡವರು ತಮ್ಮ ಸ್ವರ್ಗದ ದಾರಿಯಲ್ಲಿ ಒರಿಸ್ಸಾ ದೇಶದ ಪುರಿಯಲ್ಲಿಗೆ ಬರುವರು. ಅಲ್ಲಿ ಅವರಿಗೆ ಅಗ್ನಿಯ ದರ್ಶನವಾಗುವುದು. ಅಗ್ನಿಯು ಅವರನ್ನು ಒರಿಸ್ಸಾ ದೇಶದ ವನಪ್ರದೇಶದ ಮಾರ್ಗವಾಗಿ ಮಧ್ಯ ಭಾರತ, ಸಹ್ಯಾದ್ರಿ ಮತ್ತು ಪಶ್ಚಿಮ ಘಟ್ಟಗಳಿಗೆ ಕರೆದೊಯ್ಯುತ್ತಾನೆ. ಅಲ್ಲಿ ಅಗ್ನಿಯು ಅವರಿಗೆ ಆರ್ಯಭೂಮಿಯು ಕಲಿಯುಗದ ಪ್ರಭಾವದಿಂದ ಯಾವ ದುರ್ಗತಿಗೆ ಬರುತ್ತದೆಂಬ ಭವಿಷ್ಯತ್ ಚರಿತ್ರೆಯನ್ನು ಕಣ್ಣಿಗೆ ಕಟ್ಟಿದಂತೆ ವಿವರಿಸುತ್ತಾನೆ. ೨೦ನೆಯ ಶತಮಾನದಲ್ಲಿ ಹುಟ್ಟುಕವಿಯಾದ ಗಂಗಾಧರ್ ಮೆಹರ್ `ಕೀಚಕವಧ' ಎಂಬ ಕಾವ್ಯವನ್ನು ರಚಿಸಿದ್ದಾನೆ.

ಅಸ್ಸಾಮಿಯ ಭಾಷೆಯಲ್ಲಿ ಹದಿಮೂರನೆಯ ಶತಮಾನದಲ್ಲಿಯೇ ಭಾರತ ಸಂಬಂಧಿಯಾದ ಕೃತಿರಚನೆಗೆ ಪ್ರಾರಂಭವಾಯಿತು. ದುರ್ಲಭ ನಾರಾಯಣನ ಮಗನಾದ ಇಂದ್ರನಾರಾಯಣನ ಆಶ್ರಯದಲ್ಲಿ ಹರಿಹರವಿಪ್ರನೆಂಬುವನು ಮಹಾಭಾರತದ ಅಶ್ವಮೇಧ ಪರ್ವಕ್ಕೆ ಸೇರಿದ ಬಭ್ರುವಾಹನ ಯುದ್ಧವನ್ನು ರಚಿಸಿದನು. ಇದರ ಕಥೆ 'ಜೈಮಿನಿ ಭಾರತ'ದಲ್ಲಿ ಬರುವ ಬಭ್ರುವಾಹನನ ಕಥೆಗೆ ಬಹುಮಟ್ಟಿಗೆ ಹೋಲುತ್ತದೆ. ಹರಿಹರವಿಪ್ರನು ತನ್ನ ಗ್ರಂಥವನ್ನು ದುಬಾರಿ, ಚಾಬಿ, ಝುಮಾರಿ ಮತ್ತು ಪದ ಛಂದಸ್ಸುಗಳಲ್ಲಿ ರಚಿಸಿದ್ದಾನೆ. `ಬಭ್ರುವಾಹನ ಯುದ್ಧ' ಮೂಲದ ನೇರವಾದ ಭಾಷಾಂತರವಲ್ಲ. ವಸ್ತುವನ್ನು ಮೂಲದಿಂದ ಆಯ್ದುಕೊಂಡಿದ್ದರೂ ಮೂಲದಲ್ಲಿಲ್ಲದ ಅನೇಕ ಸೊಗಸಾದ ವರ್ಣನೆಗಳನ್ನೂ ನಾಟಕೀಯ ಸನ್ನಿವೇಶಗಳನ್ನೂ ಕಾವ್ಯದಲ್ಲಿ ತುಂಬಿದ್ದಾನೆ. ಮಣಿಪುರದ ವರ್ಣನೆ, ಅರ್ಜುನ ಬಭ್ರುವಾಹನರ ಸಂಭಾಷಣೆ ಇವು ಬಹು ಶಕ್ತಿಯುಕ್ತವಾಗಿವೆ. 'ಜಯದ್ರಥನವಧೆ' ಈತನ ಮತ್ತೊಂದು ಕೃತಿ.

ಹದಿನೈದನೆಯ ಶತಮಾನಾಂತ್ಯದಲ್ಲಿ ವೈಷ್ಣವ ಪಂಥದಲ್ಲಿ ಪ್ರಖ್ಯಾತ ವ್ಯಕ್ತಿಯಾದ ಶಂಕರದೇವನು ಭಾರತದ ಭಾಷಾಂತರವನ್ನೂ ಮಾಧವದೇವನು ಭಾರತಕ್ಕೆ ಸಂಬಂಧಪಟ್ಟ ಹಾಗೆ `ರಾಜಸೂಯಯಜ್ಞ'ವೆಂಬ ಕಾವ್ಯವನ್ನೂ 'ಅರ್ಜುನಭಂಜನ' ಎಂಬ ನಾಟಕವನ್ನೂ ರಚಿಸಿದ್ದಾರೆ.

ವೈಷ್ಣವ ಪಂಥೀಯರಲ್ಲಿ ಸರ್ವತೋಮುಖವಾದ ಶಕ್ತಿಯಿಂದ ಕೂಡಿದವನೆಂದರೆ ರಾಮಸರಸ್ವತಿ. ಕುಚ್‌ಬಿಹಾರಿನ ರಾಜನಾದ ನರನಾರಾಯಣನು ಸಂಸ್ಕೃತದ ಮಹಾಭಾರತವನ್ನು ಭಾಷಾಂತರಿಸುವಂತೆ ಇವನಿಗೆ ಆಜ್ಞೆಮಾಡಿ ಅದಕ್ಕೆ ಬೇಕಾದ ಒಂದು ಗಾಡಿಯಷ್ಟು ವಿವಿಧ ವ್ಯಾಖ್ಯಾನಗಳಿಂದ ಕೂಡಿದ ಮೂಲಪ್ರತಿಗಳನ್ನು ಒದಗಿಸಿ ಕೊಟ್ಟನು. ಅನೇಕ ಸಮಕಾಲೀನ ಕವಿಗಳು ಇವನಿಗೆ ಈ ಕಾರ್ಯದಲ್ಲಿ ನೆರವಾದರು. ಆತನೇ ಆದಿ, ವನ, ಭೀಷ್ಮ, ವಿರಾಟಪರ್ವಗಳನ್ನು ಭಾಷಾಂತರಿಸಿದನು. ಮೂಲದ ದೀರ್ಘವಾದ ವರ್ಣನೆಗಳ ಜೊತೆಗೆ ಆತನು ಪುರಾಣಗಳ ಅನೇಕ ಉಪಾಖ್ಯಾನಗಳನ್ನು ಸೇರಿಸಿದ್ದಾನೆ. ಭಾರತದ ಭಾಷಾಂತರ ಕಾರ್ಯದಲ್ಲಿ ರಾಮಸರಸ್ವತಿಗೆ ಸಹಾಯಮಾಡಿದವರು ಹಲವರಿದ್ದಾರೆ. ಅವರಲ್ಲಿ ವಿದ್ಯಾಪಂಚಾನನ, ಗೋಪಿನಾಥ, ದಾಮೋದರ, ಕಂಸಾರಿಕಾ ಯಸ್ಥ, ಶ್ರೀಮಂತ ಗಬರುಖಾನ್, ದಾಮೋದರದಾಸ್, ಜಯನಾರಾಯಣ, ಲಕ್ಷ್ಮೀನಾಥ ದ್ವಿಜ, ಗಂಗಾದಾಸ್, ಸುಬುದ್ಧಿರಾಯ್ ಮತ್ತು ಭವಾನೀ ದಾಸರನ್ನು ಹೆಸರಿಸಬಹುದು. ಇವನ ಇನ್ನೊಂದು ಜನಪ್ರಿಯವಾದ ಗ್ರಂಥ `ಭೀಮಚರಿತ'. ಇದರಲ್ಲಿ ಬರುವ ಭೀಮನ ಪಾತ್ರ ಬಹು ಆಕರ್ಷಕವಾಗಿದೆ. ಇದರಲ್ಲಿ ರೈತನ ಸರಳ ಜೀವನ ಬಹು ಹೃದಯಂಗಮವಾಗಿ ವರ್ಣಿತವಾಗಿದೆ. ಇವನ ಕೃತಿಗಳಿಂದ ಪ್ರಾಚೀನ ಕಥಾಭಂಡಾರವು ಸಾಮಾನ್ಯರ ಕೈವಶವಾಯಿತು. ಇವುಗಳ ಆಧಾರದ ಮೇಲೆ ಮುಂದಿನವರು ತಮ್ಮ ಅನೇಕ ಕಾವ್ಯಗಳನ್ನು ರಚಿಸಿದ್ದಾರೆ. ರಾಮಸರಸ್ವತಿಯು ಪ್ರಾಚೀನ ಪುರಾಣೇತಿಹಾಸಗಳ ಆಧಾರದ ಮೇಲೆ ಅನೇಕ ವಧಕಾವ್ಯಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಭಾರತಕ್ಕೆ ಸಂಬಂಧಪಟ್ಟಂತೆ `ಬಕಾಸುರವಧೆ'ಯು ಉತ್ತಮ ಪ್ರಣಯವಸ್ತುವಿನಿಂದ ಕೂಡಿದ ವೀರಕಾವ್ಯವಾಗಿದೆ. ಇಲ್ಲಿಯ ಯುದ್ಧದೃಶ್ಯಗಳು ಅದ್ಭುತವಾಗಿವೆ. ಇವನ ಗ್ರಂಥಗಳೆಲ್ಲ ಬಹು ಜನಾದರಣೀಯವಾಗಿವೆ.

ಆಧುನಿಕ ಅಸ್ಸಾಮಿಯ ನಾಟಕಗಳಲ್ಲಿ ಭರತ ಚಂದ್ರನ `ಅಭಿಮನ್ಯುವಧ' ವೇಣೀಧರ ರಾಜಖೋವನ `ದುರ್ಯೋಧನರ್ ಊರುಭಂಗ' ದುರ್ಗಾಪ್ರಸಾದ್ ಮುಜುಂದಾರನ `ವೃಷಕೇತು' ಇವು ಭಾರತ ಸಂಬಂಧವಾದ ನಾಟಕಗಳು.

ಮಹಾರಾಷ್ಟ್ರದ ಸಾಧುಸಂತರೆಲ್ಲ ಪಂಡರಾಪುರದ ವಿಠಲ ಅಥವಾ ವಿಠೋಬನ ಭಕ್ತರು. ಭಗವದ್ಗೀತೆ ಮತ್ತು ಭಾಗವತಗಳು ಅವರಿಗೆ ಪರಮ ಪವಿತ್ರವಾದ ಗ್ರಂಥಗಳು. ಆದುದರಿಂದ ಮರಾಠಿ ಭಾಷೆಯಲ್ಲಿ ೧೭ ನೆಯ ಶತಮಾನದ ಅಂತ್ಯದವರೆಗೆ ಭಾರತದ ಸಂಬಂಧವಾದ ಗಣ್ಯಗ್ರಂಥ'ಗಳಾವುವೂ ರಚಿತವಾಗಿರುವಂತೆ ಕಾಣುವುದಿಲ್ಲ. ಆ ಶತಮಾನಾಂತ್ಯದಲ್ಲಿ ಪಂಡರಾಪುರದ ಶ್ರೀಧರನು `ಪಾಂಡವಪ್ರತಾಪವಿಜಯ' ಗ್ರಂಥವನ್ನು ರಚಿಸಿದನು. ಇವನ ಇತರ ಗ್ರಂಥಗಳಾದ `ಹರಿವಿಜಯ' ಮತ್ತು `ರಾಮವಿಜಯ'ಗಳು ಸೇರಿ ಇವನಿಗೆ ವಿಶೇಷ ಪ್ರಖ್ಯಾತಿಯನ್ನು ತಂದಿವೆ. ಶೈಲಿಯಲ್ಲಿ ಸರಳತೆ, ಛಂದಸ್ಸಿನಲ್ಲಿ ಓಟ, ಋಜುವಾದ ಕಥನ ಕ್ರಮ ಇವುಗಳಿಂದ ಇವು ಮೂಲದಷ್ಟೇ ಆಕರ್ಷಕವಾಗಿ ಮರಾಠಿ ಸಾಹಿತ್ಯದಲ್ಲಿ ಉಚ್ಚಸ್ಥಾನವನ್ನು ಪಡೆದಿವೆ.

ಮರಾಠಿ ಭಾಷೆಯಲ್ಲಿ ಪ್ರಥಮ ಭಾರತ ಪುರಾಣವನ್ನು ರಚಿಸಿದವನು ಮೋರೋ ಪಂತ. ಇವನು ಬ್ರಾಹ್ಮಣ. ಕೊಲ್ಹಾಪುರದ ಹತ್ತಿರದಲ್ಲಿರುವ ರನ್ಹಾಲಿಯೆಂಬ ಗ್ರಾಮದಲ್ಲಿ ೧೭೨೯ರಲ್ಲಿ ಜನಿಸಿದನು; ಪಂಡಿತ, ವಾಚಾಳಿ, ಪೌರಾಣಿಕ, ತನ್ನ ಜೀವನದ ಪೂರ್ವಾರ್ಧದಲ್ಲಿ ರಾಮಾಯಣ, ಮತ್ತು ಭಾಗವತದ ಆಧಾರದ ಮೇಲೆ `ಕೃಷ್ಣವಿಜಯ' ಮತ್ತು `ಮಂತ್ರ ಭಾಗವತ' ಎಂಬ ಉದ್ಗ್ರಂಥಗಳನ್ನು ರಚಿಸಿದನು. ಅಪರವಯಸ್ಸಿನಲ್ಲಿ ಹತ್ತು ವರ್ಷಗಳ ಕಾಲ ಶ್ರಮಿಸಿ ತನ್ನ ಕೃತಿರತ್ನವಾದ `ಮರಾಠಿ ಭಾರತ'ವನ್ನು ರಚಿಸಿದನು. ಕವಿಯ ಶಕ್ತಿಸರ್ವಸ್ವವೂ ಇಲ್ಲಿ ಪ್ರದರ್ಶಿತವಾಗಿದೆ. ಆರ್ಯಾವೃತ್ತದಲ್ಲಿದೆ. ಪಾಂಡಿತ್ಯ, ಅನುಭವ, ವೈವಿಧ್ಯ, ಭಾಷಾ ಚಾಕಚಕ್ಯ, ದೀರ್ಘವರ್ಣನೆಗಳ ವೈಖರಿ, ರಸ ಪ್ರತಿಪಾದನಾ ಶಕ್ತಿ, ಮೈ ಝುಮ್ಮೆನಿಸುವ ಕಥನ ರೀತಿ, ಶಕ್ತಿಯುಕ್ತವಾದ ಸಂಭಾಷಣಾ ಕೌಶಲ, ನಾಟಕೀಯತೆ ಮೊದಲಾದ ಮಹಾಕವಿಯ ಎಲ್ಲ ಕಾವ್ಯಗುಣಗಳೂ ಇಲ್ಲಿ ಕಾಣುವುವು.

ವಂಗ ಭಾಷೆಯಲ್ಲಿ ಮಹಾಭಾರತದ ಸುಮಾರು ಮೂವತ್ತು ಭಾಷಾಂತರಗಳಿವೆ. ಇವುಗಳಲ್ಲಿ ಕಾಶೀ ರಾಮದಾಸ್, ನಿತ್ಯಾನಂದ ಘೋಷ್, ಕವಿಚಂದ್ರ ಚಕ್ರವರ್ತಿ ಇವರವು ಉತ್ತಮವಾದುವು. ಇವುಗಳಲ್ಲಿಯೂ ಕಾಶೀರಾಮನ ಭಾರತವು ಪರಮೋತ್ತಮ ವಾಗಿ ಆ ಭಾಷೆಯಲ್ಲಿಯೇ ರಚಿತವಾಗಿರುವ `ಕೃತ್ತಿವಾಸನ ರಾಮಾಯಣ'ದಷ್ಟೇ ಜನಪ್ರಿಯವಾಗಿದೆ. ಇದೂ ಮೂಲದ ನೇರವಾದ ಅನುವಾದವಲ್ಲ. ಸ್ವತಂತ್ರ ಕೃತಿಯೆಂದೇ ಹೇಳಬಹುದು. ಕವಿಯು ಸಿಂಗಿಯೆಂಬ ಗ್ರಾಮದವನು. ೧೬ನೆಯ ಶತಮಾನದ ಮೊದಲನೆಯ ಪಾದದಲ್ಲಿ ಭಾರತವನ್ನು ರಚಿಸಿರಬೇಕು. ಗ್ರಂಥವು ಪೂರ್ಣವಾಗುವವರೆಗೆ ಕವಿಯು ಜೀವಿಸಿರಲಿಲ್ಲವಾಗಿ ಕೊನೆಯ ಭಾಗವನ್ನು ಅವನ ಮಗನು ರಚಿಸಿದನೆಂಬ ಅಭಿಪ್ರಾಯವು ನಂಬಲರ್ಹವಲ್ಲ. ಗ್ರಂಥದಲ್ಲಿ ಅವನ ಮಗನ ಕೈವಾಡವಿದೆಯೆಂದು ಒಪ್ಪಿದರೂ ಗ್ರಂಥದ ಪ್ರಾಶಸ್ತ್ಯಕ್ಕೆ ಕುಂದೇನೂ ಉಂಟಾಗುವುದಿಲ್ಲ.

ಮೈಥಿಲೀ ಭಾಷೆಯಲ್ಲಿ ಆದಿಕಾಲದಿಂದ `ಭಾರತ'ಕ್ಕೆ ಸಂಬಂಧಪಟ್ಟ ಗ್ರಂಥಗಳು ರಚಿತವಾಗಿವೆ. ಅಚ್ಯುತಾನಂದದತ್ತನ `ಮಹಾಭಾರತ'ವು ಪ್ರಾಚೀನವಾದುದು. ಇದೇ ಮಾರ್ಗದಲ್ಲಿ ಮುಂದೆ ರಘುನಂದನ ದಾಸನು `ಸುಭದ್ರಾಹರಣ'ವನ್ನೂ ಮಂತ್ರನಾಥಝಾ ಎಂಬುವನು `ಕೀಚಕವಧೆ' ಇತ್ಯಾದಿಯನ್ನೂ ರಚಿಸಿದ್ದಾರೆ.

ಸಿಂಧಿ ಭಾಷೆಯಲ್ಲಿ ಸುಮಾರು ಒಂದು ಸಾವಿರ ವರ್ಷದ ಹಿಂದೆ ಮಹಾಭಾರತ ಕಥೆಯ ಒಂದು ರೂಪವು ಗದ್ಯದಲ್ಲಿ ರಚಿತವಾಗಿದ್ದಿತು. ಇದೇ ಸಿಂಧಿ ಭಾಷೆಯ ಮೊದಲನೆಯ ಗದ್ಯಗ್ರಂಥ. ಮುಂದೆ ಇದು ಹತ್ತನೆಯ ಶತಮಾನದಲ್ಲಿ ಅರಬ್ಬೀಭಾಷೆಗೆ ಪರಿವರ್ತನವಾಯಿತು. ಇದರ ಮೂರು ಭಾಗಗಳಲ್ಲಿ ಮಹಾಭಾರತದ ವೀರರ ಸಂಪರ್ಕಕ್ಕಿಂತ ಹಿಂದಿನ ಸಿಂಧಿಯ ಚರಿತ್ರೆ, ಭಾರತದ ಸಂಗ್ರಹ ಕಥೆ ಮತ್ತು ಪಾಂಡವರ ಕಾಲದ ರಾಜರುಗಳು ಮತ್ತು ಘಟನೆಗಳು ಇವು ಕ್ರಮವಾಗಿ ವರ್ಣಿತವಾಗಿದೆ.

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಪರಮಾನಂದನು ಕಾಶ್ಮೀರಿ ಭಾಷೆಯಲ್ಲಿ `ನಳದಮಯಂತಿ' ಕಥೆಯನ್ನು ಕುರಿತು ನಿಡುಗವಿತೆಯನ್ನು ರಚಿಸಿದ್ದಾನೆ.

ಗುಜರಾತಿ ಸಾಹಿತ್ಯದಲ್ಲಿ ೧೭ನೆಯ ಶತಮಾನದಲ್ಲಿ ಪ್ರಸಿದ್ಧನಾಗಿದ್ದವನು ಪ್ರೇಮಾನಂದ. ಇವನು ಪೌರಾಣಿಕನಾಗಿ ಜೀವನವನ್ನು ಪ್ರಾರಂಭಿಸಿ ದೀರ್ಘಕಾಲ ಬಾಳಿ ಅನೇಕ ಗ್ರಂಥಗಳನ್ನು ರಚಿಸಿ ಪ್ರಾಚೀನ ಸಂಪ್ರದಾಯವನ್ನು ಸಜೀವವಾಗಿ ಉಳಿಸಿದನು. ಕಳೆದ ೫೦ ವರ್ಷಗಳವರೆಗೆ ಗುಜರಾತಿನ ಶ್ರೀಮಂತಸ್ತ್ರೀವೃಂದದಲ್ಲಿ ಅವನ ಯಾವುದಾದರೊಂದು ಗ್ರಂಥವನ್ನು ಕಂಠಪಾಠ ಮಾಡದವರೇ ಇರಲಿಲ್ಲವೆಂದು ಹೇಳಬಹುದು. ಇವನು ಸಂಪೂರ್ಣ `ಮಹಾಭಾರತ'ವನ್ನು ಗುಜರಾತಿ ಭಾಷೆಗೆ ಭಾಷಾಂತರಿಸಿದುದೇ ಅಲ್ಲದೇ ಭಾರತಕ್ಕೆ ಸಂಬಂಧಪಟ್ಟಂತೆ `ಚಂದ್ರಹಾಸಾಖ್ಯಾನ', `ಋಷ್ಯಶೃಂಗಾರಾಖ್ಯಾನ', `ದ್ರೌಪದೀಸ್ವಯಂವರ', `ಭಗವದ್ಗೀತಾ', `ದ್ರೌಪದೀಹರಣ', `ಸುಭದ್ರಾಹರಣ', `ಅಷ್ಟಾವಕ್ರಗೀತಾ' ಎಂಬ ಕೃತಿಗಳನ್ನು ಗುಜರಾತಿ ಭಾಷೆಯಲ್ಲಿ ರಚಿಸಿದ್ದಾನೆ.

ಹಿಂದೀ ಭಾಷೆಯಲ್ಲಿ ಪ್ರಸಿದ್ಧವಾದ ಯಾವ ಭಾರತ ಕೃತಿಯೂ ಇಲ್ಲದಿರುವುದು ಸೋಜಿಗವಾದ ವಿಷಯ. ತುಳಸೀ ದಾಸರ `ರಾಮಚರಿತ ಮಾನಸ'ವು ಗುಜರಾತೀಯರನ್ನು ಪೂರ್ಣವಾಗಿ ಪ್ರಭಾವಿತರನ್ನಾಗಿ ಮಾಡಿ ಭಾರತದ ಕತೆಯ ಆವಶ್ಯಕತೆಯನ್ನೇ ಮರೆಮಾಚಿತ್ತೊ ಏನೊ.

ಪಂಜಾಬಿ ಮತ್ತು ಉರ್ದು ಭಾಷೆಗಳನ್ನು ಬಿಟ್ಟು ಮಹಾಭಾರತವು ಮತ್ತೆಲ್ಲ ಪ್ರಸಿದ್ಧವಾದ ಭಾರತೀಯ ಭಾಷೆಗಳಲ್ಲಿ ಪ್ರಭಾವವನ್ನು ಬೀರಿ ಅವರ ಸಂಸ್ಕೃತಿಯ ಬೆಳವಣಿಗೆಯಲ್ಲಿ ಪ್ರಧಾನಪಾತ್ರವನ್ನು ವಹಿಸಿದೆ. ಆ ಗ್ರಂಥದ ವಿಷಯಬಾಹುಳ್ಯವು ಭಾರತೀಯನ ಜೀವನದ ಯಾವುದಾದರೊಂದು ಕ್ಷೇತ್ರದಲ್ಲಿ ತನ್ನ ಪ್ರಭಾವವನ್ನು ಬೀರಿಯೇ ಬೀರುತ್ತದೆ.



# ನಮ್ಮಾಳ್ವಾರರ ಭಕ್ತಿ ಮಾರ್ಗ

ಭರತಖಂಡವು ಅನಾದಿ ಕಾಲದಿಂದ ಆಧ್ಯಾತ್ಮ ಪ್ರಪಂಚದಲ್ಲಿ ಅಗ್ರಸ್ಥಾನವನ್ನು ಪಡೆದಿದೆ. ಗೀತಾಚಾರ್ಯನಾದ ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ ಉಪದೇಶಿಸಿರುವ ಕರ್ಮ, ಜ್ಞಾನ, ಭಕ್ತಿಮಾರ್ಗಗಳಲ್ಲಿ ತಮಗೆ ಸೂಕ್ತವಾದುದನ್ನವಲಂಬಿಸಿ ಎಷ್ಟೋ ಮಹನೀಯರು ಸಾಯುಜ್ಯವನ್ನು ಪಡೆದಿದ್ದಾರೆ. ಆದರೆ ಸಾಮಾನ್ಯವಾಗಿ ಕರ್ಮಜ್ಞಾನ ಮಾರ್ಗಗಳು ಕಷ್ಟತರವಾದುದರಿಂದ ಭಕ್ತಿ ಮಾರ್ಗವನ್ನವಲಂಬಿಸಿದವರೇ ಹೆಚ್ಚು ಮಂದಿ. ಇಂತಹ ಭಕ್ತರಲ್ಲನೇಕರನ್ನು ಈಗಾಗಲೇ ಕನ್ನಡಿಗರು ಪರಿಚಯ ಮಾಡಿಕೊಂಡಿದ್ದಾರೆ. ಇವರ ಗುಂಪಿಗೇ ಸೇರಿರುವ, ನಮಗೆ ಅತಿ ಸನ್ನಿಹಿತರಾಗಿರುವ ತಮಿಳು ನಾಡಿನ ವೈಷ್ಣವ ಭಕ್ತರಲ್ಲಿ ಪ್ರಧಾನ ವ್ಯಕ್ತಿಯಾದ ನಮ್ಮಾಳ್ವಾರ್‌ರವರ ವಿಷಯವನ್ನು ಈ ಪ್ರಬಂಧದಲ್ಲಿ ಚಿತ್ರಿಸಿದೆ.

ತಮಿಳು ನಾಡಿನ ವೈಷ್ಣವ ಭಕ್ತರಿಗೆ `ಆಳ್ವಾರ್' ಎಂದು ಹೆಸರು. `ಆಳ್ವಾರ್' ಎಂದರೆ ಮುಳುಗಿದವರು-ವಿಷ್ಣುಭಕ್ತಿಯಲ್ಲಿ ಮುಳುಗಿದವರು - ಎಂದರ್ಥ. ಇವರು ಹನ್ನೆರಡು ಮಂದಿ. ಇವರೆಲ್ಲರೂ ಬೇರೆ ಬೇರೆ ಕಾಲದಲ್ಲಿ ಭಗವಂತನ ಸ್ತೋತ್ರರೂಪವಾಗಿ ಗೀತೆಗಳನ್ನು ರಚಿಸಿದ್ದಾರೆ. ಇವುಗಳ ಒಟ್ಟು ಸಂಖ್ಯೆ ೪,೦೦೦. ಇವುಗಳು ಚತುರ್ವೇದಸಾರವೆಂದು ಈಗಲೂ ಪ್ರಸಿದ್ಧಿಯಾಗಿವೆ. ಇವುಗಳಿಗೆ ದಿವ್ಯಪ್ರಬಂಧವೆಂದು ಹೆಸರು.

ಪ್ರಸಕ್ತರಾದ ನಮ್ಮಾಳ್ವಾರ್‌ರವರು ಆಳ್ವಾರ್‌ಗಳಲ್ಲಿ ಐದನೆಯವರು. ಇವರು ಈಗಿನ ತಿನ್ನವೆಲ್ಲಿ ಜಿಲ್ಲೆಗೆ ಸೇರಿದ ತಾಮ್ರಪರ್ಣಿ ನದಿಯ ದಡದಲ್ಲಿರುವ ಕುರುಹೂರ್ ಅಥವಾ ಕುರುಕಾಪುರಿ ಎಂಬ ಗ್ರಾಮದಲ್ಲಿ ವೆಳ್ಳಾಳರೆಂಬ ಶೂದ್ರ ಜಾತಿಗೆ ಸೇರಿದ ಕಾರಿಯಾರ್ ಮತ್ತು ಉಡೈಯ ನಂಗೈಯಾರ್ ಎಂಬ ದಂಪತಿಗಳಿಗೆ ಜನಿಸಿದ ಏಕಮಾತ್ರ ಪುತ್ರರು. ಇವರು ಜನನಪ್ರಭೃತಿ ಅಮಾನುಷ ರೀತಿಯಲ್ಲಿ ಒಂದು ಹುಣಿಸೆಯ ಮರದ ಕೆಳಗೆ ಆಹಾರಾದಿಗಳಿಲ್ಲದೆ ಬೆಳೆಯುತ್ತಿರಲು ಮಧುರಕವಿಯಾಳ್ವಾರ್ ಎಂಬ ಭಕ್ತವರ್ಯರು ಇವರ ಮಹಿಮೆಯನ್ನು ತಿಳಿದು ಕುರಿಕಾಪುರಿಗೆ ಬಂದು ಇವರ ಅನುಗ್ರಹವನ್ನು ಪಡೆದು ಸೇವೆಗೆಯ್ದು ಇವರ ಮಹಿಮೆಯನ್ನು

ಲೋಕಕ್ಕೆ ಹರಡಿದರೆಂಬುದು ಸಂಪ್ರದಾಯಾನುಸಾರವಾಗಿ ಬಂದ ಕಥೆ. ಆದರೆ ಇವರ ಕೃತಿಗಳನ್ನು ಪರಿಶೀಲಿಸಿದರೆ ಇವರ ಪ್ರಪಂಚವು ಹುಣಿಸೆಯ ಮರದ ಕೆಳಗಿನ ತೊಟ್ಟಿಲು ಮಾತ್ರವಾಗಿರಲಿಲ್ಲವೆಂದೂ ಇವರಿಗೆ ಇವರ ಸುತ್ತಲಿರುವ ನಾಡಿನ ವಿಶೇಷವಾದ ಪರಿಚಯವಿತ್ತೆಂದೂ ಧಾರಾಳವಾಗಿ ಹೇಳಬಹುದು.

ನಮ್ಮಾಳ್ವಾರ್‌ರವರ ಕಾಲವನ್ನು ಖಚಿತವಾಗಿ ನಿಷ್ಕರ್ಷಿಸುವುದಕ್ಕೆ ಸಾಕಾದಷ್ಟು ಆಧಾರಗಳಿಲ್ಲದಿರುವುದರಿಂದ ಆ ವಿಷಯದಲ್ಲಿ ಈಗಿರುವ ಭಿನ್ನಾಭಿಪ್ರಾಯಗಳನ್ನು ಮಾತ್ರ ಸೂಚಿಸಬಹುದಾಗಿದೆ. ಸಂಪ್ರದಾಯ ಗ್ರಂಥವಾದ ಗುರು ಪರಂಪರೆಯು ಇವರು ಕಲಿಯುಗದ ಆದಿಯ ಪ್ರಮಾಥಿ ಸಂವತ್ಸರದ ವೈಶಾಖ ಶುಕ್ಲ ಪೂರ್ಣಿಮಾ ಶುಕ್ರವಾರ ವಿಶಾಖಾ ನಕ್ಷತ್ರದಲ್ಲಿ ಅವತರಿಸಿದರೆಂದು ಸೂಚಿಸುವುದು.

ಆಧುನಿಕ ವಿದ್ವಾಂಸರುಗಳಲ್ಲಿ ಡಾ|| ಹುಲ್ಷ್‌ರವರು ಆಳ್ವಾರ್‌ರವರು ಕ್ರಿ. ಶ. ಹತ್ತನೆಯ ಶತಮಾನಕ್ಕೆ ಎಷ್ಟೋ ಶತಮಾನಗಳು ಹಿಂದೆ ಇದ್ದರೆಂದು ಹೇಳಿದ್ದಾರೆ. ಬೌದ್ಧ ಮತ್ತು ಬ್ರಾಹ್ಮಣರ ಘರ್ಷಣ ಕಾಲವಾದ ಕ್ರಿ. ಶ. ನಾಲ್ಕು ಮತ್ತು ಏಳನೆಯ ಶತಮಾನಗಳ ಮಧ್ಯಕಾಲದಲ್ಲಿ ಆಳ್ವಾರ್‌ರವರಿದ್ದರೆಂಬುದು ಡಾ|| ಎಸ್. ಕೃಷ್ಣಸ್ವಾಮಯ್ಯಂಗಾರರ ಅಭಿಪ್ರಾಯ. ಇತರ ಬೇರೆ ಬೇರೆ ವಿದ್ವಾಂಸರು ಆಳ್ವಾರ್‌ರವರ ಕಾಲವನ್ನು ಕ್ರಿ. ಪೂ. ೧-೨ ನೆಯ ಶತಮಾನಗಳಿಂದ ಕ್ರಿ.ಶ. ೯ನೆಯ ಶತಮಾನದ ಮಧ್ಯಕಾಲದವರೆಗೆ ತಮಗೆ ತೋರಿದಂತೆ ನಿಷ್ಕರ್ಷಿಸಲು ಪ್ರಯತ್ನಪಟ್ಟಿದ್ದಾರೆ. ಆದರೆ ಒಟ್ಟಿನಲ್ಲಿ ಇದಾವುದೂ ತೃಪ್ತಿಕರವಾಗಿಲ್ಲವೆಂದೂ ಈ ಕಾಲ ನಿರ್ಣಯದ ವ್ಯತ್ಯಾಸದಿಂದ ಇವರ ಮತ್ತು ಇವರ ಕೃತಿಗಳ ವಿಷಯದಲ್ಲಿ ಯಾವ ಹಿರಿಮೆ ಕಿರಿಮೆಗಳೂ ಉಂಟಾಗಲಾರವೆಂದೂ ಧಾರಾಳವಾಗಿ ಹೇಳಬಹುದು. ಇವರಿಗೆ ಶಠಾರಿ, ಮಾರನ್, ಶಠಗೋಪನ್ ಮುಂತಾದ ಇವರ ಹೆಸರುಗಳೂ ಉಂಟು.

ನಮ್ಮಾಳ್ವಾರ್‌ರವರು ಇತರ ವೈಷ್ಣವ ಭಕ್ತರಂತೆಯೇ ಅನುಭಾವಿಗಳು. (ಈಶ್ವರ ಸಾಕ್ಷಾತ್ಕಾರವನ್ನು ಪಡೆಯುವವರಿಗೆ ಅನುಭಾವಿಗಳೆಂದು ಹೆಸರು. ಈಶ್ವರ ಸಾಕ್ಷಾತ್ಕಾರಕ್ಕೆ ಭಕ್ತಿಯೇ ಮೂಲ. ಈ ಭಕ್ತಿಯು ಕಾರ್ಯಕಾರಣಗಳಿಂದ ಸಿದ್ಧವಾಗುವ ತತ್ತ್ವನಿರೂಪಣ ಕ್ರಮಕ್ಕೆ ಅನುಗುಣವಾದುದಲ್ಲ. ಆರಾಧ್ಯ ವಸ್ತುವನ್ನು ಕುರಿತು ಭಕ್ತನಿಗೆ ಸ್ವಂತವಾಗಿ ಉಂಟಾದ ಅನುಭವದ ಫಲ ಮಾತ್ರ.) ಇತರ ಎಲ್ಲ ಅನುಭಾವಿಗಳಂತೆ ಇವರ ಏಕಮಾತ್ರ ಧ್ಯೇಯವು ಈಶ್ವರ ಸಾಕ್ಷಾತ್ಕಾರ. ವೈಷ್ಣವ ಭಕ್ತರೆಲ್ಲರಿಗೂ ಸಾಮಾನ್ಯವಾಗಿರುವಂತೆ ಇವರ ಭಕ್ತಿಯಲ್ಲಿಯೂ ಭಕ್ತಿ, ಪ್ರಪತ್ತಿ, ಕೈಂಕರ್ಯಗಳೆಂಬ ಮೂರು ಭಾಗವನ್ನು ನೋಡಬಹುದು. ಭಗವಂತನನ್ನು ಪೂರ್ಣವಾಗಿ ಪ್ರೀತಿಸುವುದೇ ಭಕ್ತಿ; ಸರ್ವತ್ಯಾಗ ಮಾಡಿ ಅವನನ್ನು ಆಶ್ರಯಿಸುವುದೇ ಪ್ರಪತ್ತಿ; ಅವನಿಂದ ಸರ್ವದಾ ಪ್ರೇರಿತನಾಗಿ ಅವನ ಸೇವೆಯಲ್ಲಿ ನಿರತನಾಗಿರುವುದೇ ಕೈಂಕರ್ಯ. ಇವು ಮೂರೂ ಆಳ್ವಾರ್‌ರವರ ಕೃತಿಗಳಲ್ಲಿ ಪ್ರಧಾನವಾಗಿದೆ.

ಆೞ್ವಾರ್ರವರ ಪ್ರಬಂಧಗಳು ಉದ್ದೇಶಪೂರ್ವಕವಾಗಿ ಒಂದು ಸಿದ್ಧವಾದ ಕ್ರಮವನ್ನನುಸರಿಸಿ ರಚಿಸಿದ ಗ್ರಂಥಗಳಲ್ಲ. ಭಕ್ತಿಯ ಆವೇಶದಲ್ಲಿ ತಮ್ಮ ಹೃದಯವನ್ನು ತೆರೆದು ಯಾವ ನಿರ್ಬಂಧಕ್ಕೂ ಒಳಪಡದೆ ಭಗವಂತನನ್ನು ಕುರಿತು ಹಾಡಿದ ಗೀತೆಗಳು ಇವು. ಇವು ಬರಿಯ ಸಂಪ್ರದಾಯ ಸರಣಿಯಿಂದ ಕೂಡಿದ ಮತಪ್ರಧಾನವಾದ ಸ್ತೋತ್ರಮಾಲಿಕೆಗಳಾಗಿರದೆ ಸಾಹಿತ್ಯ ದೃಷ್ಟಿಯಿಂದ ಭಾವಾವೇಶ ಭರಿತವಾದ ಉತ್ತಮ ಗೀತಿಕೆಗಳಾಗಿವೆ. ಉದ್ದೇಶ ಪೂರ್ವಕವಾಗಿ ಯಾವ ತತ್ತ್ವಪ್ರಸಾರಣೆಯನ್ನೂ ಮಾಡಲು ಇವರು ಪ್ರಯತ್ನಿಸದಿದ್ದರೂ ಮುಂದೆ ಸಿದ್ಧಾಂತಸ್ಥಾಪಕರಾದ ಶ್ರೀರಾಮಾನುಜಾಚಾರ್ಯರು ಪ್ರಚಾರಪಡಿಸಿದ ವಿಶಿಷ್ಟಾದ್ವೈತ ಸಿದ್ಧಾಂತದ ಮೂಲತತ್ತ್ವಗಳೆಲ್ಲ ಇವುಗಳಲ್ಲಿ ಅಡಗಿವೆ. ಅಲ್ಲದೆ ಪಂಡಿತ ಪಾಮರರೆಲ್ಲರಿಗೂ ಅರ್ಥವಾಗುವ ಶೆಂದಮಿೞ್ ಭಾಷೆಯಲ್ಲಿ ಈ ಕೃತಿಗಳಿರುವುದು ಇವುಗಳ ಮತ್ತೊಂದು ವೈಶಿಷ್ಟ್ಯ.

ಭಕ್ತಿಪಾರವಶ್ಯದಿಂದ ನಮ್ಮಾೞ್ವಾರ್ರವರು 'ತಿರುವಿರುತ್ತಮ್', `ತಿರುವಾಶರಿಯಮ್', 'ತಿರುವನ್ದಾದಿ' ಮತ್ತು 'ತಿರುವಾಯ್‌ಮೊೞಿ' ಎಂಬ ನಾಲ್ಕು ಪ್ರಬಂಧಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಮೊದಲನೆಯದಾದ 'ತಿರುವಿರುತ್ತ'ದಲ್ಲಿ ಸಂಸಾರದ ದುಸ್ಸಹತೆಯನ್ನೂ ಎರಡನೆಯದಾದ 'ತಿರುವಾಶರಿಯ'ದಲ್ಲಿ ಭಗವಂತನ ದಿವ್ಯ ಸ್ವರೂಪಾನುಭವವನ್ನೂ ಮೂರನೆಯದಾದ 'ತಿರುವನ್ದಾದಿ'ಯಲ್ಲಿ ಭಗವಂತನಲ್ಲಿ ತಮಗುಂಟಾದ ಅನುರಾಗಾತಿಶಯಗಳನ್ನೂ ನಾಲ್ಕನೆಯದಾದ 'ತಿರುವಾಯ್ ಮೊೞಿ'ಯಲ್ಲಿ ತಮ್ಮ ಇಷ್ಟಾರ್ಥದಂತೆ ಭಗವಂತನು ನಿತ್ಯಲೀಲಾ ವಿಭೂತಿಗಳಿಂದ ಸರ್ವದಾ ವಾಸಮಾಡುವ ವೈಕುಂಠವನ್ನು ತಾವು ಸೇರಿ ಅವನ ನಿತ್ಯ ಕೈಂಕರ್ಯದಲ್ಲಿ ಭಾಗಿಗಳಾದುದನ್ನೂ ಇನಿದಾಗಿ ವರ್ಣಿಸಿದ್ದಾರೆ. ಕೊನೆಯದಾದ `ತಿರುವಾಯ್ ಮೊೞಿ'ಯ ಆಧಾರದಿಂದಲೇ ಅವರ ಭಕ್ತಿಯ ಸ್ವರೂಪವನ್ನು ವಿಶದಪಡಿಸಲು ಈ ಪ್ರಬಂಧದಲ್ಲಿ ಪ್ರಯತ್ನಿಸಿದೆ.

'ತಿರುವಾಯ್ ಮೊೞಿ' ಎಂದರೆ ಶ್ರೀ ಸೂಕ್ತಿ ಅಥವಾ ನಲ್ನುಡಿ ಎಂದರ್ಥ. ಇದರಲ್ಲಿ ೧೧೦೨ ಪದ್ಯಗಳಿವೆ. ಇವು ಹತ್ತು ಶತಕಗಳಾಗಿಯೂ ನೂರು ದಶಕಗಳಾಗಿಯೂ ಭಾಗವಾಗಿವೆ. ಪ್ರತಿ ದಶಕದ ಕೊನೆಯಲ್ಲಿಯೂ ಫಲಶ್ರುತಿಯಿದೆ. ಈ ತಿರುವಾಯ್‌ಮೊೞಿಯಲ್ಲಿ ಆೞ್ವಾರ್ರವರು ಭಗವದನುಗ್ರಹದಿಂದ ದಿವ್ಯಜ್ಞಾನಪರಿಪೂರ್ಣರಾಗಿ ಭಗವಂತನು ಶ್ರೀಕೃಷ್ಣಾವತಾರದಲ್ಲಿ ಗೋಪೀವಲ್ಲಭನಾಗಿ ಭಕ್ತಸಂಶ್ಲೇಷವನ್ನು ಮಾಡಿದನೆಂದು ತಿಳಿದು ಅಂತಹ ಸೇರುವಿಕೆಯನ್ನು ತಾವೂ ಪಡೆಯಬೇಕೆಂಬ ಆಶೆಯಿಂದ ತಮ್ಮನ್ನು ನಾಯಿಕೆಯಂತೆ ಭಾವಿಸಿ, ಈ ನಾಯಿಕೆಯು ಭಗವಂತನನ್ನೇ ವರಿಸಬೇಕೆಂದು ಮನಸ್ಸುಮಾಡಿ ಅವನ ಅಗಲಿಕೆಯಿಂದ ದುಃಖಿಸಿ ಪಕ್ಷಿ, ದುಂಬಿ, ಮೋಡ ಮೊದಲಾದುವುಗಳ ಮೂಲಕ ನಾಯಕನಿಗೆ ಸಂದೇಶ ಕಳುಹಿಸಿ ಅವನನ್ನು ಹುಡುಕುತ್ತ ದಿವ್ಯ ದೇಶಗಳಲ್ಲೆಲ್ಲಾ ಅಲೆದು ಅವನ ಸೇವೆಯನ್ನು ಪ್ರಾರ್ಥಿಸಿ ವಿಭವಾವತಾರಗಳಲ್ಲಿ ಅವನು ಮಾಡಿರುವ ಚೇಷ್ಟೆಗಳನ್ನೆಲ್ಲ ನೆನೆದು ಅತ್ಯಂತ ಮೋಹಾವಿಷ್ಟೆಯಾಗಿ ಕೊನೆಗೆ ಆ ಮೋಹವನ್ನು ಬಿಟ್ಟು ಭಗವದ್ಗುಣಾನುಭವಾಮೃತ ಸೇವನೆಯೇ ತನಗೆ ಸರ್ವಸ್ವವೆಂದು

ಆತನನ್ನು ಸಂಬೋಧಿಸಿ ತನ್ನ ದುರ್ದೆಶೆಯನ್ನು ತಿಳಿಯಪಡಿಸಿ ಅವನನ್ನೇ ಶರಣಹೊಂದಿ ಅವನ ಕೃಪೆಗೆ ಪಾತ್ರಳಾಗಿ ತತ್ಸಾಯುಜ್ಯರೂಪವಾದ ಸರ್ವಾವಯವ ಸಂಶ್ಲೇಷವನ್ನು ಪಡೆದು ನಿತ್ಯಕೈಂಕರ್ಯರೂಪವಾದ ಮೋಕ್ಷಸಾಮ್ರಾಜ್ಯವನ್ನು ಅರ್ಚಿರಾದಿಮಾರ್ಗದಿಂದ ಶ್ರೀ ವೈಕುಂಠದಲ್ಲಿ ಹೊಂದಿ ನಿತ್ಯನಿರತಿಶಯಾನಂದಾನುಭವವನ್ನು ಪಡೆದುದನ್ನು ವರ್ಣಿಸಿದ್ದಾರೆ. ಇದರಲ್ಲಿ ಇವರು ಪಡೆದ ಸಾಕ್ಷಾತ್ಕಾರಮಾರ್ಗದ ಪ್ರತಿ ಮೆಟ್ಟಿಲನ್ನೂ ನೋಡಬಹುದು. ಇದನ್ನು ನಾವು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಆ ಕಾಲದ ಸನ್ನಿವೇಶಗಳಿಗನುವಾಗಿ ನಮ್ಮ ಮನಸ್ಸನ್ನು ತಿದ್ದಿಕೊಳ್ಳಬೇಕು. ಕರ್ಮ, ಫಲ, ಜನ್ಮಾಂತರ, ಭಗವಂತನ ಲೀಲೆ, ಅವತಾರ ಮೊದಲಾದುವುಗಳಲ್ಲಿ ನಂಬಿಕೆಯನ್ನುಂಟುಮಾಡಿಕೊಳ್ಳಬೇಕು.

ಆಟ್ವಾರ್ರವರಿಗೆ ಭಗವಂತನು ಅನಂತಗುಣಪರಿಪೂರ್ಣನಾದ ದಿವ್ಯಮಂಗಳ ಸ್ವರೂಪಿ. ಆತನ ಸೌಂದರ್ಯಾನುಭವದಲ್ಲಿಯೇ ಇವರಿಗೆ ಸರ್ವದಾ ದೃಷ್ಟಿ. ಲೋಕದಲ್ಲಿರುವ ಸಮಸ್ತ ಆನಂದಗಳಿಗೂ ಪ್ರೇಮಕ್ಕೂ ಅವನೇ ಆಕರ, ಅವನೇ ಧ್ಯೇಯ; ಪ್ರಪಂಚವೆಲ್ಲ ಆತನ ಶರೀರ. ಅಲ್ಲಿ ಕಾಣುವುದು ಆತನ ಸೌಂದರ್ಯ. ಈ ದಿವ್ಯ ಮಂಗಳ ಸ್ವರೂಪಿಯನ್ನು ಸಾಕ್ಷಾತ್ಕರಿಸುವುದೇ ಮಾನವನ ಪರಮಧ್ಯೇಯ. ಜೀವಾತ್ಮನು ನಾಯಕಿಯಂತೆ ನಾಯಕನಾದ ಪರಮಾತ್ಮನನ್ನು ತೃಪ್ತಿಪಡಿಸಿ ಅವನಲ್ಲಿ ತನ್ನನ್ನು ಅರ್ಪಿಸಿ ಸರ್ವಪ್ರಯತ್ನಗಳ ಮೂಲಕ ಸಾಕ್ಷಾತ್ಕರಿಸಿ ಅವನ ಕೈಂಕರ್ಯದಲ್ಲಿ ನಿರತನಾಗಬೇಕು. ಜೀವಾತ್ಮನೂ ಪರಮಾತ್ಮನ ಅಂಶವೇ ಆದುದರಿಂದ ಇದನ್ನು ಅವನು ಮಾಡಬಲ್ಲನು. ಪರಮಾತ್ಮನೂ ಸಹ ಜೀವಾತ್ಮನು ತನ್ನನ್ನು ಭಕ್ತಿಯಿಂದ ಕರೆದರೆ ತನ್ನ ಕೃಪಾಕಟಾಕ್ಷದಿಂದ ಅವನನ್ನು ಬರಮಾಡಿಕೊಳ್ಳುತ್ತಾನೆ. ಜೀವಾತ್ಮನು ತನ್ನ ಪ್ರತ್ಯೇಕವಾದ ಸ್ಥಿತಿಯನ್ನುಳಿದು ಅವನನ್ನು ಸಾಕ್ಷಾತ್ಕರಿಸಬೇಕು. ಇದೇ ಆಟ್ವಾರ್ರವರ ಸಿದ್ಧಾಂತ. ಇಲ್ಲಿ ನಾವು ನೋಡಬೇಕಾದುದು ತತ್ತ್ವನಿರೂಪಣವನ್ನಲ್ಲ, ಇವರ ಅನುಭವಸರಣಿಯನ್ನು ಮಾತ್ರ. ತಿರುವಾಯ್‌ಮೊಟಿಯ ಅನೇಕ ಕಡೆಗಳಲ್ಲಿ ಆಟ್ವಾರ್ರವರು ತಮ್ಮ ಐಹಿಕವಾದ ಭೌತಶರೀರವನ್ನು ಮರೆತು ಭಗವಂತನಲ್ಲಿಯೇ ಪೂರ್ಣವಾಗಿ ಲೀನವಾಗಿರುವುದನ್ನು ನೋಡಬಹುದು. ಪ್ರಕೃತಿಯ ಸಮಸ್ತ ಸೌಂದರ್ಯವೂ ಅವನಿಂದುಂಟಾದುದರಿಂದ ಅವು ಅವನ ಶರೀರಕ್ಕೆ ಸಂಬಂಧಪಟ್ಟವು. ಆದುದರಿಂದಲೇ ಅವುಗಳು ಅವನ ಜ್ಞಾಪಕವನ್ನುಂಟುಮಾಡುತ್ತವೆ. ಬಾನಿನ ನಕ್ಷತ್ರಗಳು ಅವನ ಕಣ್ಣಿನ ಕಾಂತಿಯನ್ನೂ ಪ್ರಶಾಂತವಾದ ನದಿಗಳು ಅವನ ಗಾಂಭೀರ್ಯವನ್ನೂ ಹೂವಿನ ಪರಿಮಳವು ಅವನ ದಿವ್ಯ ಸೌಗಂಧ್ಯವನ್ನೂ ಪ್ರಭಾತ ಸೂರ್ಯೋದಯವೂ ಮೋಡಗಳ ನೀಲವರ್ಣವೂ ಅವನ ಶರೀರ ಕಾಂತಿಯನ್ನೂ ನೆನಪಿಗೆ ತರುವುವು. ಭಗವಂತನ ಸೌಂದರ್ಯಾನುಭವವೇ ಈ ರೀತಿಯಾದ ಚಿತ್ರಗಳಿಗೆ ಕಾರಣ. ಆದುದರಿಂದಲೇ ಇವರ ಕೃತಿಗಳು ಅತ್ಯುತ್ತಮವಾದ ಪ್ರಕೃತಿ ವರ್ಣನೆಗಳಿಂದ ತುಂಬಿರುವುದು; ಆದರೆ ಅವುಗಳ ಉದ್ದೇಶ ಮಾತ್ರ ಐಹಿಕವಲ್ಲ; ಆಮುಷ್ಮಿಕಕ್ಕೆ ಸಂಬಂಧಪಟ್ಟುವು. ಇವರ ಪ್ರಕೃತಿ ವರ್ಣನೆಯ ಮೇಲ್ಮೆಯನ್ನು ಇವರು ಚಿತ್ರಿಸಿರುವ `ತಿರುವಲ್ಲವಾಟ್' ಮತ್ತು

`ತಿರುಮಾಲಿರಂ ಶೋಲೈ' ಎಂಬ ದಿವ್ಯದೇಶಗಳ ವರ್ಣನಾತ್ಮಕವಾದ ಈ ಕೆಳಗಿನ ಪದ್ಯಗಳಲ್ಲಿ ನೋಡಬಹುದು:-

**ತಿರುವಲ್ಲವಾಳ್**

ಎರಳೆಕಣ್ ಗೆಳತಿಯಿರ! ಅನುದಿನವು ನಶಿಸುತಿಹೆನ್
ಬಾನುದ್ದದಡಿಕೆಮರ, ಕಂಪಿಡಿದ ಮಲ್ಲಿಗೆಯು
ದುಂಬಿಗಳು ತುಂಬಿರುವ ತೋಪಿನಿಂ ಮೆರೆಯುತಿಹ
ತಿರುವಲ್ಲವಾಟೆರೆಯನಡಿಸಾರ್ಶುದಾನೆಂದೊ?
ಸಖಿಯರಿರ! ನೀವೆನ್ನ ತಡೆವುದುಚಿತವೆ ಪೇಳಿ
ಪೊನ್ನಿರದ ಪುನ್ನಾಗ ವಕುಳ ನವಮಾಧವಿಯ
ಮೇಲ್ಸುಳಿದ ತಣ್ಣೆಲರ ನರುಗಂಪು ಸುಳಿಯುತಿಹ
ತಿರುವಲ್ಲವಾಟೆರೆಯನಡಿಸಾರ್ಶುದಾನೆಂದೊ?
ಹೂ ಮುಡಿದ ಒಡತಿಯಿರ! ವಿರಹದಿಂ ಸಮೆವಾನು
ಕಡಲುಲಿಯನನುಕರಿಸಿ ಘೋಷಿಸಲು ವೇದಗಳು,
ಬಾನುದ್ದ ಬೆಳೆದಿರುವ ಧೂಮಗಂಧವ ತಳೆದ
ತಿರುವಲ್ಲವಾಟೆರೆಯನಡಿಗಳನು ಕಾಣುವೆನೆ?
ಗೆಳತಿಯಿರ! ನೀವೆನ್ನ ತಡೆದು ಮಾಡುವುದೇನು?
ಹಸುರೆಲೆಯ ನೀಡಡಿಕೆ ಪಲತೆರದ ಚೆಂದೆಂಗು
ಪನಸು ಬಾಳೆಗಳಡಿಯೆ ಮೆರೆಯುತಿಹ ಮಾಡಗಳ
ತಿರುವಲ್ಲವಾಟೆರೆಯನಾ ನಲ್ಮೆ ಆಶ್ರಯವು.
ಆಡುತಿಹ ಇನಿಗಬ್ಬು, ಮಿಗೆ ಬೆಳೆದ ಚೆಂಬತ್ತ
ಎಲ್ಲೆಡೆಗೆ ಕಂಪೀವ ಪೂವಿಡಿದ ಆರವೆಯು
ಬಳಸಿರುವ ತಿರುವಲ್ಲವಾಟೆರೆಯನಡಿಗಳನು
ಬಿಡದೆ ನಾ ಸೇರ್ದೆಂದು ಪೂಜಿಸುವೆ ಗೆಳತಿ?

**ತಿರುಮಾಲಿರಂ ಶೋಲೈ**

ನುಣ್ಪೊಗರ ಯೌವನವು ಜಾರಲ್ಕೆ ಮುನ್ನ
ಹೆಚ್ಚುತಿಹ ಕಾಂತಿಯಾ ಮಾಯಾವಿ ನೆಲಸಿರುವ
ತರುಗಿಡಗಳಿಂ ತುಂಬಿ ವಿಭವದಿಂ ಮೆರೆಯುತಿಹ
ಮಾಲಿರಂ ಶೋಲೆಯಂ ಹೊಂದುವುದೆ ಜಾಣ್ಮೆ.

ಚತುರರಹ ಮಡದಿಯರ ಮೋಹವನು ಲೆಕ್ಕಿಸದೆ
ಇನಿಗೊರಲ ಶಂಖದಾ ಚೆಲ್ವಟಿಹರ್ ನಿಂತಿರ್ಪ
ತಣ್‌ಕದಿರನಾಡುತಿಹ ಶಿಖರದಿಂ ಬೆಳಗುತಿಹ
ಮಾಲಿರಂ ಶೋಲೆಯಂ ಪಾಡುವುದೆ ಪೆರ್ಮೆ.
ಅಳಿಗೆಯ್ಮೆ ಗೆಯ್ಯುವುದು ಗೆಯ್ಮೆಯಲ್ಲೆಲೆ ಮನಸೆ;
ಕಾರ್ಮುಗಿಲ ಬಣ್ಣದಾ ಸಿರಿಯರಸ ತಾನಾಳ್ದ
ಸಿರಿವನದಿ ಬಳಸಿರುವ ಮಾಲಿರಂ ಶೋಲೆಯಾ
ಬಳಿಯೊಳಿಹ ಬೆಟ್ಟವನು ಹೊಂದುವುದೆ ಗೆಯ್ಮೆ.
ಜನರು ಜೀವಿಸುವಂತೆ ಕರ್ಮಪಾಶವ ಹರಿದು
ಪೆರ್ಮಲೆಯನೆತ್ತಿದಾ ಮಹಿಮ ತಾ ವಾಸಿಸುವ
ಕಾರ್ಮುಗಿಲನನುದಿನವು ಬೆಡಗಿನಿಂ ಚುಂಬಿಸುವ
ಮಾಲಿರಂ ಶೋಲೆಯನು ಸೇರುವುದೆ ಮೇಲ್ಮೆ.
ಐತೆರದ ಬಲಗಳಿಂ ತೀವಿನೆಯ ಹರಡಿಸದೆ
ಧರ್ಮದಾ ಚಕ್ರವನು ಧರಿಸಿದವ ನೆಲಸಿರ್ಪ
ತಿಳಿನೀರ ಪೆರ್ದೊರೆಗಳ್ ಸುತ್ತಿ ಬಳಸಿರುವ
ಪರ್ವತದ ಬಳಿಮಲೆಯ ಸಾರುವುದೆ ಊಣ್ಮೆ.
ಉರಿಯ ಬೆಣ್ಣೆಯನುಂಡ ಶ್ರೀ ಕೃಷ್ಣ ತಾನಿರ್ಪ
ಜಿಂಕೆಗಳು ಮರಿಗೂಡಿ ನಲಿಯುತಿಹ ಶೋಲೆಯಾ
ಬಟ್ಟೆಯನು ಸೇರಬೇಕೆಂದೆಂಬ ನೆನಹದುವೆ
ನಲ್ಮೆಯೆಂದರಿಯುವುದು ಕೀಳ್ಮನದಿ ಚಿಂತಿಸದೆ.
ಪ್ರಬಲತರ ಪಾಪದೊಳು ಮುಳುಗದೇ ಎಚ್ಚರದಿ
ಯುಕ್ತವೆಂದರಿವುದಿದ; ರಕ್ಕಸಿಯ ಕೊಂದವನ
ದೇಗುಲದ ಬಳಿ ಸಾರ್ದ ಕರಿಣಿಗಳ ತಂಡದಿಂ
ಮೆರೆಯುತಿಹ ಶೋಲೆಯನು ಸೇರುವುದೆ ಅಳ್ತಿಯೆಂದು

ಮೇಲಿನ ಪದ್ಯಗಳಲ್ಲಿ ಆಟ್ವಾರ್ರವರು ಪ್ರಕೃತಿಯ ವೈಚಿತ್ರ್ಯವನ್ನೂ ಸಸ್ಯಸಮೃದ್ಧಿಯನ್ನೂ ಸ್ವತಂತ್ರವಾಗಿ ಅಲೆದಾಡುವ ಪ್ರಾಣಿವರ್ಗವನ್ನೂ ಎಷ್ಟು ಸರಳವಾಗಿಯೂ ಲಲಿತವಾಗಿಯೂ ವರ್ಣಿಸಿದ್ದಾರೆಂಬುದನ್ನು ಮನಗಾಣಬಹುದು.

ಮುಂದಿನ ಕೆಲವು ಗೀತಗಳು ಆಟ್ವಾರ್ರವರ ಸಿದ್ಧಾಂತಗಳನ್ನು ವಿಶದಪಡಿಸುವುವು. ಭಗವಂತನು ಸಾಕಾರಿಯೂ ಅಹುದು, ನಿರಾಕಾರಿಯೂ ಅಹುದು. ಅವನು ಅಸಂಖ್ಯೇಯ, ಅನುಪಮ, ಲೋಕಾತಿರೇಕಿ; ಅವನೇ ಕವಿಯ ಒಡಲು, ಜೀವದುಸಿರು. ಅವನು ಎಲ್ಲ

ವಸ್ತುಗಳಲ್ಲಿಯೂ ಸಂಬಂಧಿಸಿ ಸೂಕ್ಷ್ಮ ಅಣುವಾಗಿ ಸೇರಿರುತ್ತಾನೆ. ಪ್ರಪಂಚದ ಬೇರೆ ಬೇರೆಯ ವಸ್ತುಗಳು ಯಾವ ಉದ್ದೇಶಕ್ಕಾಗಿ ಸ್ಪಷ್ಟವಾಗಿವೆಯೋ ಆ ಉದ್ದೇಶ ಸಾಧನೆಯಾಗುವ ಹಾಗೆ ಅವುಗಳನ್ನು ಏರ್ಪಡಿಸಲು ಮತ್ತು ಮಾರ್ಪಡಿಸಲು ಆತನೊಬ್ಬನಿಗೇ ಸಾಧ್ಯ. ಮುಂದಿನ ಪದ್ಯವನ್ನು ನೋಡಿ:-

ಎನ್ನೊಡಲು, ಉಯಿರಂತೆ; ಅಂಡಗಳ ಒಳಹೊರಗು,
ಹಾಗೆಂದು ಹೀಗೆಂದು ಬಣ್ಣಿಸಲ್ಕಾಗದವನ್,
ಇನಿಗಂಪಿನೊಳಗಿರುವ ಸೂಕ್ಷ್ಮ ಅಣುವಾಗಿಹನು.
ದುಃಖವನು ಕಾಣದಿಹ ಜ್ಞಾನಸಿಧಿ, ಪರಂಪರನ್.

ಭಗವಂತನ ಅಪಾರ ಗುಣಗಳಲ್ಲಿ ಭಕ್ತನ ದೃಷ್ಟಿಯಿಂದ ಮುಖ್ಯವಾದುದು ಅವನ ಕೃಪಾಗುಣ, ಭಕ್ತನ ಆಸೆಯನ್ನು ತಿಳಿದ ತಕ್ಷಣವೇ ಭಗವಂತನು ಅವನಿಗೆ ತಿಳಿಯದೆಯೆ ಬಂದು ಅವನನ್ನು ಸ್ವೀಕರಿಸುವನು.

ಎನ್ನ ನೀ ಚೆಲ್ವಪ್ಪ ಪೊನ್ನಡಿಯ ಕೆಳಗಿರಿಸು
ಎಂದೆನುತ ಪಲಕಾಲ ನಾ ಬೇಡಿ ಅಳುತಿರಲು,
ಪ್ರೀತಿಯಿಂ ವಾಮನನು ತಾನ್ ಪೊಕ್ಕು ಎನ್ ಮನವ,
ಅದರೊಡನೆ ತಾ ಸೇರಿ ನೆಲೆಯಾಗಿ ನಿಂತಿರ್ಪನ್.

ಪ್ರಪಂಚದಲ್ಲಿ ಭಗವಂತನೊಬ್ಬನು ವಿನಾ ಉಳಿದವೆಲ್ಲ ಅಸ್ಥಿರವಾದುವು, ನಿಜವಾಗಿಯೂ ಪ್ರಾಪ್ಯನಾದವನು ಅವನೊಬ್ಬನೆ. ಈ ವಿಷಯವನ್ನು ಆಳ್ವಾರ್‌ರವರು ಮುಂದಿನ ಪದ್ಯಗಳಲ್ಲಿ ಬಹು ಹೃದಯಂಗಮವಾಗಿ ವರ್ಣಿಸಿದ್ದಾರೆ:-

ಒಂದು ಕೊಡೆಯ ನೆರಳಿನಲ್ಲಿ ಲೋಕವನ್ನೆ ಆಳಿದವರು
ಕರಿಯ ನಾಯಿ ಕಚ್ಚೆ ಕಾಲ, ಒಡೆದ ಮಡಿಕೆಯನ್ನು ಹಿಡಿದು
ಲೋಕವೆಲ್ಲ ಕಾಣುವಂತೆ ಅಂತೆ ಭಿಕ್ಷೆಬೇಡುವುದರಿಂ
ನಾರಯಣನ ಪಾದವನ್ನು ಬಿಡದೆ ತುತಿಸಿ ಬಾಳ್ವುದು.

`ಕಪ್ಪವನ್ನು ತಂದುಕೊಟ್ಟು ಬಾಳಿ' ಎಂದ ರಾಜರಂತೆ
ತಮ್ಮ ಪ್ರಿಯರ ಪೆರರು ಕೊಳ್ಳೆ ತಾವೆ ಬಿಟ್ಟು, ಬೇಗೆಯಿಂದ
ಬೆಂದ ಕಾಡಿನಲ್ಲಿ ಪೋಗಿ ಪೀಡೆಯನ್ನು ತಿನ್ನುವುದರಿಂ
ಚೆಲ್ವಮುಡಿಯ ನಾರಯಣನನಾಳಿಗೊಂಡು ಬಾಳ್ವುದು.

ಅಡಿಯ ಕೆಳಗೆ ಮುಡಿಯನಿಟ್ಟು ರಾಜಗಣವು ಸೇವೆಗೆಯ್ಯೆ
ಸಿಡಿಲ ಸರಿಯ ಮುರಜ ಹೊರಗೆ ದನಿಯಗೆಯ್ಯೆ ಮೆರೆದ ರಾಜರ್

ಕಾಲ ಅಡಿಯ ಧೂಳೆ ಆಗಿ ಪೋಪರದರಿಂ ತುರಿತದಿಂದ
ತುಳಸಿಮಾಲೆಯಿಂದ ಮೆರೆವ ಕೃಷ್ಣನಡಿಯ ನೆನೆದು ಬಾಳ್ವುದು.

ಲೋಕತತ್ತ್ವವನ್ನು ನೆನೆಯೆ ಎಂತೊ ಕಾಲಮಾಳಿ ಕಳೆದ
ರಾಜಸಂಖ್ಯೆ ಕಡಲ ಮಳಲ ರಾಶಿಯಂತೆ ಗಣನೆಯಿಲ್ಲದಾದುದು;
ಅವರು ಸಮೆದ ಮಾಡಮೆಲ್ಲ ಪಾಳು ಭೂಮಿಯಾಯಿತದರಿಂ
ಮತ್ತಗಜವನಳಿದ ಕಣ್ಣನಡಿಯ ನೆನೆದು ಬಾಳ್ವುದು.

ಬಾಳ್ವೆವೆಂದು ಹಿಗ್ಗುವವರ ಸಿರಿಯು ಕೂಡ ಪಿರಿಯ ಮಳೆಯ
ಗುಳ್ಳೆಯಂತೆ ನಶಿಸಿ ನಶಿಸಿ ಮಾಯವಾಗಿ ಪೋಗುತಿಹುದು;
ಬಾಳಿದವರು ಬಾಳ್ವೆ ಬಾಳ್ವರ್ ಎಂಬ ತತ್ತ್ವವಿಲ್ಲದುದರಿಂ
ಪಿರಿಯ ಕಡಲ ಸೆಜ್ಜೆಯವನ ಅಡಿಯ ಸಾರ್ದು ಬಾಳ್ವುದು.

ಮಾನವನಿರುವುದು ಸ್ವಂತ ಉಪಯೋಗಕ್ಕಲ್ಲ. ಭಗವಂತನ ಇಚ್ಛಾನುಸಾರ ಅವನ ಸೇವೆಯನ್ನು ಮಾಡುವುದಕ್ಕೆ; ಭಕ್ತಿಯಿಂದ ಪೂಜಿಸುವುದಕ್ಕೆ. ಈ ಭಕ್ತಿಗೆ ಯಾವ ಪ್ರತಿಫಲಾಪೇಕ್ಷೆಯೂ ಇರಕೂಡದು. ಆದರೂ ನಿತ್ಯಕೈಂಕರ್ಯ ಪ್ರಾಪ್ತಿಯು ಭಕ್ತನು ಪ್ರಾರ್ಥಿಸದಿದ್ದರೂ ಸದ್ಭಕ್ತಿಯ ಫಲವಾಗಿ ಬಂದೇ ಬರುವುದು. ಮೋಕ್ಷವೆಂದರೂ ಇದೇ ಅರ್ಥ. ಅದು ಜಡವಾದ ಸರ್ವಸಂಗತ್ಯಾಗವಲ್ಲ. ಭಗವಂತನ ಉದ್ದೇಶವನ್ನೂ ಆತನ ನಿಯಮವನ್ನೂ ನಡೆಸುವುದಕ್ಕೆ ಸಹಾಯ ಮಾಡುವುದೇ ಮೋಕ್ಷ. ಜ್ಞಾನ, ಭಕ್ತಿ, ಪ್ರಪತ್ತಿಗಳಿಂದ ಈ ಮೋಕ್ಷವನ್ನು ಎಲ್ಲ ಜೀವಿಗಳೂ ಇಹಲೋಕದಲ್ಲಿಯೇ ಪಡೆಯಬಹುದು. ಇದಕ್ಕೆ ಯೋಗ್ಯವಾಗುವಂತೆ ಮನೋವಾಕ್ಕಾಯಗಳನ್ನು ಅನುಗೊಳಿಸಬೇಕೆಂಬುದೇ ಆಳ್ವಾರ್‌ರವರ ಅನವರತ ಪ್ರಾರ್ಥನೆ.

ಪಿರಿದಪ್ಪ ಮೋಕ್ಷವನು ನಾನು ಬೇಡುವುದಿಲ್ಲ;
ಇನಿದಪ್ಪ ನಿನ್ನಡಿಗಳೆನ್ ತಲೆಯ ಮೇಲಿರಲಿ;
ಅದಕಾಗಿ ಬೇಡುವುದು ನಿನ್ನೆಡೆಯ; ಬೇರೆಯೊಂ
ದಿನಿತಿಲ್ಲ; ಗಜರಾಜಗೊಲಿದೆನ್ನ ಸಿರಿವರನೆ!
ಬಾಳಿನಾ ಕಡೆಯಲ್ಲಿ ಇನಿದಪ್ಪ ಮೋಕ್ಷವೂ
ಸ್ವರ್ಗ ನರಕಗಳೆರಡು ಬರಲಿ ಬಾರದೆ ಇರಲಿ;
ಸಾವು ಪುಟ್ಟುಗಳಿರದೆ ಪಲಸಾರಿ ಪುಟ್ಟಿದಗೆ
ಒಂದಿನಿತು ಮರೆಯದೆಯೆ ದುಡಿಯಬೇಕೆಂದಾಸೆ.

ಆಳ್ವಾರ್‌ರವರು ಭಗವಂತನ ಅರ್ಚಾಮೂರ್ತಿಗಳಾದ ದಿವ್ಯ ದೇಶಗಳ ದೇವರನ್ನು ವಿಶೇಷವಾಗಿ ವರ್ಣಿಸಿದ್ದಾರೆ. ದಕ್ಷಿಣ ಭಾರತದ ಚೋಳ, ಪಾಂಡ್ಯ, ಮಲೆಯಾಳ ದೇಶದ ಸುಮಾರು ಮೂವತ್ತು ಮೂರ್ತಿಗಳನ್ನೂ ಉತ್ತರದೇಶದಲ್ಲಿ ಅಯೋಧ್ಯೆ, ಮಥುರೆ ಮತ್ತು

ದ್ವಾರಕೆಗಳಲ್ಲಿರುವ ಮೂರ್ತಿಗಳನ್ನೂ ಬಹು ಮನೋಹರವಾಗಿ ವರ್ಣಿಸಿದ್ದಾರೆ. ಪ್ರಕೃತಿ ಸಾಮಾನ್ಯದಲ್ಲಿ ಭಗವಂತನನ್ನು ಕಾಣುತ್ತಿದ್ದ ಆಳ್ವಾರ್‌ರವರಿಗೆ ಈ ಸುಂದರ ವಿಗ್ರಹಗಳನ್ನು ಕಂಡಾಗ ಸ್ವಾಮಿಯ ಸಾಕ್ಷಾದ್ದರ್ಶನವಾದಂತೆಯೇ ಭಾಸವಾಗುತ್ತಿತ್ತು. ಇವುಗಳು ಅವನ ಬೇರೆ ಬೇರೆ ಅವತಾರಗಳೆಂದೇ ಇವರ ದೃಢನಂಬಿಕೆ. ಅವುಗಳಿಗೆ ತಮ್ಮ ಸಕಲ ಇಷ್ಟಾರ್ಥವನ್ನು ಸಲ್ಲಿಸುವ ಶಕ್ತಿ ಇದೆಯೆಂದು ಅನೇಕೆಡೆಗಳಲ್ಲಿ ವರ್ಣಿಸಿದ್ದಾರೆ. ಬಹು ಕಾಲದಿಂದಲೂ ವೈಷ್ಣವಭಕ್ತರಾದ ಆಳ್ವಾರುಗಳು ಭಗವಂತನ ಸಾಕಾರ ರೂಪವಾದ ಈ ವಿಗ್ರಹಗಳಲ್ಲಿ ತಮ್ಮ ಭಕ್ತಿಯನ್ನು ಬೀಜರೂಪದಲ್ಲಿ ಕೇಂದ್ರೀಕರಿಸಿ ಭಗವಂತನ ಅಸ್ತಿತ್ವವನ್ನು ಅವುಗಳಲ್ಲಿ ಕಂಡು ತಮ್ಮ ಭಕ್ತಿಯನ್ನು ಬೆಳೆಸಿ ಮನಸ್ಸು ಪರಿವರ್ತಿಸಿದ ಹಾಗೆಲ್ಲ ಅದನ್ನು ವಿಸ್ತರಿಸಿ ತನ್ಮೂಲಕ ಭಗವಂತನ ವಿಶ್ವರೂಪವನ್ನೂ ವಿರಾಡ್ರೂಪವನ್ನೂ ಸಾಕ್ಷಾತ್ಕರಿಸಿದ್ದಾರೆ.

ಶಠಾರಿಮುನಿಗಳ ಪ್ರಪತ್ತಿಮಾರ್ಗಕ್ಕೆ ಶರಣಾಗತಿಯೇ ಮುಖ್ಯ ಧರ್ಮ. ಇದು ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ವಿಶೇಷವಾದುದು. ಭಗವಂತನ ಆಜ್ಞೆಯಂತೆ ನಡೆಯುವುದು; ಅವನಿಗೆ ಪ್ರತಿಯಾಗಿ ನಡೆಯದಿರುವುದು; ಅವನೇ ಶರಣ್ಯನೆಂದು ನಂಬುವುದು; ಅವನಲ್ಲದೆ ಮತ್ತಾರನ್ನೂ ರಕ್ಷಕರನ್ನಾಗಿ ಭಾವಿಸದಿರುವುದು-ಇವು ಶರಣಾಗತಿಯ ಬಾಹ್ಯಸ್ವರೂಪ. ಇದು ಸರ್ವರಿಗೂ ಸಾಧ್ಯವಾಗಬಹುದಾದ ಉಪಾಯ. ಆಳ್ವಾರ್‌ರವರು ತಮ್ಮ ಶರಣಾಗತಿಯನ್ನು ಪ್ರಕಾರಾಂತರದಿಂದ ವೈವಾಹಿಕ ಸಂಬಂಧವಾದ ಪ್ರಕ್ರಿಯೆಗಳನ್ನುಪಯೋಗಿಸಿಕೊಂಡು ನಾಯಕನ ವಿಶ್ಲೇಷ ದುಃಖದಿಂದ ತಪಿಸುತ್ತಿರುವ ನಾಯಿಕಾವಸ್ಥೆಯಿಂದ ವಿಶದಪಡಿಸಿದ್ದಾರೆ. ಈ ಸಂದರ್ಭದಲ್ಲಿ ಪ್ರಣಯಿಗಳಿಗೆ ಸಂಬಂಧಪಟ್ಟ ಅನೇಕ ಮಾತುಕತೆಗಳೂ ಸನ್ನಿವೇಶಗಳೂ ಬರುವವು. ಅವುಗಳನ್ನು ಮೇಲೆ ತೋರುವ ಬಾಹ್ಯಾರ್ಥಗಳಿಂದ ಗ್ರಹಿಸಬಾರದು. ಅವುಗಳಿಗೆಲ್ಲಾ ಪ್ರತ್ಯೇಕವಾದ ಅಂತರಾರ್ಥವಿದೆ. ಆತ್ಮನು ನಾಯಿಕಾವಸ್ಥೆಯಲ್ಲಿ ಶರಣಾಗತಿಯ ಮೂಲಕ ಪರಮಾತ್ಮನನ್ನು ಸೇರುವುದಕ್ಕೆ ಆತ್ಮವಿವಾಹವೆಂದು ಸಂಜ್ಞೆ. ಇದರ ವಿವರವು ಸಂಪ್ರದಾಯ ಗ್ರಂಥಗಳಲ್ಲಿ ಈ ರೀತಿ ಇದೆ:- * ``ಶ್ರಿಯಃ ಪತಿಯೆಂಬ ಕಾರ್ಮುಗಿಲ ವರ್ಷದಿಂದ ಕೃಪಾ ಕ್ಷೇತ್ರದಲ್ಲಿ ಜೀವಸಸ್ಯವಂಕುರಿಸುವುದು. ಹಾಗೆಯೇ ಆಶಾಪಿತೃವಿಗೂ ಜ್ಞಾನಮಾತೃವಿಗೂ ಪ್ರಾಣದುಹಿತೃವು ಜನಿಸುವಳು.

ಇವಳಿಗೆ ಆತ್ಮನೆಂಬ ನಾಮಕರಣವಾಗುವುದು. ಈ ಕನ್ಯೆಯು ಭಗವದ್ಭಕ್ತಿಯೆಂಬ ಆಹಾರದಿಂದ ಅಭಿವೃದ್ಧಿಹೊಂದಿ ಕಾಲಾನುಕಾಲದಲ್ಲಿ ಜ್ಞಾನೋತ್ಪತ್ತಿಯಾಗಿ ವಿವಾಹ ವಯಸ್ಕಳಾಗುವಳು. ಆತ್ಮಜ್ಞಾನವೆಂಬ ಅಗ್ನಿಯ ಮುಂದೆ ಈ ಕನ್ಯೆಯು ಪರಮಾತ್ಮನೆಂಬ ವರನಿಗೆ ಧಾರೆಯೆರೆಯಲ್ಪಡುವಳು. ಅದರಂಗವಾಗಿ ಅವಳು ಕೈಂಕರ್ಯಸೂತ್ರದಿಂದಲೂ ನಾಮರೂಪಾಭರಣಗಳಿಂದಲೂ ಅಲಂಕೃತಳಾಗಿ ಭಕ್ತಿಪೀಠಕ್ಕೆ ಕರದೊಯ್ಯಲ್ಪಡುವಳು. ಅಲ್ಲಿ ತ್ಯಾಗಕಾಷ್ಠದಿಂದ ಜಾಜ್ವಲ್ಯವಾದ ವಿಶ್ವಜ್ಞಾನಾಗ್ನಿಯಲ್ಲಿ ಶರಣಾಗತಿಯೆಂಬ ಹೋಮವನ್ನು ಮಾಡಿ ಅಲ್ಲಿಂದ ಸ್ವರ್ಗ ಕಲ್ಯಾಣ ಮಂಟಪಕ್ಕೊಯ್ಯಲ್ಪಟ್ಟು ಆನಂದಶಯ್ಯೆಯಲ್ಲಿ ವಿವಾಹ ಕರ್ಮವನ್ನು ಸಾಂಗಗೊಳಿಸುವಳು. ಈಗ ಆತ್ಮಕನ್ಯೆಯು ಪರಮಾತ್ಮಪತಿಯ ಸಾಕ್ಷಾತ್ಕಾರದಿಂದ ಅವನ ಒಂದು ಭಾಗವೇ ಆಗುವಳು."

ಈ ವಿವರಣದಿಂದ ಆಳ್ವಾರ್‌ರವರ ನಾಯಕ ನಾಯಕೀಭಾವದ ಅರ್ಥವು ವಿಶದವಾಗುವುದು. ಭಗವಂತನನ್ನು ಸೇರಬೇಕೆಂಬ ತಮ್ಮ ಉತ್ಕಟಾವಸ್ಥೆಯಲ್ಲಿ ಅವರು ತಮ್ಮನ್ನು ವಿರಹಪೀಡಿತಳಾದ ನಾಯಕಿಯಂತೆ ಊಹಿಸಿಕೊಂಡು ಆಕೆಯು ತನ್ನ ನಾಯಕನನ್ನು ಸೇರುವುದರಲ್ಲಿ-ಯಾವ ಯಾವ ಅವಸ್ಥೆಯನ್ನು ಪಡೆಯುತ್ತಾಳೆಯೋ ಅವನ್ನೆಲ್ಲಾ ತಮ್ಮಲ್ಲಿ ಆರೋಪಿಸಿಕೊಂಡು ವರ್ಣಿಸಿರುವುದನ್ನು ಮುಂದೆ ನೋಡಬಹುದು.

ಈ ಭಕ್ತಕನ್ಯೆಯು ನಾಯಕನಾದ ಭಗವಂತನ ಪ್ರಥಮ ದರ್ಶನದಲ್ಲಿಯೇ ಅವನಲ್ಲಿ ಮೋಹಿತಳಾಗುವಳು. ಅಂದಿನಿಂದ ಅವಳಿಗೆ ತನ್ನ ಇತರ ಎಲ್ಲ ಕೆಲಸಗಳಲ್ಲಿಯೂ ಔದಾಸೀನ್ಯ ಹುಟ್ಟುವುದು. ಸರ್ವದಾ ಅವನನ್ನೇ ಧ್ಯಾನಿಸುತ್ತಾ ಆಹಾರಾದಿಗಳನ್ನು ತ್ಯಜಿಸುವಳು. ಬಂಧುಗಳೂ ಹಿತವರೂ ಹೇಳಿದ ಮಾತಿಗೆ ಕಿವಿಗೊಡುವುದಿಲ್ಲ. ಅವಳ ಈ ಅವಸ್ಥೆಯನ್ನು ಅವಳ ತಾಯಿಯು ತನ್ನ ಸಖಿಯರಿಗೆ ಹೀಗೆಂದು ವರ್ಣಿಸುವಳು:-

ಸಖಿಯರಿರ! ನೀವು ಕೂಡ ಹೆಣ್ಣು ಹೆತ್ತು ಸಲಹಿದಿರಿ
ಚಪಲೆಯಾದ ಎನ್ನ ಮಗಳ ಇರವನೆಂತು ಬಣ್ಣಿಸಲಿ!
ಶಂಖಮೆಂದು ಚಕ್ರಮೆಂದು ತುಳಸಿಯೆಂದು ಹಗಲಿರಳೂ
ಇಂತಿಂತೇ ಕೂಗುತಿಹಳು, ಪೇಳಿಮೇನ ಮಾಳ್ಪುದೆಂದು?

ಏನ ಮಾಳ್ಪೆನೆನ್ನ ಕಿರಿಯ ಚೆಲುವ ಮಗಳ್ ಸಖಿಯರಿರಾ
ಏನ ಪೇಳೆ ಕೇಳಲೊಲ್ಲಳ್, ಎನ್ನವಶಮುಮಲ್ಲಳವಳ್,
ಮಿಂಚಿನಂತೆ ಪೊಳೆವ ಎದೆಯ ಕೃಷ್ಣನಡಿಯ ತೊಳಸಿ ಮಾಲೆ
ಬಣ್ಣವಳಿದ ತೊಡರನುಳ್ಳ ಎನ್ನ ಎದೆಗೆ ಎಂದು ಪೇಳಿ ನೋವಳವಳ್.

ಭೂಮಿಯನ್ನು ಬಗೆದು ತೋರಿ ಸ್ವಾಮಿಯಳೆದ ಮಣ್ಣಿದೆನ್ಬಳ್
ಬಾನಿನೆಡೆಗೆ ಕಯ್ಯಮುಗಿದು ದೇವನಿರುವ ನಾಡಿದೆನ್ಬಳ್
ಕಣ್ಣತುಂಬ ನೀರ ತುಂಬಿ `ಕಡಲ ಗುಣ್ಪನುಳ್ಳ' ನೆನ್ಬಳ್
ಎನ್ನ ಮಗಳಿಗಿಂತು ಭ್ರಾಂತಿಗೆಯ್ದ ಸ್ವಾಮಿಗೇನಗೆಯ್ವೆನೊ?

ಬಳೆಯು ಸರಿದ ಕಯ್ಯ ಮುಗಿದು ಪರಮ ಪಡುವ ಕಡಲಿದೆನ್ಬಳ್,
ಕೆಂಪಗಿರುವ ರವಿಯ ತೋರಿ ಸಿರಿಯ ವರನ ಮೂರ್ತಿಯೆನ್ಬಳ್,
ಪಡೆಯಲಿಲ್ಲವೆಂದು ಸುಯ್ಯು ನೀರ ಮಿಡಿದು `ದೇವ' ಎನ್ಬಳ್,
ಏಣನಂತೆ ಚೆಲವೆಯಾದ ಕಿರಿಯ ಹರಯದಿವಳ ಗೆಯ್ಮೆಯಜಿಯದಾದೆನೆ!

ಸುಡುವ ಕಿಚ್ಚನಪ್ಪಿ ಬಿಡದ ದೇವನೆಂದು ಸುಯ್ಯುಸುಯ್ಯು ಬೇಯದಿಹಳ್;
ಸುಳಿಯುವಲರ ತಬ್ಬಿ ತಬ್ಬಿ `ಎನ್ನ ಇನಿಯ ಸ್ವಾಮಿ'ಯೆನ್ಬಳ್.

ಅವನ ದಿವ್ಯ ತುಳಸಿಮಲರ ಗಂಧವಲ್ಲಿ ಸುಳಿಯುತಿಹುದು,
ಹುಲ್ಲೆ ಕರುವಿನಂತೆ ತೋರ್ಪ ಇವಳಗೆಯ್ತು ಪಾಪಿಯೆನಗೆ ಒಂದೆ ವಿಧವು.

ಪೂರ್ಣಚಂದ್ರನನ್ನು ತೋರಿ ದಿವ್ಯವರ್ಣನೆಂದು ನುಡಿವಳ್
ನಿಂತಬೆಟ್ಟವೊಂದ ನೋಡಿ `ಸ್ವಾಮಿ ಬಾರೊ' ಎಂದು ಕರೆವಳ್
ಒರಿದು ಕರೆವ ಮಳೆಯ ಕಾಣೆ ದೇವ ಬಂದನೆಂದು ಆರ್ವಳ್
ಎನ್ನ ಚೆಲ್ವ ಕನ್ನೆಯನ್ನು ಎಂದು ಇಂತು ಭ್ರಾಂತಿಗೆಯ್ದರೊ?

ಅವನ ನೆನೆದು ಸುತ್ತ ನೋಡಿ ಬಿಟ್ಟುಹೋದನೆಂದು ಪಾರ್ವಳ್
ಬೆಮರ ಸುರಿಸಿ ಮಳೆಯ ಪೋಲ್ತು ಕಣ್ಣ ನೀರಿಂ ಸುಯ್ಲ ಸುಯ್ವಳ್
ಮತ್ತೆ `ಕೃಷ್ಣ' ಎಂದು ಕೂಗಿ `ನಾಥ ಬಾರೊ' ಎಂದು ಚೀರ್ವಳ್
ಆಶೆಯಿಂದ ಹುಚ್ಚು ಹಿಡಿದ ಎನ್ನ ಪೆಣ್ಗೆ ಗೆಯ್ವೆನೇನನೊ?

ನಾಯಕಿಯು ಪ್ರಿಯನ ವಿರಹದಲ್ಲಿ ಅನೇಕ ದಿನ ಉಪವಾಸಮಾಡುವಳು; ಜಾಗರಣೆ ಮಾಡುವಳು; ಕಣ್ಣಿಗೆ ನಿದ್ರೆಯಿಲ್ಲ; ಮನಸ್ಸಿಗೆ ಶಾಂತಿಯಿಲ್ಲ. ಅವನನ್ನು ಸ್ತೋತ್ರ ಮಾಡುವಳು; ಬೇಡುವಳು. ನಾಯಕನನ್ನು ಕುರಿತು ಪ್ರಪಂಚದ ಎಲ್ಲ ವಸ್ತುವೂ ನೀನೆ ಆಗಿ ಎಲ್ಲರಿಗೂ ಸಂತೋಷವನ್ನುಂಟುಮಾಡುವ ನೀನು ನನಗೇಕೆ ಹೀಗೆ ಮಾಡುವೆ? ಎನ್ನುವಳು. ಪ್ರಿಯನನ್ನು ಕುರಿತು-

ನೀರಾಗಿ ನೆಲನಾಗಿ ತೀಯೆರಲು ಬಾನಾಗಿ
ಇನಶಶಿಗಳೆರಡಾಗಿ ಶಿವನಾಗಿ ಅಜನಾಗಿ
ಶಂಖ ಚಕ್ರವ ಪಿಡಿದು ಜಗವ ನಲಿಸಿದ ದೇವ
ಎನ್ನೆಡೆಗದೇಕಿಂತು ಒರ್ಮೆಯೂ ಬಾರದಿಹೆ?

ಮಾನವರು ಬಾನವರು ನಲಿವಂತೆ ಅದ್ಭುತದ
ವಟುವಾಗಿ ಯೀರಡಿಯೊಳೆರಡು ಲೋಕವನಳೆದ
ಮಾಯವನೆ! ನಿನ್ನ ಬಳಿ ನಾ ನಲಿದು ಕುಣಿವಂತೆ
ತಿರೆಯಲೊರ್ಮೆಯೆ ನೀನು ಬಂದು ತೋರಲೆಬೇಕು.

ಯುಗ ಯುಗದಿ ಭೂಮಿಯೊಳು ಸಂಚರಿಸಿ ಬಾಳ್ಗೆಯ್ದು
ಬಹು ದಿನದಿನಲ್ಲಿರುವ ಪಲವುಸಿರ ಪೊರೆದವನೆ!
ಕಡಲಣುಗಿಯೊಡನಿರುವ ನಿನ್ನಿನಿಯ ರೂಪವನು
ನಾ ಕಾಣದಿನ್ನೆನಿತು ಕಾಲವನು ಕಳೆವೆನಿಲ್ಲಿ?

ಎಂದು ಮೊರೆಯಿಡುವಳು. ಆದರೂ ಪ್ರಿಯನು ಬರುವುದಿಲ್ಲ; ಪಕ್ಷಿಗಳು ಮೇಘಗಳು ಮೊದಲಾದುವುಗಳ ಮೂಲಕ ನಾಯಕನಿಗೆ ಸಂದೇಶವನ್ನು ಕಳುಹಿಸುವಳು. ಆತನ ಸಂಬಂಧವಾದ ಎಲ್ಲ ವಸ್ತುಗಳೂ ತನ್ನದೆನ್ನುವಳು. ಅದಾದರೂ ದೊರಕಲೆಂದು ಕೂಗುವಳು, ಅರಚುವಳು. ಇವಳ ವಿಚಿತ್ರಗತಿಯನ್ನು ಅರ್ಥಮಾಡಿಕೊಳ್ಳಲಾರದ ಇವಳ ನೆರೆಹೊರೆಯವರು ಇವಳನ್ನು ಹುಚ್ಚಿಯೆಂದು ಇವಳ ಸಂಗವನ್ನು ತ್ಯಜಿಸುವರು. ರಾತ್ರಿಯಾಗುವುದು, ಮನೆಯವರೆಲ್ಲ ನಿದ್ರೆಗೆಯ್ಯುವರು; ಇವಳಿಗೆ ಮಾತ್ರ ನಿದ್ರೆ ಹತ್ತದೆ ತನ್ನಷ್ಟಕ್ಕೆತಾನೆ-

ನಗರವೆಲ್ಲ ನಿದ್ರಿಸಿತ್ತು; ಲೋಕವೆಲ್ಲ ಕತ್ತಲಾಯ್ತು;
ಕಡಲ್ಗಳೆಲ್ಲ ಶಾಂತವಾಯ್ತು; ರಾತ್ರಿಯಂತು ಮುಗಿಯದಾಯ್ತು;
ಭೂಮಿಯನ್ನು ಭಕ್ಷಿಸಿದಾ ಶೇಷಶಾಯಿ ಬಾರದಿಹನೆ!
ಇಂತಾಗೆ ಪಾಪಿಯೆನ್ನ ಪ್ರಾಣವನ್ನು ಕಾವರಾರೊ?

ಎಲೆ ಮನಮೇ! ನೀನು ಕೂಡ ಗೆಳೆಯನಲ್ಲೆ,
ರಾತ್ರಿಯಂತು ಕಲ್ಪವಾಗಿ ಬೆಳೆಯುತಿಹುದೆ,
ಎದೆಯಾಣ್ಮ ರಾಮಚಂದ್ರನಿನ್ನು ಬರನೆ-
ಪಾಪಿಪೆಣ್ಣ ಜನ್ಮವೆಂತು ಕಡೆಯಹುದೋ ನಾನಱಿಯೆನ್.

ಎಂದು ತನ್ನ ಬಾಳನ್ನು ಹಳಿಯುವಳು. ತನ್ನ ಜೀವನವು ನಿರರ್ಥಕವೆನ್ನುವಳು. ಹೇಗಾದರೂ ಮಾಡಿ ಅವನನ್ನು ಹುಡುಕಿಯೇ ತೀರಬೇಕೆಂದು ಹೊರಟು ಸಮುದ್ರದ ದಡದಲ್ಲಿಯೂ ಕಾಡುಮೇಡುಗಳಲ್ಲಿಯೂ ಗಿರಿನದಿಗಳಲ್ಲಿಯೂ ಸುಂದರವಾದ ಉಪವನಗಳಲ್ಲಿಯೂ ಅಲೆಯುವಳು. ಅಲ್ಲಿರುವ ದಟ್ಟವಾದ ಮರಗಳೂ ಎತ್ತರವಾದ ಪರ್ವತಗಳೂ ತಿಳಿಯಾದ ಸರೋವರಗಳೂ ಗಂಭೀರವಾದ ನದಿಗಳೂ ಅವಳಿಗೆ ನಾಯಕನ ನೆನಪನ್ನೇ ತರುವುವು. ಅವಳ ವಿರಹವು ಮತ್ತಷ್ಟು ಹೆಚ್ಚುವುದು. ಆ ಸನ್ನಿವೇಶದಲ್ಲಿ ಅವಳಿಗೆ ಅವಳ ಸುತ್ತಲಿರುವ ಪ್ರಪಂಚವೆಲ್ಲ ಅವಳಂತೆಯೇ ವಿರಹತಾಪದಿಂದ ದುಃಖಿಸುವಂತೆ ಕಾಣುತ್ತದೆ. ಅವುಗಳನ್ನು ಹೀಗೆಂದು ಪ್ರಶ್ನಿಸುವಳು-

ಪೆರ್ದೆರೆಯ ಕಡಲ ಬಳಿ ಅಲೆಯುತಿಹ ಎಳೆವಕ್ಕಿ!
ಜಗವೆಲ್ಲ ನಿದ್ರಿಸಲು ನೀ ಮಾತ್ರ ಎದ್ದಿರುವೆ;
ಎನ್ನಂತೆ ನೀನು ಸಹ ಬೇನೆಯಿಂ ಬಳಲುತಿಹೆ;
ಸಿರಿಯರಸನೆನ್ನಂತೆ ನಿನ್ನೆದೆಯನೊಯ್ದಿಹನೆ?

ಸೆಳೆದೊಯ್ದ ಹೃದಯದಿಂ ಬಳಲುತಿಹ ಎಣೆವಕ್ಕಿ
ನೀಡಿರುಳೊಳ್ ಹಾಸಿಗೆಯ ಸೇರದೆಯೆ ದುಃಖಿಸುವೆ;
ಅವನಡಿಯ ಪಿರಿದಾಗಿ ಪಿಡಿದಿರುವ ಎನ್ನವೊಲು
ಅವನ ಕಮ್ಮಲರ್ಗಾಗಿ ಹಾತೊರೆಯುತಿಹೆಯಾ?

ಮನದಾಸೆ ಭಗ್ನವಾದಂತೆ ನೀ ಹಗಲಿರುಳು
ಮನಮರುಗಿ ಎಚ್ಚರದಿ ಸುಯ್ ಸುಯ್ದು ಅಳುತಲಿಹೆ;
ತೆಂಕಣೆನ ಲಂಕೆಯನ್ನು ಉರಿಗಿಟ್ಟ ಪೆರ್ಮನಾ
ಅಡಿಯಾಳ್ಗೆ ನನ್ನಂತೆ ನೀನಹೆಯೊ? ಚಿರಬಾಳು! ಕಡಗಡಲೆ.

ನೀರು ನೆಲಗಳ ಮೇಲೆ ಎಲ್ಲೆಲ್ಲು ಅಲೆದಲೆದು
ಇನಿತು ನಿದ್ರಿಸದಿರುವೆ; ಭಾರತದಿ ಕೈದುಳಿದು
ಚಕ್ರವನೆ ಪಿಡಿದವನ ಕಾಣಲೋಸುಗವಾಗಿ
ಎನ್ನಂತೆ ತೊಳಲುವೆಯ ತಂಗಾಳಿ? ಚಿರಬಾಳು!

ಕಲ್ಪಕಲ್ಪಗಳಲ್ಲಿ ನೀರುಂಡು ಜಗಕೆಲ್ಲ
ಪೆರ್ಮಳೆಯ ಸುರಿಸುತಿಹ ಕಾರ್ಮುಗಿಲೆ! ಎನ್ನಂತೆ,
ಎನ್ನ ಗೆಳತಿಯರಂತೆ, ನೀನು ಸಹ ಮಾಧವನ
ಪಾಶದಿಂ ಸೆಳೆವಟ್ಟು ನಮೆಯುವೆಯ? ಚಿರಬಾಳು!

ಇದರಿಂದ ಇವಳಿಗೆ ಯಾವ ವಿಧವಾದ ಸಮಾಧಾನವೂ ಉಂಟಾಗುವುದಿಲ್ಲ. ಹಾಗೆಯೇ ಪ್ರಿಯನನ್ನು ಹುಡುಕುತ್ತಾ ಮುಂದೆ ಹೋದ ಹಾಗೆಲ್ಲ ಇವಳಿಗೆ ಸಮಾಧಾನವುಂಟಾಗುವ ಬದಲು ಪ್ರಕೃತಿಯಲ್ಲಿ ಸ್ವತಂತ್ರವಾಗಿ ಅಲೆದಾಡುತ್ತ ಇನಿಯನೊಡನೆ ಸರಸಸಲ್ಲಾಪಗಳನ್ನು ಮಾಡುವ ಪಕ್ಷಿ ಮೃಗಗಳು ಇವಳ ವಿಶ್ಲೇಷವನ್ನು ನೋಡಿ ಅಣಕಿಸುವಂತೆ ತೋರುವುದು. ಆಗ ಅವುಗಳನ್ನು ಸಂಬೋಧಿಸಿ -

ಪ್ರಿಯನೊಡನೆ ಲಲ್ಲೆಗೆಯ್ವಾಡುತಿಹ ಕೋಗಿಲೆಯೆ!
ಬೇಟದುತ್ಸವದಿಂದ ತೆಗೆಯುತಿಹೆಯೆನ್ನುಸಿರ;
ಎನ್ನಿನಿಯ ರಮಣನನು ತಂದೀಯಲಾರದೆಯೆ
ಏಕಿಂತು ಅಣಕಿಸುತ ಕೊಲುವಿರೆನ್ನ?
ಹಂಸ ದಂಪತಿಗಳಿರ! ನಾನಿಷ್ಟ ಬೇಡುವೆನು;
ಮುಂದರಿಯದೇಕಿಷ್ಟು ನಲಿಯುವಿರಿ? ಬೇಡವಿದು;
ಗೋಪಾಲನೊರ್ವರಿಗು ಶಾಶ್ವತದ ದಯೆತೋರನ್;
ಕಾಣಿರೇ ಎನ್ನುಸಿರು ಅವನ ಕಯ್ಯಲ್ಲಿಹುದ?

ಎಂದು ಹೇಳಿ ತನ್ನನ್ನು ಉದ್ರೇಕಗೊಳಿಸದಿರುವಂತೆ ಪ್ರಾರ್ಥಿಸುತ್ತಾಳೆ. ಎಷ್ಟುಕಾದರೂ ನಾಯಕನು ಬಾರದಿರಲು ಇವಳಿಗ ಸಹಿಸಲಸದಳವಾಗಿ ಪ್ರಾಣತ್ಯಾಗ ಮಾಡುವ ಸಂಭವವೊದಗುವುದು. ಇದನ್ನು ಪ್ರಿಯನು ತಾನೆ ಹೇಗೆ ಸಹಿಸುವನು? ಇನ್ನು ತಡೆದರೆ ಅನರ್ಥವಾಗಬಹುದೆಂದು ನಾಯಕನು ತಾನೇ ನಾಯಕಿಯಲ್ಲಿಗೆ ಬರುವನು. ಈಗ ಅವಳಿಗೆ

ಅವನ ಸಾಮೀಪ್ಯದಿಂದ ಶಾಂತಿಯುಂಟಾಗುವ ಬದಲು ಅವನ ನಿಷ್ಕಾರುಣ್ಯ ಕಠಿಣತೆಗಾಗಿ ಅವನಲ್ಲಿ ಕೋಪ ಬಂದು ಮುಂದಿನ ಪದ್ಯಗಳಲ್ಲಿ ಅವನನ್ನು ನಿಷೇಧಿಸುವಳು-

ನೀನೊಲಿದ ಪಿಡಿನಡುವಿನಬಲೆಯರ ಮುಂದುಗಡೆ
ನಿನ್ನ ತೀವಿದೆಯಿದನು ಪೇಳಲಂಜುವೆ ನಾನು,
ರಕ್ಕಸನ ಪುರವಳಿದ ನಿನ್ನ ಕೃತ್ರಿಮವರಿವೆ,
ಚೆಂಡು ಗೆಜ್ಜೆಗಳಿತ್ತು ಪೋಗು ನಡೆಯೆನ್ನಿಂದ.

ನಿನ್ನಿನಿಯ ರೂಪವನು ನೋಡಿ ಕುಣಿಯುವ ಭಾಗ್ಯ
ಎನಗಿಲ್ಲ; ಗರಿ ಕೆದರ್ದ ನವಿಲನನುಕರಿಸುತಿಹ
ಮಡದಿಯರ ಪಾಲಾಯ್ತು; ಅದ ನುಡಿದು ಫಲವೇನು?
ಇನಿಗೊಳಲನೂದುತ್ತ ಪಶುಗಳನು ಕಾಯಿ ನಡೆ.

ಪೆರ್ಗಡಲ ನೆರೆ ಕಡೆದ ಎನ್ನಿನಿಯ! ಮಾಯಾವಿ!
ನಿನ್ನ ಈ ವಂಚನೆಯ ತಿಳಿಯದರಿಗರುಹು ನಡೆ,
ಚೆಂಬಾಯಿ ಮಲರ್ಗಣ್ಣು ಮೃತ್ಯುವಾಗಿಹುದಿಂದು
ನಿಡುದೋಳ ಮಡದಿಯರು ನಿನ್ನಡರ್ದರಾರುಂಟು?

ಆದರೆ ನಾಯಕನು ತನ್ನ ತಪ್ಪನ್ನು ಒಪ್ಪಿಕೊಂಡು ನಾಯಕಿಯನ್ನು ಸಮಾಧಾನ ಪಡಿಸುವನು. ಈಗ ನಾಯಕಿಯ ಮನಸ್ಸಿನಲ್ಲಿ ಒಂದು ವಿಚಿತ್ರ ಪರಿವರ್ತನೆಯಾಗುತ್ತದೆ. ತನ್ನ ಇಷ್ಟಾರ್ಥಸಿದ್ಧಿಯಾಗುವ ಬದಲು ಅವಳಿಗೆ ಸುಖದುಃಖಗಳೆರಡರ ಮಿಶ್ರಾನುಭವವಾಗುವುದು. ಅವನನ್ನು ನಿಷ್ಕಾರಣವಾಗಿ ಜರೆದ ತನ್ನ ಸ್ವಭಾವವನ್ನೂ ಅವ್ಯಾಜಕೃಪಾಮಯನಾದ ಅವನ ನಡತೆಯನ್ನೂ ಹೋಲಿಸಿಕೊಂಡು ತಾನು ಸರ್ವಥಾ ಅವನ ಕೃಪೆಗೆ ಅನರ್ಹಳೆಂಬ ಭಾವನೆಯು ಅವಳಿಗೆ ತೋರಿ ಅವನ ಸಮಾಗಮವನ್ನು ಮಾಡುವುದು ಮಹಾಪಾತಕವೆಂದು ತಿಳಿದು ಅವನನ್ನು ಬಿಟ್ಟು ಓಡಿಹೋಗುವಳು. ಆದರೆ ಕೃಪಾಸಮುದ್ರನಾದ ದೇವನಾಯಕನು ಇವಳು ಎಷ್ಟು ಓಡಿದರೂ ಬಿಡದೆ ಬೆನ್ನಟ್ಟಿಕೊಂಡುಹೋಗಿ ಇವಳನ್ನು ಸೋಲಿಸುವನು. ಮಾನವಶಕ್ತಿಯ ಮಿತಿಯು ಮೀರುವುದು. ಶರಣಾಗತಿಯಲ್ಲದೆ ಬೇರೆ ಮಾರ್ಗವಿಲ್ಲ. `ನಿನ್ನ ಇಚ್ಛೆಯು ನೆರವೇರಲಿ' ಎಂಬುದೇ ಮುಂದಿನ ಪಲ್ಲವಿ. ಭಗವಂತನ ಕರಸ್ಪರ್ಶವಾದ ತಕ್ಷಣ ಬ್ರಹ್ಮಾನಂದಪ್ರಾಪ್ತಿಯೂ ಈಶ್ವರ ಸಾಕ್ಷಾತ್ಕಾರವೂ ಏಕತ್ರವುಂಟಾಗುವುದು. ನಾಯಕಿಯು ಕಣ್ತೆರೆದು ಮುಂದಿರುವ ಚಿರಕಾಂಕ್ಷಿತನಾದ ದಿವ್ಯಮಂಗಳ ಸ್ವರೂಪಿಯನ್ನು ನೋಡಿ ಹಿಗ್ಗಿ ಲಕ್ಷ್ಮೀಸಮೇತನಾದ ಅವನೊಡನೆ ವೈಕುಂಠಕ್ಕೆ ಹೊರಡುವಳು. ಆ ಸಮಯದಲ್ಲಿ ಅವರಿಗಾದ ಸುಸ್ವಾಗತವನ್ನು ಮುಂದಿನ ಪದ್ಯಗಳಲ್ಲಿ ನೋಡಿ-

ಬಾನೆಲ್ಲ ಹರಡಿರುವ ನಿರಿಮುಗಿಲು ಘೋಷಿಸಿತು;
ಅಲೆಗಡಲು ಸಂಭ್ರಮದಿ ಕಯ್ಯೆತ್ತಿ ನರ್ತಿಸಿತು;
ಏಳು ಲೋಕಗಳಂತೆ ಬೆಳಗಿದವು; ಎನ್ನೊಡೆಯ
ನಾರಣನ ಸೇವಕರ ತಾವ್ ಕಂಡು ಸಂತಸದಿ.

ನಾರಣನ ತೊತ್ತುಗಳ ಕಂಡು ಸಂತಸದಿಂದ
ಪೊಂಗೊಡವ ತುಂಬಿದವು ಬೆಳ್ಮುಗಿಲು ಆಗಸದಿ;
ನೀರ್ಗಡಲು ಮೇಲೆದ್ದು ಆರಿದವು; ಪೆರ್ಬೆಟ್ಟ
ದಾರಿಯುದ್ದಕು ನಿಂತು ತೋರಣವ ಕಟ್ಟಿದವು.

ವಟುವಾದ ವಾಮನನ ಭಕ್ತಗಣಗಳ ಮುದದಿ
ಜಗವೆಲ್ಲ ಪುಷ್ಪ ಧೂಪಗಳಿಂದ ಪೂಜಿಸಿತು;
ತೆವಸಿಗಳು ಮೌನಮುದ್ರೆಯನೊಡೆದು ಸ್ವರ್ಗಕಿದು
ನಲ್ಬಟ್ಟೆ ದಯಮಾಡಿಯೆಂದೆನುತ ಮುನ್ನಡೆದರ್.

ಕಂಪಿಡಿದ ತುಳಸಿಯನು ಮುಡಿದಿರುವ ಮಾಧವನ
ಭಕ್ತರಿಗೆ ಬಾನವರು ಬೀಡುಗಳ ಬಿಡಿಸಿದರು
ಬೆಂಗದಿರರ್ ಮುನ್ನುಗ್ಗಿ ಹಸ್ತಲಾಘವವಿತ್ತರ್
ಮುರಜಗಳು ದನಿಗೆಯ್ದುವಲೆಗಡಲ ಪೋಲ್ತು.

ಮಾಧವನ ತಮರೆಂದು ಬಾಗಿಲೊಳು ಬಾನವರು
'ದಯಮಾಡಿ ಎಮ್ಮೊಡೆಯ ನೀವ್ ಸೇರಿ' ಎನ್ನುವರು
ಗರುಡ ಕಿನ್ನರರೆಲ್ಲ ಗೀತಗಳ ಪಾಡಿದರು
ವೇದಪಾಠಕರೆಲ್ಲ ಸಂತಸದಿ ಪಯನಿತ್ತರ್.

ಇಂತಹ ಸುಸ್ವಾಗತವನ್ನು ಪಡೆದ ನಾಯಕಿಯ ಸ್ಥಾನಾಪನ್ನರಾದ ಆಳ್ವಾರ್ರವರು ವೈಕುಂಠವನ್ನು ಪ್ರವೇಶಿಸಿ ಪರಂಪರನ ನಿತ್ಯಕೈಂಕರ್ಯ ರೂಪವಾದ ನಿಜವಾದ ಮೋಕ್ಷವನ್ನು ಪಡೆದು ಭಗವಂತನು ತನಗೆ ಮೋಕ್ಷವನ್ನುಂಟು ಮಾಡಿದ ರೀತಿಯನ್ನು ಮುಂದಿನ ಒಂದು ಪದ್ಯದಲ್ಲಿ ಹೇಳಿ ಮುಗಿಸುವರು-

ಎನ್ನ ದೇವನೆನ್ನನೊಲಿದು ಉಯಿರುಮೊಡಲು ತಾನೆ ಆಗಿ
ನಾನು ನನ್ನದವನೆ ಆಗಿ ತನ್ನ ತಾನೆ ತುತಿಸಿ ಯೆನ್ನ
ಜೇನು ಹಾಲು ಅಮರ್ದು ಕಬ್ಬು ಎಲ್ಲ ವಸ್ತು ತಾನೆ ಆಗಿ
ಎನ್ನ ಸೆಳೆದು ತನ್ನೊಳಿರಿಸಿ ತಾನೆ ತನ್ನ ಸೇವೆಯಾಳ್ದನು.

ಇಲ್ಲಿಗೆ ತಿರುವಾಯ್‌ಮೊೞಿಯು ಮುಗಿಯುವುದು. ಇದುವರೆಗಿನ ಒಂದು ಸ್ಥೂಲಪರಿಚಯದಿಂದ ಆೞ್ವಾರ್‌ರವರ ಭಕ್ತಿ ಮಾರ್ಗ ವಿಶದವಾಗಿ ಅರ್ಥವಾಗಿರಬಹುದು. ಅವರ ಕೃತಿಯ ಪರಿಚಯದಿಂದ ಅವರ ವ್ಯಕ್ತಿತ್ವವೂ ಮುಂದಟ್ಟಾಗಿರಬೇಕು. ಕಾಲ ದೇಶ ವರ್ತಮಾನಗಳಿಂದ ಯಾವ ಮೇಲ್ಮೆ ಕೀಳ್ಮೆಗಳನ್ನೂ ಪಡೆಯದೆ ಅವರ ಕೃತಿಗಳು ಪ್ರಪಂಚದ ಭಕ್ತಿರಸಪ್ರಧಾನವಾದ ಗ್ರಂಥಗಳಲ್ಲಿ ಒಂದು ಉತ್ತಮ ಸ್ಥಾನವನ್ನು ಪಡೆದಿವೆ. 

❐

## ಚತುಃಷಷ್ಟಿ ಕಲೆಗಳು

ಭಾರತೀಯ ಸಂಸ್ಕೃತಿಯು ಬಹು ಪುರಾತನವಾದುದು ಮತ್ತು ಬಹುಮುಖವಾದುದು. ಭಾರತೀಯರ ಜೀವನವನ್ನು ಸರ್ವತೋಮುಖವಾಗಿ ಬೆಳೆಸುವುದಕ್ಕಾಗಿ ಅದು ವಿವಿಧಮುಖದಲ್ಲಿ ಬೆಳೆದಿದೆ. ಮಾನವನ ಸೌಖ್ಯಕ್ಕೆ ಸಹಾಯಕವಾಗುವ ಒಂದೊಂದು ವಿದ್ಯೆಯೂ ಕಲೆಯೆಂಬ ಅಭಿಧಾನ ಪಡೆದಿದೆ. ಅವುಗಳ ಸಂಖ್ಯೆ ೪, ೮, ೧೨, ೧೬, ೩೨ ಎಂದು ವಿಧವಿಧವಾಗಿ ಭಿನ್ನಭಿನ್ನ ಗ್ರಂಥಗಳಲ್ಲಿ ಉಕ್ತವಾಗಿವೆ. ಇವೆಲ್ಲವುಗಳನ್ನೊಳಗೊಂಡ ಕಲಾಸಮುದಾಯಕ್ಕೆ ಚತುಷ್ಷಷ್ಠಿ (೬೪) ಕಲೆಯೆಂಬ ರೂಢನಾಮವುಂಟಾಗಿದೆ. ಅದರ ಹೆಸರೇ ಸೂಚಿಸುವಂತೆ ಅದು ೬೪ ಕಲೆಗಳ ಸಮುದಾಯವೆಂಬುದು ಸ್ಪಷ್ಟ. ಇವುಗಳಾವುವೆಂಬುದರಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೆ ಇವುಗಳ ಜ್ಞಾನ ಸರ್ವರಿಗೂ ಅವಶ್ಯಕ. ಅವುಗಳು ದೇಶದ ಕಲಾ ವೈಭವವನ್ನು ಸ್ಪಷ್ಟಪಡಿಸುತ್ತದೆ. ಸುಖಸಾಧನವಾದ ಧನವನ್ನೂ ಅನಾಯಾಸವಾಗಿ ಅಲ್ಪಸ್ವಲ್ಪ ಬಂಡವಾಳದಿಂದ ಒದಗಿಸಿಕೊಡಬಲ್ಲ ಅಥವಾ ಇಷ್ಟಾರ್ಥಸಿದ್ಧಿಯಿಂದ ಮನಸ್ಸಂತೋಷಪಡಿಸುವ ವಿದ್ಯೆಯು ಕಲೆಯೆನಿಸಿಕೊಳ್ಳುವುದು.

ಕಲೆಗಳ ನಿರ್ದೇಶವು ಅನೇಕ ಸಂದರ್ಭಗಳಲ್ಲಿ ವಿವಿಧಗ್ರಂಥಗಳಲ್ಲಿ ಉಕ್ತವಾಗಿವೆ. ಶೈವತಂತ್ರಗಳಲ್ಲಿ ೬೪ ಕಲೆಗಳ ಹೆಸರುಗಳು ಉಕ್ತವಾಗಿವೆ. ವಾತ್ಸ್ಯಾಯನನ `ಕಾಮಸೂತ್ರ' ಮತ್ತು ಅದರ ವಿವಿಧವ್ಯಾಖ್ಯಾನಗಳಲ್ಲಿ ಅವುಗಳ ವಿವರಗಳು ವಿಶದೀಕೃತವಾಗಿವೆ. `ಶುಕ್ರನೀತಿಸಾರ'ದಲ್ಲಿ ಅವುಗಳ ಸ್ವರೂಪವು ವಿವೃತವಾಗಿವೆ. ಆಲಂಕಾರಿಕನಾದ ಭಾಮಹನು ತನ್ನ `ಕಾವ್ಯಾಲಂಕಾರಸೂತ್ರವೃತ್ತಿ'ಯಲ್ಲಿ ಅವುಗಳನ್ನು ಸಂಗ್ರಹಿಸಿದ್ದಾನೆ. ತಿಪ್ಪಭೂಪಾಲನೆಂಬ ರಾಜನು ಮೇಲಿನ ಗ್ರಂಥದ ತನ್ನ ವ್ಯಾಖ್ಯಾನವಾದ `ಕಾಮಧೇನು'ವೆಂಬ ಗ್ರಂಥದಲ್ಲಿ ಭಾಮಹನ ಸಂಗ್ರಹದ ಶ್ಲೋಕಗಳನ್ನು ಉದಾಹರಿಸಿದ್ದಾನೆ. ಇವೆಲ್ಲವುಗಳ ಒಂದು ಸಮಾವೇಶವನ್ನು ಇಲ್ಲಿ ಪ್ರಯತ್ನಿಸಿದೆ.

'ಕಾಮಧೇನು'ವಿನಲ್ಲಿ ೬೪ ಕಲೆಗಳ ಕ್ರಮವು ಈ ರೀತಿ ಇದೆ :

ನೃತ್ತಂ ಗೀತಂ ತಥಾ ವಾದ್ಯಂ ಆಲೇಖ್ಯಂ ಮಣಿಭೂಮಿಕಾ
ದಶನಾದ್ಯಂಗರಾಗಶ್ಚ ಮಾಲ್ಯ ಗುಂಭ ವಿಚಿತ್ರತಾ.
ವೇಣುವೀಣಾದಿಕಾಲಾಪಪಾಟವಂ ಶೇಖರಕ್ರಿಯಾ
ನೇಪಥ್ಯಂ ಗಂಧಯುಕ್ತಿಶ್ಚ ಕರ್ಣಪತ್ರಕ್ರಿಯಾಭಿಧಾ
ವಿಶೇಷಭೇದ್ಯಕ್ಲಿಪ್ತಿಶ್ಚ ನಾನಾಭೂಷಣಯೋಜನಂ.
ಇಂದ್ರಜಾಲಂ ಕೌಚುಮಾರಂ ಸಾಮುದ್ರಂ ಹಸ್ತಲಾಘವಂ
ಸೂಚಿಯಾನಕ್ರಿಯಾ ಸೂತ್ರಕ್ರಿಯಾ ಸಲಿಲವಾದ್ಯಕಂ
ಸೂದಶಾಸ್ತ್ರಪರಿಜ್ಞಾನಂ ಶಾರಿಕಾಶುಕವಾದನಂ
ರಸವಾದೋ ವಾಸ್ತುವಿದ್ಯಾ ತಕ್ಷಣಂ ಮೇಚಿಕೋತ್ಕರಃ
ಸಜೀವನಿರ್ಜೀವದ್ಯೂತ ಶಾಸ್ತ್ರಂಸಂಪಾಠ್ಯಪಾಟವಂ
ಧೋರಣಾ ಮಾತೃಕಾ ಯಂತ್ರಂ ಮಾತೃಕಾ ಕಾವ್ಯಲಕ್ಷಣಂ
ಆಕರ್ಷಿಕ ಕ್ರೀಡಿತಂಚ ನಿಮಿತ್ತಾಗಮವೇದನಂ
ಅಗ್ನ್ಯಂಬುಸೇನಾದಿಸ್ತಂಭಃ ವಿಷಪ್ರತಿವಿಷಾದಯಃ
ಪಾಂಚಾಲೀ ನೃತ್ಯಕರಣಂ ತಂಡುಲಾದಿ ಬಲಿಕ್ರಿಯಾ.
ಪ್ರಹೇಳಿಕಾ ದುರ್ವಚಕ ಪ್ರತಿಮಾಯಾದಿಯೋಜನಂ
ಮಂತ್ರವಾದ ಪರಿಜ್ಞಾನಂ ವಿಶೀರ್ಣಾಕ್ಷರಮುಷ್ಟಿಕಾ
ಸರ್ವಾಭಿಧಾನಕೋಶೋಕ್ತಿಃ ಪರಕಾಯಪ್ರವೇಶನಂ
ಜಯ ವ್ಯಾಯಾಮ ಚಿತ್ರಾಪ್ತಿಃ ಪತ್ರಿಕಾಚಿತ್ರ ಕರ್ತನಂ
ರತ್ನೋತ್ಪತ್ತಿಸ್ಥಾನಶಾಸ್ತ್ರಂ ದರ್ಪಣಾದಿಲಿಪಿಕ್ರಿಯಾ
ತಿರಸ್ಕರಿಣ್ಯಾವಾಪ್ತಿಃ ಪುಷ್ಪಶಾಕಟಕಾದಯಃ
ಹಸ್ತ್ಯಶ್ವಲಕ್ಷಣಜ್ಞಾನಂ ತಿರ್ಯಗ್ರುದಯವೇದನಂ
ಪರೇಂಗಿತಪರಿಜ್ಞಾನಂ ಜಲಯಾನಾಗಮಜ್ಞ ತಾ
ಪರಚೇತಃಪ್ರವೇಶಶ್ಚ ಚತುಷ್ಷಷ್ಟಿರಿಮಾಃಕಲಾಃ.

ಇದರ ವಿವರಗಳನ್ನು ಹೀಗೆ ತಿಳಿಸಬಹುದು :

೧ ನೃತ್ಯಂ : ಮನೋಭಾವಬೋಧಕಾಭಿನಯಪ್ರಧಾನವಾದ ನರ್ತನ.

೨ ಗೀತಂ : ಶಾಸ್ತ್ರೀಯವಾದ ಮನೋರಂಜಕವಾದ ಸಂಗೀತ.

೩ ವಾದ್ಯಂ : ವೀಣೆ ಮೊದಲಾದ ತಂತ್ರವಾದ್ಯ, ಮರ್ದಳ ಮುಂತಾದ ಚರ್ಮ ವಾದ್ಯ, ಕೊಳಲು ನಾಗಸ್ವರ ಮುಂತಾದ ರಂಧ್ರವಾದ್ಯ, ತಾಳ, ಚಿಟಿಕೆ ಮುಂತಾದ ಕಂಚುವಾದ್ಯ ಇವುಗಳ ನಿರ್ಮಾಣ ಮತ್ತು ಕುಶಲತೆ.

೪ ಆಲೇಖ್ಯ : ಭಾವಚಿತ್ರ, ರಸಚಿತ್ರ ಮುಂತಾದುವುಗಳಲ್ಲಿ ಕೌಶಲ್ಯ.

೫ ಮಣಿಭೂಮಿಕಾ : ರಸಗುಂಡು ಮುಂತಾದವುಗಳಿಂದ ವಿನಾಯಕ ಮಂಟಪಾದಿಗಳಲ್ಲಿ ಆಸ್ತರಣೆ.

೬ ದಶನಾದ್ಯಂಗರಾಗ : i) ದಶನರಾಗ-ಹಲ್ಲಿಗೆ ಹೊಳಪು ಬರುವಂತೆ ಮಾಡುವ ಚೂರ್ಣಗಳ ತಯಾರಿಕೆ. ವಸನರಾಗ ii) ಬಟ್ಟೆಗಳಿಗೆ ಬಣ್ಣ ಹಾಕುವುದು. iii) ಅಂಗರಾಗ-ಶರೀರಕ್ಕೆ ಸುಗಂಧ ಕಾಂತಿಕೊಡುವ ಮೆಯ್ಯುಜ್ಜುವ ಪುಡಿಗಳ ನಿರ್ಮಾಣ, ಕುಂಕುಮಾದಿಗಳ ಲೇಪನ.

೭ ಮಾಲ್ಯಗಂಧವಿಚಿತ್ರತಾ : ಅಂದವಾಗಿ ಚಿರಕಾಲ ನಿಲ್ಲುವಂತೆ ಹೂಮಾಲೆ ಕಟ್ಟುವುದು.

೮-೯ ವೇಣುವೀಣಾದಿಕಾಲಾಪಪಾಟವಂ : ಕೊಳಲು ಬಾಜಿಸುವುದು, ವೀಣೆಯನ್ನು ನುಡಿಸುವುದು.

೧೦ ಶೇಖರಕ್ರಿಯಾ : ಬಾಸಿಂಗ ಶಿರಪೇಕ್ಷ ಮೊದಲಾದುವನ್ನು ಮಾಡುವುದು.

೧೧ ನೇಪಥ್ಯ : ಉಡುಗೆತುಡುಗೆಗಳಿಂದ ಅಂದವಾಗಿ ಅಲಂಕರಿಸುವುದು, ಬೊಂಬೆಗಳಿಗೆ ಬಣ್ಣ ಹಾಕುವುದು.

೧೨ ಗಂಧಯುಕ್ತಿ : ಚಂದನಬಿಲ್ಲೆ, ಊದುಬತ್ತಿ ಮೊದಲಾದುವುಗಳ ತಯಾರಿಕೆ.

೧೩ ಕರ್ಣಪತ್ರಕ್ರಿಯಾ: ಓಲೆ, ಕಿವಿ ಮೊದಲಾದುವುಗಳ ಮೇಲೆ ಹೂವಿಟ್ಟು ಅಲಂಕಾರಮಾಡುವುದು.

೧೪ ವಿಶೇಷ ಭೇದ: ಹಣೆಗೆ ಬೊಟ್ಟನ್ನಿಡುವುದು ಮತ್ತು ಅವುಗಳ ನಿರ್ಮಾಣ.

೧೫ ನಾನಾಭೂಷಣಯೋಜನಂ : ಕಿವಿ, ಮೂಗು, ತಲೆ ಮೊದಲಾದ ಸಮಸ್ತ ಭೂಷಣಗಳ ನಿರ್ಮಾಣ ಮತ್ತು ಧಾರಣ.

೧೬ ಇಂದ್ರಜಾಲ: ಮಾಯೆಯಿಂದ ವಸ್ತುಗಳನ್ನು ಬೇರೆಬೇರೆಯಾಗಿ ತೋರಿಸುವುದು.

೧೭ ಕೌಚುಮಾರ: ಸೌಭಾಗ್ಯಕರಣ, ಸೊಬಗು ಮತ್ತು ಸೌಂದರ್ಯಾಲಂಕರಣ.

೧೮ ಸಾಮುದ್ರಂ: ಹಸ್ತಾದಿರೇಖೆಗಳ ಲಕ್ಷಣಜ್ಞಾನ.

೧೯ ಹಸ್ತಲಾಘವಂ: ಕೈಚಮತ್ಕಾರ, ಇಂದ್ರಜಾಲ ಮತ್ತು ಶಸ್ತ್ರಚಿಕಿತ್ಸೆಗಳಲ್ಲಿ ಉಪಯೋಗ.

೨೦ ಸೂಚೀವಾನಕ್ರಿಯಾ: ಹೊಲಿಗೆಯ ವಿದ್ಯೆ, ಕುಪ್ಪಸ ಕವಚಗಳ ನಿರ್ಮಾಣ.

೨೧ ಸೂತ್ರಕ್ರಿಯಾ : ನಾಳಿಕಾಸೂತ್ರಗಳನ್ನು ಬೇರೆಬೇರೆ ತೊಡಸಿ ತೆಗೆಯುವುದು, ನೂಲಿನ ಕೈಗೆಲಸ.

೨೨ ಸಲಿಲವಾದ್ಯಕಂ: ಜಲತರಂಗ, ನೀರುತುಂಬಿದ ವಾದ್ಯಗಳಿಂದ ವಾದ್ಯನುಡಿಸುವುದು.

೨೩ ಸೂದಶಾಸ್ತ್ರಪರಿಜ್ಞಾನ: ಪಾಕಶಾಸ್ತ್ರಪರಿಚಯ, ರುಚಿರುಚಿಯಾದ ಅಡುಗೆಯನ್ನು ಮಾಡುವುದು.

೨೪ ಶಾರಿಕಾಶುಕವಾದನಂ: ಗಿಳಿ ಅರಗಿಳಿಗಳನ್ನು ಮಾತನಾಡಿಸುವುದು.

೨೫ ರಸವಾದ: ರಸಾಯನಶಾಸ್ತ್ರ, ವೈದ್ಯ, ಇಂಜನಿಯರಿಂಗ್ ಶಾಸ್ತ್ರಗಳಲ್ಲಿ ಉಪಯೋಗವಾಗುವ ಲೋಹಶಾಸ್ತ್ರಜ್ಞಾನ, ಮಣ್ಣು, ಕಲ್ಲು ಧಾತುಗಳ ಶೋಧನ, ಮೇಳನ, ಬಂಡೆಗಳನ್ನು ಒಡೆಯುವುದು.

೨೬ ವಾಸ್ತುವಿದ್ಯಾ: ಮಂಟಪ, ಗೋಪುರ ಗೃಹನಿರ್ಮಾಣಾದಿಜ್ಞಾನ.

೨೭ ತಕ್ಷಣಂ : ಮರಗೆಲಸ ಚಂದನಾದಿಗಳಿಂದ ಚಾಮರಾದಿನಿರ್ಮಾಣ, ಶಯನಾಸನ ನಿರ್ಮಾಣ.

೨೮ ಮೇಚಿಕೋತ್ಕರಂ : ?

೨೯ ಸಜೀವದ್ಯೂತ : ಕೋಳಿ, ಟಗರು ಮುಂತಾದುವುಗಳ ಕಾಳಗದ ಜೂಜು.

೩೦ ನಿರ್ಜೀವದ್ಯೂತ : ಚದುರಂಗ ಮುಂತಾದ ಆಟ.

೩೧ ಸಂಪಾಠ್ಯಪಾಟವ : ಸಭೆಗಳಲ್ಲಿ ಗಂಭೀರವಾಗಿ ಓದುವುದು, ಮಾತನಾಡುವುದು, ಗಮಕ.

೩೨ ಧೋರಣ : ಯಂತ್ರ (ಗಾಡಿ ಮುಂತಾದುವುಗಳನ್ನು) ನಡೆಸುವುದು.

೩೩ ಯಂತ್ರಮಾತೃಕಾ : ಯಂತ್ರಗಳ ನಿರ್ಮಾಣ.

೩೪ ಮಾತೃಕಾ : ಭೂಗೋಳ, ಖಗೋಳ ಮತ್ತು ಇತರ ವಸ್ತುಗಳ ಮಾದರಿಗಳನ್ನು ತಯಾರಿಸುವುದು.

೩೫ ಕಾವ್ಯಲಕ್ಷಣಂ : ಸಮಸ್ಯಾಪೂರ್ತಿ ಇತ್ಯಾದಿ.

೩೬ ಆಕರ್ಷಕ ಕ್ರೀಡಿತಂ : ಪಗಡೆ, ಚತುರಂಗ ಮೊದಲಾದುವುಗಳನ್ನು ನಡೆಸುವುದು.

೩೭ ನಿಮಿತ್ತಾಗಮವೇದನಂ : ಶಕುನಶಾಸ್ತ್ರಜ್ಞಾನ.

೩೮-೩೯-೪೦ : ಅಗ್ನಿ, ಅಂಬು, ಸೇನಾದಿಸ್ತಂಭ.

i) ಅಗ್ನಿಸ್ತಂಭ : ರಸಾದಿಲೇಪದಿಂದ ಬೆಂಕಿಯನ್ನು ಮುಟ್ಟಿದರೂ ಸುಡದಂತೆ ಮಾಡುವುದು.

ii) ಅಂಬುಸ್ತಂಭ : ನೀರಿನ ಮೇಲೆ ನಡೆಯುವುದು, ನೆನೆಯದಂತೆ ಮಾಡುವುದು.

iii) ಸೇನಾಸ್ತಂಭ : ಸೈನ್ಯಕ್ಕೆ ಮಂಕು ಹಿಡಿಸುವುದು.

೪೧ ವಿಷಪ್ರತಿವಿಷಾದಿ : ತಾನು ವಿಷಪ್ರಯೋಗ ಮಾಡುವುದು. ಅನ್ಯರು ಮಾಡಿದುದನ್ನು ಕೆಡುವಂತೆ ಮಾಡುವುದು.

೪೨ ಪಾಂಚಾಲಿನೃತ್ಯ : ಬೊಂಬೆಗಳ ಕುಣಿತ, ನಾಟ್ಯ.

೪೩ ತಂಡುಲಾದಿಬಲಿಕ್ರಿಯಾ : ಹಸೆಜಗುಲಿಗೆ ಹಿಟ್ಟಿನಿಂದ ಅಲಂಕಾರ, ರಂಗವಲ್ಲೀ ವೈಚಿತ್ರ್ಯ.

೪೪ ಪ್ರಹೇಳಿಕಾ : ಪುದುರು ಮತ್ತು ಒಗಟುಗಳ ಜ್ಞಾನ.

೪೫ ದುರ್ವಚಕ : ಬಾಯಿಂದ ಮಾತುಗಳು ಹೊರಡದಂತೆ ತಡೆಯುವುದು.

೪೬ ಪ್ರತಿಮಾಯಾದಿಯೋಜನಂ : ಅನ್ಯರ ಮಾಟಕ್ಕೆ ಪ್ರತಿಮಾಟ ಮಾಡುವುದು.

೪೭ ಮಂತ್ರವಾದ ಪರಿಜ್ಞಾನ : ಆಲೋಚನೆಯ ಹೂಟ, ಮತ್ತೊಬ್ಬನ ಆಲೋಚನೆಯ

ಛೇದನ, ಮಂತ್ರಶಾಸ್ತ್ರದ ಪಾಂಡಿತ್ಯ, ಭೂತಾವೇಶ ಉಚ್ಚಾಟನ.

೪೮ ಅಕ್ಷರಮುಷ್ಟಿಕಾ : ಕೈಸನ್ನೆಗಳಿಂದ ಅಕ್ಷರಸಂಕೇತ, ಗೂಢಚಾರಿಗಳು ಮಾತನಾಡಿಕೊಳ್ಳುವ ಸಂಜ್ಞೆಗಳು, ಗೂಢಪಿಟರ ಸಂಕೇತ, ಲಘು ಲಿಪಿ ಇವುಗಳ ಜ್ಞಾನ.

೪೯ ಸರ್ವಾಭಿಧಾನಕೋಶೋಕ್ತಿ : ನಿಘಂಟು ನೋಡುವ ಚಮತ್ಕಾರ.

೫೦ ಪರಕಾಯ ಪ್ರವೇಶ : ಅನ್ಯಶರೀರವನ್ನು ನಮ್ಮ ಮನೋಭಾವಗಳಿಂದ ಪ್ರವೇಶಿಸುವುದು.

೫೧ ಜಯಾಪ್ತಿ : ಯುದ್ಧ, ದ್ಯೂತ, ಆಟಗಳಲ್ಲಿ ಗೆಲ್ಲುವ ಯುಕ್ತಿ.

೫೨ ವ್ಯಾಯಾಮಾಪ್ತಿ : ಗರಡೀಸಾಧನೆಗಳಿಂದ ಶರೀರವಶೀಕರಣ.

೫೩ ಚಿತ್ರಾಪ್ತಿ : ನಾನಾಪ್ರಕಾರ ದೌರ್ಭಾಗ್ಯ, ಏಕೇಂದ್ರಿಯ ಪಲತೀಕರಣ (ಒಂದೇ ಮೀಸೆಯನ್ನು ಬೆಳ್ಳಗೆ ಮಾಡುವುದು, ಹಲ್ಲು ಉದುರಿಸುವುದು; ಮೈಯಲ್ಲಿ ಉಬ್ಬು ಏಳಿಸುವುದು ಇತ್ಯಾದಿ.)

೫೪ ಪತ್ರಿಕಾಚಿತ್ರಕರ್ತನಂ : ಕಾಗದಗಳಲ್ಲಿ ಚಿತ್ರಗಳನ್ನು ಕತ್ತರಿಸುವುದು.

೫೫ ರತ್ನೋತ್ಪತ್ತಿಸ್ಥಾನಶಾಸ್ತ್ರಂ : ರತ್ನವು ಸಿಕ್ಕುವ ಸ್ಥಳಗಳನ್ನು ಗುರುತಿಸುವುದು.

೫೬ ದರ್ಪಣಾದಿಲಿಪಿಕ್ರಿಯಾ : ಕನ್ನಡಿಗಳ ಮೇಲೆ ಅಕ್ಷರಗಳನ್ನು ಬರೆಯುವುದು.

೫೭ ತಿರಸ್ಕರಣ್ಯಾದ್ಯಾವ್ಯಾಪ್ತಿ :- ಯಂತ್ರಮಂತ್ರಾದಿಗಳಿಂದ ತನ್ನನ್ನು ಮರೆಮಾಡಿಕೊಳ್ಳುವುದು.

೫೮ ಪುಷ್ಪಶಾಕಟಿಕಾ : ತೋಟಗಳಲ್ಲಿ ಗರುಡ, ಹನುಮಂತ, ಹುಲಿ ಮುಂತಾದ ಆಕಾರಗಳಿಂದ ಹೂಗಿಡಗಳನ್ನು ನೆಡುವುದು. ಹೂಬಿಟ್ಟ ನಂತರ ಆ ಆಕಾರದಲ್ಲಿಯೇ ತೋರ್ಪಡಿಸುವುದು. ಗಿಡಗಳನ್ನು ಆ ರೀತಿಯಲ್ಲಿ ಕತ್ತರಿಸುವುದು.

೫೯ ಹಸ್ತಿಲಕ್ಷಣ : ಆನೆಗಳ ಲಕ್ಷಣ, ಆಯುರ್ಬಲನಿರ್ಣಯ, ರೋಗಚಿಕಿತ್ಸೆ ಇತ್ಯಾದಿ.

೬೦ ಅಶ್ವಲಕ್ಷಣಂ : ಕುದುರೆಗಳ ಲಕ್ಷಣ, ಸುಳಿ, ನಡೆ, ಆಕಾರ ಆಯುರ್ಬಲ, ರೋಗಚಿಕಿತ್ಸಾ ಇತ್ಯಾದಿ.

೬೧ ತಿರ್ಯಗ್ಹೃದಯವೇದನಂ : ತಿರ್ಯಗ್ಜಂತುಗಳ ಮನೋಭಿಪ್ರಾಯಗಳನ್ನು ತಿಳಿಯುವುದು.

೬೨ ಪರೇಂಗಿತ ಪರಿಜ್ಞಾನ : ಮತ್ತೊಬ್ಬರ ಮುಖಭಾವಚೇಷ್ಟಾದಿಗಳಿಂದ ಅವರ ಮನೋಭಿಪ್ರಾಯವನ್ನು ತಿಳಿಯುವುದು.

೬೩ ಜಲಯಾನಾಗಮಜ್ಞಾನ : ಈಜುವುದು, ಹಡಗು, ತೆಪ್ಪ, ದೋಣಿ ಮೊದಲಾದುವನ್ನು ನಡೆಸುವುದು.

೬೪ ಪರಚೇತ : ಪ್ರವೇಶ : ಮತ್ತೊಬ್ಬರ ಮನಸ್ಸನ್ನು ತನ್ನ ವಶಮಾಡಿಕೊಳ್ಳುವುದು.

ಇವೇ ೬೪ ಕಲೆಗಳು `ಶುಕ್ರನೀತಿಸಾರ'ದಲ್ಲಿ ಈ ರೀತಿ ಉಕ್ತವಾಗಿವೆ.

೧ ಹಾವಭಾವಾದಿಸಂಯುಕ್ತಂ ನರ್ತನಂ : ಮನೋಭಿಪ್ರಾಯವನ್ನೂ ಹಾಡಿನ ಅಭಿಪ್ರಾಯವನ್ನೂ ತಿಳಿಸುವ ಅಭಿನಯಪ್ರಧಾನವಾದ ಕುಣಿತ ನರ್ತನ.

೨ ಅನೇಕವಾದ್ಯಕರಣೇ ಜ್ಞಾನಂ ತದ್ವಾದನೇ ಕಲಾ : ನಾನಾವಿಧವಾದ್ಯ (ತಂತ್ರೀ, ಚರ್ಮ, ಕಾಂಸ್ಯ, ರಂಧ್ರ)ಗಳ ನಿರ್ಮಾಣ ಮತ್ತು ವಾದನ.

೩ ವಸ್ತ್ರಾಲಂಕಾರಸಂಧಾನಂ ಸ್ತ್ರೀಪುಂಸೋಸ್ತು ಕಲಾಸ್ಮೃತಾಃ : ಸ್ತ್ರೀಪುರುಷರನ್ನು ಸಂದರ್ಭೋಚಿತವಾಗಿ ಅಲಂಕಾರ ಮಾಡುವುದು (ಉಡುಗೆತೊಡುಗೆಗಳಿಂದ).

೪ ಅನೇಕರೂಪಾವಿರ್ಭಾವ ಕೃತಿಜ್ಞಾನಂ ಕಲಾಸ್ಮೃತಾ : ನಾನಾವಿಧವಾದ ರೂಪ ಆಕಾರಗಳನ್ನು ತೋರ್ಪಡಿಸುವಿಕೆ.

೫ ಶಯ್ಯಾಸ್ತರಣಸಂಯೋಗ ಪುಷ್ಪಾದಿಗ್ರಥನಾ ಕಲಾ : ಹಾಸಿಗೆ, ಚಿತ್ರ ಕಂಬಳಿ, ಪೀಠಗಳನ್ನು ಅಂದವಾಗಿ ತಯಾರಿಸುವುದು, ಹೂಗಳನ್ನು ಅಂದವಾಗಿ ಕಟ್ಟುವುದು, ಹಾರ ತುರಾಯಿಗಳನ್ನು ಕಟ್ಟುವುದು.

೬ ದ್ಯೂತಾದ್ಯನೇಕಕ್ರೀಡಾಭಿಃ ರಂಜನಂತು ಕಲಾಸ್ಮೃತಾಃ : ಚದುರಂಗ, ಪಗಡೆ ಮುಂತಾದ ಆಟಗಳನ್ನು ಪಂಥದಿಂದ ಆಡಿ ಸಂತೋಷಪಡಿಸುವುದು.

೭ ಅನೇಕಾಸವಸಂಧಾನ್ಯೈಃ ರತಿಜ್ಞಾನಂ ಕಲಾಮತಾ : ಅನೇಕ ಬಂಧಕ್ರಮಗಳಿಂದ ರತಿಸುಖವನ್ನು ಪಡೆಯುವುದು. (ಕಲಾಸಪ್ತಕಮೇತದ್ಧಿ ಗಾಂಧರ್ವೆ ಸಮುದಾಹೃತಂ) ಇವು ಏಳು ಗಾಂಧರ್ವಶಾಸ್ತ್ರದಿಂದ ಆರಿಸಿದುದು.

೮ ಮಕರಂದಾಸವಾದೀನಾಂ ಮದ್ಯಾದೀನಾಂ ಕೃತಿಃ ಕಲಾ : ಜೇನು, ಆಸವ ಮುಂತಾದ ಮದ್ಯಗಳನ್ನು ತಯಾರಿಸುವುದು.

೯ ಗೂಢಶಲ್ಯಾಹೃತೌಜ್ಞಾನಂ ಸಿರಾವ್ರಣವ್ಯಧಃಕಲಾ : ಒಳಗೆ ಅಡಗಿಕೊಂಡಿರುವ ಶಸ್ತ್ರ, ಮುಳ್ಳು, ಗಾಜು ಮೊದಲಾದುವುಗಳನ್ನು ನೋವಿಲ್ಲದೆ ತೆಗೆಯುವುದು. ನಾಡೀವ್ರಣವನ್ನು ಚುಚ್ಚಿ ಕಲ್ಮಷವನ್ನು ತೆಗೆಯುವುದು.

೧೦ ಹಿಂಗ್ವಾದಿರಸಸಂಯೋಗಾದನ್ನಾದಿ ಪಚನಂ ಕಲಾ : ಹಿಂಗು, ಏಲಕ್ಕಿ ಮುಂತಾದ ಪರಿಮಳ, ನಾನಾವಿಧ ರಸಗಳ ಸಂಯೋಗದಿಂದ ರುಚಿಕರವಾದ ಅನ್ನವನ್ನು ಸಿದ್ಧಪಡಿಸುವುದು.

೧೧ ವೃಕ್ಷಾದಿಪ್ರಸವಾರೋಪ ಪಾಲನಾದಿ ಕೃತಿಃ ಕಲಾ : ಗಿಡ ಬಳ್ಳಿ, ಮುಂತಾದ ಹೂವು ಹಣ್ಣುಗಳ ಸಸಿಗಳನ್ನು ನೆಡುವುದು, ಬೆಳೆಸುವುದು, ರಕ್ಷಿಸುವುದು (ಆರಾಮವಿದ್ಯಾ, ವೃಕ್ಷಾಯುರ್ವೇದ).

೧೨ ಪಾಷಾಣಧಾತ್ವಾದಿ ಧೃತಿಃ ತದ್ಭಸ್ಮೀಕರಣಂ ಕಲಾ : ಕಲ್ಲು ಲೋಹ ಮೊದಲಾದುವುಗಳನ್ನು ಒಡೆಯುವುದು ಕರಗಿಸುವುದು, ಭಸ್ಮಮಾಡುವುದು, ವಿಷದ್ರವ್ಯ ರಸದ್ರವ್ಯಗಳನ್ನು ಕರಗಿಸುವುದು.

೧೩ ಯಾವದಿಕ್ಷುವಿಕಾರಾಣಾಂ ಕೃತಿಜ್ಞಾನಂ ಕಲಾಸ್ಮೃತಾ : ಕಬ್ಬಿನಿಂದ ಬೆಲ್ಲ, ಸಕ್ಕರೆ, ಮದ್ಯಗಳನ್ನು ತಯಾರಿಸುವುದು.

೧೪ ಧಾತ್ವೌಷಧೀನಾಂ ಸಂಯೋಗಜ್ಞಾನಂ ಕಲಾಮತಾ : ಧಾತುಗಳು ಮೂಲಿಕೆಗಳು ಇವುಗಳ ಔಷಧೋಪಯೋಗ ಸಂಯೋಗ.

೧೫ ಧಾತುಸಾಂಕರ್ಯ ಪಾರ್ಥಕ್ಯಕರಣಾಂತು ಕಲಾಸ್ಮೃತಾ : ಬೇರೆ ಬೇರೆ ಲೋಹಗಳ ವಿಚಿತ್ರವಾದ ಸೇರ್ಪಡೆ ಮತ್ತು ಅವುಗಳ ವಿಭಾಗಕ್ರಮ.

೧೬ ಸಂಯೋಗಪೂರ್ವವಿಜ್ಞಾನಂ ಧಾತ್ವಾದೀನಾಂ ಕಲಾಸ್ಮೃತಾ : ಲೋಹಗಳ ಸಂಯೋಗಕ್ಕೆ ಮುಂಚೆ ಅವುಗಳ ಪ್ರತ್ಯೇಕ ಉಪಯೋಗ ಜ್ಞಾನ.

೧೭ ಕ್ಷಾರನಿಷ್ಕಾಸನಜ್ಞಾವಂ ಕಲಾಸಂಜ್ಞಂತು ಸಂಮತಾ : ಪದಾರ್ಥಗಳಿಂದ ಸತ್ವಕ್ಷಾರಗಳನ್ನು ತೆಗೆಯುವುದು.

೧೮ ಶಸ್ತ್ರಸಂಧಾನವಿಕ್ಷೇಪಃ ಪಾದಾದಿನ್ಯಾಸತಃಕಲಾ : ಕ್ರಮವಾಗಿ ಕಾಲನ್ನಿಡುತ್ತಾ ಬಾಣವನ್ನು ಗುರಿಯಾಗಿಟ್ಟು ಹೊಡೆಯುವುದು.

೧೯ ಸಂಧ್ಯಾಘಾತಕೃಷ್ಟಿಭೇದ್ಯೈಃ ಮಲ್ಲಯುದ್ಧಂ ಕಲಾಸ್ಮೃತಾ : ಹೊಂಚು ಕಾಯ್ದು ಪಟ್ಟುಹಿಡಿದು ಎಳೆದು ಕುಸ್ತಿ ಮಾಡುವುದು.

೨೦ ಕಲಾಭಿಲಷಿತೇದೇಶೆ ಯಂತ್ರಾದ್ಯಸ್ತ್ರನಿಪಾತನಂ : ಗುರಿಯಿಟ್ಟು ಅಸ್ತ್ರಶಸ್ತ್ರಗಳನ್ನು ಬಿಡುವಿಕೆ. ಚಲಲಕ್ಷ್ಯ, ಉಭಯಚಲ, ಛಾಯಾವೇಧ, ಶಬ್ದವೇಧ ಇತ್ಯಾದಿ.

೨೧ ವಾದ್ಯಸಂಕೇತಕೋವ್ಯೂಹರಚನಾದಿಕಲಾಸ್ಮೃತಾ : ವಾದ್ಯಸಂಕೇತಕ್ಕೆ ತಕ್ಕಂತೆ ವ್ಯೂಹರಚನೆ.

೨೨ ಗಜಾಶ್ವರಥಗತ್ಯಾತು ಯುದ್ಧಸಂಯೋಜನಂ ಕಲಾ : ಗಜಾಶ್ವರಥಗಳನ್ನು ನಡೆಸುತ್ತ ಯುದ್ಧಮಾಡುವಿಕೆ. ಇವು ಆಯ್ದು ಧನುರ್ವೇದದಿಂದ ಆರಿಸಿ ಕೊಂಡದು.

೨೩ ವಿವಿಧಾಸನ ಮುದ್ರಾಭಿಃ ದೇವತಾತೋಷಣಂ ಕಲಾ : ನಾನಾವಿಧವಾದ ಆಸನ ಮುದ್ರೆ (ಅಂಜಲಿ)ಗಳಿಂದ ದೇವತೆಗಳನ್ನು ಸಂತೋಷಪಡಿಸುವುದು.

೨೪ ಸಾರಥ್ಯಂಚ ಗವಾಶ್ವಾದೇಃ ಗತಿಶಿಕ್ಷಾಃ ಕಲಾಸ್ಮೃತಾಃ : ಆನೆ ಕುದುರೆಗಳನ್ನು ತಿದ್ದುವುದು ಮತ್ತು ಸವಾರಿಮಾಡುವುದು.

೨೫-೨೬-೨೭-೨೮ ವೃತ್ತಿಕಾಕಾಷ್ಠಪಾಷಾಣಧಾತುಭಾಂಡಾದಿಸತ್ಕ್ರಿಯಾ ಪೃಥಕಲಾಚತುಷ್ಕಂತುರ-ಚಮತ್ಕಾರವಾದ ಕುಂಬಾರಕೆಲಸ, ಮರದಪಾತ್ರೆ, ಕಲ್ಮಡಕೆ, ಲೋಹದಪಾತ್ರೆಗಳು ಇವುಗಳನ್ನು ತಯಾರಿಸುವುದು.

೨೯ ಚಿತ್ರಾದ್ಯಾಲೇಖನಂ ಕಲಾ : ಅನೇಕ ವಿಧವಾದ ಚಿತ್ರಗಳನ್ನು ಬರೆಯುವುದು.

೩೦ ತಟಾಕವಾಪೀಪ್ರಾಸಾದಸಮಭೂಮಕ್ರಿಯಾ ಕಲಾ : ಕೆರೆ, ಬಾವಿ, ಉಪ್ಪರಿಗೆ ಮುಂತಾದುವುಗಳನ್ನು ಸರಿಯಾಗಿ ಕಟ್ಟುವಿಕೆ.

೩೧ ಘಟಾದ್ಯನೇಕ ಯಂತ್ರಾಣಾಂ ವಾದ್ಯಾದೀನಾಂ ಕೃತಿಃಕಲಾ : ಗಡ, ತಬಲಾ ಮುಂತಾದವಾದ್ಯ ಮತ್ತು ಯಂತ್ರಗಳ ನಿರ್ಮಾಣ.

೩೨ ಹೀನಮಧ್ಯಾದಿಸಂಯೋಗವರ್ಣಾದ್ಯೈಃ ರಂಜನಂ ಕಲಾ : ಸಾಧಾರಣ ಮತ್ತು ವಿಶೇಷ ರೀತಿಯ ಬಣ್ಣಗಳನ್ನು ಮಿಶ್ರಣಮಾಡಿ ರಮ್ಯವಾಗಿ ಬಣ್ಣ ಹಾಕುವಿಕೆ.

೩೩ ಜಲವಾಯ್ವಗ್ನಿಸಂಯೋಗನಿರೋಧೇಶ್ಚ ಕ್ರಿಯಾಕಲಾ : ನೀರು, ಗಾಳಿ, ಬೆಂಕಿ ಇವುಗಳ ಸಂಯೋಗವನ್ನು ತಡೆಯುವುದು.

೩೪ ನೌಕಾರಥಾದಿಯಾನಾನಾಂ ಕೃತಿಜ್ಞಾನಾಂ ಕಲಾಸ್ಮೃತಾ : ಹಡಗು, ರಥ ಮುಂತಾದ ವಾಹನಗಳನ್ನು ತಯಾರಿಸುವುದು.

೩೫ ಸೂತ್ರಾದಿರಜ್ಜುಕರಣಂ ವಿಜ್ಞಾನಂತು ಕಲಾಮತಾ : ನೂಲುವುದು ಮತ್ತು ಹಗ್ಗ ಹೊಸೆಯುವುದು.

೩೬ ಅನೇಕತಂತುಸಂಯೋಗೈಃ ಪಟಬಂಧಃ ಕಲಾಸ್ಮೃತಾ : ನಾನಾರೀತಿಯ ನೇಯ್ಗೆಯ ಕೆಲಸ.

೩೭ ವೇಧಾದಿಸದಸತ್ ಜ್ಞಾನಂ ರತ್ನಾದೀನಾಂಕಲಾಸ್ಮೃತಾ : ರತ್ನಗಳಿಗೆ ವಜ್ರವನ್ನು ಹೊಡೆಯುವುದು, ಪಟ್ಟೆ ಹೊಡೆಯುವುದು ಇತ್ಯಾದಿ.

೩೮ ಸ್ವರ್ಣಾದೀನಾಂಚ ಯಾಥಾತ್ಮ್ಯವಿಜ್ಞಾನಂ ಚ ಕಲಾಮತಾ : ಚಿನ್ನಬೆಳ್ಳಿಗಳ ತಾರತಮ್ಯವನ್ನು ಕಂಡುಹಿಡಿಯುವಿಕೆ.

೩೯ ಕೃತ್ರಿಮಸ್ವರ್ಣರತ್ನಾದಿಕ್ರಿಯಾಜ್ಞಾನಂ ಕಲಾಸ್ಮೃತಾ : ಕೃತ್ರಿಮವಾಗಿ ಚಿನ್ನ ರತ್ನಗಳನ್ನು ಮಾಡುವುದು, ಮಾಡಿದ್ದನ್ನು ಕಂಡುಹಿಡಿಯುವುದು.

೪೦-೪೧ ಸ್ವರ್ಣಾದ್ಯಲಂಕಾರಕೃತಿಃ ಕಲಾಲೇಪಾದಿ ಸತ್ಕೃತಿಃ : ಚಿನ್ನ, ಬೆಳ್ಳಿ ಒಡವೆಗಳನ್ನು ಮಾಡುವುದು, ಅವುಗಳ ಮುಲಾಮನ್ನು ಹಾಕುವುದು.

೪೨ ಮಾರ್ದವಾದಿಕ್ರಿಯಾಜ್ಞಾನಂ ಚರ್ಮಣಾಂತು ಕಲಾಸ್ಮೃತಾ : ಚರ್ಮಕ್ಕೆ ಹದಕೊಡುವುದು.

೪೩ ಪಶುಚರ್ಮಾಂಗನಿರ್ಹಾರಕ್ರಿಯಾಜ್ಞಾನಂ ಕಲಾಸ್ಮೃತಾ : ಮೃಗಗಳ ಚರ್ಮವನ್ನು ಸುಲಿಯುವುದು.

೪೪ ದುಗ್ಧದೋಹಾದಿವಿಜ್ಞಾನಂ ಘೃತಾಂತಂತು ಕಲಾಸ್ಮೃತಾ : ಹಾಲನ್ನು ಕರೆಯುವುದು, ಹೆಪ್ಪುಹಾಕುವುದು, ಕಡೆಯುವುದು, ತುಪ್ಪಮಾಡುವುದು ಇತ್ಯಾದಿ.

೪೫ ಸಿವನೇ ಕಂಚುಕಾದೀನಾಂ ವಿಜ್ಞಾನಂತು ಕಲಾಸ್ಮೃತಾ : ಕವಚಕುಪ್ಪಸಗಳನ್ನು ಹೊಲಿಯುವುದು.

೪೬ ಬಾಹ್ವಾದಿಭಿಶ್ಚತರಣಂ ಕಲಾಸಂಜ್ಞೇ ಜಲಂಸ್ಮೃತಂ : ತೋಳು, ಬುರುಡೆ, ಚಂಡು ಇವುಗಳ ಸಹಾಯದಿಂದ ಈಜುವುದು.

೪೭ ಮಾರ್ಜನೇ ಗೃಹಭಾಂಡಾದೇಃ ವಿಜ್ಞಾನಾಂತು ಕಲಾಸ್ಮೃತಾ : ಮನೆಯ ಪಾತ್ರೆ, ಕುಡಿಕೆಮಡಿಕೆಗಳನ್ನು ತೊಳೆದಿಡುವುದು.

೪೮ ವಸ್ತ್ರಸಂಮಾರ್ಜನಂಚೈತ : ಬಟ್ಟೆಯನ್ನು ಒಗೆಯುವುದು.

೪೯ ಕ್ಷೌರಕರ್ಮಕಲೇಷ್ಯುಛೆ : ಕ್ಷೌರಕರ್ಮವನ್ನು ಮಾಡುವುದು.

೫೦ ತಿಲಮಾಂಸಾದಿಸ್ನೇಹಕಲಾಸಿಷ್ಯಾಸನೇಕೃತಿಃ :- ಎಳ್ಳಿನ ತಿರುಳು ಮೊದಲಾದವುಗಳಿಂದ ಎಣ್ಣೆಯನ್ನು ತೆಗೆಯುವುದು.

೫೧ ಸೀರಾದ್ಯಾಕರ್ಷಣಂಜ್ಞಾನಂ : ಭೂಮಿಯನ್ನು ಅಳೆಯುವುದು.

೫೨ ವೃಕ್ಷಾದ್ಯಾರೋಪಣೇ ಕಲಾ : ತೋಪು ಬೆಳೆಸುವುದು.

೫೩ ಮನೋನುಕೂಲಸೇವಾಯಾಃಕೃತಿಜ್ಞಾನಂ ಕಲಾಸ್ಮೃತಾಃ : ಯಜಮಾನನ ಮನಸ್ಸಿಗೆ ಒಪ್ಪುವಂತೆ ಕೆಲಸ ಮಾಡುವುದು.

೫೪-೫೫ ವೇಣು ತೃಣಾದಿಪಾತ್ರಾಣಾಂ ಕೃತಿಜ್ಞಾನಂ ಕಲಾಸ್ಮೃತಾ : ಬಿದಿರು ಹುಲ್ಲು ಮುಂತಾದುವುಗಳಿಂದ ತಟ್ಟಿ, ಬುಟ್ಟಿ, ಪಾತ್ರೆ ಮುಂತಾದುವುಗಳನ್ನು ಮಾಡುವುದು.

೫೬ ಕಾಚಪಾತ್ರಾದಿಕರಣಂ ವಿಜ್ಞಾನಂತು ಕಲಾಸ್ಮೃತಾ : ಗಾಜಿನಿಂದ ಸಾಮಾನುಗಳನ್ನು ಮಾಡುವುದು.

೫೭ ಸಂಸೇಚನಂ ಸಂಹರಣಂ ಜಲಾನಾಂತು ಕಲಾಸ್ಮೃತಾ : ನೀರನ್ನು ಎತ್ತುವುದು ಮತ್ತು ಎರಚುವುದು.

೫೮-೫೯ ಲೋಹಾಭಿಸಾರಶಸ್ತ್ರಾಸ್ತ್ರಕೃತಿಜ್ಞಾನಂ ಕಲಾಮತಾ : ಲೋಹಗಳಿಂದ ಅಸ್ತ್ರಶಸ್ತ್ರಗಳನ್ನು ಮಾಡುವುದು ಮತ್ತು ಅವುಗಳಿಗೆ ಹದಕೊಡುವುದು.

೬೦ ಗಜಾಶ್ವವೃಷಭೋಷ್ಟ್ರಾಣಾಂ ಕಲ್ಯಾಣಾದಿಕ್ರಿಯಾಕಲಾ : ಆನೆ, ಕುದುರೆ ಮತ್ತು ಒಂಟೆ ಇವುಗಳ ಜೀನನ್ನು ತಯಾರಿಸುವುದು.

೬೧ ಶಿಶೋಸ್ಸಂರಕ್ಷಣೇಜ್ಞಾನಂ ಧಾರಣೇ ಕ್ರೀಡನೇ ಕಲಾ : ಮಕ್ಕಳನ್ನು ಕಾಪಾಡುವುದು, ಎತ್ತಿಕೊಳ್ಳುವುದು ಮತ್ತು ಆಡಿಸುವುದು.

೬೨ ಸುಯುಕ್ತತಾಡನಜ್ಞಾನಮಪರಾಧಿಜನೇ ಕಲಾ : ತಪ್ಪು ಮಾಡಿದವರನ್ನು ಅಪಾಯವಿಲ್ಲದಂತೆ ಉಪಾಯವಾಗಿ ದಂಡಿಸುವುದು.

೬೩ ನಾನಾದೇಶೀಯವರ್ಣಿನಾಂ ಸುಸಮ್ಯುಕ್ ಲೇಖನೇ ಕಲಾ : ನಾನಾದೇಶದ ಲಿಪಿಜ್ಞಾನ.

೬೪ ತಾಂಬೂಲರಕ್ಷಾದಿಕೃತಿವಿಜ್ಞಾನಾಂತು ಕಲಾಸ್ಮೃತಾ : ತಾಂಬೂಲಾದಿಗಳನ್ನು ಒಣಗಿಸದೇ ಕಾಪಾಡುವುದು.

ಹೀಗೆ ೬೪ ಕಲೆಗಳನ್ನು ಸಂಕ್ಷೇಪವಾಗಿ ವಿವರಿಸಿದೆ.

**ವಾತ್ಸ್ಯಾಯನನ ಕಾಮಸೂತ್ರದಲ್ಲಿ ವಿವೃತವಾದ ೬೪ ಕಲೆಗಳು :**

ಗೀತಾ (ಹಾಡುಗಾರಿಕೆ) ವಾದ್ಯ (ವಾದ್ಯಗಳನ್ನು ನುಡಿಸುವುದು) ನೃತ್ಯ (ಕುಣಿಯುವುದು) ಆಲೇಖ್ಯ (ಚಿತ್ರಗಳನ್ನು ಬರೆಯುವುದು) ವಿಶೇಷಕಚ್ಛೇದ್ಯ (ಹಣೆಯ ಮೇಲೆ ವಿವಿಧಾಕೃತಿಯ

ಚಿತ್ರಗಳನ್ನು ಬರೆಯುವುದು) ತಂಡುಲಕುಸುಮ ಬಲಿವಿಕಾರ (ಪೂಜೆಗಾಗಿ ಅಕ್ಕಿ ಹೂವುಗಳನ್ನು ಬಗೆಬಗೆಯಾಗಿ ಜೋಡಿಸುವುದು) ಪುಷ್ಪಾಸ್ತರಣ (ಮನೆಯನ್ನೋ ಕೊಠಡಿಯನ್ನೋ ಹೂವುಗಳಿಂದ ಅಲಂಕರಿಸುವುದು) ದಶನವಸನಾಂಗರಾಗ (ಹಲ್ಲುಗಳಿಗೂ ಬಟ್ಟೆಗಳಿಗೂ ಶರೀರಕ್ಕೂ ಬಣ್ಣವನ್ನು ಬಳಿಯುವುದು) ಮಣಿಭೂಮಿಕಾ ಕರ್ಮ (ರತ್ನಖಚಿತವಾದ ನೆಲೆಗಟ್ಟು ಮಾಡುವುದು, ಮೊಸಾಯಿಕ್ ಕೆಲಸ, ಬೊಂಬೆಗಳನ್ನು ಮಾಡುವುದು) ಶಯನರಚನ (ಹಾಸಿಗೆಗಳನ್ನು ಮಾಡುವುದು) ಉದಕವಾದ್ಯ (ಮುರಜ ಮೊದಲಾದುವುಗಳ ಧ್ವನಿಯಂತೆ ನೀರಿನ ಮೇಲೆ ಬಾಜಿಸುವುದು) ಉದಕಾಘಾತ (ಜಲಕ್ರೀಡೆಯಲ್ಲಿ ಬೊಗಸೆಗಳಲ್ಲಿ ನೀರನ್ನು ತುಂಬಿ ಇತರರ ಮೇಲೆ ಎರಚುವುದು) ಚಿತ್ರಾಯೋಗ (ಮದ್ದು ಮೂಲಿಕೆಯಿಂದ, ಔಷಧಿಗಳಿಂದ, ಮಂತ್ರಗಳಿಂದ ಇತರರು ಕೃಶಕಾಯರೂ ಅಕಾಲದಲ್ಲಿ ತಲೆನರೆತವರೂ ಹುಚ್ಚರೂ ಆಗುವಂತೆ ಮಾಡುವುದು). ಮಾಲ್ಯಗ್ರಥನವಿಕಲ್ಪ (ಹಲವು ರೀತಿಯ ಹೂವಿನ ಹಾರಗಳನ್ನು ಕಟ್ಟುವುದು) ಶೇಖರಿಕಾಪೀಡಪ್ರಯೋಜನ (ಶೇಖರಕಗಳನ್ನೂ ಆಪೀಡಕಗಳನ್ನೂ ಧರಿಸುವುದು, ಉಚಿತವಾದ ಸ್ಥಳಗಳಲ್ಲಿ ಶಿರೋಭೂಷಣವಾಗಿ ತೊಡುವ ಆಭರಣಗಳು) ನೇಪಥ್ಯ ಪ್ರಯೋಗ (ತಾನು ವಸ್ತ್ರಾಲಂಕಾರಗಳನ್ನು ಮಾಡಿಕೊಳ್ಳುವುದು ಮತ್ತು ಇತರರಿಗೆ ಅಲಂಕಾರ ಮಾಡುವುದು) ಕರ್ಣಪತ್ರಭಂಗ (ದಂತ ಮೊದಲಾದವುಗಳಿಂದ ಕರ್ಣಾಭರಣಗಳನ್ನು ಮಾಡುವುದು) ಗಂಧಯುಕ್ತಿ (ಪರಿಮಳದ್ರವ್ಯಗಳ ತಯಾರಿಕೆ) ಭೂಷಣಯೋಜನ (ಆಭರಣಗಳನ್ನು ತಯಾರಿಸುವುದು) ಇಂದ್ರಜಾಲಯೋಗ (ಇಂದ್ರಜಾಲದ ವಿಧಾನಗಳು ಅಂದರೆ ಭ್ರಮಾಸೃಷ್ಟಿಯನ್ನು ನಿರ್ಮಿಸುವುದು-ದೇವತೆಗಳು, ಸರ್ಪಗಳು, ಸೈನ್ಯಾದಿಗಳು ಇತ್ಯಾದಿ.) ಕೌಚುಮಾರಯೋಗ (ಕುಚುಮಾರನ ಚಿಕಿತ್ಸಾನಿರ್ದೇಶನ-ದೃಢದೇಹಿಯೂ ವೀರ್ಯವಂತನೂ ಆಗುವಂತೆ ಮಾಡುವುದು) ಹಸ್ತಲಾಘವ (ಎಲ್ಲ ಕೆಲಸಗಳಲ್ಲಿಯೂ ಕೈಚುರುಕನ್ನು ಪ್ರದರ್ಶಿಸುವುದು, ವ್ಯಕ್ತಿಗಳ ಎದುರಿನಲ್ಲಿಯೇ ಪದಾರ್ಥಗಳನ್ನು ಕದಿಯುವುದು.) ವಿಚಿತ್ರಶಾಕಯೂಪ (ಬಗೆ ಬಗೆಯ ಕಾಯಿಪಲ್ಯಗಳ ತಯಾರಿಕೆ-ಸಾರುಹುಳಿ ಇತ್ಯಾದಿಗಳನ್ನು ರಚಿಸುವುದು) ಪಾನಕರಾಗಾಸವಯೋಜನ (ಪಾನಕರಸ ಮೊದಲಾದ ವಿವಿಧ ಪೇಯಗಳನ್ನು ಸಿದ್ಧಪಡಿಸುವುದು), ಸೂಚಿವಾನ ಕ್ರಿಯೆಗಳು (ಹೊಲಿಗೆ ಮತ್ತು ನೇಯುವ ಕೆಲಸ-ಕಸೂತಿ ಕೆಲಸ, ಕುಂಬಾರ ಕೆಲಸ ಇತ್ಯಾದಿ) ಸೂತ್ರಕ್ರೀಡಾ (ದಾರಗಳಿಂದ ವಿವಿಧ ಮಾದರಿಗಳನ್ನು ಮಾಡುವುದು) ವೀಣಾಡಮರುಕ ವಾದ್ಯಗಳು (ವೀಣೆ ಡಮರುಕ ಇತ್ಯಾದಿಗಳನ್ನು ಬಾಜಿಸುವುದು). ಪ್ರಹೇಳಿಕಾ (ಒಗಟುಗಳನ್ನು ಬಿಡಿಸುವುದು) ಪ್ರತಿಮಾಲಾ (ಅಂತ್ಯಾಕ್ಷರೀ) ದುರ್ವಾಚಕಯೋಗ (ಮತ್ತೊಂದು ಆಟ-ಪ್ರತಿಯೊಬ್ಬ ಸ್ಪರ್ಧಿಯೂ ಪರುಷಾಕ್ಷರ ಘಟಿತವಾದ ಶ್ಲೋಕಗಳನ್ನು ಹೇಳುವುದು) ಪುಸ್ತಕವಾಚನ (ಪುಸ್ತಕಗಳನ್ನು ಓದುವುದು) ನಾಟಕಾಖ್ಯಾಯಕ ದರ್ಶನ (ನಾಟಕ ಮತ್ತು ಆಖ್ಯಾಯಿಕೆಗಳ ಜ್ಞಾನ) ಕಾವ್ಯಸಮಸ್ಯಾಪೂರಣ (ಶ್ಲೋಕದ ಕೊನೆಯ ಪಾದವನ್ನು ಸೂಚಿಸುವುದರ ಮೂಲಕ ಪೂರ್ಣ

ಶ್ಲೋಕವನ್ನು ರಚಿಸುವುದು) ಪಟ್ಟಿಕಾವೇತ್ರವಾಸಕಲ್ಪ (ಬೆತ್ತ ಮತ್ತು ಬಿದಿರುಗಳಿಂದ ಮಂಚ ಮತ್ತು ಆಸನಗಳನ್ನು ತಯಾರಿಸುವುದು) ತಕ್ಷ ಕರ್ಮಗಳು (ಕೆತ್ತನೆಯ ಕೆಲಸ, ಚಿನ್ನ ಬೆಳ್ಳಿ ಮರಗಳಲ್ಲಿ ಸೂಕ್ಷ್ಮ ಕೆಲಸ ಮಾಡುವುದು) ತಕ್ಷಣ (ಮರಗೆಲಸ) ವಾಸ್ತುವಿದ್ಯಾ (ಗೃಹನಿರ್ಮಾಣ ವಿಜ್ಞಾನ) ರೂಪ್ಯ ರತ್ನಪರೀಕ್ಷಾ (ನಾಣ್ಯಗಳು ಮತ್ತು ರತ್ನಗಳ ಪರೀಕ್ಷೆ) ಧಾತುವಾದ (ಖನಿಜಗಳ ಮಿಶ್ರೀಕರಣ, ಶುದ್ಧೀಕರಣ ಮೊದಲಾದುವು.) ಮಣಿರಾಗಾಕರ ಜ್ಞಾನ (ಹರಳುಗಳು ಮತ್ತು ರತ್ನಗಳಿಗೆ ಬಣ್ಣಹಾಕುವ ವಿಧಾನ, ಗಣಿಗಳ ಸ್ಥಲಪರಿಜ್ಞಾನ ಮತ್ತು ಕಾರ್ಯಪರಿಜ್ಞಾನ)ವೃಕ್ಷಾಯುರ್ವೇದಯೋಗ (ಸಸ್ಯಗಳಿಗೆ ಔಷಧಿಗಳು, ಗಿಡಮರಗಳು ನಿರೋಗವಾಗಿ ಸಮೃದ್ಧಿಯಾಗಿ ಫಲಪುಷ್ಪಗಳನ್ನು ಬಿಡುವಂತೆ ಮಾಡಿಸುವುದು, ಅವುಗಳ ಆಕಾರ, ವರ್ಣ, ರುಚಿ, ಮೊದಲಾದುವುಗಳ ಪರಿವರ್ತನೆ.) ಮೇಷ ಕುಕ್ಕುಟಲಾವುಕ ಯುದ್ಧವಿಧಿ (ಟಗರು, ಹುಂಜ ಮತ್ತು ಲಾವುಗೆಗಳು ಯುದ್ಧ ಮಾಡುವಂತೆ ಮಾಡುವುದು) ಶುಕಸಾರಿಕಾಪ್ರಲಾಪನ (ಗಂಡು ಹೆಣ್ಣು ಗಿಳಿಗಳು ಮಾತನಾಡುವಂತೆ ಮಾಡುವುದು) ಉತ್ಸಾದನ-ಸಂವಾಹನ-ಕೇಶಮರ್ದನದಲ್ಲಿ ಕೌಶಲ್ಯ (ಹಸ್ತ,ಪಾದ,ತಲೆ ಮತ್ತು ಶರೀರಗಳನ್ನು ತಿಕ್ಕುವುದು-ಮರ್ದನ ಮಾಡುವುದರಲ್ಲಿ ಚಾತುರ್ಯ) ಅಕ್ಷರಮುಷ್ಟಿಕಾಕಥನ (ಅಕ್ಷರಗಳ ಶ್ರೇಣಿಯಿಂದ ಅರ್ಥವನ್ನು ನಿಷ್ಕರ್ಷಿಸುವುದು) ಮ್ಲೇಚ್ಛಿತವಿಕಲ್ಪ (ಗೂಢಲಿಪಿ ಭಾಷಾ ಭೇದಗಳ ಅರಿವು ಎಂದರೆ ಉದ್ದಿಷ್ಟವ್ಯಕ್ತಿಗಲ್ಲದೆ ಇತರರಿಗೆ ತಿಳಿಯದ ಭಾಷಾವಿಜ್ಞಾನ) ದೇಶಭಾಷಾ ವಿಜ್ಞಾನ ನಿಖಿಲ ದೇಶಭಾಷಾಪಾಂಡಿತ್ಯ) ಪುಷ್ಪಶಕಟಿಕಾ (ಪ್ರೇಮಪತ್ರಗಳನ್ನಿಟ್ಟು ಕಳುಹಿಸಲು ಪುಷ್ಪಗಳಿಂದ ಗಾಡಿ, ಕುದುರೆ, ಆನೆ, ಪಲ್ಲಕ್ಕಿ ಇತ್ಯಾದಿಗಳನ್ನು ಮಾಡುವುದು) ನಿಮಿತ್ತ ಜ್ಞಾನ (ಶುಭ ಮತ್ತು ಅಶುಭ ಶಕುನಗಳ ಜ್ಞಾನ) ಯಂತ್ರಮಾತೃಕಾ (ಸಂಚಾರ ಕಾರ್ಯಕ್ಕಾಗಿ ಜಲ ಮತ್ತು ಯುದ್ಧೋದ್ಯೋಗಗಳಿಗಾಗಿ ಯಂತ್ರ ನಿರ್ಮಾಣ ಮಾಡುವುದು) ಧಾರಣಮಾತೃಕಾ (ವಿಷಯಗಳನ್ನು ನೆನಪಿನಲ್ಲಿಟ್ಟುಕೊಳ್ಳುವಿಕೆ) ಸಂಪಾಠ್ಯ (ಒಂದು ತೆರನಾದ ಆಟ-ಅಪರಿಚಿತವಾದ ಪದ್ಯವನ್ನು ಒಂದು ಸಲ ಕೇಳಿದ ತಕ್ಷಣ ಯಥಾವತ್ತಾಗಿ ಪುನರುಚ್ಚರಿಸುವುದು.) ಮಾನಸೀ (ಇದೂ ಒಂದು ಆಟ-ಒಬ್ಬನು ಒಂದು ಶ್ಲೋಕದ ಅನುಸ್ವಾರ ವಿಸರ್ಗಗಳನ್ನೂ ತಲೆಕೊಟ್ಟು ಮೊದಲಾದ ಕಾಗುಣಿತ ಚಿಹ್ನೆಗಳನ್ನು ಬರೆಯುತ್ತಾನೆ. ಮತ್ತೊಬ್ಬನು ಅವುಗಳ ಆಧಾರದ ಮೇಲೆ ಶ್ಲೋಕವನ್ನು ಪೂರ್ಣವಾಗಿ ಬರೆಯುವುದು) ಕಾವ್ಯಕ್ರಿಯಾ (ಆಶುಕವಿತಾರಚನೆ) ಅಭಿಧಾನಛಂದೋವಿಜ್ಞಾನ (ಶಬ್ದಕೋಶ ಮತ್ತು ಛಂದಶ್ಶಾಸ್ತ್ರಗಳ ಜ್ಞಾನ) ಕ್ರಿಯಾಕಲ್ಪ ಕಾವ್ಯ ಮತ್ತು ಪಲಿತಕ ವಿಧಾನಗಳು (ವಂಚನೆಯ ರೀತಿಗಳು-ಒಬ್ಬನನ್ನೂ ಗುರುತಿಸಲಾಗದಂತೆ ಮರೆ ಮಾಚುವುದು.) ವಸ್ತ್ರಗೋಪನ (ತೊಟ್ಟಿರುವ ಬಟ್ಟೆಯು ಭಿನ್ನರೂಪದಲ್ಲಿ ಕಾಣುವಂತೆ ಮಾಡುವುದು) ದ್ಯೂತವಿಶೇಷ (ಕಪಟದ್ಯೂತ ಪ್ರೌಢಿಮೆ) ಆಕರ್ಷಕ್ರೀಡಾ (ಒಂದು ರೀತಿಯ ಪಗಡೆ ಆಟ) ಬಾಲಕ್ರೀಡೆಗಳು (ಮಕ್ಕಳಿಗಾಗಿ ಚೆಂಡು ಇತ್ಯಾದಿಗಳ ಪರಿಚಯ) ವೈದಕೀಯ ವಿದ್ಯೆಗಳ ಜ್ಞಾನ (ವ್ಯಕ್ತಿಗಳನ್ನು






ವಿದ್ಯಾವಂತನನ್ನಾಗಿ ಮಾಡುವ ವಿಧಾನ) ವ್ಯಾಯಾಮಿಕೀಯ ವಿದ್ಯೆಗಳ ಜ್ಞಾನ(ವ್ಯಾಯಾಮ ಅಥವಾ ಅಂಗಸಾಧನೆಯ ಜ್ಞಾನ) (ವಾತ್ಸ್ಯಾಯನನ ಕಾಮಸೂತ್ರ ಪು. ೩೨-೩೩ ಮತ್ತು ಜಯಮಂಗಲ ವ್ಯಾಖ್ಯಾನದ ವಿವರಣೆ).

ಯಶೋಧರಕೃತ ವಾತ್ಸ್ಯಾಯನನ ಕಾಮಸೂತ್ರದ ಜಯಮಂಗಲ ವ್ಯಾಖ್ಯಾನದಲ್ಲಿ ೬೪ ಕಲೆಗಳು ಹೀಗೆ ಉಲ್ಲೇಖವಾಗಿದೆ :

ಗೀತ (ಹಾಡುವುದು) ನೃತ್ಯ (ನರ್ತಿಸುವುದು) ವಾದ್ಯ (ವಾದ್ಯಗಳನ್ನು ನುಡಿಸುವುದು) ಲಿಪಿಜ್ಞಾನ (ಲೇಖನ ಮತ್ತು ಅಕ್ಷರಗಳನ್ನು ಕೊರೆಯುವ ಜ್ಞಾನ) ವಚನೌದಾರ್ಯ (ಗಂಭೀರವಾಗಿ ಮಾತಾಡುವಿಕೆ) ಚಿತ್ರವಿಧಿ (ವಿವಿಧಾಕೃತಿಗಳಲ್ಲಿ ರಚಿಸಬಹುದಾದ ಪದ್ಯ ಅಥವಾ ಚಿತ್ರಗಳ ರಚನೆ.) ಪುಸ್ತಕರ್ಮ (ವಸ್ತ್ರದ ಮೇಲೆ ಚಿತ್ರ ಬರೆಯುವುದು) ಪತ್ರಚ್ಛೇದ್ಯ (ವಿವಿಧಾಕಾರಗಳಲ್ಲಿ ಎಲೆಯನ್ನು ಬಿಡಿಸುವುದು) ಮಾಲ್ಯವಿಧಿ (ಹಾರ ಮತ್ತು ತುರಾಯಿಗಳನ್ನು ಕಟ್ಟುವುದು.) ಆಸ್ವಾದ್ಯವಿಧಾನ (ಸೂಪಶಾಸ್ತ್ರ) ರತ್ನಪರೀಕ್ಷಾ (ರತ್ನಗಳ ಪರೀಕ್ಷೆ) ಸೀವ್ಯ (ಬಟ್ಟೆ ಹೊಲಿಯುವುದು) ರಂಗಪರಿಜ್ಞಾನ (ರಂಗಭೂಮಿಯ ತಿಳುವಳಿಕೆ) ಉಪಕರಣಕ್ರಿಯಾ (ಯಂತ್ರಗಳು ಮತ್ತು ಯಂತ್ರೋಪಕರಣಗಳ ತಯಾರಿಕೆ) ಮಾನವಿಧಿ (ಅಳತೆ ಮಾಡುವುದು) ಆಜೀವಜ್ಞಾನ (ಜೀವನೋಪಾಯದ ತಿಳುವಳಿಕೆ) ತಿರ್ಯಗ್ಯೋನಿಚಿಕಿತ್ಸಾ (ಪಶು ವೈದ್ಯ) ಮಾಯಾಕೃತಪಾಷಂಡಸಮಯಜ್ಞಾನ (ಮಾಯಾಕೃತವಾದ ಪಾಷಂಡಿಗಳ ಸಮಯಜ್ಞಾನ) ಕ್ರೀಡಾಕೌಶಲ (ಆಟಗಳು ಮತ್ತು ಸ್ಪರ್ಧೆಗಳಲ್ಲಿ ಕೌಶಲ್ಯ) ಲೋಕಜ್ಞಾನ (ಪ್ರಪಂಚಜ್ಞಾನ) ವೈಚಕ್ಷಣ್ಯ (ವಿಚಕ್ಷಣತೆ) ಸಂವಾಹನ (ಅಂಗಮರ್ದನ) ಶರೀರಸಂಸ್ಕಾರ (ವಸ್ತ್ರಭೂಷಣ ಅನುಲೇಪನಾದಿಗಳಿಂದ ಅಲಂಕರಿಸುವಿಕೆ) ವಿಶೇಷಕೌಶಲ (ವಿಶೇಷವಾದ ಕಲೆಗಳಲ್ಲಿ ಪ್ರೌಢಿಮೆ) ಆಯುಃಪ್ರಾಪ್ತಿ, ಅಕ್ಷವಿಧಾನ, ರೂಪಸಂಖ್ಯಾ, ಕ್ರಿಯಾಮಾರ್ಗ, ಬೀಜಗ್ರಹಣ, ನಯಜ್ಞಾನ, ಕರಣ ವಿಧಾನ, ಚಿತ್ರಾಚಿತ್ರವಿಧಿ, ಗೂಢರಾಶಿ, ತುಲ್ಯಾಭಿಹಾರ, ಕ್ಷಿಪ್ರಗ್ರಹಣ, ಅನುಪ್ರಾಪ್ತಿಲೇಖಾಸ್ಮೃತಿ, ಅಗ್ನಿಕ್ರಮ, ಛಲವ್ಯಾಮೋಹನ, ಗ್ರಹದಾನ (ಪಗಡೆ, ಕವಡೆ ಮೊದಲಾದುವುಗಳಿಂದ ಆಡುವ ದ್ಯೂತವಿಶೇಷ) ಉಪಸ್ಥಾನವಿಧಿ (ಹುಂಜ ಮೊದಲಾದುವುಗಳು ಯುದ್ಧ ಮಾಡುವಂತೆ ಮಾಡುವುದು) ರುತ (ಅವುಗಳ ಕೂಗು) ಗತ (ಕುದುರೆ ಮೊದಲಾದುವುಗಳ ನಡತೆಯನ್ನು ತಿದ್ದುವುದು) ನೃತ್ತ (ಹುಂಜ ಮೊದಲಾದುವುಗಳು (ಕುಣಿ) ನಡೆಯುವಂತೆ ಮಾಡುವುದು) ಪುರುಷಭಾವಗ್ರಹಣ (ಮನುಷ್ಯನ ಮನಸ್ಸನ್ನರಿಯುವುದು) ಸ್ವರಾಗಪ್ರಕಾಶನ (ಪ್ರಿಯ ವ್ಯಕ್ತಿಯಲ್ಲಿ ತನ್ನ ಪ್ರೀತಿಯನ್ನು ವ್ಯಕ್ತಪಡಿಸುವುದು) ಪತ್ರ್ಯಂಗದಾನ,. ನಖದಂತವಿಚಾರ, ನೀಪೀ ಪ್ರಸಂಗ, ಗುಹ್ಯಸಂಸ್ಪರ್ಶನ, ಮೃದುಕ್ರೋಧಪ್ರವರ್ತನ (ಅಲ್ಪವಾಗಿ ಕೋಪವನ್ನುಂಟು ಮಾಡುವುದು) ಸಮ್ಯಕ್‌ಕ್ರೋಧನಿವರ್ತನ (ಕೋಪವನ್ನು ಪೂರ್ಣವಾಗಿ ಪರಿಹಾರ ಮಾಡುವುದು) ಕ್ರುದ್ಧಪ್ರಸಾದನ (ಕೋಪಿಷ್ಠನನ್ನು ಸಮಾಧಾನ ಪಡಿಸುವುದು) ಸುಪ್ತಾಪರಿತ್ಯಾಗ,

ಚರಮಸ್ಥಾಪವಿಧಿ, ಗುಹ್ಯಗೂಹನ, ಸಾಶ್ರುಪಾತನಾ ರಮಣನೆದುರಿನಲ್ಲಿ ಶಾಸನ, ಸ್ವಶಪಥಕ್ರಿಯಾ, ಪುನಃಪುನಃ ನಿರೀಕ್ಷಣ, ಪ್ರಸ್ಥಿತಾನುಗಮನ.

ವಿದರ್ಭರಾಜನ ಚಂಪೂರಾಮಾಯಣವನ್ನು ಮುಂದುವರಿಸಿದ ಲಕ್ಷ್ಮಣ ಕವಿಯ ಪದ್ಯವನ್ನು ವ್ಯಾಖ್ಯಾನಿಸಿದ ರಾಮಚಂದ್ರನ ಪ್ರಕಾರ ೬೪ ಕಲೆಗಳು :

ಇತಿಹಾಸಾಗಮಾದಿಗಳು, ಕಾವ್ಯಾಲಂಕಾರನಾಟಕ, ಕವಿತ್ವ, ಕಾಮಶಾಸ್ತ್ರ, ದುರೋದರ, ದೇಶಭಾಷಾಜ್ಞಾನ, ಲಿಪಿಜ್ಞಾನ, ಲಿಪಿಕರ್ಮ (ಲೆಪ್ಪ) ವಾಚಕ, ಸರ್ವ ಅಪದಾನಗಳು (ಎಲ್ಲ ವಿಧವಾದ ಪೂರ್ವವೃತ್ತಾಂತಗಳು) ಸ್ವರಶಾಸ್ತ್ರ, ಶಕುನ, ಸಾಮುದ್ರಿಕ, ರತ್ನಶಾಸ್ತ್ರ, ರಥಗತಿಕೌಶಲ, ಅಶ್ವಗತಿಕೌಶಲ, ಮಲ್ಲಯುದ್ಧ, ಮಾದಕರ್ಮ (ಸೂಪಶಾಸ್ತ್ರ) ಭೂರುಹಗಳದೋಹದ, ಗಂಧವಾದ, ಧಾತುವಾದ, ಖನ್ಯಾವಾದ (ನಿಧಿನಿಕ್ಷೇಪಗಳನ್ನು ಗುರುತಿಸುವುದು) ರಸವಾದ, ಜಲವಾದ, ಅಗ್ನಿ ಸಂಸ್ತಂಭ, ಖಡ್ಗಸ್ತಂಭ, ಜಲಸ್ತಂಭ, ವಾಚಸ್ತಂಭ ವಯಸ್ತಂಭ (ವಯಸ್ಸನ್ನು ಕಡಿಮೆಮಾಡುವುದು.) ಮಾರಣ, ಕಾಲವಂಚನ, ವಶ್ಯ, ಆಕರ್ಷಣ, ವಿದ್ವೇಷಣ, ಉಚ್ಚಾಟನ, ಪಯಸಿಪ್ಲ ವಚಾತುರ್ಯ (ನೀರಿನಲ್ಲಿ ಧುಮುಕುವ ವಿದ್ಯೆ.) ಪಾದುಕಾ ಸಿದ್ಧಿ (ತಕ್ಷಣ ಹೊರಡಲು ಸಹಾಯ ಮಾಡುವುದು) ಮೃತ್ಸಿದ್ಧಿ, ಘುಟಕಾಸಿದ್ಧಿ, ಐಂದ್ರಜಾಲಕ, ದೃಷ್ಟಿವಂಚನ, ಸ್ವರವಂಚನ, ಮಣಿಸಿದ್ಧಿ, ಮಂತ್ರಸಿದ್ಧಿ, ಔಷಧಿ ಸಿದ್ಧಿ, ಚೋರಕರ್ಮ, ವೃತ್ತಿಕ್ರಿಯಾ, ಲೋಹಕ್ರಿಯಾ, ಅಶ್ಮಕ್ರಿಯಾ, ಮೃತ್ಕ್ರಿಯಾ, ದಾರುಕ್ರಿಯಾ, ವೇಣುಕ್ರಿಯಾ, ವರ್ಮಕ್ರಿಯಾ (ಲೋಹ ಪಂಚಕ ನಿರ್ಮಾಣ) ಅಂಜನಕ್ರಿಯ, ಅದೃಶ್ಯಕರಣೀ, ದೂರಕರಣೀ, ಮೃಗಯಾರತಿ, ವಾಣಿಜ್ಯ, ಪಾಶುಪಾಲ್ಯ, ಕೃಷಿ, ಅಹವಕರ್ಮ, ಲಾವಕಕುಕ್ಕುಟಮೇಷಾದಿ ಯುದ್ಧ ಕರಣಕೌಶಲ.

'ಶಿವತತ್ವರತ್ನಾಕರ'ದಲ್ಲಿಯೂ ೬೪ ಕಲೆಗಳ ಕ್ರಮನಿರೂಪಣೆ ಹೀಗೆಯೇ ಇದೆ.

'ಶ್ರೀತತ್ವನಿಧಿ'ಯಲ್ಲಿಯೂ ಕೆಲವು ಹೆಸರುಗಳ ಬದಲಾವಣೆಯಿಂದ ಹಾಗೆಯೇ ಇದೆ.

ಪಾಂಚಾಲ ಭಾಭ್ರವ್ಯನ ಪ್ರಕಾರ ಕಾಮಶಾಸ್ತ್ರದ ೬೪ ಕಲೆಗಳು ಹೀಗಿವೆ :

೧ ಆಲಿಂಗನ ಭೇದಗಳು : ಸ್ಪಷ್ಟರ, ವಿದ್ಧಕ, ಉದ್ಘೃಷ್ಟಕ, ಪೀಡತಿಕ, ಲತಾ ವೇಷ್ಟಿತಕ, ವೃಕ್ಷಾಧಿರೂಢಕ, ತಿಲತಂಡುಲಕ, ಕ್ಷೀರನೀರಕ.

೨ ಚುಂಬನ ಭೇದಗಳು : ಸಮತಿರ್ಯಕ್, ಉದ್ಭ್ರಾಂತ, ಅವಪೀಡಿತ.

೩ ದಂತಕರ್ಮ : ಗೂಢಕ, ಉಚ್ಚೂನಕ, ಬಿಂದು, ಬಿಂದುಮಾಲಾ, ಪ್ರವಾಸ ಮಣಿ, ಮಣಿಮಾಲಾ, ಖಂಡಾಭ್ರಕ, ವರಾಹಚರ್ವತಕಾ.

೪ ನಖಕ್ಷತ : ಅಚ್ಛುರಿತಕಾ, ಅರ್ಧಚಂದ್ರ, ಮಂಡಲ, ರೇಖಾ, ವ್ಯಾಘ್ರನಖ, ಮಯೂರಪದಕ, ಶತಪ್ಲುತಕ, ಉತ್ಪಲಪತ್ರಕ.

೫ ಸೀತ್ಕಾರ : ಹಿಂಕಾರ, ಸ್ತನಿತ, ಕೂಜಿತ, ರುದಿತ, ಸೂತ್ಕೃತ, ಫೂತ್ಕೃತ, ಅಂಬಾರ್ಥಕ ಶಬ್ದಗಳು.

೬ ಸಂವೇಶನ : ಉತ್ಫುಲ್ಲಕ, ವಿಜೃಂಭಿತಕ, ಇಂದ್ರಾಣಿಕ, ಸಂಪುಟಕ, ಪಿಡಿತಕ, ವೇಷ್ಟಿತಕ, ವಾಡವಕ.

೭ ಉಪಸೃಪ್ತಕ : ಉಪಸೃಪ್ತಕ, ಮಂಥನ, ಹುಲ, ಅವಮರ್ದನ, ಪೀಡಿತಕ, ನಿರ್ಘಾತ, ವರಾಹಘಾತ, ವೃಷಾಘಾತ, ಚಟಕವಿಲಸಿತ, ಸಂಪುಟ.

೮ ನರಾಯತ : ಸಂದಂಶ, ಭ್ರಮರಕ, ಪ್ರೇಂಖೋಲಕರ.

೯ ಔಪರಿಷ ಕ : ನಿಮಿತ, ಪಾರ್ಶ್ವತೋದಷ್ಟ, ಬಹಿಸ್ಸಂದಂಶ, ಅಂತಃಸಂದಂಶ, ಚುಂಬಿತಕ, ಪರಿಮೃಷ್ಟಕ, ಆಮ್ರಚೂಕ್ಷಿತಕ, ಸಂಗರ. (ಕಾಮಸೂತ್ರ - ಪುಟ. ೯೭-೧೧೬)

ಕಲ್ಪಾಂತರದಲ್ಲಿ ಮಹಿಳೆಯರ ೬೪ ಕಲೆಗಳು ಈ ರೀತಿ ನಿರೂಪಿತವಾಗಿವೆ :

ನೃತ್ಯ, ಔಚಿತ್ಯ, ಚಿತ್ರ, ವಾದಿತ್ರ, ಮಂತ್ರ, ತಂತ್ರ, ಜ್ಞಾನ, ವಿಜ್ಞಾನ, ದಂಭ, ಜಲಸ್ತಂಭ, ಗೀತನಾದ, ತಾಲಮಾನ, ಮೇಘವೃಷ್ಟಿ, ಫಲಾಕೃಷ್ಟಿ, ಆರಾಮಾರೋಪಣ. ಆಚಾರಗೋಪನ, ಧರ್ಮವಿಹಾರ, ಶಕುನಸಾಗರ, ಕ್ರಿಯಾ ಕಲ್ಪ, ಸಂಸ್ಕೃತಜನ್ಯ, ಪ್ರಸಾದನೀತಿ, ಧರ್ಮನೀತಿ, ವರ್ಣಿಕಾವೃದ್ಧಿ, ಸುವರ್ಣ ಸಿದ್ಧಿ, ಸುರಭಿತೈಲಕರಣ, ಲೀಲಾಸಂಚಾರಣ, ಗಜತುರಗಪರೀಕ್ಷಣ, ಪುರುಷಸ್ತ್ರೀ ಲಕ್ಷಣ, ಸುವರ್ಣರತ್ನಭೇದ, ಅಷ್ಟಾದಶಲಿಪಿ ಪರಿಚ್ಛೇದ, ತಾತ್ಕಾಲಬುದ್ಧಿ, ವಾಸ್ತು ಸಿದ್ಧಿ, ವೈದ್ಯಕ್ರಿಯಾ, ಕಾಮವಿಕ್ರಯೀಘಟಭ್ರಮಾ, ಸಾರಿಪರಿಶ್ರಮ, ಅಂಜನ ಯೋಗ, ಚೂರ್ಣಯೋಗ, ಹಸ್ತಲಾಘವ, ವಚನಪಾಟವ, ಭೋಜ್ಯವಿಧಿ, ವಾಣಿಜ್ಯವಿಧಿ, ಮುಖಮಂಡನ, ಶಾಲಿಖಂಡನ, ಕಥಾಕಥನ, ಪುಷ್ಪಗ್ರಥನ, ವಕ್ರೋಕ್ತಿ, ಕಾರ್ಯಶಕ್ತಿ, ಸ್ಫಾರವೇಷ, ಸಕಲಭಾಷಾವಿಶೇಷ, ಅಭಿಧಾನಜ್ಞಾನ, ಆಭರಣಪರಿಧಾನ, ಭೃತ್ಯೋಪಚಾರ, ಗೃಹಾಚಾರ, ಕಾವ್ಯಕರಣ, ಪರನಿರಾಕರಣ. ಪಂಥನ, ಕೇಶಬಂಧನ, ವೀಣಾನಿನಾದ, ವಿತಂಡಾವಾದ, ಅಂಕವಿಚಾರ, ಲೋಕ ವ್ಯವಹಾರ, ಅಂತಾಕ್ಷರಿಕಾ, ಪ್ರಶ್ನಪ್ರಹೇಳಿಕಾ.

ಗ್ರಂಥಾಂತರಗಳಲ್ಲಿ ೬೪ ಕಲೆಗಳು ನಾಮವ್ಯತ್ಯಾಸದಿಂದ ಭಿನ್ನಭಿನ್ನ ರೀತಿಯಲ್ಲಿ ಉಕ್ತವಾಗಿವೆ. ಆದರೂ ಮೂಲಭೂತವಾದ ವಿಷಯಗಳು ಒಂದೇ ಆಗಿರುತ್ತವೆ.

ಮೇಲಣ ಕಲಾಕೌಶಲ್ಯಗಳ ಸಂಗ್ರಹದಿಂದ ಭಾರತೀಯ ಸಂಸ್ಕೃತಿಯ ಪರಮೋಚ್ಚ ಮಟ್ಟವು ವಿಶದವಾಗದೇ ಇರದು. ಎಲ್ಲ ಭಾರತೀಯರೂ ಇವುಗಳ ಪರಿಚಯವನ್ನು ಮಾಡಿಕೊಂಡು ದೇಶದ ಸರ್ವತೋಮುಖವಾದ ಏಳಿಗೆಯಲ್ಲಿ ಭಾಗಿಗಳಾಗುವುದು ಅತ್ಯಾವಶ್ಯಕವೆಂದು ಘಂಟಾಘೋಷವಾಗಿ ಹೇಳಬಹುದು.



# ಕಾವಬ್ಬೆ ಕಣೆಗೊಂಡೊಡೆ ಮತ್ತಾರು ಕಾವವರು

೧೯೧೮ನೆಯ ವರ್ಷದ ಸೆಪ್ಟೆಂಬರ್ ತಿಂಗಳ ಮೂರನೆಯ ವಾರ. ಆಗ ತಾನೆ ಪ್ರಪಂಚದ ಮೊದಲನೆಯ ಘೋರ ಸಂಗ್ರಾಮ ಮುಗಿದಿತ್ತು. ಪತ್ರಿಕೆಯಲ್ಲಿ ಉತ್ತರ ಭಾರತದಲ್ಲಿ 'ಇನ್‌ಫ್ಲುಯಂಸಾ' ಎಂಬ ಘೋರ ಸಾಂಕ್ರಾಮಿಕ ತಲೆದೋರಿದೆಯೆಂದೂ ಅದು ಪಾಶ್ಚಾತ್ಯ ದೇಶದ ಕಡೆಯಿಂದ ಹರಿದು ಬಂದಿಯೆಂದೂ ವರದಿಯಾಯಿತು. ಜನಗಳಿಗೆ ಒಂದು ವಿಧವಾದ ಗಾಬರಿಯೇ ತಲೆದೋರಿತು. ಒಂದು ವಾರದಲ್ಲಿ ಆ ರೋಗವು ಬಹು ತೀವ್ರವಾಗಿ ಹರಡುತ್ತಿದೆಯೆಂದೂ ರೋಗ ಪ್ರಾಪ್ತವಾದ ಮೂವತ್ತು ಗಂಟೆಗಳಲ್ಲಿ ಮರಣವುಂಟಾಗುವುದೆಂದೂ ಅನೇಕ ಪತ್ರಿಕೆಗಳು ತಿಳಿಸಿದುವು. ತಿಂಗಳಿನ ಕೊನೆಗೆ ರೋಗವು ಮೈಸೂರಿಗೂ ವ್ಯಾಪಿಸಿತು. ಪ್ರಾರಂಭದಲ್ಲಿ ನಗರದಲ್ಲಿ ದಿನಕ್ಕೆ ಹತ್ತು ಹದಿನೈದು ಮರಣಗಳಾಗುತ್ತಿದ್ದುದು ಅಕ್ಟೋಬರ್ ಮೊದಲನೆಯ ವಾರದ ವೇಳೆಗೆ ದಿನಕ್ಕೆ ಮರಣ ಸಂಖ್ಯೆ ೧೫೦ ಕ್ಕೆ ಹೆಚ್ಚಿತು. ರೋಗಗ್ರಸ್ತರ ಸಂಖ್ಯೆ ಸಾವಿರವನ್ನು ಮುಟ್ಟಿತು. ರೋಗದ ಸ್ವಭಾವ ಮತ್ತು ರೀತಿನೀತಿಗಳು ವೈದ್ಯರಿಗೆ ಅರಿವಾಗಿರಲಿಲ್ಲ. ಸೂಕ್ತ ಔಷಧಿ ಸಿದ್ಧವಾಗಿರಲಿಲ್ಲ. ಊರಿನಲ್ಲಿ ಶವಸಂಸ್ಕಾರ ಒಂದು ಸಮಸ್ಯೆಯೇ ಆಗಿ ಹೋಯಿತು. ಮೊದಮೊದಲು ವಾರಸುದಾರರು ಹೇಗೋ ಕಷ್ಟಪಟ್ಟು ಶವಗಳನ್ನು ರುದ್ರ ಭೂಮಿಗೆ ತೆಗೆದುಕೊಂಡು ಹೋಗಿ ಸಂಸ್ಕಾರಗಳನ್ನು ನಡೆಸಿದರು. ಶವಸಂಸ್ಕಾರಕ್ಕೆ ಬೇಕಾದ ಸೌದೆ ಬೆರಣಿಗಳ ಬೆಲೆ ಒಂದೂವರೆ ರೂಪಾಯಿಯಿದ್ದುದು ಕೇವಲ ಒಂದು ಪಕ್ಷದ ವೇಳೆಗೆ ೧೮ ರೂಪಾಯಿಗೇರಿತು. ಖನನದ ಗುಳಿ ತೆಗೆಯಲು ಒಂದು ಕಾಲು ರೂಪಾಯಿದ್ದುದು ಹತ್ತು ರೂಪಾಯಿಯಾಯಿತು. ಮತ್ತೆ ಕೆಲವು ದಿನಗಳಾದ ಮೇಲೆ ದಹನಸಾಮ್ರಗಿಗೆ ಅಭಾವವಾಯಿತು. ಹಳ್ಳ ತೆಗೆಯುವವರಿಗೂ ಪೇಚಾಡಬೇಕಾಗಿ ಬಂತು. ನಿಷ್ಕೃಷ್ಟವಾಗಿ ಗೊತ್ತುಮಾಡಿದ ಖನನ ರುದ್ರಭೂಮಿಯಲ್ಲಿ ಸ್ಥಳಾವಕಾಶವಿಲ್ಲದೆ ಕಂಡಕಂಡೆಡೆಯಲ್ಲಿ ಹೂಳಲು ಪ್ರಾರಂಭಿಸಿದರು. ಆಗ ದೊಡ್ಡ ಕೆರೆಯಲ್ಲಿ ತುಂಬಾ ನೀರಿರುತ್ತಿತ್ತು. ಕೋಡಿಯವರೆಗೂ ನೀರು ತುಂಬಿರುತ್ತಿತ್ತು. ಕೆಲವು ದಿನಗಳಲ್ಲಿ ಎಷ್ಟೋ ಹೆಣಗಳನ್ನು ಚಟ್ಟದೊಂದಿಗೆ ಕೆರೆಯ ಕೋಡಿಯಲ್ಲಿ ಬಿಸಾಡಿ ಹೋದುದೂ ಪೌರಸಭೆಗೆ ತಿಳಿದು ಬಂದಿತು. ಅವುಗಳನ್ನು ಒಪ್ಪಮಾಡುವುದು ಒಂದು ಸಮಸ್ಯೆಯಾಗಿ ಪರಿಣಮಿಸಿತು. ಕೆಲವು ದಿನ ಅನಾಥಶವಗಳನ್ನು ಸಾಮೂಹಿಕವಾಗಿ ಸಂಸ್ಕಾರ ಮಾಡಿದುದೂ

ಆಯಿತು. ರಚನಾತ್ಮಕ ದೃಷ್ಟಿಯಿಂದ ನಾಗರೀಕರಿಗೆ, ರೋಗಗ್ರಸ್ತರಿಗೆ ಆಹಾರ, ಔಷಧಿ ಮತ್ತು ಶವಸಾಗಾಣಿಕೆ ಮತ್ತು ಸಂಸ್ಕಾರಗಳಿಗೆ ನೆರವಾಗುವುದು ಅವರ ಕರ್ತವ್ಯವಾಯಿತು. ಪೌರಸಭೆಯವರು ಇದಕ್ಕೆ ಕೆಲವು ಸ್ವಯಂ ಸೇವಕ ತಂಡವನ್ನು ಏರ್ಪಡಿಸಿದರು. ಒಂದೊಂದು ತಂಡದಲ್ಲಿಯೂ ಒಬ್ಬ ವಿದ್ಯಾವಂತನಾದ ವಯಸ್ಕ ಅವನಿಗೆ ಸಹಾಯಕರಾಗಿ ಮೂರು ನಾಲ್ಕು ವಿದ್ಯಾರ್ಥಿಗಳು. ಒಂದೊಂದು ಮೊಹಲ್ಲಾಗೆ ಒಂದೊಂದು ತಂಡ. ಅವರು ಪ್ರಾತಃಕಾಲ ಎಂಟು ಗಂಟೆಯಿಂದ ಸಾಯಂಕಾಲದವರೆಗೆ - ಮಧ್ಯಾಹ್ನ ೨ ಗಂಟೆಯ ವಿರಾಮ - ಮೊಹಲ್ಲಾದ ಪ್ರತಿಯೊಂದು ಮನೆಗೂ ಹೋಗಿ ಅಲ್ಲಿರುವ ರೋಗಿಗಳ ವಿವರ, ಅವರ ಆವಶ್ಯಕತೆ, ಗತಿಸಿದ್ದರೆ, ಆ ವಿಚಾರ ಮೊದಲಾದವನ್ನು ಎರಡು ಹೊತ್ತು ಇದಕ್ಕಾಗಿ ಏರ್ಪಡಿಸಿದ್ದ ಪೌರಸಭೆಯ ಆರೋಗ್ಯಾಧಿಕಾರಿಗಳಿಗೆ ತಿಳಿಸುತ್ತಿದ್ದರು. ಅಂತಹ ತಂಡದಲ್ಲಿ ನಾನೂ ಸೇರಿದ್ದೆ. ನಮ್ಮ ನಾಯಕರು ನಮ್ಮ ಉಪಾಧ್ಯಾಯರಾಗಿದ್ದ ಎಂ. ಎಚ್. ಕೃಷ್ಣ ಅವರು. ಪ್ರತಿದಿನ ಬೆಳಗ್ಗೆ ನಮಗೆ ಒಂದು ಜಟಕಾಗಾಡಿ. ಅದರಲ್ಲಿ ಒಂದು ಮೃತ್ಪಾತ್ರೆಯ ತುಂಬಾ ರಾಗಿ ಅಂಬಲಿ ರೋಗಿಯ ಎದೆಗೆ ಹಚ್ಚುವುದಕ್ಕಾಗಿ ಸಾಸ್ವೆಧೃತಿಯ ಒಂದು ಸೀಸ, ಕುದಿಸಿದ ಬಿಸಿ ನೀರು. ಆವಶ್ಯಕವಾದೆಡೆಯಲ್ಲಿ ಕೊಡುವುದಕ್ಕಾಗಿ ಸಣ್ಣ ಸಣ್ಣ ಮೃದ್ಭಾಂಡಗಳು ಇವುಗಳನ್ನು ಕೊಡುತ್ತಿದ್ದರು. ನಮಗೆ ನೇಮಕವಾಗಿದ್ದುದು ಜಗನ್ಮೋಹನ ಬಂಗಲಿಯ ಉತ್ತರ ಭಾಗದಲ್ಲಿರುವ ನಲ್ಲಪ್ಪನ ಠಾಣವೆಂಬ ಹೆಸರಿನ ಶಿವರಾಮ ಪೇಟೆಯ ಸುತ್ತುಮುತ್ತಲಿನ ಭಾಗ. ನಾವು ನಮ್ಮ ಸರದಿಯ ಪ್ರಕಾರ ನಮ್ಮ ನಿರ್ದಿಷ್ಟ ಭಾಗದಲ್ಲಿ ಪ್ರತಿ ಮನೆಗೂ ಹೋಗಿ ವಿಚಾರಿಸಿ ರೋಗಿಗಳನ್ನು ಗಂಜಿ, ಕೊಟ್ಟು, ಎಡೆಗೆ ಧೃತಿಗೆ ಸವರಿ ಗಡಿಗೆಗಳಲ್ಲಿ ಬಿಸಿನೀರನ್ನು ತುಂಬಿಟ್ಟು ಮೃತರಾಗಿದ್ದರೆ ಆ ವಿಷಯವನ್ನು ಸುಮಾರು ಹನ್ನೆರಡು ಗಂಟೆಗೆ ಸಭೆಯವರಿಗೆ ತಿಳಿಸುತ್ತಿದ್ದೆವು. ನಮಗೆ ತಕ್ಷಣ ಲೋಷನ್ ಮಿಶ್ರವಾದ ಬಿಸಿನೀರಿನಲ್ಲಿ ಅಲ್ಲಿಯೇ ಸ್ನಾನವಾದ ಮೇಲೆ ನಮ್ಮ ಮನೆಗಳಿಗೆ ಹೋಗಿ ಊಟ ಮಾಡಿಕೊಂಡು ಮೂರು ಗಂಟೆಗೆ ಸೇವಾ ಕಾರ್ಯಕ್ಕೆ ಹಿಂತಿರುಗುತ್ತಿದ್ದೆವು. ಮಧ್ಯಾಹ್ನವೂ ಬೆಳಗಿನಂತೆಯೇ ಕೆಲಸ. ಶವಗಳಿದ್ದರೆ ಪೌರಸಭೆಯವರು ಪ್ರತ್ಯೇಕವಾಗಿ ಒಂದೊಂದಾಗಿ ಸಾಗಿಸುವುದಕ್ಕಾಗದೆ ಜೋಡೆತ್ತಿನ ಗಾಡಿಗಳಲ್ಲಿ ಸಾಗಿಸಲು ಮೊದಲು ಮಾಡಿದರು. ಆಗ ಬಸ್ಸಿಲ್ಲ. ಲಾರಿಯಲ್ಲಿ ಬೇರೆ ಬೃಹತ್ ವಾಹನಗಳಲ್ಲಿ ಅಕ್ಟೋಬರ್ ಮೂರನೆಯ ವಾರದ ವೇಳೆಗೆ ಮೃತರ ಸಂಖ್ಯೆ ಪ್ರತಿದಿನ ೫೦೦ಕ್ಕೂ ಮೀರಿತು. ಸತ್ತವರ ಬಂಧುಗಳೂ ಹತ್ತಿರ ಬರಲು ಹಿಂಜರಿದರು. ಯಾರು ಯಾವ ಹೊತ್ತಿಗೆ ಏನಾಗುತ್ತಾರೊ ತಿಳಿಯದಾಗಿತ್ತು. ಮೈಸೂರಿನ ನಗರದಲ್ಲಿ ಈ ರೋಗ ವ್ಯಾಪಿಸದ ಸಂದಿಗೊಂದಿಗಳು ಕೂಡ ಇರಲಿಲ್ಲ. ಸ್ವಯಂ ಸೇವಕ ತಂಡಗಳು ಮಾತ್ರ ತಮ್ಮ ಕರ್ತವ್ಯವನ್ನು ಬಹುನಿಷ್ಠೆಯಿಂದ ನಡೆಸಿ ಆರೋಗ್ಯಾಧಿಕಾರಿಗಳಿಗೆ ಸಮಾಚಾರವನ್ನು ಮುಟ್ಟಿಸುತ್ತಿದ್ದರು. ಆ ತಂಡದಲ್ಲಿಯಾರಿಗೂ ಸೋಂಕು ತಗಲದಿದ್ದುದು ದೈವಕೃಪೆ. ಶವಸಾಗಾಣಿಕೆ ಮತ್ತು ಸಂಸ್ಕಾರ ಪುರಸಭೆಯವರಿಗೆ ಬಹು ಜಟಿಲ ಪ್ರಶ್ನೆಯಾಯಿತು. ಅನ್ಯಥಾಗತಿಯಿಲ್ಲದೆ ಅರಮನೆಗೆ ಮೊರೆಯಿಟ್ಟರು. ಆನೆಯಗಾಡಿಯಿತ್ತು. ಅದರಲ್ಲಿ ಏಕಕಾಲದಲ್ಲಿ ೨೦೦ ಹೆಣಗಳನ್ನು ತುಂಬ ಬಹುದಾಗಿತ್ತು. ಅದನ್ನು ಸೂಕ್ತವಾಹನವನ್ನಾಗಿ ಉಪಯೋಗಿಸಲು ಪ್ರಾರಂಭಿಸಿದರು. ಖನನವೇ ಸಾಧ್ಯವಾದ ಸಂಸ್ಕಾರ. ಪೌರಸಿಬ್ಬಂದಿಯವರು ಆ ಕಾರ್ಯದಲ್ಲಿ ನಿರತರಾದರು. ಅವರಿಗೂ

ವಿಶೇಷ ಛತ್ರದ ಆಸೆ ತೋರಿಸಬೇಕಾಯಿತು. ನವೆಂಬರ್ ತಿಂಗಳಿನ ಮೊದಲ ವಾರದ ವೇಳೆಗೆ ಪ್ರತಿದಿನದ ಮೃತರ ಸಂಖ್ಯೆ ಒಂದು ಸಾವಿರವನ್ನೂ ಮೀರಿತು. ಚಾಮುಂಡೀ ಬೆಟ್ಟದ ಕಿಬ್ಬಿಯಲ್ಲಿ ಮೂರು ಎಕರೆಯ ಹೊಸ ರುದ್ರಭೂಮಿಯು ನಿರ್ಮಾಣವಾಯಿತು. ರೋಗ ಸಂಪೂರ್ಣವಾಗುವ ವೇಳೆಗೆ ಈ ಜಾಗ ಪೂರ್ಣವಾಗಿ ಆಕ್ರಮಿಸಲ್ಪಟ್ಟಿತ್ತು.

ಈ ಮಧ್ಯೆ ತಿ. ನರಸೀಪುರದಲ್ಲಿದ್ದ ನಮ್ಮ ತಂದೆಯವರಿಗೆ ಮೈಸೂರಿನ ಈ ವಿಷಯವು ತಿಳಿಯಿತು. ಅಲ್ಲಿಯೂ ಈ ರೋಗ ಪ್ರಾರಂಭವಾಗಿತ್ತು. ಗಾಬರಿಯಿಂದ ಮೈಸೂರಿಗೆ ಓಡಿ ಬಂದರು. ನನ್ನನ್ನು ಬಹು ಕಟುವಾಗಿ ತರಾಟೆಗೆ ತೆಗೆದುಕೊಂಡರು. 'ಅಯೋಗ್ಯ, ನೀನು ಮೊಳೆ ಹೊಡೆದುಕೊಂಡು ನಿಲ್ಲುತ್ತೀಯಾ, ಜನ ನಡುಗುತ್ತದೆ. ನಿನ್ನ ಲೋಕೋದ್ಧಾರ ಕಾರ್ಯಸಾಕು ನಡೆ ಎಂದು ಬೈದು ನನ್ನನ್ನು ಊರಿಗೆ ಅಟ್ಟಿ, ತಾವು ಅರಮನೆ ಸಂಬಂಧವಾದ ಕಾವೇರಿ ಸ್ನಾನಕ್ಕಾಗಿ ಶ್ರೀರಂಗಪಟ್ಟಣಕ್ಕೆ ತೆರಳಿದರು. ಆ ವೇಳೆಗೆ ಸರಿಯಾಗಿ ಅಲ್ಲಿ ನಮ್ಮ ಬಂಧುಗಳಾದ ಇಬ್ಬರು ತಾಯಿ ಮಕ್ಕಳು ಒಂದೇ ದಿನ ಮೃತರಾಗಿದ್ದರು. ಮಾರನೆಯದಿನ ಅವರ ಅಂತ್ಯಕ್ರಿಯೆಯನ್ನು ಮುಗಿಸಿಕೊಂಡು ಮನಸ್ಸು ಸಮಾಧಾನವಿಲ್ಲದೆ ಊರಿಗೆ ಹಿಂದಿರುಗಿದೆನು. ನಾನು ನಮ್ಮೂರಿಗೆ ಹೋಗಿ ಸೇರಿದ ದಿನವೇ ನನ್ನ ೧೩ ವರ್ಷದ ತಮ್ಮನಿಗೆ ರೋಗ ತಟ್ಟಿತ್ತು. ನಮ್ಮ ತಂದೆಯವರು ಬಂದ ದಿನ ಮಧ್ಯಾಹ್ನವೇ ಅವನು ತೀರಿಕೊಂಡ. ಊರಿನಲ್ಲಿ ಅಂದಿನ ಸಹಾಯಕ್ಕೆ ಯಾರೂ ಬರಲಿಲ್ಲ. ನನಗೆ ಆ ವರ್ಷ ಮದುವೆ ದೀಕ್ಷೆಯಾಗಿದ್ದುದರಿಂದ ನನ್ನನ್ನು ಶವವನ್ನು ಮುಟ್ಟ ಬೇಡವೆಂದು ನಮ್ಮ ತಂದೆಯು ನಿಷೇಧಿಸಿದರು. ಹನ್ನೆರಡು ವರ್ಷದ ಮಗನ ಶವವನ್ನು ತಾವೊಬ್ಬರೇ ವಹಿಸಿಕೊಂಡು ಹೋದರು. ಬೇರೆ ಯಾರ ಸಹಾಯವೂ ಇರಲಿಲ್ಲ. ನಮ್ಮ ತಾಯಿ ಏಕಾಕಿಯಾಗಿ ನದಿಗೆ ಹೋಗಿ ಮುಳುಗಿ ದುಃಖದ ವೇಗವನ್ನು ತಾಳಲಾರದೆ ಪಕ್ಕದಲ್ಲಿ ಒದ್ದೆ ಬಟ್ಟೆಯಿಂದಲೇ ಒಂದು ಮಂಟಪದಲ್ಲಿ ಮುದುರಿಕೊಂಡಿದ್ದಳು. ತಮ್ಮನ ಸಂಸ್ಕಾರ ಮುಗಿಸಿಕೊಂಡು ಮನೆಗೆ ಬಂದು ನೋಡಿದರೆ ನಮ್ಮ ತಾಯಿ ಬಂದಿರಲಿಲ್ಲ. ಹೊಳೆಯ ಕಡೆಯಲ್ಲಿ ಹೋಗಿ ಮಂಟಪದಲ್ಲಿ ನಡುಗುತ್ತಿದ್ದವಳನ್ನು ಬಹುಕಷ್ಟದಿಂದ ಮನೆಗೆ ಸೇರಿಸಿದೆವು. ಅಂದು ಅವಳು ಹಾಸಿಗೆ ಹಿಡಿದವಳು ಪುನಃ ಏಳಲೇ ಇಲ್ಲ. ಅಂದಿನಿಂದ ಏಳನೆಯ ದಿನ ಪ್ರಾಂತಃಕಾಲ ಕಣ್ಣು ಮುಚ್ಚಿಕೊಂಡಳು. ಸುಮಾರು ೨೫೦೦ ಪ್ರಜಾಸಂಖ್ಯೆಯುಳ್ಳ ನಮ್ಮೂರಿನಲ್ಲಿ ಒಂದು ತಿಂಗಳಲ್ಲಿ ೨೭೦ ಜನ ತೀರಿಕೊಂಡರು. ಮೈಸೂರಿನ ಸ್ಥಿತಿ ಅತ್ಯುಲ್ಬಣಕ್ಕೆ ಬಂತು. ನವೆಂಬರ್ ೨೬ ನೆಯ ದಿನದ ಮರಣ ಸಂಖ್ಯೆ ೨೬೮೪. ಶಿವರಾಮ ಪೇಟೆಯ ಒಂದು ವೈಶ್ಯ ಕುಟುಂಬದಲ್ಲಿ ೧೩ ಜನರಿದ್ದವರಲ್ಲಿ ೧೦ ತಿಂಗಳ ಮಗುವೊಂದು ಮಾತ್ರ ಉಳಿಯಿತು. ದೇಶದಾದ್ಯಂತ ಈ ರೋಗವ್ಯಾಪಿಸದ ಹಳ್ಳಿಯಿಲ್ಲ. ಜೋಡಿ ಹೆಣ ಬೀಳದ ಮನೆ ಅಪರೂಪ. ಅಖಂಡ ಭಾರತದಲ್ಲಿ ಮೂರು ತಿಂಗಳಿನ ಕಾಲದಲ್ಲಿ ಒಟ್ಟು ಜನಸಂಖ್ಯೆಯ ಮೂರನೆಯ ಒಂದು ಭಾಗ ಈ ರೋಗಕ್ಕೆ ಆಹುತಿಯಾಗಿ ನಾಶವಾಯಿತು. ಇದಕ್ಕಿದ್ದ ಹಾಗೆ ಡಿಸೆಂಬರ್ ೧೫ರ ವೇಳೆಗೆ ದೇಶದಲ್ಲೆಲ್ಲ ತಾನೇ ಶಾಂತವಾಯಿತು. ಕಾವಬ್ಬೆ ಕಣೆಗೊಂಡರೆ ಮತ್ತಾರು ಕಾಯ್ವವರು?

❐

## ಸಂಯೋಗದಷ್ಟೇ ವಿಯೋಗವೂ ಆಕಸ್ಮಿಕ

ಮಾನವ ಜೀವನದಲ್ಲಿ ವಿವಾಹವು ಪತಿಪತ್ನಿಯರ ಜೀವನಪರ್ಯಂತ ಪ್ರಭಾವಿತವಾಗುವ ಒಂದು ಮಹದ್ಘಟನೆ. ಆದುದರಿಂದ ಬಹು ಆದಿಕಾಲದಿಂದ ಅನುಕೂಲ ದಾಂಪತ್ಯವನ್ನು ಸಂಘಟಿಸಲು ಅನೇಕ ರೀತಿಯಿಂದ ಎಚ್ಚರಿಕೆಗಳನ್ನು ತೆಗೆದುಕೊಳ್ಳಲಾಗಿದೆ. ಜ್ಯೋತಿಷ್ಯವು ಕನ್ಯಾವರಗಳ ಜಾತಕದಲ್ಲಿರುವ ಸ್ಥಿತಿಗತಿಗಳನ್ನು ಪರಿಶೀಲಿಸಿ ಅವರ ಸಹಜೀವನ ಆನುಕೂಲ್ಯತೆಯನ್ನು ನಿಷ್ಕರ್ಷಿಸಬೇಕೆಂದು ಸಾರಿತು. ನಿಬಂಧಗ್ರಂಥಗಳು ಕುಲದ ಹಿರಿಯ ಪರಿಷತ್ತಿನವರು ಅನುಕೂಲವಾದ ಕನ್ಯಾವರಗಳನ್ನು ಗೊತ್ತು ಮಾಡಬೇಕೆಂದು ಘೋಷಿಸಿತು. ಆಧುನಿಕ ಪ್ರಪಂಚದಲ್ಲಿ ಇವೆಲ್ಲಕ್ಕಿಂತಲೂ ಮಿಗಿಲಾಗಿ ವಿವಾಹಿತರಾಗುವ ಸ್ತ್ರೀಪುರುಷರ ವೈಯಕ್ತಿಕವಾದ ಆಯ್ಕೆ ಮತ್ತು ಮೆಚ್ಚಿಗೆಯೂ ಹೆಚ್ಚು ಫಲಪ್ರದವೆಂದು ಅಂಗೀಕೃತವಾಗಿದೆ. ಇವಾವುದಕ್ಕೂ ಒಳಪಡದ ಆಕಸ್ಮಿಕವಾದ ಸಂಘಟನೆ ನನ್ನ ವಿವಾಹ.

೧೯೧೮ನೆಯ ಇಸ್ವಿ ಜೂನ್ ೨೬ನೆಯ ತಾರೀಖು ಬುಧವಾರ. ಆಗ ನಾನು ಮೈಸೂರು ಮಹಾರಾಜರವರ ಪ್ರೌಢಶಾಲೆಯ ಮೊದಲನೆಯ ತರಗತಿಯಲ್ಲಿ ವ್ಯಾಸಂಗಮಾಡುತ್ತಿದ್ದೆ. ಪರಕಾಲ ಮಠದಿಂದ ಪಡಿಯನ್ನವನ್ನು ಪಡೆದು ದೇವಾಂಬಾ ಅಗ್ರಹಾರದಲ್ಲಿರುವ ನಮ್ಮ ಬಂಧುಗಳೊಬ್ಬರ ಮನೆಯಲ್ಲಿದ್ದುಕೊಂಡಿದ್ದೆ. ಬುಧವಾರ ಪ್ರಾತಃ ಸುಮಾರು ಒಂಬತ್ತುಗಂಟೆಯ ಸಮಯದಲ್ಲಿ ಜಗನ್ಮೋಹನ ಬಂಗಲೆಯ ಮುಂಭಾಗದಲ್ಲಿ ಪರಕಾಲಮಠದಿಂದ ಬರುತ್ತಿದ್ದೇನೆ. ನಾನಿದ್ದ ಮನೆಯ ಯಜಮಾನರೂ ಮತ್ತೊಬ್ಬ ನನ್ನ ದೂರದಿಂದ ಬಂಧುವಿನೊಡನೆ ನನ್ನನ್ನು ಎದುರಿಸಿ ಇದ್ದಕ್ಕಿದ್ದ ಹಾಗೆ ನಿನಗೆ ನಿಷ್ಕರ್ಷೆಯಾಗಿದೆ. ನಮ್ಮ ತಂದೆಯವರು ನಿನ್ನನ್ನು ಕರೆದು ಕೊಂಡು ಬರ ಹೇಳಿದ್ದಾರೆ. ಏಳು, ಹೊರಡು ಇಂದೇ ಮದುವೆಯಾಗಬೇಕು ಎಂದು ನನ್ನ ತಂದೆಯ ಕಾಗದವನ್ನು ತೋರಿಸಿದರು. ನಮ್ಮ ತಂದೆಯಿದ್ದುದು ೩೦ ಮೈಲಿದೂರದಲ್ಲಿದ್ದ ವರ್ದ್ರುಪುರದಲ್ಲಿ ಕಾಗದವನ್ನು ನೋಡಿ ದಿಗ್ಭ್ರಮೆಯಾದುದಲ್ಲದೇ ಅಳುವು ಕೂಡ ಬಂತು. ೧೩ ವರ್ಷದ ನಾನೆಂದರೇನು, ಮದುವೆಯೆಂದರೇನು ನಾನು ಬಂದೆ ಬರುವುದಿಲ್ಲ ಎಂದು ಹಟ

ಹಿಡಿದೆ. ನಾನು ಇದ್ದ ಮನೆಯವರು ನಾನು ನಿನ್ನನ್ನು ನಿರ್ಬಂಧ ಮಾಡುವುದಿಲ್ಲ. ನಿಮ್ಮ ತಂದೆ ನಿನ್ನನ್ನು ನಮ್ಮ ವಶಕ್ಕೆ ತಂದುಬಿಟ್ಟಿದ್ದಾರೆ. ಈಗ ಪುನಃ ಕರೆದುಕೊಂಡು ಬಾ ಎಂದಿದ್ದಾರೆ. ಅವರಲ್ಲಿಗೆ ನಿನ್ನನ್ನು ತಲಪಿಸುತ್ತೇವೆ ಎಂದು ಪುಸಲಾಯಿಸಿದರು. ನನ್ನ ವಿವಿಧ ಕೋಪತಾಪಗಳು ವಾದಗಳೂ ನಿಷ್ಫಲವಾದುವು. ಮದುವೆಯಾಗಬೇಕಾಗಿದ್ದುದು ನರಶೀಪುರದಿಂದ ೨ ಮೈಲಿ (ಮೈಸೂರಿನಿಂದ ೨೦ ಮೈಲಿ) ದೂರದಲ್ಲಿದ್ದ ಸೋಸಲೆಯೆಂಬ ಗ್ರಾಮದಲ್ಲಿ. ಆಗ, ಬಸ್ಸು, ಕಾರು, ಆಟೋ ಮೊದಲಾದ ವಾಹನ ಸೌಕರ್ಯಗಳಿರಲಿಲ್ಲ. ಅಪರೂಪವಾಗಿ ಒಂದೆರಡು ಜಟಕಾ ಗಾಡಿಗಳಿರುತ್ತಿದ್ದವು. ಅವುಗಳ ಕುದುರೆಗಳೂ ಅಷ್ಟು ಚುರುಕಾಗಿರಲಿಲ್ಲ. ನಾಲ್ಕು ಚಕ್ರದ ಕುದುರೆಯ ಸಾರೋಟು ಬಾಡಗೆಗಿರುತ್ತಿದ್ದವು. ಬಹುಕಷ್ಟದಿಂದ ಅಂತಹ ಒಂದು ವಾಹನವನ್ನು ಏರ್ಪಡಿಸಿ ನನ್ನ ಬಲಾತ್ಕಾರದಿಂದ ಕರೆದೊಯ್ದರು. ಗಾಡಿಯು ಸುಮಾರು ಒಂಬತ್ತುವರೆ ಗಂಟೆಗೆ ಮೈಸೂರನ್ನು ಬಿಟ್ಟಿತು.

ಸೋಸಲೆಯಿರುವುದು ಕಾವೇರಿ ನದಿಯ ಎಡದಡದಲ್ಲಿ. ಗರ್ಗೇಶ್ವರಿಯೆಂಬ ಗ್ರಾಮದ ಎಡ ದಂಡೆಯಲ್ಲಿ. ಅಲ್ಲಿಂದ ಹೊಳೆಯನ್ನು ದಾಟಿ ಆಚೆಯ ದಡಕ್ಕೆ ಸೇರಬೇಕು. ಆಗ ಕಾವೇರಿ ನದಿಗೆ ಸೇತುವೆ ಇರಲಿಲ್ಲ. ದೋಣಿಯ ಮೇಲೆ ಪ್ರಯಾಣ ಮಾಡಬೇಕು. ಆಚೆಯ ದಡದಿಂದ ಊರಿಗೆ ಅರ್ಧಮೈಲಿ. ಈ ಮೂರು ಜಾಗಗಳಲ್ಲಿಯೂ ನಿಶಾನೆಗಳನ್ನೇರ್ಪಡಿಸಿ ಎಲ್ಲಿಯೂ ಸಾವಕಾಶವಾಗದಂತೆ ದೋಣಿಯಿಂದ ಇಳಿದ ತಕ್ಷಣ ಬಾಜಾಬಜಂತ್ರಿಗಳ ಮೂಲಕ ನನ್ನನ್ನು ಕರೆದೊಯ್ದು ನನ್ನ ಯಾವ ತಕರಾರಿಗೂ ಅವಕಾಶವಿಲ್ಲದಂತೆ ಮದುವೆಯನ್ನು ನಡೆಸಬೇಕೆಂಬುದು ಆಗ ನಡೆದಿದ್ದ ಒಳಸಂಚು. ಇದಕ್ಕೆ ನಮ್ಮ ತಂದೆಯವರು ಭಾಗಿಗಳು.

ಸಾರೋಟು ಸುಮಾರು ಹನ್ನೊಂದು ಗಂಟೆಗೆ ಗರ್ಗೇಶ್ವರಿ ಹೊಳೆಯ ದಡವನ್ನು ಬಂದು ಸೇರಿತು. ನಿಶಾನೆಗಳ ಮೂಲಕ ಸುದ್ದಿ ಊರಿನವರೆಗೂ ಮುಟ್ಟಿತು. ಅಲ್ಲಿಂದ ತಕ್ಷಣ ಮದುವಣಿಗನನ್ನು ಎದುರುಗೊಳ್ಳಲು ದಿಬ್ಬಣ ಹೊರಟೇ ಬಿಟ್ಟಿತು. ದಡದಲ್ಲಿ ದೋಣಿಯಲ್ಲಿ ಜಿಲ್ಲೆಯನ್ನು ಹಿಡಿದುಕೊಂಡು ರಂಗಪ್ಪನೆಂಬುವರು ಘಟಾನುಘಟಿಗಳು ನಿಂತಿದ್ದರು. ದೋಣಿ ನಡೆಸುವ ಅವರ ಶಕ್ತಿ ಅನ್ಯಾದೃಶವಾದುದು. ೧೯೧೧ನೆಯ ವರ್ಷದ ಮಹಾಪ್ರವಾಹದಿಂದ ಆಲೆಯ ಮನೆಯ ಕೊಪ್ಪರಿಗೆಯನ್ನು ಉಪಯೋಗಿಸಿ ನೂರಾರು ಜನಗಳನ್ನು ಕಾಪಾಡಿದವರವರು. ನಮ್ಮನ್ನು ಕುಳ್ಳಿರಿಸಿಕೊಂಡು ೧೫ ನಿಮಿಷಗಳಲ್ಲಿ ಆಚೆ ದಡಕ್ಕೆ ಸೇರಿಸಿದರು. ತಕ್ಷಣ ಅಲ್ಲಿ ಮದುವೆ ದಿಬ್ಬಣ ಸಿದ್ಧವಾಗಿತ್ತು. ನಾನು ಒಂದು ಕಲ್ಲಿಕೋಟೆ ಚಕ್ಕಿನ ಅಂಗಿ, ಒಂದು ಹಾಸನದ ಕೆಂಪು ಕಸೂತಿಟೋಪಿ ಹಾಕಿಕೊಂಡಿದ್ದೆ. ಎಷ್ಟು ತಕರಾರು ಮಾಡಿದರೂ ಕೇಳದೆ ನನ್ನ ಅಂಗೀ ಟೋಪಿ ಕಳೆದು ಅಲ್ಲಿ ಯಾರೋ ಹೊದೆದುಕೊಂಡಿದ್ದ ಕೆಂಪು ಶಾಲನ್ನು ಹೊದಿಸಿ ಒಂದು ಹೂವಿನ ಹಾರ ಹಾಕಿ ಮುಂದಕ್ಕೆ ವಾದ್ಯದೊಡನೆ ಹೊರಟು ಬಿಟ್ಟರು. ನಮ್ಮ ತಂದೆ ಮೊದಲಾದ ನಮ್ಮ ಕಡೆಯವರಾರನ್ನು ನೋಡಲು ಅವಕಾಶವಿಲ್ಲ. ಅಲ್ಲಿ ನನಗೆ ಯಾವ ಸ್ವಾತಂತ್ರ್ಯವೂ ಇರಲಿಲ್ಲ.

ಮೆರವಣಿಗೆ ನೇರವಾಗಿ ಮದುವೆ ಚಪ್ಪರಕ್ಕೆ ಸಾಗಿತ್ತು. ಮನೆ ಮುಂದೆ ಆರತ್ಯಕ್ಷತೆಗಳು ನಡೆದು ಕಲ್ಯಾಣಮಂಟಪದ ಹಸೆಮಣೆಯ ಮೇಲೆ ಕೂರಿಸಿದ್ದಾಯಿತು. ನಾನು ಮಾತ್ರ ನಿಸ್ಸಹಾಯಕನಾಗಿ ಮೂಕನಂತೆ ವರ್ತಿಸಬೇಕಾಯಿತು. ನಿಶ್ಚಿತಾರ್ಥ ಮಹೋತ್ಸವಕ್ಕೆ ಕನ್ಯೆಯನ್ನು ತಂದು ಪಕ್ಕದಲ್ಲಿ ಕುಳ್ಳಿರಿಸಿದರು. ಆಕೆಯನ್ನು ನಾನು ನೋಡಿರಲಿಲ್ಲ. ಅವಳು ನನ್ನನ್ನು ನೋಡಿರಲಿಲ್ಲ. ನೋಡಿದ್ದರೆ ತಾನೆ ಏನು. ಅವಳಿಗೆ ಎಂಟು ವರ್ಷ. ಅಜ್ಜಿಯ ಕಾಲವಲ್ಲದಿದ್ದರೂ ಮದುವೆಯ ಸಂಬಂಧವಾದ ಬಿಗುಮಾನ. ಇಬ್ಬರೂ ಕುಳಿತಾದ ಮೇಲೆ ನಮ್ಮ ತಂದೆ ಕಾಣಿಸಿಕೊಂಡು ಹುಸಿನಗುವಿನಿಂದ ಏನೋ ಮದುವೆ ಮಾಡಿಕೊಳ್ಳಬೇಕಾದರೆ ನನ್ನನ್ನು ಕೇಳಲೇಬೇಡವೇನೋ ಎಂದರು. ನನ್ನ ಕೋಪ ತಡೆಯದಷ್ಟಾಯಿತು. ಆದರೆ ಸಭೆಯ ಮಧ್ಯೆ ನಾನು ಏನು ಮಾಡಬಲ್ಲೆನು. ಸುಮಾರು ೩೦೦ ಜನ ನೆರೆದಿದ್ದಾರೆ. ಎದ್ದು ಓಡಿ ಹೋಗುವ ಧೈರ್ಯವೆಲ್ಲಿ ಬಂದಿತು. ಪ್ರಾರಂಭದ ಶಾಸ್ತ್ರಗಳೆಲ್ಲ ನಡೆದುವು.

ವಿಚಾರ ಮಾಡಲಾಗಿ ಹಿಂದಿನ ರಹಸ್ಯವು ವಿಶದವಾಯಿತು. ಕನ್ಯಾಪಿತಾ ಆ ಊರಿನ ಜೋಡೀದಾರರ ಮೊಮ್ಮಗ. ಅವರ ತಂದೆ ಕಳಲೆ ರಾಜರ್ ಹಟ್ಟಿಯ ಗುರುಗಳು. ಆಗ ಆ ವಂಶದ ದಿವಾನರಾಗಿದ್ದ ಕಾಂತರಾಜ ಅರಸಿನವರ ಸಾಕ್ಷಾತ್ ಗುರುಗಳು. ಅಂತಹವರ ಸಂಬಂಧ ಬೆಳೆಸಬೇಕೆಂಬುದು ಆಗಿನ ಕಾಲದ ಖ್ಯಾತ ಮನೆತನಗಳ ಆಸೆ. ಅದಕ್ಕಾಗಿ ಯಳಂದೂರು ತಾಲ್ಲೋಕಿನ ಒಂದು ಪ್ರಸಿದ್ಧ ಅಗ್ರಹಾರದ ಕನ್ಯಾ ಮನೆತನಕ್ಕೆ ಸ್ವಲ್ಪ ಪೂರ್ವ ಸಂಬಂಧಿಗಳೊಬ್ಬರು ಈ ಕನ್ಯೆಯನ್ನು ತನ್ನ ಮಗನಿಗೆ ತಂದುಕೊಳ್ಳಬೇಕೆಂದು ಕೆಲವು ತಿಂಗಳುಗಳ ಮುಂಚೆಯೇ ನಿಷ್ಕರ್ಷಿಸಿಕೊಂಡಿದ್ದರು. ಆಗಿನ ಕಾಲದ ವಿವಾಹಪದ್ಧತಿ ಈಗಿನ ಕಾಲಕ್ಕೆ ನೇರವಿರೋಧವಾಗಿದ್ದಿತು. ಈಗಿನ ವರದಕ್ಷಿಣೆಯ ಎಡರು ಆಗಿನ ಕಾಲದಲ್ಲಿ ಸ್ವಪ್ನದಲ್ಲಿಯೂ ಕಂಡಿರಲಿಲ್ಲ. ಅದಕ್ಕೆ ಬದಲಾಗಿ ಕನ್ಯಾಶುಲ್ಕ ಅನೇಕೆಡೆಗಳಲ್ಲಿ ರೂಢಿಯಲ್ಲಿತ್ತು. ಮದುವೆಯ ಖರ್ಚೆಲ್ಲಾ ವರನವರಿಗೆ ಸೇರಿದ್ದು ಸ್ವಲ್ಪ ಶ್ರೀಮಂತ ಮನೆತನದವರು ಕನ್ಯಾಶುಲ್ಕ ತೆಗೆದುಕೊಳ್ಳುತ್ತಿರಲಿಲ್ಲ. ವಿವಾಹವು ಅಯ್ದು ದಿನಗಳು ನಡೆಯುತ್ತಿದ್ದವು. ಅದರಲ್ಲಿ ಒಂದು ದಿನದ ವೆಚ್ಚವನ್ನು ವಹಿಸಿಕೊಂಡು ಉಳಿದುವನ್ನೆಲ್ಲ ವರನ ಕಡೆಯವರಿಗೇ ವಹಿಸುತ್ತಿದ್ದರು. ಅದನ್ನು ಪೂರ್ಣವಾಗಿ ಭರಿಸುವುದು ಅವರ ಕರ್ತವ್ಯವಾಗಿರುತ್ತಿತ್ತು.

ಈ ವಿವಾಹದ ವಿಷಯದಲ್ಲಿಯೂ ವರನ ಕಡೆಯವರು ಬಹುಭಾಗದ ಜವಾಬ್ದಾರಿಯನ್ನು ವಹಿಸಿಕೊಂಡು ತಮಗೆ ಬೇಕಾದ ಎಲ್ಲ ಸಲಕರಣೆಗಳೊಡನೆ ಮೆರವಣಿಗೆ ಮತ್ತು ಅವರ ಸಂಬಂಧಿಗಳೊಡನೆ ನಾಲ್ಕು ಎತ್ತಿನ ಗಾಡಿಗಳಲ್ಲಿ ತಮ್ಮೂರಿಂದ ಮದುವೆಯ ದಿನದ ಮೊದಲನೆಯ ದಿನ ಸಾಯಂಕಾಲ ಸೋಸಲೆಗೆ ಬಂದು ಸೇರಿದರು. ಮದುವಣಿಗನಿಗೆ ಸುಮಾರು ೧೫ ವರ್ಷ. ವಿದ್ಯಾವಂತನೇನಲ್ಲ. ಹಳ್ಳಿಯ ಒಂದು ಹಿರಿಯ ಮನೆತನದಲ್ಲಿ ಜನಿಸಿದವನು. ಆ ಹುಡುಗನಿಗೆ ತಮ್ಮ ಮಗಳನ್ನು ಕೊಡಬೇಕೆಂದು ಯೋಚಿಸಿದ್ದ ಅವನ ಬಂಧುಗಳಾರೋ ಅವನಿಗೆ ಕನ್ಯೆಯ ವಿಷಯದಲ್ಲಿ ಏನೋ ದುರ್ಗುಣಗಳನ್ನು ಅವನೆದುರಿಗೆ

ಆರೋಪಿಸಿದರು. ಅದರ ಸತ್ಯಾಂಶವನ್ನು ವಿಚಾರ ಮಾಡುವ ಶಕ್ತಿ ಅವನಲ್ಲಿರಲಿಲ್ಲ. ಅವನು ಹೇಳದೆ ಕೇಳದೆ ಯಾರಿಗೂ ತಿಳಿಸದೆ ಪರಾರಿಯಾಗಿ ಬಿಟ್ಟ. ಒಂದೆರಡು ಗಂಟೆಗಳ ಕಾಲ ಹುಡುಕಿ ಸುಮಾರು ಸಾಯಂಕಾಲ ಏಳುಗಂಟೆಗೆ ಹುಡುಕಿ ಕರೆದುಕೊಂಡು ಬಂದು ಎಷ್ಟೋ ಒಳ್ಳೆಯ ಮಾತುಗಳನ್ನಾಡಿದರು. ಹುಡುಗ ಬಗ್ಗಲಿಲ್ಲ. ರಾತ್ರಿ ೧೨ ಗಂಟೆಯವರೆಗೆ ಬರೀ ಚರ್ಚೆಯಲ್ಲಿಯೇ ಪರ್ಯಾವಸಾನವಾಯಿತು.

ಕನ್ಯೆಯ ಮನೆಯವರಿಗೆ ಇದೊಂದು ಆತ್ಮಗೌರವದ ಪ್ರಶ್ನೆಯಾಗಿ ಪರಿಣಮಿಸಿತು ಮೊದಲೇ ತಿಳಿಸಿರುವಂತೆ ಅವರು ಜೋಡಿದಾರ್ರ ಮೊಮ್ಮಗ, ದಿವಾನರಸರ ಗುರುಮನೆತನ, ೫೦೦ಕ್ಕಿಂತ ಹೆಚ್ಚಿನ ಬಂಧುಗಳು ನೆರೆದಿದ್ದಾರೆ. ಮಾರನೆಯ ದಿನದ ಮದುವೆಗೆ ದಿವಾನರು ಬರುವವರಿದ್ದಾರೆ. ಏರ್ಪಡಿಸಿದ್ದ ಸೌಕರ್ಯಗಳೆಲ್ಲ ಸಿದ್ಧತೆಗಳೆಲ್ಲ ನಿಷ್ಫಲವಾಗುವುದು. ಜನರ ನಗೆಪಾಟಲಾಗುವುದರಲ್ಲಿಯೂ ಸಂದೇಹವಿಲ್ಲ. ಹೇಗಾದರೂ ಮಾಡಿ ನಿಷ್ಕರ್ಷಿಸಿದ ಲಗ್ನದಲ್ಲಿಯೇ ಲಗ್ನವನ್ನು ಬೆಳೆಸಬೇಕೆಂಬ ಒಂದು ಛಲ ಉಂಟಾಯಿತು.

ಆಗ ಅಲ್ಲಿ ಕಾಣಬಹುದಾದ ಅನೇಕ ವರಗಳನ್ನು ಗುಣಿಸಿನೋಡಿದರು ಮನಸ್ಸಿಗೆ ಯಾರೂ ಸರಿಬೀಳಲಿಲ್ಲ. ಆಗ ಕನ್ಯಾಪಿತೃವು ಈ ವಿಷಯವನ್ನು ತಮ್ಮ ತಾಯಿಯಲ್ಲಿ ವಿಚಾರ ಮಾಡಿದರು. ಆಕೆ ಬಹುವಿವೇಕಿ, ಅನುಭವಸ್ಥೆ ಮತ್ತು ಎಲ್ಲರ ಗೌರವಕ್ಕೂ ಪಾತ್ರಳಾದವಳು. ಆಕೆಯು ನಮ್ಮ ತಂದೆಗೆ ಅಕ್ಕನ ವಾವಿಯಾಗಬೇಕು. ಅವರ ತಾಯಿಯೂ ನಮ್ಮ ಪಿತಾಮಹಿಯೂ ಸೋದರಿಯರು. ಅವರು ಇದ್ದಕ್ಕಿದ್ದ ಹಾಗೆ ಇದೇಕೋ ಹೀಗೆ ಪರೆದಾಡುತ್ತೀರಿ. ನಮ್ಮ ನರಶೀಪುರದ ನರಸಿಂಹನ ಮಗ ಇದ್ದಾನಲ್ಲೋ, ಮನ್ಮಥನ ಹಾಗಿದ್ದಾನೆ ಹುಡುಗ, ಈಗ ತಾನೆ ೫ ರೂಪಾಯಿ ಪರೀಕ್ಷೆ ಮಾಡಿಕೊಂಡು ಮೈಸೂರಿನಲ್ಲಿದ್ದಾನಂತಲ್ಲ. ಅವನು ಈಗ ಊರಿನಲ್ಲಿ ಇರಬಹುದು. ಅವನಿಗೆ ಕೊಟ್ಟುಬಿಡೋದು. ಹುಡುಗಿ ಸಾಕ್ಷಾತ್ ಲಕ್ಷ್ಮಿಯಂತೆ ಬದುಕಿಕೊಳ್ಳುತ್ತಾಳೆ ಎಂದರು. ಆಕೆಯ ಮಾತು ಎಲ್ಲರಿಗೂ ಬಹಳ ಹಿತವಾಗಿ ಕಂಡಿತು. ಹಾಗೆಯೇ ಸರಿ ಎಂದು ತೀರ್ಮಾನಿಸಿಬಿಟ್ಟರು. ನಮ್ಮ ತಂದೆಯವರೂ ಮದುವೆಗೆ ಬಂಧುವಾಗಿ ಪುರೋಹಿತರಾಗಿ ಅಲ್ಲಿಗೆ ಬಂದಿದ್ದರು. ಸುಮಾರು ರಾತ್ರಿ ಮೂರು ಗಂಟೆಯ ಸಮಯದಲ್ಲಿ ನಮ್ಮ ತಂದೆಯು ಮಲಗಿದ್ದ ಸ್ಥಳಕ್ಕೆ ಬಂದು ಈ ವಿಷಯವನ್ನು ಪ್ರಶ್ನೆ ಮಾಡಿದರು. ಅವರಿಗೂ ಈ ಹತ್ತಿರದ ನೆಂಟನ್ನು ಮಾಡಿಕೊಳ್ಳುವುದರಲ್ಲಿ ಅಭಿಪ್ರಾಯವೇ. ಆದರೆ ಅಂದು ಅವರು ಬಂದಿದ್ದ ಸ್ಥಿತಿ, ತಕ್ಷಣ ಒಪ್ಪಿಕೊಂಡರೆ ತಮ್ಮ ಆತ್ಮಗೌರವಕ್ಕೆ ಉಂಟಾಗಬಹುದಾದ ಕೀಳ್ಮೆ, ಹುಡುಗನ ವಯಸ್ಸು ಮೊದಲಾದುವು ತಕ್ಷಣ ಒಪ್ಪಿಗೆ ಕೊಡಲು ಸಾಧ್ಯವಾಗಲಿಲ್ಲ. ಸ್ವಲ್ಪ ಒತ್ತಾಯ ವಿಶೇಷವಾಯಿತು. ತಾತ್ಕಾಲಿಕವಾದ ಒಂದು ಅನುಪವತ್ತಿಯನ್ನು ತಿಳಿಯುವುದಕ್ಕಾಗಿ ಹುಡುಗ, ಈ ಊರಿನಲ್ಲಿಲ್ಲವಲ್ಲ, ಮೈಸೂರಿನಲ್ಲಿದ್ದಾನೆ. ಅವನನ್ನು ಕರೆತರುವುದು ಹೇಗೆ ಸಾಧ್ಯ ಎಂದರು. ಆ ಕಾಲದಲ್ಲಿ ಅದು ಸಮಸ್ಯೆಯೇ. ಸ್ವಲ್ಪ ಕಾಲ ಎಲ್ಲರೂ ಮಂತ್ರಮುಗ್ಧರಾದಂತೆ ತಟಸ್ಥರಾದರು. ಮೊದಲು ಬಂದಿದ್ದ ವರನ ಕಡೆಯವರಿಗೆ ಏನಾದರೂ ಮಾಡಿ ಒಪ್ಪಿಸಬೇಕೆಂಬ ಚಾಪಲ್ಯ.

ಅವರಿಗೂ ತಮ್ಮ ಆತ್ಮಗೌರವದಲ್ಲಿ ವಿಶೇಷ ಆಸಕ್ತಿ. ವಿಷಯ ಹಾಗೂ ಹೀಗೂ ಡೋಲಾಯಮಾನವಾಗಿತ್ತು. ಆ ಸಮಯದಲ್ಲಿ ಕನ್ನೆಯ ಚಿಕ್ಕಪ್ಪನವರೊಬ್ಬರು ಬಹು ಉತ್ಸಾಹ ಶಾಲಿಗಳು. ಉಂಟಾಗಿದ್ದ ಹಗರಣದಿಂದ ಬಹು ರೋಸಿ ಹೋಗಿದ್ದರು. ಅವರು ಮಧ್ಯೆ ಪ್ರವೇಶಿಸಿ ನೀವು ದೃಢವಾಗಿ ತಾಯಿಯವರ ಸೂಚನೆಯಂತೆ ನಡೆಯುವುದಾದರೆ ವರನನ್ನು ಕರೆದುಕೊಂಡು ಬರುವ ಜವಾಬ್ದಾರಿ ನನಗಿರಲಿ ಎಂದರು. ಎಲ್ಲರಿಗೂ ಸ್ವಲ್ಪ ಧೈರ್ಯ ಬಂದಿತು. ಅನಿಶ್ಚಿತ ಸ್ಥಿತಿಯಲ್ಲಿರಲು ಯಾರೂ ಸಿದ್ಧರಿರಲಿಲ್ಲ. ಅವರ ಮಾತಿಗೆ ಒಪ್ಪಿದರು. ತಕ್ಷಣವೇ ಅವರು ಒಂದು ಬೈಸಿಕಲ್ಲನ್ನು ತೆಗೆದುಕೊಂಡು ಹೊರಟೇ ಬಿಟ್ಟರು. ನಮ್ಮ ತಂದೆಯವರನ್ನು ನಾನಾ ವಾದಗಳಿಂದ ಒಪ್ಪಿಸಿದರು. ತಕ್ಷಣ ನಮ್ಮ ಮನೆಯವರನ್ನೆಲ್ಲ ಕರೆದುಕೊಂಡು ಬರಲು ನರಸೀಪುರಕ್ಕೆ ಕಳುಹಿಸಿದರು. ಮೈಸೂರಿಗೆ ಹೊರಟವರು ಹಿಂದೆ ತಿಳಿಸಿದ ಅವರ ಮಾವ ರಂಗಪ್ಪನವರ ಸಹಾಯದಿಂದಲೇ ನದಿಯನ್ನು ದಾಟಿ ಅತಿ ವೇಗದಿಂದ ನಡೆದು ದಾರಿಯಲ್ಲಿ ಮದುವೆಗಾಗಿಯೇ ಬರುತ್ತಿದ್ದ ಮತ್ತೊಬ್ಬರ ಹಳೆಯ ಸೈಕಲನ್ನು ತೆಗೆದುಕೊಂಡು ೮.೩೦ ಗಂಟೆಗೆ ಮೈಸೂರಿಗೆ ನಾನಿದ್ದ ಮನೆಯವರಲ್ಲಿಗೆ ಬಂದು ಅವರನ್ನು ಕರೆದುಕೊಂಡು ನನ್ನನ್ನು ಜಗನ್ಮೋಹನ ಬಂಗಲೆಯ ಮುಂದೆ ಸಂಧಿಸಿದರು. ಮುಂದಿನ ವಿಷಯ ಈಗಾಗಲೇ ಪರಿಚಯವಾಗಿವೆ.

ಸ್ವಲ್ಪ ಸಾವಕಾಶವಾಗಿ ಪ್ರಾರಂಭವಾದರೂ ಮುಂದಿನ ವಿವಾಹ ಕಾರ್ಯ ಬಹು ವೈಭವದಿಂದ ನಡೆಯಿತು. ಅದನ್ನು ವರ್ಣಿಸಿದರೆ ಈಗ ಯಾರೂ ನಂಬುವುದಿಲ್ಲ. ಆ ಬಂಧುವರ್ಗ, ಆ ಮೆರವಣಿಗೆ, ಆ ವೇದಘೋಷ ಆ ಉತ್ಸಾಹ ಈಗೆಲ್ಲಿ ಬರಬೇಕು. ಐದು ದಿನಗಳ ಮದುವೆ. ಪ್ರತಿದಿನ, ಸಾಯಂಪ್ರಾತ ಅಗ್ನಿಕಾರ್ಯ, ಉಯ್ಯಾಲೆ ಉರಟಣೆ, ಮಾಲೆ ಪ್ರತಿಮಾಲೆಗಳು. ಬೀಗರ ಹಾಡು ದೀಪದ ನಾಟ್ಯ. ಹಾಸ್ಯಪರಿಹಾಸ್ಯಗಳು ಇವೆಲ್ಲ ಇಂದಿಗೆ ಬರಿಯ ಬಾಯಿ ಮಾತು ಮಾತ್ರ.

ಪತಿಪತ್ನಿಯರಾದ ನಮ್ಮಲ್ಲಿ ಒಬ್ಬರಿಗೆ ೧೩ ವಯಸ್ಸು ಇನ್ನೊಬ್ಬರಿಗೆ ೮ ವಯಸ್ಸು ಮದುವೆಯಲ್ಲಿ ಅಂತಹ ಗಹನವಾದ ಉದಾತ್ತತೆಯೇನೂ ಕಂಡುಬರಲಿಲ್ಲ. ಸ್ವಲ್ಪ ಕಾಲ ಮಕ್ಕಳಾಟಿಕೆಯಂತೆಯೇ. ಅರಿತುಕೊಳ್ಳುವುದು. ಮನೆಯಲ್ಲಿ ನೋಡುವುದು, ನಮ್ಮ ಭಾವೀ ಸಂಸಾರದ ಕನಸುಗಳನ್ನು ಬೇರೆಯವರ ಮೂಲಕ ವ್ಯಕ್ತಪಡಿಸುವುದು, ಹೀಗೆ ಮಾಡಿ ಕಾಲಕಳೆದುವು. ೨ ವರ್ಷಗಳೂ ಆ ಮೇಲೆ ನಮ್ಮ ಮಾವನವರೂ ಮೈಸೂರಿನಲ್ಲಿಯೇ ಬಂದು ನೆಲಸಿದರು. ನಾನೂ ಅವರ ಮನೆಯಲ್ಲಿಯೇ ಊಟ ಉಪಚಾರಾದಿಗಳಿಗೆ ಹೋಗುತ್ತಿದ್ದೆ. ನಮ್ಮ ಸಂಬಂಧ ನಿಕಟವಾಯಿತು. ಆದರೆ ಅತಿ ಗಾಂಭೀರ್ಯದಿಂದ ಕೂಡಿತ್ತು. ಮುಂದೆ ನಾನು ಬಿ.ಎ., ಎಂ.ಎ., ಬಿ.ಟಿ ಪರೀಕ್ಷೆಗಳಲ್ಲೆಲ್ಲಾ ಸರಿಯಾದ ರೀತಿಯಲ್ಲಿ ತೇರ್ಗಡೆಯಾದೆ. ಬಹು ಉತ್ತಮರೀತಿಯಲ್ಲಿ ಅಂಗಸಾಧನೆ ಮಾಡಿ ಹಲವಾರು ಸ್ಥಳಗಳಲ್ಲಿ ಮಲ್ಲಯುದ್ಧದಲ್ಲಿ ಪಾರಿತೋಷಕಗಳನ್ನು ಪಡೆದು ಕೆಲಸವಾಗುವವರೆಗೆ ನಮ್ಮ ಮಾವನವರ ಜೊತೆಯಲ್ಲಿದ್ದೆ. ಸ್ವಲ್ಪ ಕಾಲ ತಮ್ಮಂದಿರು ಅಲ್ಲಿರಬೇಕಾಯಿತು. ಸಂದರ್ಭಗಳಲ್ಲಿಯೂ ನಮ್ಮಲ್ಲಿ ಯಾವ

ಭಿನ್ನಾಭಿಪ್ರಾಯಗಳುಂಟಾಗಲಿಲ್ಲ. ಮಕ್ಕಳುಗಳಾದವು. ಒಂದೆರಡು ಹೋದವು. ಅನುಕೂಲ ದಾಂಪತ್ಯದಷ್ಟೇ ಕೆಲವು ವರ್ಷಗಳ ಕಾಲ ಬ್ರಹ್ಮಚರ್ಯೆಯನ್ನು ಪಾಲನೆ ಮಾಡಿದೆನು. ಪ್ರತ್ಯೇಕ ಸಂಸಾರದ ನಡೆಸಿದೆವು. ಸ್ಥಳಪರಸ್ಥಳಗಳಲ್ಲಿ ವಾಸಮಾಡಿದೆವು. ಆಕೆಯ ಸೌಹಾರ್ದ, ಮನಃ ಪರಿಪಾಕ, ಬಂಧುಪ್ರಿಯತೆ, ಸರಳ ಸ್ವಭಾವ ಅತಿಶ್ಲಾಘ್ಯವಾಗಿದ್ದುವು. ಸಹಧರ್ಮಚಾರಿಣಿ, ಛಾಯೇವಾನುಗತಾ ಎಂಬ ವಿಶೇಷಣಗಳು ಅವಳಿಗೆ ಅಕ್ಷರಶಃ ಸಲ್ಲುತ್ತದೆ.

ಮದುವೆಯಾದ ೩೦ ವರ್ಷಗಳ ಕಾಲ ಈ ತೆರನಾದ ಸಹಬಾಳ್ವೆ ಏಕಪ್ರಕಾರವಾಗಿ ಸಾಗಿತು. ೧೯೪೮ನೆಯ ಇಸ್ವಿ ಜನವರಿ ೨೯ನೆಯ ತಾರೀಖು ಅವಳಿಗೆ ಸ್ವಲ್ಪ ಮೂತ್ರ ಸಂಬಂಧವಾದ ಲಸಿಕೆ ತೋರಿತು. ತಕ್ಷಣ ಪಾರ್ಥಸಾರಾಯಣ ಪಂಡಿತರಿಂದ ಔಷಧಿ ಕೊಡಿಸಿದೆ. ಸ್ವಲ್ಪಗುಣವಾದಂತೆ ತೋರಿತು. ಅಂದು ಯುವರಾಜ ಕಾಲೇಜಿನ ಕರ್ಣಾಟಕದ ಸಂಘದ ವಾರ್ಷಿಕೋತ್ಸವ. ನಾನೇ ಸಂಘದ ಅಧ್ಯಕ್ಷ, ಉತ್ಸವದ ಅಧ್ಯಕ್ಷರನ್ನಾಗಿ ಪೌರಸಭಾಧಿಕಾರಿಗಳನ್ನು ಆಹ್ವಾನಿಸಿದೆ. ಅಂದಿನ ಮನರಂಜನೆಗೆ ಗದಾಯುದ್ಧನಾಟಕವನ್ನು ಅಭಿನಯಿಸಬೇಕಾಗಿತ್ತು. ನಾನೇ ದುರ್ಯೋಧನನ ಪಾತ್ರವನ್ನೂ ವಹಿಸಬೇಕಾಗಿತ್ತು. ಸಾಯಂಕಾಲ ನವಜ್ಯೋತಿ ಸ್ಟುಡಿಯೋವಿನಿಂದ ಕೆಲವು ನಾಟಕೋಪಯುಕ್ತ ಸಲಕರಣಗಳನ್ನು ತೆಗೆದುಕೊಂಡು ಮನೆಯಲ್ಲಿ ಬಂದು ವಿಚಾರಿಸಿಕೊಂಡು ಕಾಲೇಜಿಗೆ ಹೋದೆ. ೫.೩೦ ಘಂಟೆಗೆ ಕಾರ್ಯಾರಂಭವಾಗಿ ಪೂರ್ವಾರ್ಧಗಳೆಲ್ಲ ಸುಮಾರು ಏಳು ಗಂಟೆಗೆ ಮುಗಿಸುವ ಇನ್ನೇನು ನಾಟಕವಾರಂಭವಾಗಬೇಕಾಗಿತ್ತು. ನಾನು ಒಳಗೆ ಹೋಗಿ ಬಣ್ಣ ಹಚ್ಚಿಕೊಂಡು ಉಡುಪನ್ನು ಹಾಕಿಕೊಳ್ಳಬೇಕಾಗಿತ್ತು. ಆ ಸಂದರ್ಭದಲ್ಲಿ ಮನೆಯಿಂದ ಪಂಡಿತರು ಬಂದಿದ್ದಾರೆ. ತಕ್ಷಣ ಬರಬೇಕಂತೆ ಎಂದು ಕರೆ ಬಂದಿತು. ಬಣ್ಣವನ್ನು ತೊಳೆದು ಕೊಳ್ಳದೆ ನಾನು ಆಡಬೇಕಾಗಿದ್ದ ಭಾಗವನ್ನು ಆಡುವಂತೆ ಅಲ್ಲಿದ್ದವರಿಗೆ ನಿರ್ದೇಶಿಸಿ ಮನೆಗೆ ಬಂದೆ. ಸುಮಾರು ೭.೩೦ ಗಂಟೆಯಿರಬಹುದು. ಕೊನೆಯುಸಿರೆಳೆಯುತ್ತಿತ್ತು. ಹತ್ತು ನಿಮಿಷದಲ್ಲಿ ಪ್ರಾಣ ಪಕ್ಷಿ ಹಾರಿತು. ಸಂಯೋಗದಷ್ಟೇ ವಿಯೋಗವೂ ಆಕಸ್ಮಿಕ.



# ಬೈರಾಗಿಯ ಚಿಕಿತ್ಸೆ

**ಮೂಲಿಕೆಯ ಮಹಾತ್ಮೆಯೋ ದೈವದ ಕೃಪೆಯೋ**

ಸುಮಾರು ೬೮ ವರ್ಷದ ಹಿಂದಿನ ಮಾತು. ನನಗೆ ಒಬ್ಬ ತಮ್ಮನಿದ್ದ. ಅವನಿಗೆ ಸುಮಾರು ಒಂಬತ್ತು ವರ್ಷ ವಯಸ್ಸು. ಬೀದಿಯ ಜಗಲಿಯ ಮೇಲೆ ಪ್ರತಿನಿತ್ಯವೂ ಆಟವಾಡುವ ಪದ್ಧತಿ. ಒಂದು ದಿನ ಅವನೂ ಅವನ ವಯಸ್ಸಿನ ಮತ್ತೊಬ್ಬ ಹುಡುಗನೂ ಜಗಲಿಯ ಮೇಲಿಂದ ಕೆಳಕ್ಕೆ ಹಾರುವ ಸ್ಪರ್ಧೆಯನ್ನು ಗೊತ್ತುಮಾಡಿ ಕೊಂಡರು. ಸ್ಪರ್ಧೆಯ ವೇಗದಲ್ಲಿ ಸ್ನೇಹಿತ ಹುಡುಗ ನನ್ನ ತಮ್ಮನನ್ನು ಹಿಂದಿನಿಂದ ನೂಕಿಬಿಟ್ಟ. ಜಗಲಿಯ ಎತ್ತರ ಮೂರು ಅಡಿಯೇ ಆಗಿದ್ದರೂ ಕೆಳಗೆ ಚಪ್ಪಡಿ ಇದ್ದುದರಿಂದ ಮೊಳಕೈಗೆ ಏಟು ಬಿದ್ದು ಕೈ ಅಸ್ತವ್ಯಸ್ತವಾಗಿ ಹಿಂದುಮುಂದಾಗಿ ಹೋಯಿತು. ಆ ವೇಳೆಗೆ ಸರಿಯಾಗಿ ನಾನೂ ನಮ್ಮ ತಂದೆಯೂ ನದಿಯಿಂದ ಸ್ನಾನ ಮಾಡಿಕೊಂಡು ಮನೆಗೆ ಬರುತ್ತಿದ್ದೆವು. ಅವನ ದುಃಸ್ಥಿತಿಯನ್ನು ನೋಡಿ ತಕ್ಷಣ ಊರಿನ ಆಸ್ಪತ್ರೆಗೆ ಕರೆದುಕೊಂಡು ಹೋದೆವು. ಗುಂಡಪ್ಪನೆಂಬೊಬ್ಬರು ಡಾಕ್ಟರು ಬಹಳ ಒಳ್ಳೆಯವರು. ಹೋದ ತಕ್ಷಣವೇ ಅವನಿಗೆ ಚಿಕಿತ್ಸೆ ಮಾಡಿ ಕೈ ಸರಿಪಡಿಸಿ ಕೈಗೆ ಪ್ಲಾಸ್ಟರ್ ಹಾಕಿ ಮತ್ತೆ ಆರು ವಾರಗಳು ಬಿಚ್ಚಕೂಡದೆಂದು ಹೇಳಿ ಕಳುಹಿಸಿದರು. ಆ ಕಾಲವು ಮುಗಿಯಿತು. ಆಸ್ಪತ್ರೆಗೆ ಕರೆದುಕೊಂಡು ಹೋಗಲಾಗಿ ಪ್ಲಾಸ್ಟರ್ ಬಿಚ್ಚಿದರು. ನೋವು ವಾಸಿಯಾಗಿತ್ತು. ಮೂಳೆ ಕೂಡಿಕೊಂಡಿತ್ತು. ಆದರೆ ಕೈ ಮಾತ್ರ ಚಲನಮಾಡುವುದಕ್ಕಾಗದೆ ನೇತು ಹಾಕಿದ್ದ ಮಟ್ಟದಲ್ಲಿಯೇ ನಿಂತು ಹೋಯಿತು. ಚಲನೆಯಿಲ್ಲದೆ ಒಂದೇ ಸ್ಥಿತಿಯಲ್ಲಿದ್ದುದರಿಂದ ಸ್ತಬ್ಧವಾಗಿದೆ. ಹುಡುಗ ಇನ್ನು ಎಳೆಯವನಾಗಿದ್ದಾನೆ. ಮೂಳೆ ಮೃದ್ವಸ್ಥಿಗಳೆಲ್ಲ ಮೆತ್ತಗಿವೆ. ಶಸ್ತ್ರ ಚಿಕಿತ್ಸೆ ಮಾಡಿ ಪುನಃ ಕೂಡಿಸಿ ಬಿಟ್ಟರೆ ಸರಿಹೋಗುತ್ತದೆ ಎಂದು ಡಾಕ್ಟರು ತಿಳಿಯಪಡಿಸಿದರು. ಆಗಿನ ಕಾಲದಲ್ಲಿ `ಆಪರೇಷನ್' ('ಶಸ್ತ್ರಚಿಕಿತ್ಸೆ'ಯೆಂದರೆ ಬಹಳ ಭಯ. ನಮ್ಮ ತಂದೆಯವರಂತೂ ಅದಕ್ಕೆ ಒಪ್ಪಲಿಲ್ಲ. ಮೈಸೂರಿನ ಕೃಷ್ಣ ರಾಜೇಂದ್ರ ಆಸ್ಪತ್ರೆ ಬೆಂಗಳೂರಿನ ದೊಡ್ಡ ಆಸ್ಪತ್ರೆಗಳಿಗೆಲ್ಲ ತೋರಿಸಿಯಾಯಿತು. ಎಲ್ಲರೂ ಪುನಃ ಶಸ್ತ್ರ ಚಿಕಿತ್ಸೆಯಿಲ್ಲದೆ ಸಾಧ್ಯವಿಲ್ಲವೆಂದು ಬಿಟ್ಟರು. ಈ ಚಿಕಿತ್ಸೆಗಳೆಲ್ಲ ಸುಮಾರು ಒಂಬತ್ತು ತಿಂಗಳುಗಳು

ನಡೆದುವು. ಕೊನೆಗೆ ಊರಿಗೆ ಹೋಗಿ ಯಾವುದಾದರೂ ನಾಡವೈದ್ಯರುಗಳನ್ನು ಮಾತಾಡಿಸಿ ನೋಡಬೇಕೆಂದು ಊರಿಗೆ ಹಿಂದಿರುಗಿದೆವು. ಆ ವೇಳೆಗೆ ಸರಿಯಾಗಿ ಒಬ್ಬ ಯುನಾನಿ ವೈದ್ಯರು (ಹಕೀಮ್) ತಮಗೆ ಐವತ್ತು ರೂಪಾಯಿ ಕೊಟ್ಟರೆ ಸರಿ ಮಾಡುತ್ತೇನೆಂದು ಹೇಳಿದರು. ಅದಕ್ಕೆ ಒಪ್ಪಿದೆವು. ಮಾರನೆಯ ದಿನದಿಂದ ಅವರು ಒಂದು ತೈಲವನ್ನು ತಂದು ಕೈಗೆ ಸೀವುವುದಕ್ಕೆ ಮೊದಲು ಮಾಡಿದರು. ೨-೩ ದಿನಗಳಲ್ಲಿ ಕೈ ಕೆಂಪಿಗೆ ಬಾತುಕೊಂಡು ಅಸಾಧ್ಯ ನೋವಾಗಿ ಸಹಿಸಲಸಾಧ್ಯವಾಯಿತು. ಹುಡುಗನು ಚಿಕಿತ್ಸೆಯನ್ನು ಮುಂದುವರಿಸಲು ಅವಕಾಶಕೊಡಲಿಲ್ಲ. ಆ ಚಿಕಿತ್ಸೆಯನ್ನು ನಿಲ್ಲಿಸಲಾಯಿತು. ಏನೂ ಪ್ರಯೋಜನವಾಗಲಿಲ್ಲ. ಕೈಯನ್ನು ಕತ್ತಿಗೆ ನೇತು ಹಾಕಿಕೊಂಡೇ ತಿರುಗಾಡುತ್ತಿದ್ದ. ಸುಮಾರು ೧೫ ದಿನಗಳಾದ ಮೇಲೆ ನಮ್ಮ ತಂದೆಯವರು ನಮ್ಮ ಮನೆಯ ಎದುರು ಜಗಲಿಯ ಮೇಲೆ ನನಗೆ ಪಾಠ ಹೇಳುತ್ತ ಕುಳಿತಿದ್ದರು. ಮೂರು ಗಂಟೆಯ ಸಮಯ ನನ್ನ ತಮ್ಮ ಕೈ ನೇತು ಹಾಕಿಕೊಂಡು ಅಲ್ಲಿಯೇ ಕುಳಿತಿದ್ದ. ಆ ವೇಳೆಗೆ ಒಬ್ಬ ವರ್ಚಸ್ವಿಯಾದ ಬೈರಾಗಿ ನೇರವಾಗಿ ನಾವು ಕುಳಿತಿದ್ದ ಜಗಲಿಯ ಕಡೆಗೆ ಬಂದ. ದೀರ್ಘವಾದ ಆಕಾರ. ಕಾವಿಬಟ್ಟೆಯನ್ನು ಧರಿಸಿದ್ದ. ತಲೆಗೆ ಅದೇ ಬಣ್ಣದ ಶಿರೋವೇಷ್ಟನ ದೀರ್ಘವಾದ ಬಿಳಿಯ ಗಡ್ಡ ಮೀಸೆಗಳು ಒಂದು ಕೈಯಲ್ಲಿ ಉತ್ತರ ದೇಶದ ಹಿಡಿಯಿರುವ ನೀಳವಾದ ಲೋಟ ಅಥವಾ ಗ್ಲಾಸ್. ಇನ್ನೊಂದು ಕಯ್ಯಲ್ಲಿ ಒಂದು ಯೋಗದಂಡ. ಕೌಂಕುಳಲ್ಲಿ ಗುರುಳಿ ಸುತ್ತಿದ ಕೃಷ್ಣಾಜಿನ. ಕಾಲಿಗೆ ಮರದ ಪಾದುಕೆಗಳು. ನಮ್ಮ ತಂದೆಗೆ ಕೈಮುಗಿದು ಊಟ ಹಾಕುತ್ತೀರಾ ಎಂದು ಕೇಳಿದ. ಅವನಿಗೆ ಕನ್ನಡ ಅಥವಾ ತಮಿಳು ಭಾಷೆ ಬರದು. ನಮ್ಮ ತಂದೆಯವರಿಗೆ ಅವನ ಹಿಂದೀ ಭಾಷೆಯ ಪರಿಚಯವಿಲ್ಲ. ಕೇವಲ ಸನ್ನೆಗಳಿಂದಲೇ ಸಂಭಾಷಣೆ ಮತ್ತು ಯಥೋಚಿತ ಪರಿಚಯುವಾಯಿತು. ನಮ್ಮ ತಂದೆಯುವರು ಅವರಿಗೆ ಭೋಜನಕ್ಕೇರ್ಪಡಿಸಲು ನಮ್ಮ ತಾಯಿಯವರಿಗೆ ತಿಳಿಸುವಂತೆ ನನ್ನನ್ನು ಕಳುಹಿಸಿದರು. ನಮ್ಮ ಮನೆಯಲ್ಲಿ ಯಾವಾಗಲೂ ಊಟ ಸ್ವಲ್ಪ ಮೀರಿಯೇ. ನಮ್ಮ ತಾಯಿಯು ಊಟ ಮಾಡುತ್ತಿದ್ದರು. ಅವರ ಊಟ ಮುಗಿಸಿದ ತಕ್ಷಣ ಬಡಿಸುತ್ತೇನೆಂದು ಹೇಳಿ ಕಳುಹಿಸಿದರು. ಈ ಮಧ್ಯೆ ಬೈರಾಗಿಯು ಕೈನೇತು ಹಾಕಿಕೊಂಡು ಕುಳಿತಿದ್ದ ವಿಷಯವನ್ನು ವಿಚಾರ ಮಾಡಿದನು. ನಮ್ಮ ತಂದೆಯವರು ಕೈಸನ್ನೆಯಿಂದಲೇ ವಿವರಗಳನ್ನು ತಿಳಿಸಿದರು. ಬೈರಾಗಿಯು ತಾನು ಅದಕ್ಕೆ ಔಷಧಿ ಮಾಡುತ್ತೇನೆಂದು ಹೇಳಿ ಎದ್ದೇಬಿಟ್ಟನು. ಊಟ ಮಾಡಿಕೊಂಡು ಹೋಗಬಹುದೆಂದು ಎಷ್ಟೇಳಿದರೂ ಕೇಳದೆ ನದಿಯ ಕಡೆಗೆ ಎದ್ದು ಹೋಗಿ ಸುಮಾರು ಒಂದೂವರೆ ಗಂಟೆಯ ಕಾಲದಲ್ಲಿ ಲೋಟದಲ್ಲಿ ಒಂದು ಹಸಿರು ಮೂಲಿಕೆಯನ್ನು ಅರೆದು ತುಂಬಿಕೊಂಡು ನಾಲ್ಕೈದು ವಿಳ್ಳೆಯದೆಲೆಯನ್ನು ಎರಡು ಗಂಧದ ಕಡ್ಡಿಯನ್ನು ತರಹೇಳಿದ. ವಿಳ್ಳೆಯದೆಲೆಯ ಮೇಲೆ ಆ ಅರೆದ ಕಲ್ಕವನ್ನು ತಟ್ಟಿ ಹರಡಿದ. ಕೊರಳಿನಲ್ಲಿ ನೇತುಹಾಕಿದ್ದ ಕೈಯನ್ನು ಕೆಳಗಿಳಿಸಿ ಮೊಳಕೈ ಸುತ್ತಲೂ ವಿಳ್ಳೆಯದೆಲೆಯಲ್ಲಿ ಹರಡಿದ್ದ ಅರೆದ ಮೂಲಿಕೆಯನ್ನಿಟ್ಟು ಬೇರೊಂದು ಬಟ್ಟೆಯಿಂದ ಸುತ್ತಿಕಟ್ಟಿ ಪುನಃ ಹಾಗೆಯೆ ಕೊರಳಿಗೆ ಜೋಲು ಬಿಟ್ಟ. ಗಂಧದ ಕಡ್ಡಿಯಿಂದ ಯಾವುದೋ ಮಂತ್ರವನ್ನು ಜಪಿಸುತ್ತ ಹೊಗೆ ಧೂಪಿಸಿದ.

ತಕ್ಷಣ ವಾಸಿಯಾಗುತ್ತದೆಂದು ಹೇಳಿ ನೀರು ತರಿಸಿ ತನ್ನ ಲೋಟ (ಪಾತ್ರೆಯನ್ನು) ಸೆಳೆದು ಅದಕ್ಕೆ ನಮ್ಮ ತಾಯಿಯು ತಂದ ಕಲಸಿದ ಅನ್ನವನ್ನು ಹಾಕಿಕೊಂಡು ಬರುತ್ತೇನೆಂದು ಹೇಳಿ ಹೊರಟುಹೋದ. ಆಗ ೫ ಗಂಟೆಯ ಸುಮಾರಿರಬಹುದು.

ನಾವು ಪ್ರತಿದಿನ ಸಾಯಂಕಾಲ ಆರು ಗಂಟೆಗೆ ನದಿಗೆ ಹೋಗಿ ಸಾಯಂಸಂಧ್ಯೆಯನ್ನು ಮುಗಿಸಿಕೊಂಡು ದೇವಸ್ಥಾನಕ್ಕೆ ಹೋಗಿ ಅಲ್ಲಿಯ ಸೇವಾದಿಗಳನ್ನು ಮುಗಿಸಿಕೊಂಡು ರಾತ್ರಿ ಒಂಬತ್ತು ಗಂಟೆಗೆ ಮನೆಗೆ ಬಂದು ಸೇರುವುದು ಪದ್ಧತಿ. ಅಷ್ಟರೊಳಗೆ ನನ್ನ ತಮ್ಮ ಕೈನೋವಿನ ಪ್ರಯುಕ್ತ ಹೊತ್ತಿಗೆ ಮುಂಚೆ ಊಟ ಮಾಡಿ ನಿದ್ದೆ ಮಾಡಿಬಿಡುತ್ತಿದ್ದ. ಒಂದೊಂದು ದಿನ ನೋವಿನ ಕೈ ಶರೀರದ ಕೆಳಗೆ ಸಿಕ್ಕಿಕೊಂಡು ಎತ್ತಲಾರದೆ ಕೂಗಿಕೊಳ್ಳುವುದೂ ಉಂಟು. ಅಕ್ಕಪಕ್ಕದಲ್ಲಿದ್ದವರು ಅವನನ್ನು ಮಗ್ಗಲು ಮಾಡಿ ಕೈಯನ್ನು ಮೇಲಕ್ಕಿಡುವುದೂ ಉಂಟು.

ಆ ದಿನವೂ ನಾವು ೯ ಗಂಟೆಗೆ ಮನೆಗೆ ಬಂದು ಊಟ ಉಪಚಾರಗಳನ್ನು ಮುಗಿಸಿಕೊಂಡು ಹಸುಗಳಿಗೆ ಮೇವು ಹಾಕುವುದಕ್ಕೆ ಹೋಗಿದ್ದೆವು. ನಾನು ದೀಪವನ್ನು ಹಿಡಿದುಕೊಂಡಿದ್ದೆ. ನಮ್ಮ ತಂದೆಯವರು ಮೇವನ್ನು ಹಾಕುತ್ತಿದ್ದರು. ಇದ್ದಕ್ಕಿದ್ದ ಹಾಗೆ ನನ್ನ ತಮ್ಮ ಎದ್ದು ಹಿತ್ತಲಿಗೆ ಓಡಿ ಬಂದು 'ಅಪ್ಪಾ ಕೈವಾಸಿಯಾಗಿ ಹೋಯಿತಪ್ಪ. ಈಗ ಎಲ್ಲಾ ಸರಿ ಹೋಗಿದೆ. ನೋವೇನೂ ಇಲ್ಲ.' ಎಂದು ಕೂಗಿದ. ನಮ್ಮ ತಂದೆಯವರು 'ಹಾಗೆಲ್ಲ ಕೂಗಬಾರದು ಬೆಳಗಿನವರೆಗೆ ನೋಡೋಣ 'ಹೋಗಿ ಮಲಗಪ್ಪ,' ಎಂದರು. ನನ್ನ ತಮ್ಮ ಸುಮ್ಮನಿರದೆ ಇಲ್ಲಿ ನೋಡಪ್ಪ ಕೈ ನೇರವಾಗಿ ಬಿಟ್ಟಿದೆ ಎಂದು ನೇತು ಬಿಟ್ಟದ್ದು ಕೈಯನ್ನು ಬಿಡಿಸಿಕೊಂಡು ಜೋರಾಗಿ ಒದರುತ್ತಾ ಪಕ್ಕದಲ್ಲಿ ನೀರು ತುಂಬಿದ್ದ ತಂಬಿಗೆಯನ್ನು ಆ ಕೈಯಲ್ಲಿ ಎತ್ತಿ ತೋರಿಸಿಯೇ ಬಿಟ್ಟ. ನಮ್ಮ ತಂದೆಗೆ ಮೈಸೂರು ರಾಜ್ಯದ ಪಟ್ಟಾಭಿಷೇಕ ಮಾಡಿದ್ದರೂ ಅಷ್ಟು ಸಂತೋಷ ವಾಗಿರದು. ಅವರ ಕಣ್ಣುಗಳಲ್ಲಿ ಆನಂದ ಬಾಷ್ಪವು ತುಂಬಿಹೋಯಿತು. ತಮ್ಮಷ್ಟಕ್ಕೆ ತಾವೇ ಬಂದಿದ್ದವನು ಬೈರಾಗಿಯಲ್ಲ; ಸಾಕ್ಷಾತ್ ನರಸಿಂಹ ಇರಬೇಕು. ನಮ್ಮ ಕಷ್ಟಪರಿಹಾರಕ್ಕಾಗಿ ಕಾಣಿಸಿಕೊಂಡ. ನಾಳೆ ಬೈರಾಗಿ ಬರುತ್ತೇನೆಂದು ಹೇಳಿದ್ದಾನೆ. ಅವನಿಗೆ ಒಂದು ವಸ್ತ್ರ ತೆಗೆದುಕೊಟ್ಟು ಸರಿಯಾದ ಭೋಜನ ಮಾಡಿಸಿ ಕಳುಹಿಸಬೇಕು ಎಂದುಕೊಂಡು ಮಲಗಿಕೊಂಡರು.

ಮಾರನೆಯ ದಿನ ಬೈರಾಗಿಯು ಬರುತ್ತಾನೆಂಬ ನಿರೀಕ್ಷೆಯಿಂದಲೇ ಬಹಳ ವೇಗವಾಗಿ ಬೆಳಗಿನ ಕೆಲಸಗಳನ್ನು ಮುಗಿಸಿಕೊಂಡು ಸ್ನಾನಕ್ಕಾಗಿ ಸುಮಾರು ಹತ್ತು ಗಂಟೆಗೆ ನದಿಗೆ ಹೋದೆವು. ಹಿಂದಿನ ದಿನದ ಬೈರಾಗಿ ಎದುರಿಗೆ ಸಿಕ್ಕಿದ. ಅವನನ್ನು ನಿಲ್ಲಿಸಿಕೊಂಡು ಹಿಂದಿ ಬರುವವರೊಬ್ಬರ ಮೂಲಕ 'ಅವನು ಸಾಕ್ಷಾದ್ದೇವರೇ ಸರಿ, ಇಂದಿನ ನಮ್ಮ ಆಹ್ವಾನವನ್ನು ಮನ್ನಿಸಿ ಭೋಜನ ಮಾಡಿಕೊಂಡು, ಒಂದು ತಾಂಬೂಲವನ್ನು ಸ್ವೀಕರಿಸಿ ಹೋಗಬೇಕೆಂದು ಪ್ರಾರ್ಥಿಸಿದರು. ಬೈರಾಗಿಯೂ ಆಗಬಹುದೆಂದು ಹೇಳಿ ನಮ್ಮ ಮನೆಯ ಕಡೆಯೇ ಧಾವಿಸಿದ. ನಾವು ಬಹುವೇಗದಿಂದ ಸ್ನಾನಾದಿಗಳನ್ನು ಮುಗಿಸಿಕೊಂಡು ಹಿಂತಿರುಗಿದೆವು. ಅಷ್ಟರಲ್ಲಿ ಬೈರಾಗಿಯೂ

ನಮ್ಮ ಮನೆಗೆ ಬಂದು ಹೊರಗಡೆ ಆಟವಾಡುತ್ತಿದ್ದ ನನ್ನ ತಮ್ಮನನ್ನು ಕರೆದು ಅವನ ಕೈಬಿಚ್ಚಿ ಹಿಂದಿನ ದಿನದ ಕಟ್ಟನ್ನು ತೆಗೆದು ಹೊಸ ಔಷಧಿಯನ್ನು ಇಟ್ಟು ಮೊದಲಿನಂತೆಯೇ ಬಟ್ಟೆಯಿಂದ ಆಚ್ಛಾದಿಸಿ ಹೊರಟುಹೋಗಿದ್ದನು.

ನಮ್ಮ ತಂದೆಯವರು ಬಹಳ ಆತುರದಿಂದ ಬಂದು ಬೈರಾಗಿಯೆಲ್ಲೆಂದು ನಮ್ಮ ತಾಯಿಯವರನ್ನು ಕೇಳಿದರು. ಅವನು ಬಂದಿದ್ದುದು ನಮ್ಮ ತಾಯಿಯವರಿಗೆ ತಿಳಿಯದು. ನಮ್ಮ ತಂದೆಯವರು ಅವರ ಮೇಲೆ ವಿಶೇಷವಾಗಿ ಆರ್ಭಟಿಸಿ ದೇವರ ಪೂಜೆಯನ್ನು ಮುಗಿಸಿ ನಾನೂ ಅವರೂ ನಮ್ಮೂರಿನಲ್ಲಿ ಬೈರಾಗಿಗಳಿರಬಹುದಾದ ಸ್ಥಳದಲ್ಲೆಲ್ಲ ಸಾಯಂಕಾಲದವರೆಗೂ ಹುಡುಕಿದೆವು. ಅವನು ಇನ್ನೂ ಸಿಕ್ಕುತ್ತಿದ್ದಾನೆ.



# ವರದಾಚಾರ್ಯರಿಗೆ ಸನ್ಮಾನ

ಮಹಾರಾಜರವರ ಕಾಲೇಜಿನ ಕರ್ಣಾಟಕ ಸಂಘವು ನಡೆಸಿದ ಮಹೋತ್ಸವಗಳಲ್ಲಿ ಪಂಡಿತ ಕಾನಕಾನಹಳ್ಳಿ ವರದಾಚಾರ್ಯರ ಸನ್ಮಾನ ಮಹೋತ್ಸವವು ಚಿರಸ್ಮರಣೀಯವಾದುದು. ಕಾಲೇಜಿನಲ್ಲಿ ಬಹು ದೀರ್ಘಕಾಲ ಸೇವೆ ಸಲ್ಲಿಸಿದವರಲ್ಲಿ ಆಚಾರ್ಯರೇ ಅಗ್ರಗಣ್ಯರು. ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು ಪ್ರಿನ್ಸಿಪಾಲ್ ಎನ್. ಎಸ್. ಸುಬ್ಬರಾಯರು ಮೊದಲಾದವರೆಲ್ಲ ಆಚಾರ್ಯರ ಶಿಷ್ಯವರ್ಗಕ್ಕೆ ಸೇರಿದವರು. ಅವರು ಕಾಲೇಜಿನಿಂದ ವಿಶ್ರಾಂತಿ ಪಡೆದಾಗ ಅವರಿಗೆ ೬೪ ವರ್ಷ ವಯಸ್ಸು. ಆಗಲೂ ಅವರ ಬುದ್ಧಿಶಕ್ತಿ ಮತ್ತು ದೇಹ ಶಕ್ತಿ ಬಹು ಪಟುವಾಗಿದ್ದಿತು. ಅವರು ಮೂವತ್ತು ವರ್ಷಗಳ ನೇರವಾದ ಸೇವೆಯಾದ ಮೇಲೆ ೯ ವರ್ಷಗಳ ವಿಸ್ತರಣವನ್ನು ಪಡೆದಿದ್ದರು. ಪ್ರತಿವರ್ಷದ ವಿಸ್ತರಣೆಯ ಶಿಪಾರ್ಸ್ ಮಾಡುವಾಗಲೂ ಅವರ ಶಕ್ತಿ ಸಾಮರ್ಥ್ಯಗಳನ್ನು ಪ್ರಶಂಸಿಸಿ ಕಾಲೇಜಿನ ಅಧ್ಯಕ್ಷರು ಸರಕಾರಕ್ಕೆ ಬರೆಯುತ್ತಿದ್ದರು. ಸರಕಾರದವರು ಅಷ್ಟು ವಿಸ್ತರಣಗಳನ್ನು ಯಾರಿಗೂ ಕೊಟ್ಟಿರಲಿಲ್ಲ. ಒಂಬತ್ತನೆಯ ವಿಸ್ತರಣವನ್ನು ಮಂಜೂರು ಮಾಡುವಾಗ ಹತ್ತನೆಯ ವಿಸ್ತರಣಕ್ಕೆ ಶಿಪಾರ್ಸ್ ಬರುವುದಿಲ್ಲವೆಂದು ನಂಬಿ ಈ ಸಲ ವಿಸ್ತರಣಮಾಡಿದೆಯೆಂದು ಹೇಳಿ ಮುಂದುವರಿಸಿದರಂತೆ. ಸರ್ಕಾರಕ್ಕೆ ಅವರ ಶಕ್ತಿದಾರ್ಢ್ಯಗಳ ವಿಷಯ ತಿಳಿಯದು. ಕಾಲೇಜಿನಿಂದ ವಿಶ್ರಾಂತರಾದ ಮೇಲೂ ಅವರು ಬನುಮಯ್ಯನವರ ಪ್ರೌಢ ಶಾಲೆಯಲ್ಲಿ ತಮ್ಮ ಸೇವೆ ಸಲ್ಲಿಸಿದರು.

ಅವರದು ಸಾಮಾನ್ಯ ಆಕಾರ. ಮಧ್ಯಮ ಎತ್ತರದವರು. ತಲೆಗೆ ಹಸಿರು ಬಣ್ಣದ ಶಾಲು, ರುಮಾಲು, ಚಕ್ಕಿನ ಅಂಗಿಯ ಮೇಲೆ ಮತ್ತೊಂದು ಅಂಗಿ. ಬಿಳಿಯ ಧೌತವಸ್ತ್ರ, ಅಂಗಿಯ ಮೇಲೆ ಉಪವೀತಾಕಾರದ ಉತ್ತರೀಯ ಇವು ಅವರ ಉಡುಪು. ದಾಪುಕಾಲು ನಡಿಗೆ. ಎಂದೂ ಪಾದರಕ್ಷೆ ಧರಿಸಿದವರಲ್ಲ ಮುಖದಲ್ಲಿ ಸ್ಪಷ್ಟವಾದ ವಡಗಲೆಯ ನಾಮ, ಚಾಳೀಶದ ಕನ್ನಡಕ ಬಹು ಲವಲವಿಕೆಯಿಂದ ಕೂಡಿದ ಸ್ವಭಾವ.

ಅವರು ಸಂಸ್ಕೃತ ಕನ್ನಡ ಭಾಷೆಗಳಲ್ಲಿ ಉದ್ದಾಮ ಪಂಡಿತರು. ಅರಮನೆಯ ಆಶ್ರಯದಲ್ಲಿ ನಡೆಯುತ್ತಿದ್ದ ಭಾಷೋಜ್ಜೀವಿನಿ ಪಾಠಶಾಲೆಯಲ್ಲಿ ವಿದ್ಯಾಭ್ಯಾಸ ಪಡೆದವರು. ಆ ಶಾಲೆಯಲ್ಲಿ ಸಂಸ್ಕೃತ ಕನ್ನಡಗಳಿಗೆ ಸಮಾನಸ್ಥಾನ. ಪ್ರಸಿದ್ಧರಾದ ಕರಿಬಸವಶಾಸ್ತ್ರಿಗಳೂ ಜಯರಾಮ ವೆಂಕಟಾಚಾರ್ಯರೂ ಹಳನಕೇರಿ ಸೀತಾರಾಮ ಶಾಸ್ತ್ರಿಗಳೂ ತಿರುವಳ್ಳೂರು ಶ್ರೀನಿವಾಸ ರಾಘವಾಚಾರ್ಯರೂ ಮೊದಲಾದವರು ಅಲ್ಲಿ ಇವರ ಸಹಪಾಠಿಗಳು.

ಮಹಾರಾಜರವರ ಕಾಲೇಜಿನಲ್ಲಿ ಮೊದಲು ಕರಿಬಸಪ್ಪಶಾಸ್ತ್ರಿಗಳಿಗೆ ಸಹಾಯೋಪಾಧ್ಯಾಯರಾಗಿಯೂ ಅವರು ವಿಶ್ರಾಂತರಾದ ಮೇಲೆ ಅಲ್ಲಿಯ ಕನ್ನಡ ಪ್ರಧಾನ ಪಂಡಿತರಾಗಿಯೂ ಕೆಲಸ ಮಾಡಿ ೧೯೨೬ನೆಯ ವರ್ಷದಲ್ಲಿ ವಿಶ್ರಾಂತರಾದರು. ಆಗಿನ ಕಾಲದಲ್ಲಿ ಭಾಷಾಪಂಡಿತರಿಗೆ ಮುನ್ಷಿಗಳೆಂಬ ಸಂಜ್ಞೆ. ಇವರೂ ಕನ್ನಡ ಮುನ್ಷಿಗಳಾಗಿದ್ದರು. ಸಾಮಾನ್ಯವಾಗಿ ಮುನ್ಷಿಗಳ ವಿಷಯದಲ್ಲಿ ವಿದ್ಯಾರ್ಥಿಗಳಿಗೆ ತಾತ್ಸಾರ. ಅವರ ತರಗತಿಗಳಲ್ಲಿ ಗಾಂಭೀರ್ಯ ಒಂದೊಂದು ಸಲ ಸಡಿಲವಾಗಿರುತ್ತಿತ್ತು. ಈ ವರದಾಚಾರ್ಯರ ತರಗತಿಗಳು ಅದಕ್ಕೆ ಅಪವಾದ. ಅವರ ಪಾಠ ಮಾಡುತ್ತಿದ್ದಾಗ ಕೊಠಡಿಯಲ್ಲಿ ಸಂಪೂರ್ಣ ಮೌನ. ವಿದ್ಯಾರ್ಥಿಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದರಲ್ಲಿ ಅವರದು ಅಸಾಧಾರಣವಾದ ಶಕ್ತಿ. ಅವರು ಯಾವತ್ತು ಮನೆಯಲ್ಲಿ ಪಾಠ ಸಿದ್ಧಮಾಡಿಕೊಂಡು ಬರುವ ಅಭ್ಯಾಸವಿಲ್ಲ. ಪಠ್ಯಪುಸ್ತಕವನ್ನು ಜೊತೆಯಲ್ಲಿ ತರುವ ಪದ್ಧತಿಯೂ ಇಲ್ಲ. ಕೊಠಡಿಯನ್ನು ಪ್ರವೇಶಿಸಿ ಮುಂದಿನ ಸಾಲಿನವರಿಂದ `ಎಲ್ಲಿ ಪುಸ್ತಕ, ಪುಸ್ತಕ, ಪುಸ್ತಕ' ಎಂದು ಕೇಳಿ ಒಂದು ಪ್ರತಿಯನ್ನು ತೆಗೆದುಕೊಂಡು ವೇದಿಕೆಯ ಮೇಲೆ ಹೋಗಿ ಕುರ್ಚಿಯಲ್ಲಿ ಕೆಲವು ಸಲ ಮೇಜಿನ ಮೇಲೆ ಕುಳಿತುಕೊಂಡು ಪದ್ಯಗಳನ್ನು ರಾಗವಾಗಿ ೨-೩ ಸಲ ಓದಿ ಕವಿಯ ಪ್ರಯೋಗಗಳಲ್ಲಿ ಏನಾದರೂ ತಪ್ಪಿದ್ದರೆ, ಕವಿ ಮುಗ್ಗರಿಸಿದ ಈ ಪದ ಪ್ರಯೋಗಗಳನ್ನು ಉದಾಹರಿಸಿ ತಮ್ಮ ನಿಲುವನ್ನು ಸ್ಥಾಪಿಸಿಕೊಳ್ಳುತ್ತಿದ್ದರು. ನ್ಯಾಯ ಪ್ರಾಪ್ತವಾಗಿ ವಿದ್ಯಾರ್ಥಿಗಳಿಂದ ಬಂದ ಎಲ್ಲ ಪ್ರಶ್ನೆಗಳಿಗೂ ಎಷ್ಟು ಸಲವಾದರೂ ಉತ್ತರಿಸಿ ಚೇಷ್ಟೆಗಾಗಿಯೋ ವ್ಯಂಗ್ಯವಾಗಿಯೋ ಬಂದ ಪ್ರಶ್ನೆಗಳನ್ನು ಬಹು ನಿರ್ದಾಕ್ಷಿಣ್ಯವಾಗಿ ಖಂಡಿಸಿ ಕೆಲವು ಸಲ ಅದನ್ನು ಕೇಳಿದವರಿಂದ ಕ್ಷಮಾಯಾಚನೆ ಮಾಡಿಸುತ್ತಿದ್ದರು. ಪಾಠದ ಮಧ್ಯದಲ್ಲಿ ತಮ್ಮಷ್ಟಕ್ಕೆ ಸಲ್ಲಾಪ ಮಾಡುತ್ತಿದ್ದರೆ ಅವರನ್ನು ಗುರುತಿಸಿ ಅವರನ್ನೇಕೆ ರಜಾ ಕೊಡಿಸಿ ಎಂತ ಕೇಳಿಕೊಳ್ಳುತ್ತೀರಿ, ನಾನೇ ಕೊಡುತ್ತೇನೆ ಎದ್ದು ಹೋಗಿ ಎಂದು ಹೊರಗೆ ಕಳುಹಿಸುತ್ತಿದ್ದರು.

ಅವರ ಪದ್ಯವಾಚನ ಬಹು ಸುಶ್ರಾವ್ಯವೂ ಅರ್ಥಗರ್ಭಿತವೂ ಆಗಿರುತ್ತಿತ್ತು. ಆಗ ತರಗತಿಯಲ್ಲಿ ಸಂಪೂರ್ಣ ನೀರವವಿರುತ್ತಿತ್ತು. ಒಂದು ಸಲ ಇವರು ಪಾಠ ಮಾಡುತ್ತಿದ್ದಾಗ ಮೇಲೆ ಮಹಡಿಯ ಮೇಲಿದ್ದ ಪ್ರಿನ್ಸಿಪಾಲ್ [ಡೆನ್ಹಾಂ] ಅವರಿಗೆ ಸ್ಪಷ್ಟವಾಗಿ ಕೇಳಿಸಿತು. ಅವರು ಶಾಲೆಯ ಗಾಂಭೀರ್ಯವನ್ನು ಶಿಸ್ತನ್ನು ಪಾಲಿಸುವುದರಲ್ಲಿ ಬಹು ಆಸಕ್ತರಾಗಿದ್ದರು. ಪಾಠದ ವೇಳೆಯಲ್ಲಿ ಯಾರೋ ಬಂದು ಕಾಲೇಜಿನಲ್ಲಿ ಹಾಡುತ್ತಿದ್ದರೆಂಬ ಭ್ರಾಂತಿಯುಂಟಾಯಿತು. ತಕ್ಷಣ

ತಮ್ಮ ಕೊಠಡಿಯಿಂದೆದ್ದು ದಡದಡನೆ ಮೆಟ್ಟಿಲಿಳಿದು ಬಂದರು. ಪಕ್ಕದ ಉತ್ತರದ ಕೊಠಡಿಯಲ್ಲಿ ವರದಾಚಾರ್ಯರ ಪಾಠ ನಡೆಯುತ್ತಿತ್ತು. ಕೆಲವು ಕಾಲ ಅಲ್ಲಿಯೇ ನಿಂತು ಕೇಳಿದರು. ತರಗತಿಯ ವಿದ್ಯಾರ್ಥಿಗಳೆಲ್ಲ ನಿರ್ಭರರಾಗಿ ಕುಳಿತು ಬಹು ಆಸಕ್ತಿಯಿಂದ ಪಾಠವನ್ನು ಆಲಿಸುತ್ತಿದ್ದರು. ಪ್ರಿನ್ಸಿಪಾಲರಿಗೆ ತುಂಬಾ ಆಶ್ಚರ್ಯವೂ ಸಂತೋಷವೂ ಆಯಿತು. ನೆಟ್ಟಗೆ ಮೇಲಕ್ಕೆ ಹತ್ತಿ ಹೊರಟು ಹೋದರು. ಮಧ್ಯಾಹ್ನ ವಿರಾಮಕಾಲದಲ್ಲಿ ಆಚಾರ್ಯರನ್ನು ಬರಮಾಡಿಕೊಂಡು ದ್ವಿಭಾಷಿಗಳಾದ ಕಛೇರಿಯ ಗುಮಾಸ್ತರ ಮೂಲಕ ಕಾಲೇಜಿನಲ್ಲಿ ಹಾಡಬಾರದು. ಇತರ ತರಗತಿಗಳಿಗೆ ತೊಂದರೆಯಾಗುತ್ತದೆ. ತಗ್ಗು ದನಿಯಲ್ಲಿ ಪಾಠ ಹೇಳಿ ಎಂದು ತಿಳಿಯಪಡಿಸಿದರು. ಆಚಾರ್ಯರು ಅದೇ ಗುಮಾಸ್ತರ ಮೂಲಕ ಹೀಗೆಂದು ತಿಳಿಯಪಡಿಸಿದರು. 'ಕನ್ನಡ ಸಂಸ್ಕೃತ ಪಾಠಗಳ ಪ್ರವಚನ ರೀತಿಯೇ ಹಾಗೆ. ಅದನ್ನು ಬದಲಾಯಿಸಲು ಸಾಧ್ಯವಿಲ್ಲ. ಹಾಗೆ ಬೇಕಾದರೆ ನನ್ನ ತರಗತಿಯನ್ನು ಯಾವುದಾದರೂ ಕೊನೆಯ ಭಾಗದಲ್ಲಿ ಹಾಕಿಸಿಬಿಡಹೇಳಿ ಎಂದು ತಿಳಿಸಿದರು. ಪ್ರಿನ್ಸಿಪಾಲರಿಗೆ ಅವರ ಸ್ಪಷ್ಟೋಕ್ತಿಯಿಂದ ಸಂತೋಷವಾಯಿತು. ಅಲ್ಲಿಂದ ಮುಂದೆ ಅವರ ಪಾಠದ ವಿಷಯವಾಗಿ ಯಾವ ಆಕ್ಷೇಪಣೆಯನ್ನು ಮಾಡಲಿಲ್ಲ.

ವರದಾಚಾರ್ಯರು ಎಲ್ಲರನ್ನು ಅಣ್ಣಯ್ಯ ಎಂದೇ ಸಂಬೋಧಿಸಿದ್ದರು. ಆದುದರಿಂದ ಅವರಿಗೇ ಆ ಹೆಸರು ಅಡ್ಡ ಹೆಸರಾಗಿ ನಿಂತು ಬಿಟ್ಟಿತು. ವರದಾಚಾರ್ಯರು ಉಚ್ಚಮಟ್ಟದ ವಿಮರ್ಶಕರು. ಒಂದು ಸಲ ತಮ್ಮ ಮನೆಯ ಹಿತ್ತಲಿನ ಬಾವಿಯ ಮೇಲೆ ಹರಡಿಕೊಂಡಿದ್ದ ಸೀಬೆಯ ಮರಕ್ಕೆ ಅವರ ಮಗ ಹತ್ತಿ ಅಲ್ಲಿಂದ ಬಾವಿಯ ಪಕ್ಕದಲ್ಲಿದ್ದ ಚಪ್ಪಡಿಯ ಮೇಲೆ ಬೀಳಲು ಆಗ ಮಗನಿಗೆ ಚಿಕಿತ್ಸೆಮಾಡುವ ಬದಲು ಅವನು ಬಾವಿಗೆ ಬೀಳದೆ ಚಪ್ಪಡಿ ಮೇಲೆ ಬೀಳಲು ಹೇಗೆ ಸಾಧ್ಯವಾಯಿತು ಎಂದು ಹತ್ತು ನಿಮಿಷ ಯೋಚಿಸುತ್ತ ನಿಂತು ಬಿಟ್ಟರಂತೆ. ಕನ್ನಡದ ಸುಪ್ರಸಿದ್ಧ ವೈಯಾಕರಣಿಯಾದ ಭಟ್ಟಾಕಳಂಕನ `ಶಬ್ದಾನುಶಾಸನ' ವನ್ನು ತಮ್ಮ ಅಖಂಡ ಜೀವನದ ಅಭ್ಯಾಸ ವಿಷಯವಾಗಿ ಸ್ವೀಕರಿಸಿ ಆ ಗ್ರಂಥದ ಸೂತ್ರ ಮತ್ತು ವೃತ್ತಿಕಾರ್ಯ ವ್ಯಾಖ್ಯಾನಕಾರನು ಭಿನ್ನರೆಂದು ಸಿದ್ಧಾಂತಮಾಡಿ `ಶಬ್ದಾನುಶಾಸನ ತತ್ವಾಲೋಕತರಂಗ' ಎಂಬ ದೀರ್ಘವ್ಯಾಸವೊಂದನ್ನು ರಚಿಸಿದರು. ಅದರ ಪೀಠಿಕಾ ಭಾಗ ಮಾತ್ರ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾಗಿದೆ.

ಆಚಾರ್ಯರು ಕಾಲೇಜಿನಲ್ಲಿ ಎಲ್ಲ ಉಪಾಧ್ಯಾಯ ಮತ್ತು ವಿದ್ಯಾರ್ಥಿಗಳ ವಿಶ್ವಾಸಕ್ಕೆ ಪಾತ್ರವಾಗಿದ್ದವರು. ೧೯೨೬ರಲ್ಲಿ ಅವರು ವಿಶ್ರಾಂತರಾದಾಗ ಕರ್ಣಾಟಕ ಸಂಘವು ಅವರಿಗೆ ಸೂಕ್ತ ಸನ್ಮಾನ ಮಾಡಬೇಕೆಂದು ನಿಷ್ಕರ್ಷಿಸಿತು. ಆಗ ಸಂಘಕ್ಕೆ ಬಿ. ಎಂ. ಶ್ರೀಯವರು ಅಧ್ಯಕ್ಷರು. ನಾನು ಕಾರ್ಯದರ್ಶಿ. ಅಲ್ಲಿಯವರೆಗೆ ಕನ್ನಡ ಪಂಡಿತರಿಗೆ ಸೂಕ್ತ ಸನ್ಮಾನಗಳು ನಡೆದಿರಲಿಲ್ಲ. ಅವರ ಮೆಚ್ಚಿನ ವಿದ್ಯಾರ್ಥಿಗಳಾಗಿದ್ದ ತೀ. ನಂ. ಶ್ರೀ ಮೊದಲಾದವರು ಬಹು ಆದರ್ಶರೀತಿಯಲ್ಲಿ ನಡೆಸಬೇಕೆಂದು ತಮ್ಮ ನೆರವನ್ನು ನೀಡಿದರು. ಎಲ್ಲರಿಗಿಂತಲೂ ಅಧ್ಯಕ್ಷರೇ ತಮ್ಮ ಗುರುಗಳ ಸನ್ಮಾನ ಮಹೋತ್ಸವವನ್ನು ವಿಜೃಂಭಣ ರೀತಿಯಲ್ಲಿ ನಡೆಸಲು ಮುಂದಾದರು. ಮೊದಲು

ಆಚಾರ್ಯರನ್ನು ಒಪ್ಪಿಸುವುದೂ ಕಷ್ಟವಾಯಿತು. ಅವರಿಗೆ ಯಾವ ವಿಧವಾದ ಪ್ರಶಂಸೆಯೂ ಹಿತವಿರಲಿಲ್ಲ. ಕೊನೆಗೆ ನಮ್ಮೆಲ್ಲರ ಬಲಾತ್ಕಾರದಿಂದ ಒಪ್ಪಿದರು. ಉತ್ಸವದ ದಿನ ನಿಷ್ಕರ್ಷೆಯಾಯಿತು. ಸಿಹಿ ಹಂಚಲು ಏರ್ಪಡಿಸಿದೆವು. ಆಚಾರ್ಯರು ವೈದಿಕರು. ಯಾವ ಪಕ್ವ ಪದಾರ್ಥಗಳನ್ನು ಸ್ವೀಕರಿಸುವವರಲ್ಲ. ಕೊಬ್ಬರಿ ಸಕ್ಕರೆ ವಿನಿಯೋಗ ನಿಷ್ಕರ್ಷೆಯಾಯಿತು. ನಾಲ್ಕು ಮಣ ಬೂರಾಸಕ್ಕರೆ. ಒಂದು ಮಣ ಕೊಬ್ಬರಿ ಒಂದು ಧಡಿಯ ಗಸಗಸೆ. ೨೫ ತೊಲ ಏಲಕ್ಕಿ. ೧೫ ಜನ ವಿದ್ಯಾರ್ಥಿಗಳು ಸುತ್ತಲೂ ಕುಳಿತು ೧೫೦೦ ಪೊಟ್ಟಣಗಳನ್ನು ಕಟ್ಟಿದೆವು. ಆಚಾರ್ಯರನ್ನು ಕತ್ತವಾಡಿಪುರದಲ್ಲಿದ್ದ ಅವರ ನಿವಾಸದಿಂದ ಮಂಗಳ ವಾದ್ಯದೊಡನೆ ಬಿ.ಎಂ. ಶ್ರೀಯವರು ಹೊಸದಾಗಿ ಕೊಂಡುಕೊಂಡ ಕಾರಿನಲ್ಲಿ ಕಾಲೇಜಿನ ಸಭಾಮಂಟಪಕ್ಕೆ ಕರತರಲಾಯಿತು. ಕಾಲೇಜು ತಳಿರುತೋರಣಗಳಿಂದಲೂ ರಂಗವಲ್ಲಿಯಿಂದಲೂ ಅಲಂಕೃತವಾಗಿತ್ತು. ಸುಮಾರು ೧೫೦೦ ಕ್ಕೂ ಮೀರಿದ ಅತಿಥಿಗಳು ನಗರದ ಎಲ್ಲಾ ಪ್ರಾಚೀನ ಕನ್ನಡ ಸಂಸ್ಕೃತ ಪಂಡಿತರುಗಳಿಗೂ ಆಹ್ವಾನವಿತ್ತು. ಪೌರಾಸ್ತ್ಯ ಪಾಶ್ಚಾತ್ಯ ವಿದ್ವಾಂಸರ ಅಪೂರ್ವ ಸಮ್ಮೇಳನ. ಸ್ವಾಗತ ಪದ್ಯಪಠಣ, ವಿದ್ಯಾರ್ಥಿ ಮತ್ತು ಉಪಾಧ್ಯಾಯರುಗಳಿಂದ ಆಚಾರ್ಯರ ಗುಣಗಾನವೇ. ಆಚಾರ್ಯರಿಗೆ ಫಲಪುಷ್ಪ ಮತ್ತು ಶಾಲುಜೋಡಿಗಳ ಸಮರ್ಪಣ. ಅತಿಥಿಗಳ ಪ್ರತ್ಯುತ್ತರ. ಭಾಷಣ ಮಾಡುವಾಗ ಆಚಾರ್ಯರ ಆನಂದಬಾಷ್ಪಪ್ರವಾಹ, ಗಂಧಪುಷ್ಪ ತಾಂಬೂಲ, ಶರ್ಕರಾ ವಿನಿಯೋಗ. ಅತಿಥಿಗಳಿಗೆ ಪುನಃ ಅವರ ನಿವಾಸದವರೆಗೆ ಅದೇ ಕಾರಿನಲ್ಲಿ ಅವರ ಮನೆಯವರೆಗೆ ಮೆರವಣಿಗೆ. ಒಂದೊಂದು ಇಂದಿಗೂ ಕಣ್ಣಿಗೆ ಕಟ್ಟಿದಂತಿದೆ. ಇದನ್ನು ಮರೆಯಲು ಸಾಧ್ಯವೇ?



# ವಿದ್ಯಾರ್ಥಿಗಳ ಚೇಷ್ಟೆ

ನಾನು ಹೈಸ್ಕೂಲ್ ವಿದ್ಯಾಭ್ಯಾಸವನ್ನು ನಡೆಸಿದುದು ಮೈಸೂರು ಮಹಾರಾಜರವರ ಪ್ರೌಢಶಾಲೆಯಲ್ಲಿ. ಅದನ್ನು ೧೯೧೮ರಲ್ಲಿ ಸೇರಿದೆ. ಆಗ ಆ ಶಾಲೆ ಜಗನ್ಮೋಹನ ಬಂಗಲೆಯ ಕಟ್ಟಡದಲ್ಲಿ ನಡೆಯುತ್ತಿತ್ತು. ಮುಂಭಾಗದ ಮಂಟಪದಲ್ಲಿ ಮಣ್ಣುಗೋಡೆಗಳನ್ನು ಹಾಕಿ ಕೊಠಡಿಗಳನ್ನು ನಿರ್ಮಿಸಿದ್ದರು. ಮೇಲ್ಛಾವಣಿ ಬಹಳ ತಗ್ಗು, ಮಣ್ಣಿನ ನೆಲ. ನೆಲದ ಮೇಲೆ ಬಿದಿರು ಚಾಪೆ ಹಾಸಿರುತ್ತಿತ್ತು. ನಮ್ಮ ತರಗತಿಗೆ `ಎ' ಸೆಕ್ಷನ್ ಎಂದು ಹೆಸರು. ಅದು ಆ ಬಂಗಲೆಯ ಉತ್ತರಭಾಗದ ಹೆಬ್ಬಾಗಿಲಿಗೆ ಎದುರಾಗಿತ್ತು. ಆ ಬಾಗಿಲಿನ ಪಕ್ಕದಲ್ಲಿ ದೊಡ್ಡ ಅರಳಿಮರ ಮತ್ತು ಸಂಪಗೆ ಮರಗಳು. ಆ ಮರದ ಮೇಲೆ ಸರ್ವದಾ ಪಕ್ಷಿಗಳೂ ಕೋತಿಗಳೂ ವಿಶೇಷವಾಗಿದ್ದು ಗಲಭೆ ಮಾಡುತ್ತಿದ್ದವು. ವಿದ್ಯಾರ್ಥಿಗಳಿಗೆ ಚಿತ್ತಸ್ಥೈರ್ಯಕ್ಕೆ ಬಹಳ ಆಘಾತಗಳಾಗುತ್ತಿದ್ದವು. ಉಪಾಧ್ಯಾಯರ ವರ್ಚಸ್ಸು ವಿಶೇಷವಾಗಿಲ್ಲದಿದ್ದರೆ ಮಕ್ಕಳ ಗಮನವೆಲ್ಲವೂ ಹೊರಗಿನ ಕಡೆಯೇ. ಅಂತಹವರೂ ಇಲ್ಲದಿರಲಿಲ್ಲ.

ನಮ್ಮ ಸಹಪಾಠಿಗಳು ಕೆಲವರು ಬಹಳ ಮೇಧಾವಿಗಳು ನಾವುಗಳು ಯಾವಾಗಲೂ ಒಟ್ಟಿಗೇ ಮುಂದಿನ ಆಸನಗಳಲ್ಲಿಯೇ ಕುಳಿತುಕೊಂಡು ಉಪಾಧ್ಯಾಯರ ಪ್ರತ್ಯಕ್ಷ ಗಮನಕ್ಕೆ ಬೀಳುತ್ತಿದ್ದವರು. ಮುಂದೆ ಅವರು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಬಹು ಉಚ್ಚ ಪದವಿಗೇರಿದವರು. ಕೆಲವರನ್ನು ಈಗ ಜ್ಞಾಪಿಸಿಕೊಳ್ಳುವುದು ಬಹು ಹೆಮ್ಮೆಯ ವಿಷಯ. ಜಿ. ಎನ್. ನಾಗರಾಜರಾವ್ (ಪೋಲೀಸ್ ಇಲಾಖೆಯ ಮುಖ್ಯಾಧಿಕಾರಿಯಾಗಿ ವಿಶ್ರಾಂತರಾದವರು) ಟಿ. ಎನ್. ಸುಬ್ಬರಾಯ (ಸೆಂಟ್ರಲ್ ಕಾಲೇಜಿನ ಭೌತಶಾಸ್ತ್ರದ ಪ್ರಾಧ್ಯಾಪಕರು), ಎಲ್. ಸೀಬಯ್ಯ (ಯುವರಾಜಾ ಕಾಲೇಜಿನ ಪ್ರಿನ್ಸಿಪಾಲರು), ಕೆ. ಕೃಷ್ಣಸ್ವಾಮಿ (ಮುಂದೆ ಕೆ. ಕಡಾಂಬಿ ಎಂಬ ನಾಮಧೇಯದಿಂದ ಅರಣ್ಯ ಇಲಾಖೆಯ ಚೀಫ್ ಕನ್ಸರ್ವೇಟರ್‌ರಾದವರು) ಕೆ. ಆರ್. ಎಸ್. ಗುಪ್ತ (ಶಿಕ್ಷಣ ಶಾಸ್ತ್ರದ ಪ್ರಾಧ್ಯಾಪಕರು), ಎಂ. ಆರ್. ದೊರೆಸ್ವಾಮಿಯ್ಯಂಗಾರ್ (ಮಹಾರಾಜ ಕಾಲೇಜಿನ ಸಂಖ್ಯಾಶಾಸ್ತ್ರದ ಪ್ರಾಧ್ಯಾಪಕರು), ವೆಂಕಟರಾಮಯ್ಯ (ಸರ್ಕಾರದ ಹಣಕಾಸಿನ ಕಂಟ್ರೋಲರು), ಪಾರ್ಥನಾರಾಯಣ

ಪಂಡಿತ (ಸುಪ್ರಸಿದ್ಧ ಆಯುರ್ವೇದ ವಿದ್ವನ್ಮಣಿ), ಜಿ. ರಾಮಸ್ವಾಮಿ ಶಾಸ್ತ್ರಿ (ಸುಪ್ರಸಿದ್ಧ ಇಂಜಿನಿಯರು) ಇವರುಗಳು ನಮ್ಮ ಮಿತ್ರ ಮಂಡಳಿ. ನಾವುಗಳು ಬುದ್ಧಿವಂತರಾಗಿದ್ದಂತೆಯೇ ತುಂಟರೆಂದೂ ಪರಿಗಣಿತವಾಗಿದ್ದೆವು.

ನಮಗೆ ಎ. ಕೃಷ್ಣಪ್ಪ ಎಂಬ ರಸಾಯನ ಶಾಸ್ತ್ರದ ಭೋದಕರೊಬ್ಬರಿದ್ದರು. ಅವರು ಒಬ್ಬ ವಿಚಿತ್ರ ವ್ಯಕ್ತಿ. ಮಧ್ಯಮ ಮಟ್ಟದ ಎತ್ತರ. ಗಂಜಿ ಹಾಕಿಸಿ ರಟ್ಟಿನಂತೆ ಇಸ್ತ್ರಿ ಮಾಡಿಸಿದ ಬಿಳಿಯ ಪರಟು, ಮಲ್ಲಿನ ರುಮಾಲು, ಗುಂಡಿ ಹಾಕದ ಬಿಚ್ಚಿದ್ದ ಕರಿಯ ಅಂಗಿ, ಹಿಂದೆ ಮುಂದೆ ಜೋಲು ಬಿದ್ದ ಕುಚ್ಚಿನ ಕಚ್ಚೆ. ದಾಪುಕಾಲು ಹಾಕಿಕೊಂಡು ತರಗತಿಯನ್ನು ಪ್ರವೇಶಿಸಿ ವೇದಿಕೆಯನ್ನು ಹತ್ತಿ ದೊಪ್ಪನೆ ಕುರ್ಚಿಯ ಮೇಲೆ ಕುಳಿತುಕೊಳ್ಳುವ ಪದ್ಧತಿ. ಪ್ರತಿಯೊಬ್ಬ ವಿದ್ಯಾರ್ಥಿಯನ್ನು ಒಂದಲ್ಲ ಒಂದು ರೀತಿಯಲ್ಲಿ ಲೇವಡಿ ಮಾಡುವುದು ಅವರ ಸ್ವಭಾವ.

ಶ್ರೀ ನಿಧಿರಂಗಾಚಾರಿಯೆಂಬ ನಮ್ಮ ಸಹಪಾಠಿಯೊಬ್ಬನಿದ್ದ. ಅವನು ವಾರಾನ್ನದಿಂದ ವ್ಯಾಸಂಗ ಮಾಡುತ್ತಿದ್ದ. ಒಂದು ದಿನ ಆತನು ತರಗತಿಗೆ ಸ್ವಲ್ಪ ತಡವಾಗಿ ಬಂದ. ಕಾರಣವನ್ನು ಕೇಳಲು ವಾರದ ಮನೆಯ ಅಸೌಕರ್ಯವನ್ನು ತಿಳಿಸಲು `ಏನೋ ಇದು ಹೆಸರು ನೋಡಿದರೆ ಶ್ರೀನಿಧಿರಂಗಾಚಾರ್ ಜೀವಿಸುವುದು ವಾರಾನ್ನದಿಂದ. ನಿನ್ನ ತುಂಬಿದ ನಿಧಿಯೇನಾಯಿತೋ ನಾಚಿಕೆಯಾಗುವುದಿಲ್ಲವೇನೋ ಎಂದರು. ಮತ್ತೊಬ್ಬ ಸಹಪಾಠಿ ಶೆಲ್ವಪುಳ್ಳೆ ಅಯ್ಯಂಗಾರ್. ಸ್ವಲ್ಪ ಸ್ಥೂಲ ಶರೀರಿ. ಪಾಠದ ಮಧ್ಯದಲ್ಲಿ ಮುಂದಿನ ಇಳಿಜಾರಿನ ಮೇಲೆ ಒರಗಿ ನಿದ್ರಿಸಿಬಿಟ್ಟ. ಅವನನ್ನು ಕುರಿತು ನಮ್ಮ ಉಪಾಧ್ಯಾಯರು ಏನೋ ಚೆಲ್ಲಾಪಿಲ್ಲಿ ಅಯ್ಯಂಗಾರಿ, ಇದು ನಿನ್ನ ದಿವಾನ್‌ಖಾನೆಯೇನೋ ಹೋಗಿ ದಿವಾನ್ ಖಾನೆಯಲ್ಲಿ ಮಲಗು ಹೋಗೋ ಎಂದು ಗದರಿಸಿ ಬೆಂಚಿನ ಮೇಲೆ ನಿಲ್ಲಿಸಿ ಬಿಟ್ಟರು. ಅವರ ಪಾಠದ ವೈಖರಿಯೂ ಅಸಾಮಾನ್ಯ. ಅವರು ಕೊಡುತ್ತಿದ್ದ ಉದಾಹರಣೆಗಳು ಈ ಮಾದರಿಯವು. ``All nitrates when heated become oxides. when Hutchappa nitrate is heated he becomes Hutchappa oxide' ಇಂತಹ ಸಂದರ್ಭಗಳನ್ನೆಲ್ಲ ನಾವುಗಳು ನಗದೆ ಇರುವುದು ಅಸಾಧ್ಯವಾಗುತ್ತಿತ್ತು. ಒಂದು ದಿನ ಅವರು classification ಎಂಬ ಶಬ್ದಕ್ಕೆ ಅರ್ಥ ವಿವರಣೆ ಮಾಡುತ್ತಿದ್ದಾಗ ನಮಗೆ ತಡೆಯಲಾರದಷ್ಟು ನಗು ಬಂದಿತು. ಮುಂದಿನ ಸಾಲಿನಲ್ಲಿದ್ದ ನಮ್ಮ ಮಿತ್ರಮಂಡಳಿ ಗುಳ್ಳೆಂದು ನಕ್ಕುಬಿಟ್ಟಿತು. ಉಪಾಧ್ಯಾಯರಿಗೆ ಬಹಳ ಕೋಪ ಬಂದು ಬಿಟ್ಟಿತು. ನಮ್ಮ ಗುಂಪನ್ನು ಸಾಮೂಹಿಕವಾಗಿ ಬೆಂಚಿನ ಮೇಲೆ ಹತ್ತಿ ಎಂದು ಆಜ್ಞೆ ಮಾಡಿದರು. ನಾವು ಯಾವ ತಪ್ಪೂ ಮಾಡಿಲ್ಲ. ಹತ್ತುವುದಿಲ್ಲ ಎಂದು ಬಿಟ್ಟು ನಿರಾಕರಿಸಿದೆವು. ನಮಗೆ ಶಿಕ್ಷೆ ಮಾಡಿಯೇ ತೀರಬೇಕೆಂದು ಪಣತೊಟ್ಟರು. ಶಾಲೆಯ ಮುಖ್ಯೋಪಾಧ್ಯಾಯರಿಗೆ ಹೋಗಿ ದೂರು ಕೊಟ್ಟರು. ಎಂ. ಕೃಷ್ಣಯ್ಯಂಗಾರ್ರು (ಈಗಿನ ಕ್ರಿಕೆಟ್ ಆಟದ ಪ್ರವೀಣ ಎಂ. ಚಿನ್ನಸ್ವಾಮಿಯವರ ತಂದೆ) ನಮ್ಮ ಮುಖ್ಯೋಪಾಧ್ಯಾಯರು. ಆ ವರ್ಷದ ಕೊನೆಗೆ ಅವರಿಗೆ ವಿಶ್ರಾಂತಿ. ಅವರು ನಮ್ಮನ್ನು ಕರೆಸಿ ಕಾರಣವನ್ನು ಕೇಳದೆ ಒಬ್ಬೊಬ್ಬರಿಗೂ ಬೆತ್ತದಲ್ಲಿ ಕಯ್ಯ ಮೇಲೆ ಒಂದೊಂದು ಏಟನ್ನು ಕೊಟ್ಟರು.

ನಮಗೆಲ್ಲ ಬಹಳ ವ್ಯಸನವಾಯಿತು. ಉಪಾಧ್ಯಾಯರಿಗೆ ಸ್ವಲ್ಪ ಬುದ್ಧಿ ಕಲಿಸಬೇಕೆಂಬ ಯೋಚನೆಯಾಯಿತು. ನಮ್ಮಲ್ಲಿ ತುಂಟತನದಲ್ಲಿ ಅಗ್ರೇಸರ ಕೆ. ಕೃಷ್ಣಸ್ವಾಮಿ. ಅವನಿಗೆ ಸಹಾಯಕ ಜಿ. ರಾಮಸ್ವಾಮಿ ಶಾಸ್ತ್ರಿ. ಇಬ್ಬರೂ ಸೊಗಸಾದ ಯೋಜನೆಯನ್ನು ಹಾಕಿಕೊಂಡರು. ನಮ್ಮಲ್ಲಿ ಕೆಲವರಿಗೆ ಅದರಲ್ಲಿ ಒಪ್ಪಿಗೆಯಿಲ್ಲ. ಆದರೂ ಅವರು ಸ್ಥಿತಪ್ರತಿಜ್ಞರು. ಬುಧವಾರ ಮತ್ತು ಶುಕ್ರವಾರ ಮೊದಲನೆಯ ಗಂಟೆಯ ಕಾಲ ರಸಾಯನ ಶಾಸ್ತ್ರ ಪಾಠವಿರುತ್ತಿತ್ತು. ಬುಧವಾರ ನಮಗೆಲ್ಲ ಛಡೀಯೇಟು ಬಿದ್ದಿತ್ತು. ಶುಕ್ರವಾರದ ವೇಳೆಗೆ ಪ್ರತಿಕ್ರಿಯೆ ಸಿದ್ಧವಾಯಿತು. ಉಪಾಧ್ಯಾಯರು ಕುಳಿತುಕೊಳ್ಳುತ್ತಿದ್ದ ಹಲವು ರಂಧ್ರಗಳಿಂದ ಕೂಡಿದ ಬೆತ್ತದ ಕುರ್ಚಿ. ಅದರಡಿಗೆಲ್ಲ ಮಿದುವಾದ ಜೇನು ಮೇಣವನ್ನು ಮೆತ್ತಿದರು. ಆ ಮೂಲಕ ಕುರ್ಚಿಯ ಮೇಲಕ್ಕೆ ಸ್ವಲ್ಪ ಚಾಚಿಕೊಂಡಿರುವ ಹಾಗೆ ನೂರಾರು ಗುಂಡುಸೂಜಿಗಳನ್ನು ಅಡಿಗಳಿಗೆ ಚುಚ್ಚಿಬಿಟ್ಟು, ಏನೂ ತಿಳಿಯದವರಂತೆ ವೇದಿಕೆಯ ಮೇಲೆ ಇರಿಸಿದರು. ಇದು ಬಹು ರಹಸ್ಯವಾಗಿರಬೇಕೆಂದು ನಮಗೆಲ್ಲ ಕಟ್ಟಾಜ್ಞೆಯಾಗಿತ್ತು. ಗಂಟೆಯಾದ ತಕ್ಷಣ ಉಪಾಧ್ಯಾಯರು ತಮ್ಮ ಮಾಮೂಲು ದಾಪು ಹೆಜ್ಜೆ ಹಾಕಿಕೊಂಡು ಬಂದು ವೇದಿಕೆಯನ್ನು ಹತ್ತಿ ಕುರ್ಚಿಯಲ್ಲಿ ದೊಪ್ಪನೆ ಕುಳಿತುಕೊಂಡರು. ಅಡಿಯ ಗುಂಡುಸೂಜಿಗಳು ಪೃಷ್ಠಭಾಗಕ್ಕೆ ಚುಚ್ಚಿದವು. ಉಪಾಧ್ಯಾಯರು ಹಾವು ಕಡಿದವರಂತೆ ಥಟ್ಟನೆ ಕೂಗಿಕೊಂಡು ಎದ್ದರು. ಪೃಷ್ಠ ಭಾಗದಲ್ಲಿ ಸೂಜಿ ಚುಚ್ಚಿದ್ದರ ಫಲವಾಗಿ ಬಟ್ಟೆಯ ಮೇಲೆ ಅನೇಕ ರಕ್ತದ ಕಲೆಗಳಾಗಿದ್ದವು. ಕೃಷ್ಣಸ್ವಾಮಿಯು ಏನೂ ತಿಳಿಯದವನಂತೆ ಥಟ್ಟನೆ ವೇದಿಕೆಯ ಮೇಲಕ್ಕೆ ಹತ್ತಿ ಕುರ್ಚಿಯನ್ನು ಮೇಲಕ್ಕೆತ್ತಿ ಅದರ ಹಿಂಭಾಗವನ್ನು ತರಗತಿಯವರಿಗೆಲ್ಲ ಪ್ರದರ್ಶಿಸಿ ಸೂಜಿಗಳನ್ನೆಲ್ಲ ಕಿತ್ತು ಬಹಳ ಸಹಾನುಭೂತಿಯಿಂದ ಯಾರೋ ಅಯೋಗ್ಯರು ಈ ಕಾರ್ಯ ಮಾಡಿಬಿಟ್ಟಿದ್ದಾರೆ. ಬಹು ಖಂಡನೀಯವಾದ ಕೆಲಸ ಎಂದು ವೇದಿಕೆಯಿಂದಲೇ ಉದ್ಗಾರ ತೆಗೆದ. ನಮ್ಮೆಲ್ಲರಿಗೂ ಭಯವೂ ವೇದನೆಯೂ ಉಂಟಾಯಿತು. ಉಪಾಧ್ಯಾಯರ ಕಣ್ಣಿನಲ್ಲಿ ನೀರೂರಿತು. ಇನ್ನು ಮೇಲೆ ನಾನು ಎಚ್ಚರಿಕೆಯಾಗಿರಬೇಕು ಎಂದುಕೊಂಡರು. ಈ ಅಪಚಾರ ನಮ್ಮ ಗುಂಪಿನವರಿಗೆ ವಿನಾ ಮತ್ತಾರಿಗೂ ತಿಳಿಯದು. ಸ್ವಲ್ಪ ಕಾಲದ ಮೇಲೆ ನಮ್ಮ ತಪ್ಪನ್ನು ತಿಳಿಸಿ ಕ್ಷಮಾಯಾಚನೆಮಾಡಿಕೊಳ್ಳಬೇಕೆಂದು ತೀರ್ಮಾನಿಸಿದೆವು. ನಾನು ಕಿರಿಯ ಬಾಲಕರ ಚರ್ಚಾಕೂಟದ ಕಾರ್ಯದರ್ಶಿಯಾಗಿದ್ದೆ. ವರ್ಷಾಂತ್ಯದ ಕೊನೆಯ ಉತ್ಸವದಲ್ಲಿ ಉಪಾಧ್ಯಾಯರಿಗೆ ಕೃತಜ್ಞತೆಯನ್ನರ್ಪಿಸುವ ಸಂದರ್ಭದಲ್ಲಿ ಬಹು ನಮ್ರತೆಯಿಂದ ಸಾಮೂಹಿಕವಾಗಿ ಕ್ಷಮಾಯಾಚನೆ ಮಾಡಿದೆ. ಉಪಾಧ್ಯಾಯರುಗಳು ನಮ್ಮಂತಹವರು ಇಂತಹ ಚೇಷ್ಟೆ ಮಾಡಲು ಸಾಧ್ಯವೇ ಎಂದು ಆಶ್ಚರ್ಯಪಟ್ಟು ನಮ್ಮ ಬುದ್ಧಿವಂತಿಕೆಗೆ ಸಂತೋಷಪಟ್ಟರು. ಈಗಿನ ವಿದ್ಯಾರ್ಥಿಗಳು ಇಂತಹ ಚೇಷ್ಟೆಯನ್ನು ಮಾಡಬಲ್ಲರೆ?

❐

## ಕ್ಯಾಂಟೀನ್ ಮೇಲ್ವಿಚಾರಣೆ

ನಾನು ೧೯೪೪ರಿಂದ ೧೯೪೬ರವರೆಗೆ ಎರಡು ವರ್ಷಗಳ ಕಾಲ ತುಮಕೂರು ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದೆ. ಮೊದಲನೆಯ ವರ್ಷ ಡಾ| ತಿರುಮಲಾಚಾರ್ಯರೂ ಎರಡನೆಯ ವರ್ಷ ಡಾ| ಸೀಬಯ್ಯನವರೂ ಪ್ರಿನ್ಸಿಪಾಲರಾಗಿದ್ದರು.ಇಬ್ಬರೂ ನಮಗೆ ಬಹಳ ಆತ್ಮೀಯರು. ಕಾಲೇಜು ಕೆಲಸಗಳು ಬಹಳ ಸುಗಮವಾಗಿ ಸಾಗುತ್ತಿದ್ದವು. ಆಗ ಬಹು ಕಟ್ಟುನಿಟ್ಟಾದ ಪಡಿತರ ವಿತರಣೆಯ ಕಾಲ. ಅತ್ಯಾವಶ್ಯಕವಾದಷ್ಟು. ಆಹಾರ ಪದಾರ್ಥಗಳೂ ಸಿಕ್ಕುವುದು ಕಷ್ಟವಾಗುತ್ತಿತ್ತು. ನಮ್ಮ ಕಾಲೇಜಿಗೆ ೫-೬ ಮೈಲಿಗಳ ದೂರದ ಗ್ರಾಮಗಳಿಂದ ಅನೇಕ ವಿದ್ಯಾರ್ಥಿಗಳು ಬರುತ್ತಿದ್ದರು. ಅವರಲ್ಲಿ ಅನೇಕರು ತೀರ ಬಡವರು. ಅವರಿಗೆ ಮಧ್ಯಾಹ್ನದ ಉಪಹಾರಕ್ಕೆ ಅವಕಾಶ ಸಾಕಷ್ಟಿರಲಿಲ್ಲ. ಕಾಲೇಜಿನ ಕ್ಯಾಂಟೀನ್ನಿಗೆ ವಿಶ್ವವಿದ್ಯಾನಿಲಯದಿಂದ ವರ್ಷಕ್ಕೆ ೮೦೦ ರೂ.ಗಳನ್ನು ಮಾತ್ರ ಸಹಾಯ ಮಾಡುತ್ತಿದ್ದರು. ಆ ಮೊಬಲಿಗೆ ಸಾಕಷ್ಟು ಆಹಾರಧಾನ್ಯಗಳು ಸಿಗುತ್ತಿರಲಿಲ್ಲ. ಮೊದಲನೆಯ ವರ್ಷ ನಮ್ಮ ಮಿತ್ರರಾದ ಮುದ್ದು ಲಿಂಗಣ್ಣನವರು ಮೇಲ್ವಿಚಾರಕರಾಗಿದ್ದು ಬಹು ಕಷ್ಟದಿಂದ ಸುಮಾರು ೮೦ ವಿದ್ಯಾರ್ಥಿಗಳಿಗೆ ಕಡಲೆ ಹಲಸಂದೆ, ಹುಗ್ಗರಿ ಮತ್ತು ಹೆಸರು ಮತ್ತು ಕಡಲೆ ಬೇಳೆಗಳ ಕೋಸುಮರಿ ಮಾಡಿಸಿ ಕೊಡುತ್ತಿದ್ದರು. ಅವರು ಬಹು ದಕ್ಷತೆಯಿಂದ ನಡೆಸುತ್ತಿದ್ದರೂ ಕಾಲೇಜಿನ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಯ ದೃಷ್ಟಿಯಿಂದ ಬಹು ಸ್ವಲ್ಪ ವಿದ್ಯಾರ್ಥಿಗಳಿಗೆ ಅದರ ಪ್ರಯೋಜನವಾಗುತ್ತಿತ್ತು.

ಒಂದು ವರ್ಷ ಹೇಗೋ ಸಾಗಿತು. ಮಾರನೆಯ ವರ್ಷ ವಿದ್ಯಾರ್ಥಿಗಳ ಸಂಖ್ಯೆಯೂ ಹೆಚ್ಚಿತು. ಆಹಾರಪದಾರ್ಥಗಳೂ ಕಡಿಮೆಯಾದುದಲ್ಲದೆ ದೊರಕುವುದೂ ಅಸಾಧ್ಯವಾಯಿತು. ಪ್ರಿನ್ಸಿಪಾಲರಾದ ಸೀಬಯ್ಯನವರು ನನ್ನನ್ನು ಕರೆದು 'ಏನಾದರೂ ಉತ್ತಮ ರೀತಿಯಲ್ಲಿ ಏರ್ಪಡಿಸಲು ಸಾಧ್ಯವಿಲ್ಲವೇ' ಎಂದು ಕೇಳಿದರು. ನಮ್ಮ ಸಹೋದ್ಯೋಗಿಗಳೆಲ್ಲ ಚಿನ್ನದಂತಹ ಮನುಷ್ಯರು. ಆ ಸ್ನೇಹಸೌಹಾರ್ದಗಳನ್ನು ಈಗೆಲ್ಲಿ ಕಾಣಲು ಸಾಧ್ಯ? ಅಧ್ಯಾಪಕರ ಕೊಠಡಿಯಲ್ಲಿ

ಕುರಿತು ದೀರ್ಘವಾಗಿ ಚರ್ಚಿಸಿದೆವು. ಮೊದಲು ಸಾಕಷ್ಟು ಧನವನ್ನು ಸಂಪಾದಿಸಬೇಕೆಂದು ತೀರ್ಮಾನಿಸಿದೆವು. ಅನೇಕರ ನೆರವು ದೊರಕಿತು. ಅದಕ್ಕಾಗಿ ನಾನೂ ನನ್ನ ಪರಮಾಪ್ತ ಸ್ನೇಹಿತರಾಗಿದ್ದ ಎಸ್. ಮಂಜುನಾಥರವರೂ ಒಟ್ಟಿಗೆ ಯೋಚಿಸಿ ಅಧ್ಯಾಪಕ ಮತ್ತು ವಿದ್ಯಾರ್ಥಿಗಳ ಸಹಾಯದಿಂದ ಎರಡು ನಾಟಕಗಳನ್ನಾಡಿ ಸಾರ್ವಜನಿಕರಿಂದ ಪ್ರವೇಶ ದರದ ಮೂಲಕ ಧನಸಂಗ್ರಹ ಮಾಡಬೇಕೆಂದು ನಿಶ್ಚಯಿಸಿದೆವು. ಬಿ. ಎಂ. ಶ್ರೀಯವರ ಗದಾಯುದ್ಧನಾಟಕ ಮತ್ತು ತೀ.ನಂ.ಶ್ರೀಯವರ 'ರಾಕ್ಷಸನ ಮುದ್ರಿಕೆ'ಯೆಂಬ ಎರಡು ನಾಟಕಗಳ ಅಭ್ಯಾಸ ಪ್ರಾರಂಭವಾಯಿತು. ಬಹುಶ್ರದ್ಧೆಯಿಂದ ೧೫ ದಿನಗಳ ಅಭ್ಯಾಸವಾದ ಮೇಲೆ ನಾಟಕಗಳು ಬಹು ಯಶಸ್ವಿಯಾಗಿ ಪ್ರದರ್ಶಿತವಾದುವು. ಸ್ಥಳೀಯ ಮಹಾಜನರು ಬಹು ಉದಾರ ನೆರವಾದರು. ಎರಡು ನಾಟಕಗಳಿಂದ ಒಂದು ಸಾವಿರದ ನಾಲ್ಕು ನೂರು ರೂಪಾಯಿಗಳು ಶೇಖರವಾದುವು. ವಿಶ್ವವಿದ್ಯಾನಿಲಯದ ೮೦೦ ರೂ. ಗಳ ನೆರವು ಇದ್ದೇ ಇದ್ದಿತು. ನಾನೇ ಮೇಲ್ವಿಚಾರಕನಾದೆ. ಆ ವರ್ಷ ೨೪೦ ವಿದ್ಯಾರ್ಥಿಗಳಿಗೆ ಕ್ಯಾಂಟೀನಿನ ಪ್ರಯೋಜನವನ್ನು ಮಂಜೂರು ಮಾಡಲಾಯಿತು.

ಮುಂದೆ ಆಹಾರಪದಾರ್ಥಗಳ ಶೇಖರಣೆಯ ಕಾರ್ಯ. ಸ್ಥಳೀಯ ಆಹಾರ ವಿತರಣಾಧಿಕಾರಿಗಳನ್ನು ಕಂಡು ಪ್ರಾರ್ಥಿಸಲಾಯಿತು. ಬಹಳ ದೀರ್ಘ ಚರ್ಚೆಯಾದ ಮೇಲೆ ಅಕ್ಕಿಗೆ ಬದಲಾಗಿ ಅಕ್ಕಿಯ ನುಚ್ಚನ್ನು ಕೊಡಲು ಒಪ್ಪಿದರು. ಮಾದರಿಗಾಗಿ ಐದು ಶೇರು ತಂದು ಕಲ್ಲು ಮಣ್ಣು ಮಾಡಿಸಲಾಗಿ ಅದರಲ್ಲಿ ಮೂರು ಶೇರು ನುಚ್ಚು ಎರಡು ಶೇರು ಹುಡಿಕಲ್ಲುಗಳೂ ದೊರೆತವು. ಅದನ್ನು ನೋಡಿ ಮನಸ್ಸಿಗೆ ಬಹಳ ಬೇಸರಿಕೆಯಾಯಿತು. ಸ್ಥಳೀಯ ಅಧಿಕಾರಿಗಳನ್ನು ನೋಡುವುದರಲ್ಲಿ ಏನೂ ಲಾಭವಿಲ್ಲವೆಂದು ತೋರಿತು. ಆಗ ಆಹಾರ ಮಂತ್ರಿಯಾಗಿದ್ದವರು ಎಂ. ಎ. ಶ್ರೀನಿವಾಸನ್. ಅವರು ನನಗೆ ಪರಮಾಪ್ತರು. ಜನಪ್ರಿಯತೆಯನ್ನು ಅವರಷ್ಟು ಸಂಪಾದಿಸಿದ್ದವರು ಆ ಕಾಲದಲ್ಲಿ ಬಹು ವಿರಳ. ನೇರ ಬೆಂಗಳೂರಿಗೆ ಹೋಗಿ ವಿದ್ಯಾರ್ಥಿಗಳ ಶೋಚನೀಯ ಸ್ಥಿತಿಯನ್ನು ತಿಳಿಸಿ ಕೈಯ್ಯಲ್ಲಿ ತೆಗೆದುಕೊಂಡು ಹೋಗಿದ್ದ ನುಚ್ಚನ್ನು ಅವರಿಗೆ ತೋರಿಸಿ ವಿದ್ಯಾರ್ಥಿಗಳ ಉಪಹಾರಕ್ಕಾಗಿ ಆಹಾರ ಪದಾರ್ಥಗಳನ್ನು ಬೇಡಿದೆ. ದಯಾಳುಗಳಾದ ಅವರು ತಕ್ಷಣ ವಿದ್ಯಾರ್ಥಿಗೆ ಒಂದು ದಿನಕ್ಕೆ ಕಾಲು ಪಾವಿನಂತೆ ೨೪೦ ಮಂದಿಗಾಗುವಷ್ಟು ಪಡಿತರ ಕೊಡತಕ್ಕುದೆಂದು ಆದೇಶವಿತ್ತರು.

ಮುಂದಿನ ಕೆಲಸ ಅಷ್ಟು ಕಷ್ಟವಾಗಲಿಲ್ಲ. ಕಾಲೇಜಿನ ವಿದ್ಯಾರ್ಥಿನಿಲಯದ ಅಡಿಗೆಯವರಿಗೇ ನಿತ್ಯದ ಉಪಹಾರ ತಯಾರಿಕೆಯ ಕಾರ್ಯವನ್ನು ವಹಿಸಲಾಯಿತು. ಅವರು ಕೇಳುವಷ್ಟು ಪದಾರ್ಥವನ್ನು ಮಾದರಿಗಾಗಿ ಕೊಟ್ಟು ಪ್ರತಿದಿನ ಅಷ್ಟೇ ಪ್ರಮಾಣದ ತಿನಿಸನ್ನು ಕೊಡಬೇಕೆಂದೂ ಅದು ನನ್ನ ಕೊಠಡಿಯಲ್ಲಿ ನನ್ನ ಮೇಜಿನ ಕೆಳಗೆ ಸಿದ್ಧವಾಗಿರಬೇಕೆಂದು ನಿಷ್ಕರ್ಷಿಸಲಾಯಿತು. ವಾರದ ಆರು ದಿನಗಳಿಗೂ ವಿವಿಧ ರೀತಿಯ ಅನ್ನವನ್ನು ಗೊತ್ತುಪಡಿಸಲಾಯಿತು. ಹಾಗೆಯೇ ಅದರ ವಿತರಣೆಗಾಗಿ ಒಬ್ಬ ವಿದ್ಯಾರ್ಥಿಯನ್ನು ಒಂದೊಂದು ದಿನವೂ ನೇಮಕ ಮಾಡಲಾಯಿತು. ಅವರಿಗೆ ಒಂದು ಗಂಟೆಯ ಕಾಲ ಪೂರ್ವಭಾವಿಯ ರಜಾ

ಕೊಡಲಾಯಿತು. ಅವರು ಮೊದಲೇ ಬಂದು ಆ ದಿನದ ಆಹಾರವನ್ನು ದೊನ್ನೆಗಳಿಗೆ ತುಂಬಿಸಿದ್ದಪಡಿಸಿಟ್ಟು, ವಿರಾಮದ ಗಂಟೆಯಾದ ತಕ್ಷಣ ಅದನ್ನು ವಿನಿಯೋಗಪಡಿಸುತ್ತಿದ್ದರು. ವಿದ್ಯಾರ್ಥಿಗಳಿಗೆಲ್ಲ ಆಗಿ ಮಿಕ್ಕ ಪದಾರ್ಥವನ್ನು ಕಛೇರಿಯ ಗುಮಾಸ್ತರಿಗೂ ಜವಾನರುಗಳಿಗೂ ಹಂಚಲಾಗುತ್ತಿತ್ತು.

ನಾವು ಕೊಡುತ್ತಿದ್ದ ಉಪಹಾರವು ಯೋಗ್ಯತೆಯಲ್ಲಿಯೂ ಪ್ರಮಾಣದಲ್ಲಿಯೂ ಬಹು ತೃಪ್ತಿಕರವಾಗಿರುತ್ತಿತ್ತು. ಪಕ್ಕದಲ್ಲಿದ್ದ ಉಪಹಾರಭವನಗಳಲ್ಲಿಯೂ ಈ ಮಾದರಿಯ ಸೌಲಭ್ಯವಿರಲಿಲ್ಲ. ಉಪಾಧ್ಯಾಯರನೇಕರು ಈ ಉಪಯೋಗವನ್ನು ತಮಗೂ ದೊರಕಿಸುವಂತೆ ಕೇಳಿಕೊಂಡರು. ಆದರೆ ಸರ್ಕಾರದ ನಿಯಮದಂತೆ ಅವರಿಂದ ಮುಪ್ಪನ್ನು ತೆಗೆದುಕೊಳ್ಳಲು ಅವಕಾಶವಿರಲಿಲ್ಲ. ಅದಕ್ಕಾಗಿ ಅವರ ಚಂದಾವನ್ನು ಪ್ರತ್ಯೇಕವಾದ ಲೆಕ್ಕವಾಗಿಟ್ಟು, ಅವರಿಗೂ ಇದೇ ಸೌಕರ್ಯವನ್ನು ಕಲ್ಪಿಸಿದೆವು. ಅವರಿಗೆ ತಿಂಗಳಿಗೆ ಕೇವಲ ಎರಡೂವರೆ ರೂಪಾಯಿಗಳನ್ನು ಮಾತ್ರ ನಿಷ್ಕರ್ಷಿಸಿದೆವು. ೩೨ ಉಪಾಧ್ಯಾಯರು ಈ ಸೌಲಭ್ಯವನ್ನು ಉಪಯೋಗಿಸಿಕೊಂಡರು. ಈ ವ್ಯವಸ್ಥೆಯು ಏಳು ತಿಂಗಳು ಕಾಲ ನಡೆಯಿತು. ಕೊನೆಯಲ್ಲಿ ಉಪಹಾರ ಸಂಬಂಧವಾಗಿದ್ದ ಆಹಾರ ಪದಾರ್ಥದ ಮೊಬಲಗು ಸಾಕಷ್ಟು ಉಳಿದಿತ್ತು. ಅದನ್ನು ಉಪಯೋಗಿಸಿಕೊಂಡು ಈ ಉಪಹಾರ ಸಂಸ್ಥೆಯಿಂದ ವರ್ಷಾಂತ್ಯದಲ್ಲಿ ಕಾಲೇಜಿನ ಸುಮಾರು ೬೦೦ ವಿದ್ಯಾರ್ಥಿಗಳಿಗೆ ಸಿಹಿಖಾರ ಪದಾರ್ಥಗಳನ್ನು ಹಂಚಿ ವಾರ್ಷಿಕೋತ್ಸವವನ್ನು ನಡೆಸಿದೆವು. ಉಪಾಧ್ಯಾಯರಿಂದ ಶೇಖರವಾದ ಧನದಿಂದ ಕಾಲೇಜಿಗೆ ನೂರು ಸೆಟ್ಟು ತಟ್ಟೆ ಬಟ್ಟಲುಗಳನ್ನು ಉಪಾಧ್ಯಾಯರ ಪರವಾಗಿ ಬಳುವಳಿಯಾಗಿ ಕಾಲೇಜಿಗೆ ದಾನ ಮಾಡಿದೆವು. ಆ ವರ್ಷಾಂತ್ಯದಲ್ಲಿ ನನಗೆ ಅಲ್ಲಿಂದ ಮೈಸೂರಿಗೆ ವರ್ಗವಾಯಿತು. ಅಲ್ಲಿಯ ಕಾಂಟೀನ್ ಆ ವರ್ಷ ಅದ್ದೂರಿಯಾಗಿ ನಡೆದುದನ್ನು ಹೇಗೆ ಮರೆಯಲು ಸಾಧ್ಯ?



# ಪೈಲ್ವಾನ್ ಕೊಪ್ಪಲು ಬಸವಯ್ಯ

೧೯೨೬ನೆಯ ವರ್ಷ ಅಂತ ನೆನಪು. ನಾನು ಮಹಾರಾಜಾ ಕಾಲೇಜಿನಲ್ಲಿ ಪದವಿಯಲ್ಲಿ ವ್ಯಾಸಂಗ ಮಾಡುತ್ತಿದ್ದೆ. ಮೈಸೂರಿನಲ್ಲಿ ವ್ಯಾಯಾಮಕ್ಕೆ ವಿಶೇಷ ಸ್ಥಾನವಿದ್ದ ಕಾಲ. ನಾಡಅರಸರಿಗೆ ಅತ್ಯಂತ ಆಸಕ್ತಿ. ಅವರ ಆಶ್ರಯ ಪ್ರೋತ್ಸಾಹಗಳಿಂದ ಮೈಸೂರಿನಲ್ಲಿ ಪ್ರಾಚೀನಮಾರ್ಗಕ್ಕೆ ಸೇರಿದ ಅನೇಕ ವ್ಯಾಯಾಮ ಶಾಲೆಗಳು (ಗರುಡಿ) ರುತ್ತಿದ್ದವು. ಒಂದೊಂದು ಗರುಡಿಯಲ್ಲಿ ಸಾಯಂಪ್ರಾತಃ ನೂರಾರು ಜನ ವ್ಯಾಯಾಮ ಮಾಡುತ್ತಿದ್ದರು. ಬೆಳಗಿನ ಜಾವ ಕುಕ್ಕರಹಳ್ಳಿಯ ಕೆರೆಯ ಕಡೆಗೆ ಅಂಗಸಾಧನೆಮಾಡುವ ಬೃಹತ್ತಂಡಗಳನ್ನೇ ನೋಡಬಹುದಾಗಿತ್ತು. ಕೆರೆಯ ಸುತ್ತಲೂ ದವಡು ಓಡುವ, ಸಂಚಾರಕ್ಕೆ ಬರುವ ಜನರ ಸಂಖ್ಯೆ ಅಲ್ಪವೇನಾಗಿರಲಿಲ್ಲ. ಒಂದೊಂದು ಗರುಡಿಗೂ ಒಂದೊಂದು ಪ್ರತ್ಯೇಕ ಇತಿಹಾಸವುಂಟು. ಗರುಡಿಯ ಯಜಮಾನರಿಗೆ ಪ್ರಸ್ತಾವ್ ಎಂಬ ಉರ್ದು ಹೆಸರು. ಒಂದು ಗರುಡಿಯ ಉಸ್ತಾದ್ ನಂಜನಗೂಡಿನಿಂದ ಏಳೂವರೆ ಅಡಿ ಕಲ್ಲುಕಂಬವನ್ನು ಕಂಕುಳಿನ ಅಡಿಯಲ್ಲಿ ಹೊತ್ತು ತಂದವನು. ಮತ್ತೊಬ್ಬನು ಮೂರು ಮಣ ತೂಕವಿರುವ ಸಾಂಗ್ರಾಣಿ ಕಲ್ಲನ್ನು (ಕತ್ತಿಗೆ ಹಾಕಿಕೊಂಡು ಸಾಧನ ಮಾಡುವ ಕಲ್ಲಿನ ಬಳೆ) ಯಳಂದೂರಿನಿಂದ ಹೊತ್ತು ತಂದವನು. ಬೇರೊಂದು ಗರುಡಿ ಕತ್ತಿವರಸೆಗೂ ಇನ್ನೊಂದು ಪಂಜುವರಸೆಯಲ್ಲಿ ಮತ್ತೊಂದು ದೊಣ್ಣೆವರಸೆಯಲ್ಲೂ ಪ್ರಸಿದ್ಧವಾದುವು. ಕಂಭಕಟ್ಟುವುದು, ಕೊಂಡದ ಮೇಲೆ ಸಾಧನೆ ಮಾಡುವುದು, ಕೆಲವು ಗರಡಿಗಳ ಪ್ರತ್ಯೇಕ ಮೇಲ್ಮೆ. ಎಲ್ಲ ಗರುಡಿಗಳಲ್ಲಿ ಕುಸ್ತಿಯ ಅಭ್ಯಾಸ. ಅವುಗಳಲ್ಲಿ ಕೆಲವು ಗರುಡಿಗಳಿಗೆ ನೇರವಾದ ಸ್ಪರ್ಧೆ, ಅಸೂಯೆ ಮತ್ತು ದ್ವೇಷದವರೆಗೂ ವ್ಯಾಪಿಸಿರುವುದುಂಟು. ಕುಸ್ತಿ ಜನಗಳ ವಿಶೇಷಪ್ರೀತಿಗೆ ಪಾತ್ರವಾಗಿತ್ತು. ಮೈಸೂರಿನಲ್ಲಿ ಪೈಲ್ವಾನ್‌ಪಾಪ ಮತ್ತು ಪೈಲ್ವಾನ್ ತಿಮ್ಮಯ್ಯರ ಕಾಲ ಕಳೆದಿತ್ತು. ಆಗಿನ ಸುಪ್ರಸಿದ್ಧ ಪೈಲ್ವಾನ್ ಕೊಪ್ಪಲು ಬಸವಯ್ಯ. ಆತನು ಬಹುವಿನೀತ. ೬ ಅಡಿ ಒಂದಂಗಲದ ದೀರ್ಘಕಾಯ. ಕಟ್ಟುಮಸ್ತಾದ ಶರೀರ. ಸಾಧನೆಯಲ್ಲಿಯೂ ಕುಸ್ತಿಯಲ್ಲಿಯೂ ವಿಶೇಷ ನುರಿತವ. ಆದರೆ ನಿರಹಂಕಾರಿ. ಬೀದಿಯಲ್ಲಿ ಹೊರಟರೆ ತಲೆಗೆ ಒಂದು ಕೆಂಪುವಸ್ತ್ರದ ಮುಸುಕನ್ನು ಹಾಕಿಕೊಂಡು

ಯಾರಿಗೂ ತನ್ನ ಮೇಲ್ಮೆಯನ್ನು ಪ್ರದರ್ಶನ ಮಾಡಿಕೊಳ್ಳದ ಸ್ವಭಾವದವನು. ಅವನಿಗೆ ಅನೇಕ ಶ್ರೀಮಂತರು ಆಶ್ರಯದಾತರಾಗಿ ಆತನ ತಯಾರಿಗೆ (ಪುಷ್ಟಿಕರವಾದ ಆಹಾರಕ್ಕೆ) ಸಹಾಯ ಮಾಡುತ್ತಿದ್ದರು. ಆತನ ಕೀರ್ತಿ ಉತ್ತರ ದೇಶದಲ್ಲೆಲ್ಲ ಹರಡಿತು. ಅದಕ್ಕೆ ಹಿಂದಿನ ವರ್ಷ ಪಂಜಾಬ್ ಕಡೆಯಿಂದ ಬಂದ ಘಸ್ಲುಖಾನ್ ಎಂಬ ಪ್ರಖ್ಯಾತ ಪೈಲ್ವಾನನ ಮೇಲೆ ಜೊತೆಯಾಗಿ ಸೋತುಹೋಗಿದ್ದನು. ಅದರಿಂದ ಅವನಿಗೂ ಅವನ ಕಡೆಯವರಿಗೂ ಬಹಳ ಅವಮಾನವಾಗಿ ಬೆಳ್ಳಿಯ ಗದೆಯನ್ನು ಒತ್ತೆ ಇಟ್ಟು ಪುನಃ ಆರು ತಿಂಗಳಲ್ಲಿ ಕುಸ್ತಿಯಾಗಬೇಕೆಂದು ತೀರ್ಮಾನಿಸಿದ್ದರು. ಆ ಅವಧಿ ಆ ವರ್ಷಪ್ರಾಪ್ತವಾಯಿತು. ಮೈಸೂರು ದೇಶದಲ್ಲೆಲ್ಲ ಇದು ಪ್ರಖ್ಯಾತವಾದ ಪಂದ್ಯವೆಂದು ಪರಿಗಣಿಸಲ್ಪಟ್ಟಿತು. ನಮ್ಮಗಳೆಲ್ಲರಿಗೂ ಅತ್ಯಂತ ಕುತೂಹಲ. ಕುಸ್ತಿನಡೆಯಬೇಕಾದ ಸ್ಥಳ ಅಶೋಕ ರಸ್ತೆಯ ಕೊನೆಯಲ್ಲಿರುವ ಈಗಿನ ಮಹಮ್ಮದೀಯ ಅನಾಥಾಲಯ ಪ್ರದೇಶ. ದೊಡ್ಡ ಮಸೀದಿಯ ಎದುರು ಭಾಗದಲ್ಲಿ. ಕಂಟ್ರಾಕ್ಟ್ ೪೦೦೦ ರೂಪಾಯಿಗಳು. ಟಿಕೀಟುಗಳಿಗೆ ನೂಕುನುಗ್ಗಲು. ಜನಬರುತ್ತಲೇ ಇದ್ದಾರೆ. ಕುಸ್ತಿ ಪ್ರಾರಂಭವಾಯಿತು. ೫ ನಿಮಿಷದಲ್ಲಿ ಬಸವಯ್ಯನು ತನ್ನ ಎದುರಾಳಿಯು ಪ್ರದರ್ಶಿಸಿದ `ಏಕಲಾಂಗ್' ಎಂಬ ಪಟ್ಟಿನಿಂದ ಬಹು ಸರಾಗವಾಗಿ ಘಸ್ಲುಖಾನನ್ನು ೨ನೆಯ ಸಲವೂ ಸೋಲಿಸಿಬಿಟ್ಟ. ಪುಷ್ಪಮಾಲಿಕೆಯನ್ನು ಹಾಕಿ ಬಸವಯ್ಯನನ್ನು ಕತ್ತಿನ ಮೇಲೆ ಕೂರಿಸಿಕೊಂಡು ಹೊರಗೆ ಬಂದೇ ಬಿಟ್ಟರು. ಇನ್ನೂ ಟಿಕೀಟುಗಳಿಗಾಗಿ ಕಾದಿದ್ದ ಅನೇಕರಿಗೆ ಆಶಾಭಂಗವಾಯಿತು.

ಇದರಿಂದ ಘಸ್ಲುಖಾನನ ಅನುಯಾಯಿಗಳಿಗೆ ಬಹು ಖೇದವುಂಟಾಯಿತು. ಅವರು ಏನಾದರೂ ಮಾಡಿ ಯಾರಿಂದಲಾದರೂ ಸರಿಯೇ ಬಸವಯ್ಯನನ್ನು ಸೋಲಿಸಿಯೇ ತೀರಬೇಕೆಂದು ನಿಶ್ಚಯಿಸಿ ಹೈದರಾಬಾದಿನಿಂದ ಸುಪ್ರಸಿದ್ಧವಾದ ಜಾನೀ ಪೈಲ್ವಾನೆಂಬುವನನ್ನು ಮೈಸೂರಿಗೆ ಕರೆ ತಂದು ಮೂರು ತಿಂಗಳವಧಿಯಲ್ಲಿ ಕುಸ್ತಿ ಮಾಡಿಸಲು ಬಸವಯ್ಯನಿಗೆ ಜೊತೆ ಕಟ್ಟಿದರು.

ಆಗ ನಾವು ಜಗನ್ಮೋಹನ ಬಂಗಲಿಯ ಉತ್ತರ ಪಾರ್ಶ್ವದಲ್ಲಿದ್ದ ಕಾಲಪ್ಪನ ಗರುಡಿಯಲ್ಲಿ ಸಾಧನೆ ಮಾಡುತ್ತಿದ್ದೆವು. ಮೇಲ್ಕಂಡ ಜಾನೀ ಪೈಲ್ವಾನ್ ತನ್ನ ಇಬ್ಬರು ಅನುಯಾಯಿಗಳೊಡನೆ ಆ ಗರುಡಿಯಲ್ಲಿಯೇ ತಂಗಿದ. ಒಂದೆರಡು ವಾರದಲ್ಲಿ ನಮ್ಮ ಪರಿಚಯವು ನಿಕಟವಾಯಿತು. ನಮ್ಮನ್ನು ಆಗಾಗ ತಮಾಷೆಗಾಗಿ ಗುದ್ದಾಡಿಸುತ್ತಿದ್ದ. ಅವನ ಬಲಕ್ಕೆ ನಾವು ಏತರವರು. ನಮ್ಮೊಡನೆ ಆತ ಕುಸ್ತಿ ಮಾಡುತ್ತಿದ್ದುದು ಕೇವಲ ವಿನೋದಕ್ಕಾಗಿ. ಅಪರೂಪವಾಗಿ ನಮ್ಮೊಡನೆ ಸಾಧನೆ ಮಾಡುತ್ತಿದ್ದುದೂ ಉಂಟು. ಅಂತು ನಮ್ಮ ಸ್ನೇಹ ಹತ್ತಿರದ್ದಾಯಿತು. ಹೀಗಿರುವಾಗ ಒಂದು ದಿನ ನಮ್ಮ ನಾಲ್ವರನ್ನು ಒಂದೊಂದು ದಿನ ಅವನಿಗೆ ತಯಾರಿ (ಉಪಹಾರ) ಕೊಡಿಸಿ ಕೊಡಬೇಕೆಂದು ಕೇಳಿದ. ಆ ಕಾಲದಲ್ಲಿ ನಮಗೇನಾಗಬಹುದು. ಒಂದೆರಡು ರೂಪಾಯಿಗಳಾಗಬಹುದೇ ಎಂದು ಯೋಚಿಸಿ 'ಆಗಲಿ' ಎಂದು ಒಪ್ಪಿಕೊಂಡೆವು. ಮೊದಲನೆಯ ಸರದಿ ನನಗೆ ಬಿದ್ದಿತು. ಸಾಯಂಕಾಲ ಸಾಧನೆಯಾದ ಮೇಲೆ ಪನಸಾರೆ ಅಂಗಡಿಗೆ ಕರೆದುಕೊಂಡು ಹೋದ. `ಏನು ಬೇಕೋ ತೆಗೊಳಪ್ಪ ಎಂದೆ. ಅವನು ತನ್ನ ತೋಳಿನ ಮೇಲಿದ್ದ

ದೊಡ್ಡ ಟವಲನ್ನು ಹಾಸಿ ಅಂಗಡಿಯವನನ್ನು ಕುರಿತು. `ಆದಾಮಣ್ ಬಾದಾಮಿ ದೇವ್ ಎಂದ' ಅಷ್ಟರಲ್ಲೆ ನನಗೆ ಮುಖ ಸ್ವಲ್ಪ ಪೆಚ್ಚಾಯಿತು. ಮುಂದೆ ಏಕ್ ಧಡಿಯಾ ದ್ರಾಕ್ಷಿ ದೇವ್, ಪಕ್ ಪಂಚೇಕ್ ಶರ್ಕರ್ ದೇವ್ ಎಂದ. ನಾನು ಪೂರಾಪೆಚ್ಚೆ ಆದೆ. ಏನು ಮಾಡುವುದು. ಒಪ್ಪಿ ಕರೆದುಕೊಂಡು ಬಂದಿದ್ದೇನೆ. ಆತ್ಮಗೌರವದ ವಿಷಯ. ಅಷ್ಟಕ್ಕೂ ಆಗ ೧೯ ರೂಪಾಯಿ ಆಯಿತು. ಸದ್ದಿಲ್ಲದೆ ಕೊಟ್ಟೆ. ನಾವು ಸ್ನೇಹಿತರೆಲ್ಲ ನಮ್ಮೊಳಗೇ ಮಾತನಾಡಿಕೊಂಡು ಏನು ಮಾಡುತ್ತಾನೆಂದು ನೋಡಲು ಅವನೊಡನೆಯ ಗರುಡಿಯ ಮನೆಗೆ ಬಂದೆವು. ಆತನು ಮನೆಯ ಮುಂದಿನ ಜಗುಲಿಯ ಚಪ್ಪಡಿಯ ಮೇಲೆ ಕುಳಿತು ತನ್ನ ಚೀಲದಿಂದ ಒಂದು ಸುತ್ತಿಗೆಯನ್ನು ತೆಗೆದು ಬಾದಾಮಿಯನ್ನೇ ಒಡೆದ. ತನ್ನ ನೀಳವಾದ ಗ್ಲಾಸಿನಂತಿದ್ದ ಪಾತ್ರೆಯಲ್ಲಿ ನೀರಿನಲ್ಲಿ ನೆನಸಿದ. ಸುಮಾರು ೧೫ ನಿಮಿಷ ನಮ್ಮೊಡನಿದ್ದೂ ಆ ಬಾದಾಮಿಯನ್ನೆಲ್ಲಾ ಚಿಟುಕಿ ಸಿಪ್ಪೆ ಬಿಡಿಸಿ ತಂದಿದ್ದ ದ್ರಾಕ್ಷಿ ಕಲ್ಲುಸಕ್ಕರೆ ಎಲ್ಲವನ್ನು ತನ್ನ ಕಲ್ಲುಕತ್ತಿನಲ್ಲಿ ಚೆನ್ನಾಗಿ ಅರೆದ. ಎರಡು ರಾಗಿ ಮುದ್ದೆಯಷ್ಟು ದಪ್ಪವಾಯಿತು. ಅದನ್ನು ಗ್ಲಾಸಿಗೆ ನೀರು ಸುರಿದು ಅಂಬಲಿಯ ಹಾಗೆ ಮಾಡಿ ೧೦ ನಿಮಿಷದಲ್ಲಿ ಅಷ್ಟನ್ನು ಕುಡಿದೇ ಬಿಟ್ಟ. ನಮಗೆ ಆಶ್ಚರ್ಯವೋ ಆಶ್ಚರ್ಯ. ಮಾರನೆಯ ದಿನ ಬೆಳಗ್ಗೆ ವೇಳೆಗೆ ಏನಾಗಿಬಿಡುತ್ತಾನೋ ಎಂದು ನೋಡುವುದಕ್ಕಾಗಿ ಬೆಳಗಿನ ಜಾವ ಗರುಡಿಗೆ ಬಂದು ನೋಡಿದರೆ ತನ್ನ ಇಬ್ಬರು ಅನುಯಾಯಿಗಳೊಂದಿಗೆ ಗುದ್ದಾಡುತ್ತಿದ್ದ. ನಮಗೆ ಬಹಳ ಸಂತೋಷವಾಯಿತು. ನಮ್ಮ ಸ್ನೇಹಿತರು ಎಚ್ಚರಗೊಂಡರೂ ತಮ್ಮ ಸರದಿಯನ್ನು ತಪ್ಪಿಸಿಕೊಳ್ಳಲಾಗಲಿಲ್ಲ. ನಿಷ್ಕೃಷ್ಟ ಕಾಲದಲ್ಲಿ ಬಸವಯ್ಯನಿಗೂ ಅವನಿಗೂ ಕುಸ್ತಿಯಾಯಿತು. ಅವನು ಸೋತು ಹೋದ. ಮುಂದೆ ಬಸವಯ್ಯನು ಇದೇ ಪ್ರವಾಹದಲ್ಲಿ ಪೈಲ್ವಾನ್ ಉಮ್ಮರುದ್ದಿನ್, ರಾಣಿ ಬೆನ್ನೂರು ನಂಜಯ್ಯನ ಮೇಲೆಯೂ ಕುಸ್ತಿ ಮಾಡಿ ಅವರನ್ನೆಲ್ಲ ಗೆದ್ದ. ವಿಚಾರಿಸಿದ್ದಲ್ಲಿ ಕೊಪ್ಪಲ್ ಬಸವಯ್ಯನಿಗೂ ಇದಕ್ಕೆ ಸಮಾನವಾದ ತಯಾರಿ ಕೊಡುತ್ತಿದ್ದರೆಂದು ತಿಳಿದು ಬಂದಿತು. ಇಂತಹ ಪೈಲ್ವಾನರಲ್ಲಾಗಲೀ ಇಂತಹ ತಯಾರಿಕೆ ತೆಗೆದುಕೊಳ್ಳುವವರನ್ನಾಗಲೀ ಈಗ ನೋಡುವುದು ಅಪರೂಪವಲ್ಲವೇ? ಇದನ್ನು ಎಷ್ಟು ಜನ ನಂಬುತ್ತಾರೆ?



# ದಕ್ಷಿಣ ಕನ್ನಡದಲ್ಲಿ ಹಸ್ತಪ್ರತಿಗಳ ಸಂಗ್ರಹ

ದಕ್ಷಿಣ ಕನ್ನಡವು ಅನೇಕ ರೀತಿಯಿಂದ ಬಹು ಆಕರ್ಷಕವಾಗಿದೆ. ಅಲ್ಲಿಯ ಅದ್ಭುತವಾದ ಪ್ರಕೃತಿ ಸೌಂದರ್ಯ, ದೀರ್ಘವಾದ ಕರಾವಳಿ ಪ್ರದೇಶ, ತೆಂಗಿನ ತೋಪುಗಳು-ಮತ್ಸ್ಯಸಮೃದ್ಧಿ ಫಲವತ್ತಾದ ಅಸಂಖ್ಯಾತವಾದ ತೊರೆಗಳು-ಒಂದೊಂದೂ ಮನಸ್ಸನ್ನು ಸೆಳೆಯ ತಕ್ಕವುಗಳು. ಇವೆಲ್ಲಕ್ಕಿಂತಲೂ ಅಲ್ಲಿಯ ಪವಿತ್ರ ಕ್ಷೇತ್ರಗಳಾದ ಉಡುಪಿ, ಮೂಡಬಿದ್ರೆ, ಕಾರ್ಕಳ, ಧರ್ಮಸ್ಥಳ ಇವುಗಳು ವಿವಿಧ ಧರ್ಮೀಯರನ್ನು ತಮ್ಮಲ್ಲಿಗೆ ಸೆಳೆದುಕೊಳ್ಳುತ್ತವೆ. ಇಲ್ಲಿಯ ಮಾಧ್ವಮಠಗಳಲ್ಲಿಯೂ ಜೈನ ಬಸದಿಗಳಲ್ಲಿಯೂ ಅಪೂರ್ವವಾದ ಕೈಬರಹದ ಗ್ರಂಥಗಳ ಅಪೂರ್ವ ಸಂಗ್ರಹವಿದೆ. ಅವುಗಳ ಪರಿಚಯ ಹೊರಗಿನವರಿಗೆ ಆಗಿಲ್ಲ.

ಇವುಗಳ ಪರಿಚಯವನ್ನು ಮಾಡಿಕೊಂಡು ಆದಷ್ಟು ಅಪೂರ್ವಗ್ರಂಥಗಳನ್ನು ಮೈಸೂರು ಪ್ರಾಚ್ಯಕೋಶಾಗಾರಕ್ಕೆ ಎರವಲಾಗಿ ತರಲು ನಾನು ೧೯೩೬ನೆಯ ವರ್ಷದ ಏಪ್ರಿಲ್ ತಿಂಗಳಿನಲ್ಲಿ ಹಾಸನ ಮತ್ತು ಸಕಲೇಶಪುರ ಮಾರ್ಗವಾಗಿ ಪ್ರಯಾಣ ಮಾಡಿ ಮೊದಲು ಧರ್ಮಸ್ಥಳಕ್ಕೆ ಹೋದೆ. ಅಲ್ಲಿಯ ಪವಿತ್ರ ಶಾಂತ ವಾತಾವರಣ ಬಹು ಹಿತವಾಗಿದ್ದರೂ ಅಲ್ಲಿ ಯಾವ ಕೋಶಸಂಗ್ರಹವೂ ಇರಲಿಲ್ಲ. ಅಲ್ಲಿಂದ ದಾರಿಯಲ್ಲಿ ಗುರುಪುರದ ವೀರಶೈವ ಮಠವನ್ನು ಸಂದರ್ಶಿಸಿ ಅಲ್ಲಿದ್ದ ಕೆಲವು ಅಪೂರ್ವವಾದ ಶರಣರ ವಚನಗಳನ್ನು ಸಂಗ್ರಹಿಸಿಕೊಂಡು ಉಡುಪಿಗೆ ಹೋದೆ. ಅದು ಮಧ್ವಸಿದ್ಧಾಂತದ ಕೇಂದ್ರಸ್ಥಾನ. ಅಲ್ಲಿಯೇ ಮಧ್ವರ ಅಷ್ಟಮಠಗಳೂ ಶ್ರೀ ಕೃಷ್ಣನ ಸನ್ನಿಧಿಯೂ ಇರುವುದು. ಅಷ್ಟಮಠಗಳಲ್ಲಿ ಪ್ರಸಿದ್ಧವಾದುದು ಕಾಣೂರು ಮಠ. ಸ್ಥಳದಲ್ಲಿಯೇ ಇದ್ದ ಇತರ ಮಠಗಳಲ್ಲಿ ವಿಶೇಷವಾದ ಗ್ರಂಥರಾಶಿಯಿರಲಿಲ್ಲ. ಇದ್ದವೆಲ್ಲ ಚಿರಪರಿಚಿತವಾದ ದ್ವೈತಸಿದ್ಧಾಂತದ ಪ್ರಕರಣ ಗ್ರಂಥಗಳು. ಕಾಣೂರು ಮಠ ಮಾತ್ರ ಗ್ರಂಥ ಬಾಹುಳ್ಯದೃಷ್ಟಿಯಿಂದ ಅತಿ ಮುಖ್ಯವಾಗಿತ್ತು. ಅಲ್ಲಿಯ ಯತಿವರ್ಯರು ಎಂಬತ್ತನ್ನು ಮೀರಿದ್ದ ವೃದ್ಧರು. ಜರ್ಝರಿತವಾದ ಶರೀರ. ಅವರ ಆಚಾರನಿಷ್ಠೆ ಅವರ್ಣನೀಯ. ಮಠದಲ್ಲಿದ್ದ ಸುಮಾರು ೭೦೦ ಕೈಬರೆಹದ ಪ್ರತಿಗಳು ಅವರಿಗೆ ವಾಚೋವಿಧೇಯವಾಗಿತ್ತು. ನಮ್ಮ ಕೋಶಾಗಾರದ ಗ್ರಂಥಸೂಚಿಯನ್ನು

ಓದುತ್ತಾ ಹೋದರೆ ಅವರು ತಮ್ಮಲ್ಲಿದ್ದ ಒಂದೊಂದು ಗ್ರಂಥದ ವಿವರಗಳನ್ನು ವೈಶಿಷ್ಟ್ಯವನ್ನು ಧಾರಾಕಾರವಾಗಿ ನಿರೂಪಿಸುತ್ತಿದ್ದರು. ತಮ್ಮ ಗ್ರಂಥಾಗಾರದ ಪ್ರತಿಯೊಂದು ಓಲೆಯ ಪತ್ರದ ಅಧ್ಯಾಯಗಳೂ ಪುಟ ಸಂಖ್ಯೆಗಳೂ ಅವರಿಗೆ ಹೃದ್ಗತವಾಗಿತ್ತು. ಅವರ ಪಾಂಡಿತ್ಯವನ್ನೂ ಜ್ಞಾಪಕ ಶಕ್ತಿಯನ್ನು ನೋಡಿ ನಾನು ಸ್ತಬ್ಧನಾದೆ. ಅವರ ಹೃದಯವೂ ಅಷ್ಟೇ ವೈಶಾಲ್ಯ. ನಮ್ಮಲ್ಲಿಲ್ಲದ ಮೂರು ಕೋಶಗಳನ್ನು ನಮಗೆ ಎರವಲಾಗಿ ಕೊಡಲು ಸ್ವಲ್ಪವೂ ಹಿಂಜರಿಯಲಿಲ್ಲ. ಅವರ ಆತಿಥ್ಯವೇ.

ಅಲ್ಲಿಂದ ನಾನು ಕಾರ್ಕಳಕ್ಕೆ ಪ್ರಯಾಣ ಮಾಡಿದೆ. ಅಲ್ಲಿಯ ಗೊಮ್ಮಟ ಶ್ರವಣ ಬೆಳುಗೊಳದಷ್ಟು ಎತ್ತರವಲ್ಲವಿದ್ದರೂ ಬಹು ಸುಂದರಮೂರ್ತಿ. ಅಲ್ಲಿಯ ಕೆರೆ ಸಾಗರ ಸದೃಶವಾದುದು. ಕಾರ್ಕಳದ ಜೈನ ಮಠ ಪುರಾತನವಾದುದು. ಅಲ್ಲಿಯೂ ಒಂದು ಹಸ್ತಪ್ರತಿಗಳ ಸಂಗ್ರಹವಿದೆ. ೩೦-೪೦ ಓಲೆಯ ಗರಿಯ ಗ್ರಂಥಗಳು. ಎಲ್ಲವೂ ಜೈನ ಸಂಸ್ಕೃತ ಮತ್ತು ಕನ್ನಡ ಕೃತಿಗಳು. ನಮ್ಮ ಕೋಶಾಗಾರದಲ್ಲಿಲ್ಲದವಾವುವೂ ಇರಲಿಲ್ಲ.

ಕಾರ್ಕಳದಿಂದ ಮೂಡಬಿದರಿಗೆ ಪ್ರಯಾಣ ಮಾಡಿದೆ. ಅಲ್ಲಿ ಪರಿಚಿತರಾಗಿದ್ದವರು ಶ್ರೀಯುತರಾದ ಕೆ. ಭುಜಬಲಿ ಶಾಸ್ತ್ರಿಗಳು ಮತ್ತು ಲೋಕನಾಥ ಶಾಸ್ತ್ರಿಗಳು. ಮೊದಲನೆಯವರು ಆಗ ಆ ಊರಿನಲ್ಲಿರಲಿಲ್ಲ. ಉತ್ತರದೇಶದ ಆರಾ ಪಟ್ಟಣದಲ್ಲಿ ಕೋಶಾಗಾರಾಧಿಕಾರಿಗಳಾಗಿದ್ದರು. ಲೋಕನಾಥ ಶಾಸ್ತ್ರಿಗಳು ತಮ್ಮದೇ ಆದ `ಜೈನವಾಣೀವೀರಸಿದ್ಧಾಂತ ಭವನ'ವೆಂಬ ಓಲೆಗರಿಗಳ ಕೋಶಾಗಾರವನ್ನು ನಿರ್ಮಿಸಿಕೊಂಡಿದ್ದರು. ಅಲ್ಲಿಯೂ ನೂರಾರು ತಾಳಪತ್ರಪ್ರತಿಗಳಿದ್ದವು. ಲೋಕನಾಥಶಾಸ್ತ್ರಿಗಳ ಸಹಾಯದಿಂದ ಅಲ್ಲಿಯ ಚಾರುಕೀರ್ತಿ ಸ್ವಾಮಿಗಳ ಶ್ರೀಮಠದಲ್ಲಿಯೇ ಬಿಡಾರ ಮಾಡಿದೆ. ಶ್ರೀ ಮಠದಲ್ಲಿಯೇ ಅಪೂರ್ವವಾದ ಹಸ್ತಲಿಖಿತ ಪ್ರತಿಗಳ ಸಂಗ್ರಹವಿದೆಯೆಂದು ಪ್ರತೀತಿಯಿತ್ತು. ಅದನ್ನು ಶ್ರೀ ಆರ್. ತಾತಾರವರು ಒಂದು ಸಂದರ್ಭದಲ್ಲಿ ವಿಶದಪಡಿಸಿದ್ದರು. ಆ ಗ್ರಂಥರಾಶಿಯನ್ನು ಪರಿಶೀಲಿಸುವುದಕ್ಕಾಗಿಯೇ ಮೂಡಬಿದರೆಗೆ ಹೋಗಿದ್ದರು. ಮಠದ ಸ್ವಾಮಿಗಳು ಬಹು ಉದಾರಿಗಳು. ನನ್ನ ಬಿಡಾರಕ್ಕೆ ಬೇಕಾದ ಸೌಲಭ್ಯಗಳನ್ನು ಕಲ್ಪಿಸಿದ್ದರು. ಮಧ್ಯಾಹ್ನ ವಿರಾಮ ಮಾಡಿಕೊಂಡು ಗ್ರಂಥಸಂಗ್ರಹದ ವಿಷಯವಾಗಿ ವಿಚಾರಮಾಡುವುದಕ್ಕಾಗಿ ಅವರನ್ನು ಸಂದರ್ಶಿಸಿದೆ. ನಮ್ಮ ಸಂಭಾಷಣೆ ಪ್ರಾರಂಭವಾಯಿತು.

ನಾನು ಮೈಸೂರು ಪ್ರಾಚ್ಯಕೋಶಾಗಾರದಿಂದ ಅಪೂರ್ವವಾದ ಹಸ್ತಲಿಖಿತ ಪ್ರತಿಗಳನ್ನು ಸಂಗ್ರಹಿಸಲು ಬಂದಿದ್ದೇನೆ. ನಮ್ಮಲ್ಲಿಲ್ಲದವನ್ನು ನಿಮ್ಮಿಂದ ಎರವಲು ತೆಗೆದುಕೊಂಡು ಹೋಗಿ ನಾವು ಪ್ರತಿ ಮಾಡಿಸಿಕೊಂಡು ನಿಮ್ಮ ಪ್ರತಿಯನ್ನು ಹಿಂತಿರುಗಿಸುತ್ತೇವೆ. ಅಂತಹ ಅಪೂರ್ವ ಗ್ರಂಥಗಳನ್ನು ಮುದ್ರಿಸಲು ಏರ್ಪಾಟು ಮಾಡಿ ಮುದ್ರಿತವಾದ ಆರು ಪ್ರತಿಗಳನ್ನು ನಿಮಗೆ ಕೊಡುತ್ತೇನೆ.

`ಸಂತೋಷ! ಆಗಬಹುದು ಬಹು ಒಳ್ಳೆಯ ಕೆಲಸವನ್ನು ಮಾಡುತ್ತಿದ್ದೀರ'
`ನಿಮ್ಮಲ್ಲಿ ಅಪೂರ್ವ ಭಂಡಾರವಿದೆಯೆಂದು ಕೇಳಿ ನಿಮ್ಮಲ್ಲಿಗೆ ಬಂದಿದ್ದೇನೆ.'
`ಅಯ್ಯೋ ನಮ್ಮಲ್ಲಿ ಯಾವ ಗ್ರಂಥವೂ ಇಲ್ಲವಲ್ಲಾ.'
`ನಿಮ್ಮಲ್ಲಿ ಇದೆಯೆಂದು ವಿದ್ವಾಂಸರು ಹೇಳಿರುವುದನ್ನು ತಿಳಿದು ಬಂದೆನು'.
`ಯಾವುದೋ ಒಂದು ಕಾಲದಲ್ಲಿತ್ತು. ಈಗ ಎಲ್ಲ ನಾಶವಾಗಿದೆ.'
`ಹಾಗೆನ್ನಬೇಡಿ, ಸ್ವಲ್ಪ ದಯಪಿಟ್ಟು ಸಹಾಯಮಾಡಿ. ಲೋಕೋಪಕಾರವಾಗುತ್ತೆ.'
`ಇಲ್ಲ ಖಂಡಿತವಾಗಿಯೂ ನಮ್ಮಲ್ಲಿ ಯಾವ ಕೈಬರಹದ ಪ್ರತಿಯೂ ಇಲ್ಲ.
`ನಮಗೆ ಕೊಡದಿದ್ದರೆ ಬೇಡಿ, ನಿಮ್ಮಲ್ಲಿರುವ ಗ್ರಂಥಗಳ ಪಟ್ಟಿಯನ್ನು ಹೇಳುವಿರಾ.'
`ಗ್ರಂಥಗಳೇ ಇಲ್ಲದಿರುವಾಗ ಪಟ್ಟಿಯೆಲ್ಲಿ ಬಂತು! ನಿಮಗೆ ಬರಿ ಭ್ರಮೆ.'

ನಾನು ಅವರಿಂದ ಸತ್ಯಾಂಶವನ್ನು ಹೊರಡಿಸುವುದಕ್ಕೆ ನನ್ನ ಬುದ್ಧಿಶಕ್ತಿಯನ್ನೆಲ್ಲ ಉಪಯೋಗಿಸಿದೆ. ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ಅವರ ಮೇಲೆ ಪ್ರಭಾವವನ್ನು ಬೀರಬಹುದಾದ ಒಂದು ಉಪಾಯವನ್ನು ಯೋಚಿಸಿದೆ. ಮೂಡಬಿದರೆಯಲ್ಲಿ ಅದುವರೆಗೆ ಜೈನಸಂಸ್ಕೃತಿಯ ವಿಷಯುವಾಗಿ ಸಾರ್ವಜನಿಕ ಉಪನ್ಯಾಸಗಳು ನಡೆದಿರಲಿಲ್ಲ. ಸ್ವಾಮಿಗಳವರೊಡನೆ ಆಲೋಚಿಸಿ ಅವರ ಅಧ್ಯಕ್ಷತೆಯಲ್ಲಿ ಮೂರು ಉಪನ್ಯಾಸಗಳನ್ನು ನಾನು ಕೊಡುವುದೆಂದು ನಿಷ್ಕರ್ಷಿಸಿದೆ. ಮೊದಲನೆಯದಿನ ಪಂಪನ ಆದಿಪುರಾಣ, ಎರಡನೆಯ ದಿನ `ರನ್ನನ ಗದಾಯುದ್ಧ' ಮೂರನೆಯ ದಿನ `ನಷ್ಟವಾದ ಜೈನ ಗ್ರಂಥಗಳು'. ಸ್ವಾಮಿಗಳವರೇ ಮೂರು ದಿನದ ಅಧ್ಯಕ್ಷರು. ಊರಿನ ಎಲ್ಲ ಜೈನ ಬಾಂಧವರಿಗೆ ಆಹ್ವಾನವನ್ನು ನೀಡಲಾಗಿತ್ತು. ಮಠದಲ್ಲಿಯೇ ಉಪನ್ಯಾಸ ಕಾರ್ಯಕ್ರಮ. ಮೊದಲನೆಯ ದಿನ ೩೦-೪೦ ಜನ ಮಾತ್ರ ಹಾಜರಿದ್ದರು. ಮಾರನೆಯ ದಿನ ಒಂದು ನೂರಕ್ಕೇರಿತು. ಮೂರನೆಯ ದಿನ ೨೦೦ ನ್ನು ಮೀರಿತು. ಅನೇಕರಿಗೆ ಜೈನಧರ್ಮದ ವಿಷಯದಲ್ಲಿ ಮತ್ತು ಗ್ರಂಥಗಳಲ್ಲಿ ಬಹು ಆಸಕ್ತಿಯುಂಟಾಯಿತು.

ಕೊನೆಯ ದಿನದ ಉಪನ್ಯಾಸ ಮುಗಿದ ಮೇಲೆ ನಾನು ನನ್ನ ಶಿಬಿರಕ್ಕೆ ಹೋಗಿ ಊಟ ಉಪಚಾರಗಳನ್ನು ಮುಗಿಸಿಕೊಂಡ ಮೇಲೆ ಸುಮಾರು ಹತ್ತು ಗಂಟೆಯ ಸಮಯದಲ್ಲಿ ಸ್ವಾಮಿಗಳು ನನಗೆ ಹೇಳಿಕಳುಹಿಸಿದರು. ಮುಂದಿನ ಸಂಭಾಷಣೆಯು ಪ್ರಾರಂಭವಾಯಿತು.

ಪಂಡಿತರೇ, ಈ ದಿನ ನಿಮ್ಮ ಉಪನ್ಯಾಸ ಕೇಳಿದ ಮೇಲೆ ಅಪೂರ್ವವಾದ ಜೈನ ಗ್ರಂಥಗಳು ಒಂದೆಡೆ ಸೇರಬೇಕೆಂಬ ಅಪೇಕ್ಷೆ ನಮಗೂ ಉಂಟಾಗಿದೆ. ನಮ್ಮಲ್ಲೂ ಒಂದರೆಡು ಗಂಟುಗಳೂ ಇರಬಹುದು. ಅವುಗಳನ್ನು ನೀವು ಮುಟ್ಟದೆ ನೋಡುತ್ತೀರಾ.

ನಾನು ಮುಟ್ಟುವ ಆವಶ್ಯಕತೆಯೇ ಇಲ್ಲ. ಗ್ರಂಥಗಳಾವುವೆಂದು ತಿಳಿದರೆ ಸಾಕು ಎಂದೆ. ಪಕ್ಕದಲ್ಲಿಯೇ ಮಠದ ವಿದ್ವಾಂಸರಾದ ಗಂಗಾಧರ ಶಾಸ್ತ್ರಿಗಳಿದ್ದರು. ಅವರನ್ನು ಕರೆದು "ಮೇಲೆ ಮರದ ಕಪಾಟಿನ ಮೇಲೆ ಒಂದು ಕಟ್ಟು ಓಲೆಯ ಪುಸ್ತಕವಿರಬೇಕಲ್ಲವೆ ಅದನ್ನೂ ತಾ" ಎಂದರು.

ಅವರು ಹೋಗಿ ಒಂದು ಕಟ್ಟನ್ನು ತಂದರು. ಅದನ್ನು ಅವರೇ ಬಿಚ್ಚಿದರು. ಪುಸ್ತಕದಲ್ಲಿ ಹಿಂದಿನ ಕಾಲದ ಅಕ್ಷರಗಳು. ಅವರಿಗೆ ಸರಾಗವಾಗಿ ಓದಲಾಗಲಿಲ್ಲ. ನನ್ನ ಕೈಗೆ ಕೊಡಲು ಬಂದರು. ನಾನು "ಸ್ವಾಮಿ ನಾನು ಮುಟ್ಟುವುದಿಲ್ಲ. ನೀವೇ ಹಿಡಿದುಕೊಳ್ಳಿ" ಎಂದೆ. ಹಾಗೆಯೇ ಓದಿದೆ. ಅದರಲ್ಲಿ `ಧರ್ಮಾಮೃತ, ಪಂಪರಾಮಾಯಣ' ಮತ್ತು `ಜೈನವ್ಯಾಕರಣ' ಮೂರು ಓಲೆಯ ಪುಸ್ತಕಗಳಿದ್ದವು. ಓದಿ ಹೇಳಿದೆ. ಸ್ವಾಮಿಗಳು ಮತ್ತೊಂದನ್ನು ತರಿಸಿದರು. ಅದರಲ್ಲಿ ಐದು ಪುಸ್ತಕಗಳಿದ್ದುವು. ಪುನಃ ಮತ್ತೊಂದು ಬಂತು. ಅದರಲ್ಲಿಯೂ ಮೂರು ಗ್ರಂಥಗಳು ಇದ್ದುವು. ಅವನ್ನೆಲ್ಲ ಓದಿ ಹೇಳಿದೆ. ಕೊನೆಗೆ ನಾನು ಪುಸ್ತಕಗಳನ್ನು ಮುಟ್ಟುವ ಅಧಿಕಾರ ಬಂದಿತು. ರಾತ್ರಿ ೧೨ ಗಂಟೆಯಾಯಿತು. ಸ್ವಾಮಿಗಳಿಗೆ ನನ್ನಲ್ಲಿ ವಿಶ್ವಾಸವುಂಟಾಯಿತು. ತಮ್ಮಲ್ಲಿರುವ ಭಂಡಾರದ ಪ್ರಮಾಣವನ್ನು ವಿವರಿಸಿದರು. ಮಾರನೆಯ ದಿನದಿಂದ ಅದನ್ನು ಗಂಗಾಧರ ಶಾಸ್ತ್ರಿಗಳ ಸಮಕ್ಷಮದಲ್ಲಿ ಪರಾಮರ್ಶಿಸಲು ಅವಕಾಶ ಸಿಕ್ಕಿತು. ಆ ಸಂಗ್ರಹವು ಮಠದ ಮಹಡಿಯ ಮೇಲೆ ವಿಸ್ತಾರವಾದ ಕೊಠಡಿಯಲ್ಲಿ ಶೇಖರಿಸಲಾಗಿತ್ತು. ಸುಮಾರು ಹತ್ತು ಕಪಾಟುಗಳಲ್ಲಿ ೯೪೦ ಓಲೆಯ ಗರಿಯ ಪುಸ್ತಕಗಳಿದ್ದವು. ಎಲ್ಲವೂ ಬಹು ಅಂದವಾದ ವಿವಿಧ ಚಿತ್ರಗಳಿಂದ ಕೂಡಿದ ವೇಷ್ಟನಗಳಲ್ಲಿ ಸುತ್ತಿ ಸೂತ್ರಗಳಿಂದ ಬಂಧಿಸಲ್ಪಟ್ಟು ರಕ್ಷಿತವಾಗಿತ್ತು. ನಾನು ಅಲ್ಲಿ ೧೮ ದಿನಗಳು ಏಕಪ್ರಕಾರವಾಗಿ ಅವನ್ನು ಸಂಶೋಧಿಸಿದೆ. ಅನೇಕ ಪುಸ್ತಕಗಳಲ್ಲಿ ೨-೩ ಗ್ರಂಥಗಳಿದ್ದವು. ಅವನ್ನೆಲ್ಲ ಗುರುತಿಸಿ ಚೀಟಿಗಳನ್ನು ಬರೆದು ಪುಸ್ತಕಗಳ ಕಟ್ಟೆಯ ಮೇಲೆ ಅಂಟಿಸಿ ಮೊದಲನೆಯ ಬಾರಿಗೆ ಆ ಭಂಡಾರದ ಸೂಚಿಯನ್ನು ತಯಾರಿಸಿ ಅದರ ನಕಲೊಂದನ್ನು ಮಠಕ್ಕೆ ಕೊಟ್ಟೆ. ನಮ್ಮ ಕೋಶಾಗರದ ಉಪಯೋಗಕ್ಕೂ ತಂದೆ. ಪುಸ್ತಕಗಳ ಅಸ್ತಿತ್ವವನ್ನೇ ಮೊದಲು ನಿರಾಕರಿಸಿದ ಸ್ವಾಮಿಗಳು ಕೊನೆಗೆ ನಮ್ಮ ಭಂಡಾರದಲ್ಲಿಲ್ಲದ ೬ ಅಪೂರ್ವಗ್ರಂಥಗಳನ್ನು ಎರವಲಾಗಿ ಕೊಟ್ಟರು. ನಾವು ಅದನ್ನು ಪ್ರತಿಮಾಡಿಸಿಕೊಂಡು ಮೂಲಪ್ರತಿಗಳನ್ನು ಅವರಿಗೆ ಹಿಂತಿರುಗಿಸಿದ್ದೇವೆ. ಅವುಗಳಲ್ಲಿ ೨-೩ ನಮ್ಮ ಭಂಡಾರದಿಂದ ಸಂಶೋಧಿತವಾಗಿ ಮುದ್ರಿತವಾಗಿದೆಯೆಂಬುದನ್ನು ತಿಳಿಸಲು ಸಂತೋಷವಾಗುತ್ತದೆ. ದಕ್ಷಿಣಕನ್ನಡದಲ್ಲಿ ವಿದ್ವನ್ಮನೆತನದವರು ತಾಡಓಲೆಯ ಗ್ರಂಥವನ್ನು ರಕ್ಷಿಸುವುದರಲ್ಲಿ ಅತ್ಯಂತ ಎಚ್ಚರಿಕೆಯನ್ನು ವಹಿಸುತ್ತಾರೆ. ಸಾಮಾನ್ಯವಾಗಿ ಅವನ್ನು ಹೊರಗೆ ತೆಗೆಯುವುದು ವರ್ಷಕ್ಕೆ ಒಂದು ಸಲ. ಅವನ್ನು ಹೊರಕ್ಕೆ ತೆಗೆಯುವುದು ಸರಸ್ವತೀ ಪೂಜೆಯ ಕಾಲದಲ್ಲಿ ಮಾತ್ರ. ಬಾಕಿ ಕಾಲದಲ್ಲಿ ಅವುಗಳು ಸುರಕ್ಷಿತವಾಗಿರುವುದಕ್ಕೆ ಅವರು ತೆಗೆದುಕೊಳ್ಳುವ ಕ್ರಮ ಬಹು ಆಶ್ಚರ್ಯಕರ. ಕಲ್ಲಿನ ಕಪಾಟುಗಳಲ್ಲಿ ಒಂದು ಪದರ ಮೆಣಸು ಮತ್ತೊಂದು ಪದರ ಓಲೆಯ ಪುಸ್ತಕಗಳನ್ನು ಜೋಡಿಸಿ ಪುನಃ ಮೆಣಸಿನ ಕಾಳಿನಿಂದ ಆಚ್ಛಾದಿಸಿ ಅವುಗಳ ಮೇಲೆ ಮರದ ಹಲಗೆಗಳನ್ನು ಹೊದಿಸಿ ಅವುಗಳನ್ನು ಹುಳು ಹುಪ್ಪಟೆ ಶೈತ್ಯಗಳಿಂದ ರಕ್ಷಿಸುವ ಕ್ರಮವು ೨-೩ ಸ್ಥಳಗಳಲ್ಲಿ ನಮ್ಮ ಕಣ್ಣಿಗೆ ಬಿದ್ದಿರುವುದು ಶ್ಲಾಘನೀಯವಾಗಿದೆ. ಇಂತಹ ಸಂಗ್ರಹಗಳಿಂದ ಪ್ರತಿಗಳನ್ನು ಹೊರಗೆ ತೆಗೆಸುವುದು ಬಹು ಪ್ರಯಾಸಕರ.

ಮೂಡಬಿದರೆಯಲ್ಲಿ ವಿಶೇಷವಾಗಿ ಗಮನಿಸಬೇಕಾದುದು ಧವಳ ಗ್ರಂಥಗಳ ಸಂರಕ್ಷಣೆ. ಇವು ಬಹು ಭದ್ರವಾದ ಕೋಣೆಯಲ್ಲಿ ಬಂದರಲ್ಲೊಂದರಂತಿರುವ ಏಳೆಂಟು ಪೆಟ್ಟಿಗೆಗಳಲ್ಲಿ ಸಂರಕ್ಷಿಸಲ್ಪಟ್ಟಿವೆ. ಅದನ್ನು ಹೊರಗೆ ತೆಗೆಯುವ ಅವಕಾಶವೇ ಬಹು ಕಡಿಮೆ. ಜೈನ ಬಾಂಧವರು ಅಲ್ಲಿಗೆ ಬಂದಾಗ ಅದನ್ನು ಹೊರಗಿಸಿಂದಲೇ ದರ್ಶನ ಮಾಡಿಕೊಂಡು ಹೋಗುವುದು ವಾಡಿಕೆ. ನಾನು ಅಲ್ಲಿಗೆ ಹೋದಾಗ ಅದೃಷ್ಟವಶಾತ್ ಅಲ್ಲಿಯ ಧರ್ಮದರ್ಶಿಗಳ ವಿಶೇಷ ಕೃಪೆಯಿಂದ ಗ್ರಂಥವನ್ನು ಪ್ರತ್ಯಕ್ಷ ನೋಡುವ ಸೌಲಭ್ಯ ದೊರೆಯಿತು. ಓಲೆಗರಿಗಳ ಗ್ರಂಥಗಳ ದೃಷ್ಟಿಯಿಂದ ಇದಕ್ಕೆ ಒಂದು ವಿಶೇಷ ಸ್ಥಾನವಿದೆ. ಇತರ ಓಲೆಗರಿಗಳ ಗ್ರಂಥದಂತೆ ಇವನ್ನು ಕಬ್ಬಿಣದ ಕಂಟದಿಂದ ಕೊರೆ (ಕಂಡರಿಸಿ)ದುದಲ್ಲ. ಓಲೆಗರಿಯ ಮೇಲೆ ಮಸಿಯಿಂದ ಲಿಖಿತವಾಗಿದೆ. ೧೨ನೆಯ ಶತಮಾನದ ಕನ್ನಡ ಅಕ್ಷರಗಳಲ್ಲಿ ಬರೆದಿದ್ದರೂ ಇಂದಿಗೂ ಹೊಚ್ಚ ಹೊಸದಾಗಿದೆ. ಇದರ ಏಕದೇಶ ಭಾಗ ಮಾತ್ರ ಸೋಲಾಪುರದಲ್ಲಿ ಮುದ್ರಿತವಾಗಿತ್ತು. ಈಗ ಸಂಪೂರ್ಣ ಪ್ರತಿ ಮುದ್ರಿತವಾಗಿ ಪ್ರಕಟವಾಗಿದೆ. ಮೂಡಬಿದರೆಯ ಮಠದ ಪ್ರತಿಗಳು ಬಹು ಪ್ರಾಚೀನ ಕಾಲದಲ್ಲಿ ಲಿಖಿತವಾಗಿರುವುದರಿಂದ ಸಂಶೋಧನಾ ದೃಷ್ಟಿಯಿಂದ ಒಳ್ಳೆಯ ಪಾಠಗಳನ್ನು ನಿಷ್ಕರ್ಷಿಸುವುದಕ್ಕೆ ಬಹಳ ಪ್ರಯೋಜನವಾಗಿದೆ. ಅಲ್ಲದೆ ಲಿಪಿಶಾಸ್ತ್ರದ ಬೆಳವಣಿಗೆಯ ದೃಷ್ಟಿಯಿಂದಲೂ ಇವು ಹೆಚ್ಚು ಬೆಳಕನ್ನು ಬೀರಬಲ್ಲವು. ಇಲ್ಲಿರುವ ವೇಷ್ಟನಗಳು ಪ್ರತ್ಯೇಕ ಅಭ್ಯಾಸಕ್ಕೆ ವಿಷಯವಾಗುತ್ತಿತ್ತು. ಅವುಗಳಲ್ಲಿ ಜೈನಧರ್ಮಗಳಿಗೆ ಸಂಬಂಧಪಟ್ಟ ಸಂದರ್ಭಗಳು ಚಿತ್ರಿತವಾಗಿದೆ. ಅನೇಕ ಗ್ರಂಥಗಳ ಮತ್ತೂ ಅವುಗಳ ಮರದ ಕಟ್ಟೆಗಳ ಮೇಲೆಯೂ ವರ್ಣರಂಜಿತ ಜ್ಯಾಮಿತೀಯ ಮತ್ತು ಧಾರ್ಮಿಕ ಚಿತ್ರಗಳು ಬರೆಯಲ್ಪಟ್ಟಿವೆ. ಇವುಗಳನ್ನು ಪ್ರತ್ಯೇಕ ಛಾಯಾ ಚಿತ್ರಗಳ ಮೂಲಕ ಶೇಖರಿಸಿದರೆ ಬಹು ಬೋಧಪ್ರದವಾಗಿರುತ್ತವೆ. ಇವುಗಳೊಡನೆ ಶ್ರವಣಬೆಳಗೊಳದ ಚಾರುಕೀರ್ತಿಸ್ವಾಮಿ ಮಠದ ಭಂಡಾರದ ಹಸ್ತಲಿಖಿತ ಗ್ರಂಥಗಳನ್ನು ಅಭ್ಯಾಸಮಾಡಿದರೆ ಹೆಚ್ಚು ಪ್ರಯೋಜನವುಂಟು.



# ದೈವೀ ವಿಚಿತ್ರಾಗತಿಃ

೧೯೪೭ನೆಯ ವರ್ಷದ ಮಾರ್ಚ್ ತಿಂಗಳು. ವಿಶ್ವವಿದ್ಯಾನಿಲಯ ವಾರ್ಷಿಕ ಪರೀಕ್ಷೆಗಳು ಪ್ರಾರಂಭವಾಗಿತ್ತು. ಮೂರನೆಯ ದಿನ ಇಂಟರ್ ಮೀಡಿಯಟಿನ ಚರಿತ್ರೆಯ ಪರೀಕ್ಷೆ ನಡೆಯುತ್ತಿತ್ತು. ನಾನು ಮಹಾರಾಜರ ಕಾಲೇಜಿನ ಸೀನಿಯರ್ ಬಿ. ಎ. ಮಂದಿರದಲ್ಲಿ 'ಇನ್ ವಿಜಿಲೇಟರಾಗಿದ್ದೆ. ನನಗೆ ಸಹಾಯವಾಗಿ ಅದಕ್ಕೆ ಹಿಂದಿನ ದಿನ ಕಾರ್ಯಕ್ಕೆ ಹೊಸದಾಗಿ ಸೇರಿದ ಒಬ್ಬ ಸಂಸ್ಕೃತ ಉಪನ್ಯಾಸಕರಿದ್ದರು. ಮಂದಿರದ ಗ್ಯಾಲರಿಯ ಮೇಲ್ಭಾಗದಲ್ಲಿ ಅವರೂ ಕೆಳಭಾಗದಲ್ಲಿ ನಾನು ಇರುತ್ತಿದ್ದೆವು. ಆಗ ನಮ್ಮ ಮುಖ್ಯ ಪರೀಕ್ಷಾ ನಿರ್ವಾಹಕರು (Chief Superintendent) ಡಾ। ತಿರುಮಲಾಚಾರ್ಯರು. ಅವರು ಬಂದು ಪ್ರಶ್ನಪತ್ರಿಕೆಗಳನ್ನು ಹಂಚಿ ಹೋದ ಒಂದು ಗಂಟೆಯ ಕಾಲದವರೆಗೆ ವಿದ್ಯಾರ್ಥಿಗಳು ಶಾಂತವಾಗಿ ಉತ್ತರಿಸಿದ್ದರು. ಸುಮಾರು ಪ್ರಾತಃಕಾಲ ೯ ಗಂಟೆಯ ವೇಳೆಗ ನನ್ನ ಸಹಾಯಕರು ಮೇಲಿಂದ ಮೆಟ್ಟಲುಗಳನ್ನಿಳಿದು ಬಂದು ಸರ್ ಇಲ್ಲಿ ಒಬ್ಬ ಹುಡುಗ `ಕಾಪಿ ಹೊಡೆಯುತ್ತಿದ್ದಾನೆ' ಎಂದು ತಿಳಿಸಿದರು. ತಕ್ಷಣ ಅವನಲ್ಲಿಗೆ ಹೋಗಿ ಸ್ವಲ್ಪ ಗದರಿಸಿ `ಏನೋ ನೀನು ಮಾಡುತ್ತಿರೋದು' ಎಂದು ಆಕ್ಷೇಪಿಸಿದೆ. ಅವನು ತನ್ನ ತಪ್ಪನ್ನು ಒಪ್ಪಿಕೊಳ್ಳದೆ ಎಲ್ಲರಿಗೂ ತಿಳಿಯುವ ಹಾಗೆ ಒಂದು ಹಗರಣವನ್ನೇ ಮಾಡಿದ. ಅವನು ಪ್ರತಿ ಮಾಡುತ್ತಿದ್ದ ಮೂಲಪ್ರತಿಯೂ ಅವನ ಮುಂದುಗಡೆಯೇ ಇತ್ತು. ಅದನ್ನು ಅವನಿಂದ ಬಲಾತ್ಕಾರದಿಂದ ಕಸಿದುಕೊಳ್ಳಲು ಪ್ರಯತ್ನಿಸಿದಾಗ ಅದನ್ನು ಅವನು ಹರಿದು ಹಾಕಿಬಿಟ್ಟ. ಆದರೂ ಆ ಹರಿದ ಕಾಗದ ಚೂರುಗಳನ್ನೆಲ್ಲ ಅವನಿಂದ ಶೇಖರಿಸಿದೆ. ತಕ್ಷಣ ಚೀಫ್ ಸೂಪರಿಂಟೆಂಡೆಂಟರವರಿಗೆ ಹೇಳಿ ಕಳುಹಿಸಿ ಅವರು ಬಂದ ಮೇಲೆ ವಿದ್ಯಾರ್ಥಿಯನ್ನು ಪರೀಕ್ಷಾ ಮಂದಿರದಿಂದ ಹೊರಕ್ಕೆ ಕಳುಹಿಸಿ ಆ ವಿಷಯವನ್ನು ತಕ್ಷಣ ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರಿಗೆ ತಿಳಿಯಪಡಿಸಿ ಮಾರನೆಯ ದಿನದಿಂದ ಅವನನ್ನು ಪರೀಕ್ಷೆಗೆ ಸೇರಿಸಲೇ ಇಲ್ಲ. ಅವನ ಉತ್ತರ ಪತ್ರಿಕೆಯನ್ನು ಪರೀಕ್ಷಕರಿಗೆ ಕಳುಹಿಸುವುದಕ್ಕೆ ಬದಲಾಗಿ ರಿಜಿಸ್ಟ್ರಾರ್ರವರಿಗೆ ವರದಿಯೊಡನೆ ಹರಿದು ಹೋಗಿದ್ದ ಕಾಗದ ಚೂರುಗಳನ್ನು ಒಂದು ಲಕೋಟೆಯಲ್ಲಿ ಹಾಕಿ ಕಳುಹಿಸಲಾಯಿತು.

ಮಾರನೆಯ ದಿನ ವಿಶ್ವವಿದ್ಯಾನಿಲಯದಿಂದ ನಮಗೆ ದುಷ್ಕಾರ್ಯಕ್ಕೆ ಸಾಧಕವಾದ ಕಾಗದವನ್ನು ಹರಿದು ನಾಶಪಡಿಸಲು ಕಾರಣವೇನು? ನಿಮ್ಮ ವಿವರಣೆಯನ್ನು ತಿಳಿಸಿ ಎಂದು ಕೇಳ್ಕೆಯು ಬಂದಿತು. ನೀವು ವಿದ್ಯಾರ್ಥಿಗೆ ಸಹಾಯಮಾಡಲು ಈ ರೀತಿ ನಾಶಪಡಿಸಿದ್ದರಲ್ಲವೇ ಎಂಬುದು. ಅಲ್ಲಿಯ ವಿಚಾರಣೇಯ ವಿಷಯ. ನಾವು ವಿದ್ಯಾರ್ಥಿಗೆ ಸಹಾಯ ಮಾಡುವುದಿದ್ದರೆ ಅವನನ್ನು ಹಿಡಿಯುತ್ತಲೂ ಇರಲಿಲ್ಲ. ಸಾಧನದ ಚೂರುಗಳನ್ನು ಅವನ ಪತ್ರಿಕೆಯನ್ನು ನಿಮಗೆ ಕಳುಹಿಸುತ್ತಲೂ ಇರಲಿಲ್ಲ. ಮಾರನೆಯ ದಿನ ಅವನನ್ನು ಪರೀಕ್ಷೆಯಿಂದ ಹೊರಗಿಡುತ್ತಲೂ ಇರಲಿಲ್ಲ. ಇಲ್ಲಿ ಯಾವ ಅವ್ಯವಹಾರಗಳೂ ನಡೆದಿಲ್ಲ ಎಂದು ವಿವರಣೆಯನ್ನು ಕೊಟ್ಟೆವು.

ಇಲ್ಲಿಯ ರಹಸ್ಯವೇನೆಂದರೆ ವಿಶ್ವವಿದ್ಯಾನಿಯದ ರಿಜಿಸ್ಟ್ರಾರ್ರಿಗೂ ನಮ್ಮ ಚೀಪ್ ಸೂಪರಿಂಟೆಂಡೆಂಟರಿಗೂ ವೈಮನಸ್ಯವಿತ್ತು. ಇವರಿಗೆ ಯಾವ ರೀತಿಯಾದರೂ ತೊಂದರೆಯನ್ನು ಮಾಡಬೇಕೆಂಬುದು ಅಧಿಕಾರಿಗಳ ಇಚ್ಛೆ. ಅದನ್ನು ಮಾಡುವುದಕ್ಕೆ ನನ್ನನ್ನು ಸೆಳೆಯದಿದ್ದರೆ ಸಾಧ್ಯವಿಲ್ಲ. ಅದಕ್ಕಾಗಿ ನನಗೆ ಸಹಾಯಕರಾಗಿದ್ದ ಹಿಂದಿನ ದಿನ ಕೆಲ್ಸಕ್ಕೆ ಹಾಜರಾದ ಉಪನ್ಯಾಸಕರನ್ನು ಬರಮಾಡಿಕೊಂಡು ಅವರಿಗೆ ಭಯೋತ್ಪಾದನೆ ಮಾಡಿ ಅವರಿಂದ ತಮ್ಮ ಒತ್ತಾಯವಿಲ್ಲದಿದ್ದರೆ ಮತ್ತೊಬ್ಬ ಇನ್‌ವಿಜಲೇಟರು ದುಷ್ಕಾರ್ಯದ ವಿಷಯವಾಗಿ ವರದಿ ಮಾಡುತ್ತಿರಲಿಲ್ಲ ಎಂದು ಒಂದು ಹೇಳಿಕೆಯನ್ನು ಬರಮಾಡಿಕೊಂಡು ಬಂದ ಹೊಸ ವಾದವನ್ನು ಹೂಡಿದರು. ವಿದ್ಯಾರ್ಥಿಯ ಒಬ್ಬ ಅಯ್ಯಂಗಾರ್, ಕೊಠಡಿಯ ಇನ್‌ವಿಜಿಲೇಟರ್ ಒಬ್ಬ ಅಯ್ಯಂಗಾರ್. ಚೀಫ್ ಸೂಪರಿಂಟೆಂಡೆಂಟರ್ ಒಬ್ಬ ಅಯ್ಯಂಗಾರ್. ವಿದ್ಯಾರ್ಥಿಗೆ ಸಹಾಯ ಮಾಡುವುದಕ್ಕಾಗಿ ಇನ್‌ವಿಜಿಲೇಟರ್ ಮತ್ತು ಸೂಪರೆಂಟೆಂಡೆಂಟರು ಇಬ್ಬರು ಸೇರಿ ಸಾಕ್ಷ್ಯವನ್ನು ನಾಶಮಾಡಿದ್ದಾರೆ ಎಂಬುದೇ ಆ ವಾದ ಸರಣಿ. ವಾಸ್ತವವಾಗಿ ಆ ವಿದ್ಯಾರ್ಥಿಯು ಯಾರೋ ನಮಗೆ ತಿಳಿಯದು. ನೋಡುವುದು ಭಾರತೀಯ ಕ್ರೈಸ್ತನಂತೆ ಕಾಣುತ್ತಿದ್ದ. ಪ್ರಮಾಣ ಮಾಡಿದರೂ ಅವನು ಅಯ್ಯಂಗಾರ್ ಎಂದು ಹೇಳುವಂತಿರಲಿಲ್ಲ.

ಒಂದು ವಾರದೊಳಗೆ ವಿಶ್ವವಿದ್ಯಾನಿಲಯದ ಕೌನ್ಸಿಲ್ ಸಭೆ ಸೇರಿತು. ನಮ್ಮ ವಿಷಯ ಚರ್ಚೆಗೆ ಬಂದಿತು. ಅಲ್ಲಿ ಬ್ರಹ್ಮಯಜ್ಞದಲ್ಲಿ ನಿಸ್ಸೀಮರಾದ ಮೂರು 'ಜಿ'ಗಳೊಂದಿಗೆ ಒಬ್ಬ ಧರ್ಮಪ್ರವರ್ತಕರೂ ಇದ್ದರು. ವಾಸ್ತವಾಂಶವನ್ನು ಲಕ್ಷಿಸದೇ ಸೂಪರಿಂಟೆಂಡೆಂಟರಿಗೆ ಪ್ರಾಧ್ಯಾಪಕ ಸ್ಥಾನದಿಂದ ಇಳಿಸುವುದೂ ನನಗೆ ಸಂಬಳದಲ್ಲಿ ಎರಡು ಬಡ್ತಿಗಳನ್ನು ನಿಲ್ಲಿಸುವುದು ಅಗತ್ಯವೆಂದು ತೀರ್ಮಾನಿಸಿ ಸರ್ಕಾರಕ್ಕೆ ಮಂಜೂರಾತಿಗೆ ಕಳುಹಿಸುವ ಏರ್ಪಾಟು ಮಾಡಿದರು. ಆದಿನ ಸಾಯಂಕಾಲ ನಾನು ನನ್ನ ಮಿತ್ರರಾದ ರೇಷ್ಮೆ ಕಾರ್ಖಾನೆಯ ವ್ಯವಸ್ಥಾಪಕರ ಮನೆಯಲ್ಲಿ ಮಾತನಾಡುತ್ತಿರುವಾಗ ಧರ್ಮ ವರ್ತಕರು ನಾನಾರೆಂದು ತಿಳಿಯದೆ ನನ್ನ ಎದುರಿಗೆ ನಮಗೆ ವಿಧಿಸಿರುವ ಶಿಕ್ಷೆಯನ್ನು ಬಹು ಹೆಮ್ಮೆಯಿಂದ ತಿಳಿಸಿದರು. ನನಗೆ ಸ್ವಲ್ಪ ಗಾಬರಿಯಾಯಿತು. ನನ್ನ ಪರಿಚಯ ತಿಳಿಯುವುದಕ್ಕೆ ಮುಂಚೆಯೇ ನಾನು ಆ ಜಾಗವನ್ನು ಬಿಟ್ಟು ನೇರವಾಗಿ

ವಿಶ್ವವಿದ್ಯಾನಿಲಯದ ಮ್ಯಾನೇಜರ ಮನೆಗೆ ಹೋಗಿ ಆ ವಿಷಯ ಸತ್ಯಾಂಶವೆಂದು ತಿಳಿದು ಮನೆಗೆ ಹಿಂತಿರುಗಿದೆ.

ಆ ವರ್ಷ ಆಗಸ್ಟ್ ೧೫ರಂದು ಭಾರತಕ್ಕೆ ಸ್ವಾತಂತ್ರ್ಯ ದೊರೆಯಿತು. ಜನಗಳಿಗೆ ಅನೇಕ ರಿಯಾಯಿತಿ ದೊರೆತವು. ಅನೇಕ ಬಂದಿಗಳು ಬಿಡುಗಡೆಯಾದರು. ನಾವು ನಮ್ಮ ವಿಷಯವೂ ಕಠಿಣವಾಗಿ ಎಣಿಸಲ್ಪಡುವುದಿಲ್ಲವೆಂದು ಆ ವಿಷಯದಲ್ಲಿ ಏನೂ ಕಾರ್ಯಭಾರಮಾಡದೆ ಸುಮ್ಮನಾದೆವು. ಸುಮಾರು ಒಂದು ವರ್ಷವಾದ ಮೇಲೆ ೧೯೪೮ಅನೆಯ ಅಕ್ಟೋಬರ್ ತಿಂಗಳಿನಲ್ಲಿ ನಮಗೆ ಸರ್ಕಾರದಿಂದ ಹಿಂದೆ ವಿಶ್ವವಿದ್ಯಾನಿಲಯದಿಂದ ಬಂದಿದ್ದ ಕೇಳ್ವಿಗಳೇ ಬಂದುವು. ನಾವು ವಿವರವಾಗಿ ಹಿಂದಿನಂತೆಯೇ ಸೂಕ್ತ ಸಮಾಧಾನವನ್ನು ಬರೆದು ಕಳುಹಿಸಿದೆವು. ಒಂದೇ ತಿಂಗಳಿನಲ್ಲಿ ಸೂಪರಿಂಟೆಂಡೆಂಟರಿಗೆ ಪ್ರಾಧ್ಯಾಪಕತೆಯಿಂದ ಚ್ಯುತಿಯೂ ನನಗೆ ಎರಡು ಬಡ್ತಿಗಳ ತಡೆಯೂ ಸರ್ಕಾರದಿಂದ ಅಂಗೀಕೃತವಾದ ಆದೇಶವೂ ಕೈ ಸೇರಿತು. ಅದರಂತೆ ಜಾರಿಗೂ ಬಂದಿತು.

ಸೂಪರಿಂಟೆಂಡೆಂಟರೂ ನಾನು ಪುನರ್ವಿಮರ್ಶನೆಗಾಗಿ ಸರ್ಕಾರಕ್ಕೆ ಅರ್ಜಿ ಬರೆದುಕೊಂಡೆವು. ಅವರದು ಸರ್ಕಾರಕ್ಕೆ ರವಾನೆಯಾಯಿತು. ನನ್ನದು ಚಲಿಸಲೇ ಇಲ್ಲ. ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಉಪಕುಲಪತಿಗಳನ್ನು ಪ್ರಾರ್ಥಿಸಿಕೊಂಡೆ. ಏನೂ ಪ್ರಯೋಜನವಾಗಲಿಲ್ಲ. ರಿಜಿಸ್ಟ್ರಾರ್‌ರವರು ಆ ವೇಳೆಗೆ ಒಬ್ಬ ಅಯ್ಯಂಗಾರ್ಯರಾಗಿದ್ದುದರಿಂದ ಅವರೂ ಆ ವಿಷಯದಲ್ಲಿ ತಾಟಸ್ಥ್ಯವನ್ನೇ ತಾಳಿದರು. ಸರ್ಕಾರದಲ್ಲಿ ವಿದ್ಯಾಮಂತ್ರಿಗಳನ್ನೇ ಹೋಗಿ ಭೇಟಿ ಮಾಡಿದೆ. ನಮ್ಮ ವಿಶ್ವವಿದ್ಯಾನಿಲಯದಿಂದ ಶಿಫಾರ್ಸಿಯಾದ ಹೊರ್ತು ಏನು ಮಾಡಲಾಗಲಿಲ್ಲವೆಂದರು.

ಆಗ ಸರ್ಕಾರ ಯಂತ್ರವು ಒಬ್ಬ ಜಗದ್ಗುರುಗಳ ಚಾಲನ ಶಕ್ತಿಯಿಂದ ನಡೆಯುತ್ತಿತ್ತು. ಅವರದು ಅಘಟನಘಟನಾಶಕ್ತಿ. ಅವರ ನೆರವನ್ನು ಪಡೆಯುವುದು ಹೇಗೆ? ಅವರ ಗುರುಗಳೊಬ್ಬರು ಗವಿಸ್ವಾಮಿಗಳೆಂಬುವರೊಬ್ಬರಿದ್ದರು. ಅವರು ಸನ್ಮಾನ್ಯರು. ಗುಣೈಕ ಪಕ್ಷಪಾತಿಗಳು. ನನಗೆ ಚಿರಪರಿಚಿತರು. ನಾನೂ ಅವರೂ ಎರಡು ವರ್ಷಗಳ ಕಾಲ ಶಿವಶರಣರ ವಚನವನ್ನು ಜೊತೆಯಲ್ಲಿ ವ್ಯಾಸಂಗ ಮಾಡಿದುದುಂಟು. ಅವರಲ್ಲಿ ನನ್ನ ವಿಷಯವನ್ನು ಅರಿಕೆ ಮಾಡಿದೆ. ಅವರು ಮಾರನೆಯ ದಿನ ಜಗದ್ಗುರುಗಳನ್ನು ಬರಮಾಡಿಕೊಂಡು ನನ್ನ ಪರಿಚಯಮಾಡಿಸಿ ತಕ್ಷಣ ನನಗೆ ಸೌಕರ್ಯ ಕಲ್ಪಿಸಿಕೊಂಡಬೇಕೆಂದು ಆದೇಶವಿತ್ತರು. ಜಗದ್ಗುರುಗಳ ಸೂಚನೆಯಂತೆ ಮಾರನೆಯ ದಿನ ಪ್ರಾತಃಕಾಲ ಐದು ಗಂಟೆಗೆ ನಾನು ಉಪಕುಲಪತಿಗಳ ನಿವಾಸದ ಬಳಿ ಕಾದಿದ್ದೆ. ಜಗದ್ಗುರುಗಳು ಸಕಾಲಕ್ಕೆ ದಯಮಾಡಿಸಿ ಉಪಕುಲಪತಿಗಳಿಗೆ ಭೇಟಿ ಮಾಡಿಸಿ ನನ್ನ ಫೈಲನ್ನು ಸಿಫಾರ್ಸು ಮಾಡಿ ತಕ್ಷಣ ಕಳುಹಿಸಿಕೊಡಬೇಕೆಂದು ಗವಿಸ್ವಾಮಿಯವರ ಅಪ್ಪಣೆಯಾಗಿದೆಯೆಂದು ತಿಳಿಸಿದರು. ಉತ್ತರ

ಕ್ಷಣದಲ್ಲಿಯ ಕಛೇರಿಯ ಮ್ಯಾನೇಜರಲ್ಲಿಗೆ ಹೇಳಿ ಕಳುಹಿಸಿ ಆ ದಿನವೇ ಸರ್ಕಾರಕ್ಕೆ ಹೇಳಿ ಕಳುಹಿಸಲಾಯಿತು. ಅದು ಸೂಪರಿಂಟೆಂಡೆಂಟರ ಫೈಲಿನೊಂದಿಗೆ ಮಂತ್ರಿ ಸಂಪುಟ ಸದಸ್ಯರ ಅಭಿಪ್ರಾಯಕ್ಕೆ ರವಾನಿಸಲಾಯಿತು.

ಆಗ ಮಂತ್ರಿ ಸಂಪುಟದಲ್ಲಿ ಏಳು ಜನ ಮಂತ್ರಿಗಳಿದ್ದರು. ಫೈಲು ಒಬ್ಬೊಬ್ಬ ಮಂತ್ರಿಗಳಿಕ್ಕೆ ಬಿಟ್ಟಾಗಲೂ ನಾನು ಸೆಕ್ರೆಟರಿಯೇಟ್‌ನಲ್ಲಿದ್ದ ನನ್ನ ಸ್ನೇಹಿತರ ಮೂಲಕ ತಿಳಿದುಕೊಳ್ಳುತ್ತಿದ್ದೆ. ಆರು ಮಂತ್ರಿಗಳ ಸದಭಿಪ್ರಾಯಗಳು ತಿಳಿದ ಮೇಲೆ ನನ್ನ ಧೈರ್ಯಸ್ಥಿರವಾಯಿತು. ಏಳನೆಯವರು ಹಣಕಾಸಿನ ಮಂತ್ರಿಗಳು. ಅವರಿಗೂ ನನಗೂ ಸುಮಾರು ೩೦ ವರ್ಷದಿಂದ ಚಿರಪರಿಚಯ. ಅವರ ಶ್ರೀಮತಿಯವರಿಗೆ ಸುಮಾರು ಮೂರ ವರ್ಷಗಳ ಕಾಲ ಕನ್ನಡ ಪಾಠ ಹೇಳಿದ್ದೆ. ಅವರಿಂದ ನನಗೆ ಸಹಾಯ ದೊರಕುವುದರಲ್ಲಿ ಯಾವ ಸಂದೇಹವಿರಲಿಲ್ಲ.

ಹೀಗಿರುವಲ್ಲಿ ಮೈಸೂರಿನಲ್ಲಿ ಒಂದು ದಿನ ಬೆಳಗ್ಗೆ ೬ ಗಂಟೆಯ ಸಮಯದಲ್ಲಿ ನನ್ನ ಪ್ರಾತಃ ಕಾಲದ ಸಂಚಾರ ಮುಗಿಸಿಕೊಂಡು ಹಿಂತಿರುಗುತ್ತಿದ್ದಾಗ ನನ್ನ ಮನೆಯ ಮುಂದೆ ಸುಮಾರು ೨೫ ವರ್ಷದ ಒಬ್ಬ ಯುವಕ ನಿಂತಿದ್ದ. ಅವನನ್ನು ಹಿಂದೆ ನೋಡಿದ್ದ ಜ್ಞಾಪಕ. ಹೆಚ್ಚು ಪರಿಚಯವಿಲ್ಲ. ಆತನು ನನ್ನನ್ನು ನೋಡಿದ ತಕ್ಷಣ ವಂದಿಸಿ ಸರ್ಕಾರದ ಮುಂದೆ ಇದ್ದ ನನ್ನ ವಿಷಯವನ್ನು ಕುರಿತು ಪ್ರಸ್ತಾಪ ಮಾಡಿದ. ನಾನು ಬಹಳ ಸಂತೋಷದಿಂದ ಅದು ಅನುಕೂಲವಾಯಿತೇ ಎಂದು ಪ್ರಶ್ನಿಸಿದೆ. ಆತನು ಇಲ್ಲಾ ಸಾರ್. ನಾನು ಶಿಕ್ಷಣ ಮಂತ್ರಿಯ ಕಛೇರಿಯಲ್ಲಿ ಅದೇ ಬಾಬಿನಲ್ಲಿ ಕೆಲಸ ಮಾಡುತ್ತಿರುವವನು. ನಿಮ್ಮ ಹಳೆಯ ಶಿಷ್ಯ. ನಿಮ್ಮ ವಿಷಯದಲ್ಲಿ ಆರು ಮಂತ್ರಿಗಳು ಅನುಕೂಲವಾದ ಅಭಿಪ್ರಾಯವನ್ನು ಕೊಟ್ಟಿದ್ದರು. ಏಳನೆಯ ಹಣಕಾಸಿನ ಸಚಿವರು ನಾನು ಅದಕ್ಕೆ ಒಪ್ಪುವುದಿಲ್ಲ ಎಂದು ಬರೆದುಬಿಟ್ಟರು. ನಮ್ಮ ಸಾಹೇಬರೂ ನಾನು ಹಣಕಾಸಿನ ಸಚಿವರ ಅಭಿಪ್ರಾಯವನ್ನು ಅಂಗೀಕಾರ ಮಾಡಿದ್ದೇನೆ. ಅದರಂತೆ ಆದೇಶ ನೀಡಿ ಎಂದು ಬರೆದು ಕಡತವನ್ನು ನನ್ನಲ್ಲಿಗೆ ಸುಮಾರು ಐದುವರೆ ಗಂಟೆಯಲ್ಲಿ ನನಗೆ ಕಳುಹಿಸಿಕೊಟ್ಟರು. ನೋಡಿ ಬಹಳ ದುಃಖವಾಯಿತು. ಏನೂ ಮಾಡಲು ತೋಚದೆ ಸಕಾಲದಲ್ಲಿ ನಿಮಗೆ ತಿಳಿಸಿಬಿಡೋಣ. ಏನಾದರೂ ಮಾಡುವುದಕ್ಕೆ ಸಾಧ್ಯವಿದ್ದರೆ ಮಾಡಲಿ ಎಂದು ಮನೆಗೂ ಹೋಗದೆ ರಾತ್ರಿ ರೈಲಿನಲ್ಲಿ ಈಗ ಬರುತ್ತಿದ್ದೇನೆ. ನನ್ನ ಕರ್ತವ್ಯವನ್ನು ಬಹು ಕಷ್ಟವಾದರೂ ನಡೆಸಿ ಕೃತಕೃತ್ಯನಾಗಿದ್ದೇನೆ. ಇನ್ನು ಬರುತ್ತೇನೆ. ೧೦.೩೦ ಗಂಟೆಗೆ ಆಫೀಸಿಗೆ ಹೋಗಬೇಕು ಎಂದು ಕಾಫಿಯನ್ನು ತೆಗೆದುಕೊಳ್ಳದೇ ಹೊರಟೇ ಬಿಟ್ಟ. ಆಗ ನನಗಾದ ಮನಸ್ಥಿತಿಯನ್ನು ವರ್ಣಿಸಲಸದಳ. ಒಂದು ಕಡೆ ನನಗೆ ವಿರೋಧವಾದ ಸನ್ನಿವೇಶದ ವ್ಯಾಕುಲ, ಮತ್ತೊಂದು ಕಡೆ ಆ ವಿಷಯವನ್ನು ನನಗೆ ತಿಳಿಯಪಡಿಸಲು ಕಾರಣನಾದ ಭಗವಂತನ ಅವ್ಯಾಜವಾದ ಕೃಪಾಸಾಗರ ಆತ್ಮೀಯವಲ್ಲದ ಸಾಮಾನ್ಯ ವಿದ್ಯಾರ್ಥಿಯೊಬ್ಬನು ತನಗೊದಗಬಹುದಾದ ಆಕ್ಷೇಪಗಳನ್ನು ಲೆಕ್ಕಿಸದೆ ಪ್ರಕಟಪಡಿಸಿದ ಗುರುಭಕ್ತಿ. ಕೆಲ ನಿಮಿಷಗಳ ಕಾಲ ಏನೂ ಮಾಡಲು ತೋರದೆ ಸ್ತಬ್ಧನಾದೆ. ಮುಂದೇನೂ ಮಾಡಲು ತೋರದೆ ಇದ್ದ ಹಾಗೆಯೇ ಅವನೊಡನೆ

ಬೆಂಗಳೂರಿಗೆ ಹೋಗಿ ಸುಮಾರು ೧೧ ಗಂಟೆಯ ವೇಳೆಗೆ ಅಠಾರಾ ಕಛೇರಿಗೆ ಹೋದೆ. ಈ ವಿಷಯವನ್ನು ಕುರಿತು ಯಾರನ್ನು ಏನೆಂದು ಕೇಳುವುದು. ವಿದ್ಯಾಶಾಖೆಯ ಸಹಾಯಕ ಕಾರ್ಯದರ್ಶಿಯವರೊಬ್ಬರು ಬಹು ದಿನದಿಂದ ಪರಿಚಯವಿದ್ದರು. ಅವರನ್ನು ಹೋಗಿ ಕೇಳಿದೆ. ಅವರು ಈ ವಿಷಯದಲ್ಲಿ ಈಗ ನನ್ನನ್ನೇನೂ ಕೇಳಬೇಡಿ. ಒಟ್ಟಿನಲ್ಲಿ ನಿಮಗನುಕೂಲವಾಗಿಲ್ಲವೆಂದು ಮಾತ್ರ ಹೇಳಬಲ್ಲೆ ಎಂದು ಕಳುಹಿಸಿಬಿಟ್ಟರು.

ಮುಂದೇನು ಮಾಡುವುದು? ಶಿಕ್ಷಣ ಶಾಖೆಯ ಬಳಿಯೇ ಹೋಗಿ ನೋಡೋಣವೆಂದು ಅಲ್ಲಿಗೆ ಹೋದೆ. ಅಲ್ಲಿ ನನ್ನ ಹಳೆಯ ಸಹಪಾಠಿಗಳೊಬ್ಬರು ಶಿಕ್ಷಣ ಮಂತ್ರಿಗಳ ಬೆರಳಚ್ಚಿನ ಸಹಾಯಕರಿದ್ದರು. ಅವರನ್ನು ಅಕಸ್ಮಾತ್ತಾಗಿ ಕಂಡು ನನ್ನ ವಿಷಯವನ್ನು ತೋಡಿಕೊಂಡೆ. ಅವರು ಈ ಉಪಾಯವೊಂದನ್ನು ಹೇಳಿಕೊಟ್ಟರು. ಶಿಕ್ಷಣ ಸಚಿವರಿಗೆ ಒಬ್ಬ ಆಪ್ತಕಾರ್ಯದರ್ಶಿಯವರು ಈ ಕೊಠಡಿಯಲ್ಲಿದ್ದಾರೆ. ಅವರು ಮೈಸೂರಿನಲ್ಲಿರುವ ಇಂತಹ ಶಾಸ್ತ್ರಿಗಳಿಗೆ ಅತ್ಯಂತ ವಿಧೇಯರಾದ ಶಿಷ್ಯರು. ಅವರು ಮೊನ್ನೆ ಇಲ್ಲಿಗೆ ಬಂದು ಹೋದರು. ಆ ಗುರುತನ್ನು ಹೇಳಿ ಅವರಿಂದ ಕಳುಹಿಸಲ್ಪಟ್ಟವನೆಂದು ತಿಳಿಸಿದರೆ ನಿಮ್ಮ ಕಾರ್ಯ ಬಹು ಸುಲಲಿತವಾಗಿ ಆಗುತ್ತದೆ ಎಂದು ತಿಳಿಸಿದರು. ತಕ್ಷಣ ಅವರಲ್ಲಿಗೆ ಹೋಗಿ ನಾನು ಅವರ ಗುರುಗಳ ಕಡೆಯವನೆಂದು ತಿಳಿಸಿದ ತಕ್ಷಣ ಬಹು ಗೌರವದಿಂದ ಸ್ವಾಗತಿಸಿ ಆಸನವನ್ನಿತ್ತು ಕೇಳಿಸಿದರು. ನನ್ನ ಹೆಸರನ್ನು ಉಚ್ಚರಿಸಿದ ತಕ್ಷಣವೇ ಚೇಳುಕಚ್ಚಿದರ ಹಾಗೆ ಬೆಚ್ಚಿ ಎದ್ದು ಈಗ ಈ ವಿಷಯವನ್ನು ನಿಮಗೆ ತಿಳಿಸಿದವರಾರು ಮೊದಲು ಹೇಳಿ. ನಿನ್ನೆ ಸಾಯಂಕಾಲ ೫ ಗಂಟೆಯಲ್ಲಿ ಫೈಲು ನನ್ನಿಂದ ಸಂಬಂಧಪಟ್ಟ ಶಾಖೆಗೆ ಕಳುಹಿಸಿದ್ದೇನೆ. ಆಗಲೇ ನೀವು ಓಡಿ ಬಂದಿದ್ದು ಹೇಗೆ ಮೊದಲು ತಿಳಿಸಿ. ಈಗಿನ ಮುಖ್ಯ ಕಾರ್ಯದರ್ಶಿಯಾರೆಂದು ತಿಳಿದಿದ್ದಾರೆ. ಹೀಗೆ ವಿಷಯ ಸೋರಿಹೋಗುವುದು ತಿಳಿದರೆ ನಮ್ಮನ್ನು ಚಟ್ನಿ ಮಾಡಿ ಬಿಡುತ್ತಾರೆ. ಹೊರಡಿ ಇಲ್ಲಿಂದ ಮೊದಲು. ನಿಮಗೆ ಆದೇಶ ಬಂದ ಮೇಲೆ ಏನಾದರೂ ಯೋಚಿಸೋಣ. ಏಳಿ ನಿಲ್ಲಬೇಡಿ ಎಂದು ಹೊರದೂಡಿದರು. ನೆರಗು ಸಿಕ್ಕಿದ ಹಾಗೆ ಕಂಡ ಅಲ್ಪಾವಕಾಶವಾಯಿತು. ದೈವೇಚ್ಛೆ. ಕೊನೆಗೆ ಚಿರಪರಿಚಿತರಾದ ಹಣಕಾಸಿನ ಸಚಿವರನ್ನೇ ಕಂಡು ನೋಡಿಬಿಡೋಣವೆಂದು ಅವರ ಕೊಠಡಿಯ ಬಳಿ ಹೋದೆ. ಬಹುಕಾಲ ನನ್ನ ಗುರುತಿನ ಚೀಟಿಯನ್ನು ಕಳುಹಿಸಲು ಅವಕಾಶವೇ ಆಗಲಿಲ್ಲ. ಆ ವೇಳೆಗೆ ಅಲ್ಲಿಗೆ ಶಾಸ್ತ್ರಿಗಳ ಶಿಷ್ಯರು ದಯಮಾಡಿಸಿ ನನ್ನ ಮೇಲೆ ಕಿಡಿ ಕಿಡಿಯಾಗಿ ಅಲ್ಲಿದ್ದ ಧಫೇದಾರನಿಗೆ ನನ್ನ ಚೀಟಿಯನ್ನು ಸಚಿವರಿಗೆ ಕೊಡಬೇಡವೆಂದು ಹೇಳಿ ಹೋದರು. ಮುಂದೇನು? ಪುನಃ ನನ್ನ ಸ್ನೇಹಿತರು ಬೆರಳಚ್ಚು ಪಂಡಿತರಲ್ಲಿಗೆ ಹೋಗಿ ನಡೆದುದನ್ನು ತಿಳಿಸಿದೆ. ಅವರು ಬಾಧಕವಲ್ಲ ನಿಮ್ಮ ಚೀಟಿಯನ್ನು ನನ್ನ ಜವಾನರ ಮೂಲಕ ಕಳುಹಿಸಿ ಕೊಡುತ್ತೇನೆಂದು ಬೇರೆ ಬಾಗಿಲು ಮೂಲಕ ಕಳುಹಿಸಿಕೊಟ್ಟರು. ಸಚಿವರಿಂದ ಆಹ್ವಾನ ಬಂದಿತು. ಮುಂದಿನ ಸಂಭಾಷಣೆ ಪ್ರಾರಂಭವಾಯಿತು. ಏನು ಬಂದಿರಿ, ನಾನು ಇಂತಹವನೆಂದು ತಿಳಿಸಲು ಬಂದೆ. ನನಗೆ ಚೆನ್ನಾಗಿ ಗೊತ್ತಿದೆಯಲ್ಲಾ. ಮರೆತಿರುವಂತೆ ಕಾಣುತ್ತದೆ. ಇಲ್ಲ. ಇಲ್ಲ. ಏನು ನಿಮಗೆ ಇನ್ನೂ ಕೆಲಸ

ಸಿಕ್ಕಲಿಲ್ಲವೇ. ಇದೇಕೆ ಸ್ವಾಮಿ ಹೀಗೆ ಹೇಳುತ್ತೀರಿ. ನಾನು ಕಾಲೇಜು ಉಪನ್ಯಾಸಕನಾಗಿಯೇ ಅಲ್ಲವೇ ನಿಮ್ಮ ಮನೆಗೆ ಪಾಠಹೇಳುವುದಕ್ಕೆ ಬರುತ್ತಿದ್ದುದು. ಹಾಗಾದರೆ ನಿಮ್ಮ ಕೆಲಸಂಖಾಯಂ ಆಗಿಲಿಲವೋ. ಸ್ವಾಮಿ ಗಂಡಸೋಪರಿಸ್ಫೋಟಕಂ, (ಕುರುವಿನಲ್ಲಿ ಕುಪ್ಪೆ ಎದ್ದಿತು ಎನ್ನುವ ಹಾಗೆ ಹೀಗೆ ಪ್ರಶ್ನೆ ಮಾಡುತ್ತೀರಿ. ನಾನು ಬುದ್ಧಿಯಿಲ್ಲದವನು. ನಿಮ್ಮನ್ನು ನೋಡುವುದಕ್ಕೆ ಬಂದುದೇ ತಪ್ಪು. ಈ ಸ್ಥಾನಕ್ಕೆ ಬಂದ ಮೇಲೆ 'ಹಿಂದಿನ ಜ್ಞಾಪಕ ಬರಬೇಕು ಸ್ವಾಮಿ'. 'ಏನ್ರೀ ನೀವು ಹೇಳುವುದು. ಓಹೋ ಆ ಪರೀಕ್ಷೆಯ ದುರಾಚಾರದ ವಿಷಯವೋ.' ಹೌದು ಸ್ವಾಮಿ ಇದಕ್ಕೆ ಇಷ್ಟು ದ್ರಾವಿಡಪ್ರಾಣಾಯಾಮ ಬೇಕೆ? ಆಗಲಿ ಅದು ಫೈಲು ಬರಲಿ ನೋಡೋಣ. ಎಂದರು. ಫೈಲು ಬಂದೂ ಆಗಿದೆ, ತೀರ್ಮಾನವೂ ಆಗಿದೆ. ಹಾಗೆಂದು ನಾನು ಹೇಗೆ ಹೇಳಲಿ. ಸರಿ ಸ್ವಾಮಿ ನಿಮ್ಮ ದಯೆ' ಎಂದು ಹೇಳಿ ಹೊರಬಂದೆ. ಮನಸ್ಸಿಗೆ ಬಹುವ್ಯಥೆಯಾಯಿತು. ಪಕ್ಕದಲ್ಲಿಯೇ ಕಾನೂನು ಮಂತ್ರಿಗಳ ಕೊಠಡಿಯಿತ್ತು. ಅವರು ಹಿಂದಿನಿಂದ ಚಿರಪರಿಚಿತರು. ಅವರನ್ನು ಒಂದು ಸಲ ನೋಡಿ ಬಿಡೋಣ ಎಂದು ಗುರುತಿನ ಚೀಟಿಯನ್ನು ಕಳುಹಿಸಿದೆ. ಅವರು ಬಹು ಆದರದಿಂದ ಬರಮಾಡಿಕೊಂಡು ಬಹು ಆಡಂಬರದ ಮಾತುಗಳನ್ನಾಡಿದರು. ನಾನು ಸ್ವಲ್ಪ ಒರಟಾಗಿಯೇ "ನನಗೆ ಇಂತಹ ಮಾತುಗಳು ಬೇಕಾಗಿಲ್ಲ. ನನ್ನ ದುಃಸ್ಥಿತಿ ಹೀಗಿದೆ. ನಿಮ್ಮ ಕೈಯಲ್ಲಾದ ಸಹಾಯಕ್ಕಾಗಿ ಬೇಡಲು ಬಂದಿದ್ದೇನೆ" ಎಂದೆ. ಅವರು ಅದು ತಾನೇ ಆಯಿತಲ್ಲ. ನಾವೆಲ್ಲ ನಿಮಗೆ ಅನುಕೂಲವಾದ ಅಭಿಪ್ರಾಯವನ್ನು ಕೊಟ್ಟಿದ್ದೇವಲ್ಲ." "ಸರಿ ಕೊಟ್ಟಿದ್ದೀರಿ. ಈಗ ಹೀಗೆ ಆಗಿಬಿಟ್ಟಿದೆ ಸಾಧ್ಯವಾದರೆ ಸಹಾಯ ಮಾಡಿ". ನಾನೇನು ಮಾಡಲು ಸಾಧ್ಯ? ನನ್ನ ಕೈಬಿಟ್ಟು ಹೋಗಿದೆಯಲ್ಲ ಎಂದರು. ಇದೇಕೆ ಹೀಗೆ ಹೇಳುತ್ತಿರಿ ಸ್ವಾಮಿ. ಸಚಿವ ಸಂಪುಟದಲ್ಲಿ ಏಳು ಜನರಲ್ಲಿ ಒಬ್ಬರು ಭಿನ್ನಾಭಿಪ್ರಾಯದ ತೀರ್ಮಾನಕ್ಕೆ ಹೇಗೆ ಬೆಲೆ ಬಂತು. ಇದನ್ನು ಸಚಿವಮಂಡಲದ ವಿಮರ್ಶೆಗೆ ಇಡಬೇಕು ಎಂದು ಸೂಚಿಸುವುದಕ್ಕಾಗುವುದಿಲ್ಲವೇ ಸ್ವಾಮಿ. "ಸರಿಸರಿ ಹಾಗಾಗಬಹುದು. ನಾನು ಆ ಕೆಲಸ ಮಾಡುತ್ತೇನೆ" ಎಂದು ಹೇಳಿ ತಕ್ಷಣ ತಮ್ಮ ಆಪ್ತ ಕಾರ್ಯದರ್ಶಿಯವರನ್ನು ಕರೆದು ಈ ಕಡೆತ ನಾಳೆ ಸಾಯಂಕಾಲದೊಳಗೆ ನನ್ನ ಮೇಜಿನ ಮೇಲೆ ಇರಬೇಕು. ತಕ್ಷಣ ಫೋನ್ ಮಾಡಿ ಎಂದು ಹೇಳಿ ನನ್ನನ್ನು ಕುರಿತು ನಾನು ನಾಳೆ ಮೈಸೂರಿಗೆ ಸರ್ಕಾರಿ ಮುದ್ರಣಾಲಯದ ವಾರ್ಷಿಕೋತ್ಸವದಲ್ಲಿ ಬಂದು ಕಮಲಾಲಯದಲ್ಲಿ ತಂಗುತ್ತೇನೆ ಎಂದು ಹೇಳಿದರು. ಅಷ್ಟೇ ಹೊತ್ತಿಗೆ ಸಾಯಂಕಾಲ ಐದು ಗಂಟೆಯಾಗಿತ್ತು ಸಾಯಂಕಾಲದ ರೈಲಿನಲ್ಲಿ ಹೊರಟು ರಾತ್ರಿ ಒಂಬತ್ತೂ ಗಂಟೆಗೆ ಬಂದು ಸೇರಿ ಮಾರನೆಯ ದಿನ ಅವರು ತಿಳಿಸಿದಂತೆ ಕಮಲಾಲಯದಲ್ಲಿ ಭೇಟಿಮಾಡಿದೆ. ಅವರು ತಮ್ಮ ಕಾರ್ಯದರ್ಶಿಗಳನ್ನು ಕರೆದು 'ಫೈಲ್ ತರಿಸಿದಿರಾ' ಎಂದು ಕೇಳಿದರು. ನಿನ್ನೆಯ ಸಾಯಂಕಾಲವಾದುದರಿಂದ ತರಿಸಲಾಗಲಿಲ್ಲವೆಂದು ತಿಳಿಸಿದರು. ಸಚಿವರು ಕ್ರುದ್ಧರಾಗಿ ನಾಳೆ ಫೈಲು ತಮ್ಮಲ್ಲಿರುವಂತೆ ಏರ್ಪಡಿಸಬೇಕೆಂದು ತಕ್ಷಣ ತಂತಿ ಕಳುಹಿಸಿ ಎಂದು ಹೇಳಿ ನನಗೆ ಅಭಯವನ್ನಿತ್ತು ಕಳುಹಿಸಿದರು.

ಅದಾದ ಮೇಲೆ ತಿಂಗಳು ಗಟ್ಟಲೆ ಕಳೆದವು. ಯಾವ ಸಮಾಚಾರವೂ ತಿಳಿಯಲಿಲ್ಲ. ನವರಾತ್ರಿಯ ಮಧ್ಯೆ ಒಂದು ದಿನ ಕಾನೂನಿನ ಮಂತ್ರಿಗಳ ಧಫೇದಾರ್ ಬಂದು ನಾನು ತಕ್ಷಣ ಅವರನ್ನೂ ಭೇಟಿಮಾಡಬೇಕೆಂದು ತಿಳಿಸಿದರು. ರಾಮಾಯಣ ಪಾರಾಯಣ ಮಾಡುತ್ತಿದ್ದಾಗ ಸಮಾಚಾರ ಬಂದುದರಿಂದ ಶುಭ ಸಮಾಚಾರವಿರಬೇಕೆಂದು ಊಹಿಸಿಕೊಂಡು ಮಧ್ಯಾಹ್ನ ಎರಡುವರೆ ಗಂಟೆಗೆ ಅವರ ಬಿಡಾರದಲ್ಲಿ ಹೋಗಿ ನೋಡಿದೆ. ಅವರು ಬಹಳ ಸಂತೋಷದಿಂದ ಹಿಂದಿನ ದಿನದ ಸಚಿವ ಸಂಪುಟದ ಸಭೆಯಲ್ಲಿ ತಾವು ವಾದ ಮಾಡಿದ್ದರ ಮೇಲೆ ನನ್ನ ಬಡ್ತಿಗಳೆಲ್ಲ ಪುನಃ ಮಂಜೂರಾಗಿದೆಯೆಂದೂ ತಕ್ಷಣ ಆ ಸಂಬಂಧವಾದ ಆದೇಶ ಬರುವುದೆಂದೂ ತಿಳಿಸಿದರು. ಅವರಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸಿದೆ. ಒಂದೆರಡು ದಿನಗಳಲ್ಲಿ ಆದೇಶ ಬಂತು. ನನ್ನಿಂದ ಕಸಿದುಕೊಂಡಿದ್ದ ೨೪೦ ರೂಪಾಯಿಗಳು ಹಿಂದಕ್ಕೆ ಬಂತು. ನನ್ನ ಬಡ್ತಿಗಳು ಹಿಂದಿನಂತೆ ವ್ಯವಸ್ಥಿತವಾಯಿತು. 'ದೈವೀವಿಚಿತ್ರಾ'ಗತಿಃ.



## ಕಾಲೇಜಿನ ವಾರ್ಷಿಕ ಪ್ರವಾಸಗಳು

ನಾನು ಯುವರಾಜ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದಾಗಲೆಲ್ಲ ವಿದ್ಯಾರ್ಥಿಗಳನ್ನು ಪ್ರವಾಸಗಳಿಗೆ ಪ್ರತಿವರ್ಷವೂ ಕರೆದುಹೋಗುತ್ತಿದ್ದುದಂಟು. ಸಾಮಾನ್ಯವಾಗಿ ವರ್ಷ ಪ್ರಾರಂಭದ ಜುಲೈ ಆಗಸ್ಟು ತಿಂಗಳಲ್ಲಿ ತಿರುಮಕೂಡಲು, ಸೋಮನಾಥಪುರ, ಶಿವನಸಮುದ್ರ ಮತ್ತು ತಲಕಾಡುಗಳು ಸಾಮಾನ್ಯವಾಗಿ ಆರಿಸಿಕೊಳ್ಳುತ್ತಿದ್ದ ಸ್ಥಳಗಳು. ಪ್ರವಾಸ ಒಂದು ದಿನದ್ದು ಮಾತ್ರ. ಬೆಳಗ್ಗೆ ೬ ಗಂಟೆಗೆ ಹೊರಟು ರಾತ್ರಿ ೧೦ ಗಂಟೆಗೆ ಮೈಸೂರಿಗೆ ವಾಪಸ್ಸು. ಪ್ರಯಾಣ ಮತ್ತು ಮೂರು ವೇಳೆಯ ಆಹಾರದ ಒಟ್ಟು ಶುಲ್ಕ ಆರು ರೂಪಾಯಿ ಮಾತ್ರ. ಪ್ರಾರಂಭದಲ್ಲಿ ಪ್ರಯಾಣಕ್ಕೆ ಒಂದು ಬಸ್ಸನ್ನು ಏರ್ಪಡಿಸಲಾಗುತ್ತಿತ್ತು. ಹೊರಡುವ ವೇಳೆಗೆ ೨-೩ ಬಸ್ಸುಗಳ ಆವಶ್ಯಕತೆಯೂ ಉಂಟಾಗುತ್ತಿತ್ತು. ನಾವು ಪ್ರವಾಸಕ್ಕೆ ಬೇಕಾದ ಎಲ್ಲ ಸಲಕರಣೆಗಳನ್ನೂ ಜೊತೆಯಲ್ಲಿಯೇ ತೆಗೆದುಕೊಂಡು ಹೋಗುತ್ತಿದ್ದೆವು. ಪ್ರವಾಸದ ದಿನ ಬೆಳಿಗ್ಗೆ ೫ ಗಂಟೆಗೆ ಪ್ರವಾಸಿಗರೆಲ್ಲ ಹೋಗುತ್ತಿದ್ದೆವು. ಪ್ರವಾಸದ ದಿನ ಬೆಳಗ್ಗೆ ೫ ಗಂಟೆಗೆ ಪ್ರವಾಸಿಗರೆಲ್ಲ ಕಾಲೇಜಿನಲ್ಲಿ ಹಾಜರಾಗತಕ್ಕದ್ದು. ೬ ಗಂಟೆಯೊಳಗೆ ಕಾಫಿಯನ್ನು ಮುಗಿಸಿಕೊಂಡು ಒಳ್ಳೆಯ ವಾಹನಗಳಲ್ಲಿ ಏಳು ಗಂಟೆಗೆ ಸುಮಾರು ೨೦ ಮೈಲಿ ದೂರದಲ್ಲಿರುವ ತಿರುಮಕೂಡಲನ್ನು ಸೇರುತ್ತಿದ್ದೆವು. ಪ್ರವಾಹಕಾಲವಾದುದರಿಂದ ಈ ಸ್ಥಳವು ಬಹು ರಮ್ಯವಾಗಿರುತ್ತಿತ್ತು. ಬಲಗಡೆ ಕಪಿಲಾನದಿ. ಎಡಗಡೆ ಕಾವೇರಿ ನದಿ. ಗುಪ್ತಸರಸ್ಸಾದ ಸ್ಫಟಿಕ ಸರೋವರದಿಂದ ತಿರುಮಕೂಡಲಿನ ಸಂಗಮ. ಎದುರು ದಡದಲ್ಲಿ ಬಲಗಡೆಗೆ ಭಾಸ್ಕರಕ್ಷೇತ್ರ ಪಾಲಕನಾದ ಗುಂಜಾನರಸಿಂಹಸ್ವಾಮಿಯವರ ದೇವಸ್ಥಾನ, ಕಾಶಿಗಿಂತ ಗುಲಗಂಜಿ ಕ್ಷೇತ್ರ ಮಹಿಮೆ ಹೆಚ್ಚೆಂದು ತೋರಲು ಕೈಯಲ್ಲಿ ಗುಲಗುಂಜಿಯನ್ನು ಧರಿಸಿದ್ದಾನೆ. ದೇವಸ್ಥಾನದ ಮುಂದುಗಡೆಯ ವಿಜಯನಗರ ಕಾಲದ ದ್ರಾವಿಡ ರೀತಿಯ ಎತ್ತರವಾದ ಗೋಪುರ. ಅದರ ನಾಲ್ಕು ಕಂಬದ ರಮ್ಯವಾದ ಮಂಟಪ, ಸೋಪಾನಗಳು, ಸೊಂಪಾಗಿ ಬೆಳೆದಿರುವ ಅಶ್ವತ್ಥಮರಗಳ ಸಾಲು. ಇಲ್ಲಿಂದಲೆ ಬಹು ರಮ್ಯವಾಗಿ ಕಾಣುತ್ತದೆ. ಕಾವೇರಿಗೆ ದಡದಲ್ಲಿ ಎದುರಿಗೆ ಭಿಕ್ಷೇಶ್ವರನ ದೇವಾಲಯ ಮತ್ತು ಬಹು ಸುಂದರವಾದ ಸೋಪಾನ. ಇದರ ಪಕ್ಕದಲ್ಲಿ ಬಹು ಪ್ರಾಚೀನವಾದ ಪಟ್ಟಣವಿದ್ದಿರಬೇಕು. ಇತ್ತೀಚಿನ

ಉತ್ಖನನಗಳಾದ ಇವರ ಸಮೀಪದಲ್ಲಿ ಆಂಧ್ರ ಶಾತವಾಹನರ ಕಾಲದ ಅವಶೇಷಗಳು ಸಿಕ್ಕಿವೆ. ಅದಕ್ಕೆ ಸ್ವಲ್ಪದರಲ್ಲಿ ಆನಂದೇಶ್ವರ ದೇವಾಲಯವಿದೆ. ಇಲ್ಲಿಯೇ ಆದಿಶಂಕರರು ಪರಕಾಯ ಪ್ರವೇಶ ಮಾಡಿದರೆಂಬ ಪ್ರತೀತಿ. ಸಂಗಮ ದೃಶ್ಯ ಬಹುಸುಂದರ. ಬಹುದೂರ ವಿಸ್ತರಿಸಿರುವ ವಾರಿಪೂರ. ತಿರುಮಕೂಡಿನಲ್ಲಿಯೇ ಸಂಗಮ ಸ್ಥಳದಲ್ಲಿ ಬ್ರಹ್ಮಾಶ್ವತ್ಥ. ಅದರ ಕೆಳಗಡೆ ಅಸಂಖ್ಯಾತ ನಾಗರ ಶಿಲೆಗಳು. ಮುಂಭಾಗದಲ್ಲಿ ವರಸಿದ್ಧಿ ವಿನಾಯಕ. ಊರಿನಲ್ಲಿ ಅಗಸ್ತ್ಯೇಶ್ವರ ಸೋಮೇಶ್ವರ, ಮಾರ್ಕಂಡೇಶ್ವರ, ಹನುಮಂತೇಶ್ವರ ದೇವಾಲಯಗಳು. ಪ್ರಧಾನ ದೇವಾಲಯದ ಮುಂಭಾಗದಲ್ಲಿ ಎತ್ತರವಾದ ಶಿಲಾ ದೀಪಸ್ತಂಭಗಳು. ಮುಂದಿನ ಅಂಕಣದಲ್ಲಿ ಬೃಹದಾಕಾರದ ಶಿಲಾನಂದಿ. ಅಗಸ್ತ್ಯೇಶ್ವರ ಲಿಂಗದ ತಲೆಯ ಮೇಲೆ ಸರ್ವದಾ ಗಂಗೆಯ ವಾಸವಾಗಿದ್ದರೂ ಹೊರಗೆ ಮಾತ್ರ ಹರಿಯುವುದಿಲ್ಲ. ಇವುಗಳನ್ನೆಲ್ಲಾ ನೋಡಿಕೊಂಡಾದ ಮೇಲೆ ಎಲ್ಲರಿಗೂ ಲಘು ಉಪಹಾರ. ಅಲ್ಲಿಂದ ಆರು ಮೈಲಿ ದೂರದಲ್ಲಿರುವ ಸೋಮನಾಥಪುರಕ್ಕೆ ಪ್ರಯಾಣ. ಆ ವೇಳೆಗೆ ಒಂಬತ್ತು ಗಂಟೆಯ ಸಮಯವಾಗುತ್ತಿತ್ತು.

ಸೋಮನಾಥಪುರವು ಕಾವೇರಿಯ ಎಡದಂಡೆಯ ಮೇಲಿದೆ. ಈಗ ಇರುವುದು ಒಂದು ಸಣ್ಣ ಹಳ್ಳಿ. ಹೊಯ್ಸಳ ಮೂರನೆಯ ನರಸಿಂಹನ ದಂಡನಾಯಕನಾದ ಸೋಮದಂಡ ನಾಯಕನು ಕ್ರಿ.ಶ. ೧೨೬೮ರಲ್ಲಿ ವಿದ್ವಾಂಸರಾದ ಬ್ರಾಹ್ಮಣರಿಗೆ ಅಗ್ರಹಾರವಾಗಿ ಏರ್ಪಡಿಸಿ ಅದಕ್ಕೆ ವಿದ್ಯಾನಿಧಿ ಪ್ರಸನ್ನ ಸೋಮನಾಥಪುರವೆಂದು ಹೆಸರಿಟ್ಟರು. ಇಲ್ಲಿಯ ಚೆನ್ನಕೇಶವ ದೇವಾಲಯವು ಈ ಅಗ್ರಹಾರಕ್ಕೆ ಸೇರಿದ ಹಾಗೆ ಕಟ್ಟಿದೆ. ಹೊಯ್ಸಳ ಶಿಲ್ಪದ ಅತ್ಯುತ್ತಮ ಮಾದರಿಯಿದು. ಚಿಕ್ಕದಾದರೂ ಹೆಚ್ಚಿನ ಕುಸುರಿ ಕೆಲಸಗಳಿಂದ ಕೂಡಿದೆ. ಇದೊಂದು ತ್ರಿಕೂಟಾಚಲ. ಅಂದರೆ ಮೂರು ಗರ್ಭಗೃಹಗಳಿಂದ ಕೂಡಿದೆ. ಇದು ೨೧೫ ಅಡಿ ಉದ್ದ ೧೧೨ ಅಡಿ ಅಂಗಳದ ಮಧ್ಯೆ ಕಟ್ಟಲ್ಪಟ್ಟಿದೆ. ಒಳಗಡೆ ಪ್ರಾಕಾರದಲ್ಲಿ ೬೪ ಮಂಟಪಗಳಿವೆ. ಇವೆಲ್ಲ ವಿಗ್ರಹಗಳಿದ್ದವೆಂದು ಮಹಾದ್ವಾರದ ಶಾಸನಗಳಿಂದ ತಿಳಿದುಬರುತ್ತದೆ. ಮಹಾದ್ವಾರವು ಪೂರ್ವ ದಿಕ್ಕಾದರೆ ಮೂರು ಅಡಿ ಎತ್ತರವಿರುವ ದೇವಸ್ಥಾನದ ಮೇಲೆ ದೇವಸ್ಥಾನವನ್ನು ಕಟ್ಟಲಾಗಿದೆ. ಜಗಲಿಯ ಮೂಲೆಗಳಲ್ಲೆಲ್ಲ ಆನೆಯು ಕಟ್ಟಡವನ್ನು ಹೊತ್ತಿರುವಂತಿವೆ. ಮುಖಮಂಟಪ ನವರಂಗ ಮತ್ತು ಮೂರು ಗರ್ಭಗೃಹಗಳಿವೆ. ಮುಖಮಂಟಪದ ಸುತ್ತಲೂ ಜಾಲಂಧ್ರಗಳಿವೆ. ದೇವಸ್ಥಾನದ ಸುತ್ತಲೂ ಮೂರು ಅಡಿಗಳು ಎತ್ತರದ ಚಿತ್ರಪಟ್ಟಿಕೆಗಳಿವೆ. ಇವುಗಳಲ್ಲಿ ರಾವುತರೂ ಬಳ್ಳಿಗಳೂ ಪುರಾಣಕತೆಗಳೂ ಮಕರಗಳೂ ಹಂಸಗಳೂ ಇವೆ. ಚಿತ್ರಪಟ್ಟಿಕೆಗಳ ಮೇಲೆ ದೇವಸ್ಥಾನದ ಸುತ್ತಲೂ ೧೯೪ ವಿಗ್ರಹಗಳಿವೆ. ಇವುಗಳಲ್ಲಿ ೧೧೪ ಹೆಣ್ಣು ವಿಗ್ರಹಗಳು ೮೦ ಗಂಡು ಪ್ರತಿಮೆಗಳು. ಮೂರು [ಗಡಿ]ಗಳ ಮೇಲೆಯೂ ಮೂರು ಗೋಪುರಗಳಿವೆ. ಜಗಲಿಯ ಮೇಲಕ್ಕೆ ದೇವಸ್ಥಾನ ೩೨ ಎತ್ತರವಾಗಿದೆ. ಕಂಬಗಳು ಕನ್ನಡಿಯಂತೆ ಹೊಳೆಯುತ್ತ ಅತಿಸುಂದರವಾಗಿವೆ. ನವರಂಗ ಮತ್ತು ಮುಖಮಂಟಪದಲ್ಲಿ ೧೬ ಭುವನೇಶ್ವರಗಳಿವೆ. ಇವು ಒಂದಂತೆ ಇನ್ನೊಂದಿಲ್ಲ. ಮಧ್ಯದ ಗರ್ಭಗೃಹದಲ್ಲಿ ಕೇಶವ ವಿಗ್ರಹವಿತ್ತೆಂದು ಹೇಳುತ್ತಾರೆ. ಈಗ ಅದು ಇಲ್ಲ. ಸಾಮಾನ್ಯ

ವಿಗ್ರಹವೊಂದನ್ನಿಟ್ಟಿದ್ದಾರೆ. ಉತ್ತರದ ಗರ್ಭಗೃಹದಲ್ಲಿ ಜನಾರ್ಧನ ವಿಗ್ರಹವೂ ದಕ್ಷಿಣದಲ್ಲಿ ವೇಣುಗೋಪಾಲ ವಿಗ್ರಹವೂ ಇದೆ. ಇವು ಸುಮಾರು ೬ ಅಡಿ ಎತ್ತರವಿದೆ. ಹೊರಗಡೆಯ ವಿಗ್ರಹದ ಪೀಠಗಳ ಮೇಲೆ ಅದನ್ನು ರಚಿಸಿದ ಶಿಲ್ಪಿಗಳ ಹೆಸರಿದೆ. ಅವರಲ್ಲಿ ಮಲ್ಲಿ ತಮ್ಮನದೇ ಪ್ರಧಾನವಾದುದು. ಇವಿಷ್ಟನ್ನೂ ನೋಡಲು ಕೊನೆಯ ಪಕ್ಷ ಒಂದು ಗಂಟೆಯಾದರೂ ಬೇಕು. ವಿದ್ಯಾರ್ಥಿಗಳು ಸುಸ್ತಾಗಿರುತ್ತಾರೆ. ಆಗ ಅಲ್ಲಿ ಅವರಿಗೆ ಪೊರಗಡೆಯ ಜಗುಲಿಯ ಮೇಲೆ ಪುಷ್ಟವಾದ ಉಪಹಾರ.

ಅಲ್ಲಿಂದ ಸುಮಾರು ೨೨ ಮೈಲಿ ದೂರವಿರುವ ಶಿವನ ಸಮುದ್ರಕ್ಕೆ ಪ್ರಯಾಣ. ಇಲ್ಲಿಗೆ ಸುಮಾರು ೧೧-೩೦ ಗಂಟೆಗೆ ಹೋಗಿ ಸೇರುವರು. ಇಲ್ಲಿ ಕಾವೇರಿಯೂ ೨ ಭಾಗವಾಗಿ ಕವಲೊಡೆದು ಹರಿದು ಗನನ ಚುಕ್ಕಾ ಮತ್ತು ಬರಚುಕ್ಕಿ ಎಂಬ ಸ್ಥಳಗಳಲ್ಲಿ ಮೇಲುನಾಡಿನಿಂದ ಕೀಳುನಾಡಿಗೆ ಧುಮುಕುತ್ತದೆ. ಮಧ್ಯೆ ಶಿವನಸಮುದ್ರವೆಂಬ ದ್ವೀಪದಲ್ಲಿ ರಂಗನಾಥ ಸ್ವಾಮಿಯವರ ದೇವಸ್ಥಾನವಿದೆ. ಇದಕ್ಕೆ ಮಧ್ಯರಂಗವೆಂದು ಹೆಸರು. ಮೂಲಮೂರ್ತಿ ಚಿಕ್ಕದಾದರೂ ಬಹು ಸುಂದರವಾದುದು. ಇದಕ್ಕೆ ಸ್ವಲ್ಪ ಮೇಲುಗಡೆ ಕಾವೇರಿಗೆ ಅಣೆಕಟ್ಟು ಕಟ್ಟಿ ಅಲ್ಲಿಂದ ದೊಡ್ಡ ಕಾಲುವೆಯ ಮೂಲಕ ನೀರನ್ನು ತೆಗೆದುಕೊಂಡು ಹೋಗಿ ೪೦೦ ಅಡಿ ಉದ್ದವಿರುವ ಕೊಳವೆಗಳ ಮೂಲಕ ನೀರನ್ನು ಕೆಳಗಿಳಿಸಿ ವಿದ್ಯುದುತ್ಪಾದನೆ ಮಾಡಿದ್ದಾರೆ. ಇದು ಮೈಸೂರ್ ದಿವಾನರಾಗಿದ್ದ ಸರ್ ಕೆ. ಶೇಷಾದ್ರಿ ಅಯ್ಯರ್ ಕಾಲದಲ್ಲಿ ಪ್ರಾರಂಭವಾಗಿ (೧೮೯೨ರಲ್ಲಿ) ವಾಣೀವಿಲಾಸ ಸನ್ನಿಧಾನದವರ ಕಾಲದಲ್ಲಿ ಪೂರ್ಣಗೊಂಡಿತು. ಇಲ್ಲಿಂದ ಕೋಲಾರದ ಚಿನ್ನದ ಗಣಿಗೂ ಮುಂದೆ ೧೯೦೫ರಲ್ಲಿ ಬೆಂಗಳೂರಿಗೂ ವಿದ್ಯುತ್ ಸರಬರಾಜು ಮಾಡುವ ಕಾರ್ಯ ಆರಂಭವಾಯಿತು. ಭಾರತದಲ್ಲಿ ವಿದ್ಯುತ್ ಪಡೆದ ನಗರಗಳಲ್ಲಿ ಬೆಂಗಳೂರೇ ಮೊದಲನೆಯದಾಯಿತು. ಇದು ಭಾರತದಲ್ಲೇ ಅತ್ಯಂತ ಉದ್ದವಾದ ಪ್ರಥಮ ವಿದ್ಯುದ್ವಾಹಕ ಸರಣಿಯಾಯಿತು.

ವಿದ್ಯಾರ್ಥಿಗಳು ಈ ಕಟ್ಟೆಯಿಂದ ಮುಂದೆ ವಿದ್ಯುದಾಗರದ ಕಡೆಗೆ ನಾಲೆಯ ಪಕ್ಕದಲ್ಲಿಯೇ ಮುಂದೆ ಸಾಗಿದರೆ ಬಲಗಡೆ ಗಗನ ಚುಕ್ಕಿಯ ದೃಶ್ಯ ಕಣ್ಣಿಗೆ ಬೀಳುತ್ತದೆ. ಅಲ್ಲಿ ಇಳಿದು ಸುಮಾರು ಅರ್ಧ ಮೈಲಿ ನಡೆದು ಜಲಪಾತದ ಎದುರಿಗೆ ನಿಲ್ಲುತ್ತಾರೆ. ಪ್ರವಾಹ ಕಾಲವಾದುದರಿಂದ ತುಂಬಿ ಬೀಳುವ ನಾಲ್ಕು ಭಾಗದ ಜಲಪಾತವು ಅತಿ ರಮಣೀಯವಾಗಿರುತ್ತದೆ. ಅಲ್ಲಿಂದ ಬಿಟ್ಟು ತೆರಳಲು ಮನಸ್ಸೇ ಬರುವುದಿಲ್ಲ. ಬಹು ಬಲಾತ್ಕಾರವಾಗಿ ಕಾಲು ಕಿತ್ತು ಬಸ್ ಹತ್ತಿ ಸುಮಾರು ಒಂದು ಗಂಟೆಯ ವೇಳೆಗೆ ವಿದ್ಯುದಾಗರ (ಬ್ಲಫ್)ದ ಹತ್ತಿರಕ್ಕೆ ಬರುತ್ತಾರೆ. ವಿದ್ಯಾರ್ಥಿಗಳೆಲ್ಲ ತೀರ ಬಳಲಿರುತ್ತಾರೆ. ಕಛೇರಿಯ ಮುಂಚೆ ವಿಸ್ತಾರವಾದ ತೋಟ. ಅದರ ಅಂಗಳದಲ್ಲಿ ವಿದ್ಯಾರ್ಥಿಗಳೆಲ್ಲ ವಿಶ್ರಾಂತಿಗೊಂಡು ಸೊಗಸಾದ ಚೊಕ್ಕ ಭೋಜನವನ್ನು ಕಂಠಪೂರ್ತಿ ಸೇವಿಸುತ್ತಾರೆ. ಒಂದು ಗಂಟೆಯ ಕಾಲ ವಿಶ್ರಾಂತಿ. ಸುಮಾರು ಮೂರು ಗಂಟೆಯ ವೇಳೆಗೆ ಪುನಃ ೪೦೦ ಅಡಿಯ ಕೆಳಗಿರುವ ವಿದ್ಯುದಾಗರಕ್ಕೆ ಪ್ರಯಾಣ. ಅಲ್ಲಿಗೆ ಇಳಿದು

ಹೋಗುವುದಕ್ಕೆ ಟ್ರಾಲಿಯ ಮೆಟ್ಟಿಲುಗಳೂ ಇವೆ. ಟ್ರಾಲಿಯಲ್ಲಿ ಸುಮಾರು ೩೦-೪೦ ಜನ ಪ್ರಯಾಣ ಮಾಡಬಹುದು. ಈ ಪ್ರಯಾಣ ಬಹಳ ಆನಂದಕರವಾಗಿರುತ್ತದೆ. ಕೆಳಗೆ ವಿದ್ಯುದಾಗರದಲ್ಲಿ ನಾಲ್ಕಾರು ಡೈನಮೊಗಳು ಏಕಕಾಲದಲ್ಲಿ ಕೆಲಸ ಮಾಡಿರುತ್ತವೆ. ಡೈನಮೊದಿಂದ ಹೊರಗೆ ಬಂದ ನೀರೆಲ್ಲ ಪಕ್ಕದಲ್ಲಿಯೇ ಇರುವ ಕಾವೇರಿಯ ಯಥಾವತ್ತಾದ ಕಣಿವೆ ಕೆಳಗೆ ಇಳಿದಿದ್ದ ನದೀ ಪಾತ್ರಕ್ಕೆ ಸೇರುವುದು. ಅಲ್ಲಿಯ ಅಧಿಕಾರಿಗಳಿಂದ ಯಂತ್ರಗಳ ಕಾರ್ಯಗಳನ್ನು ಪರಿಚಯ ಮಾಡಿಕೊಂಡು ವಿದ್ಯಾರ್ಥಿಗಳು ಟ್ರಾಲಿಯ ಮೂಲಕ ಮೇಲಕ್ಕೆ ಬರುತ್ತಾರೆ. ಅಷ್ಟು ಹೊತ್ತಿಗೆ ನಾಲ್ಕೂವರೆ ಗಂಟೆಯಾಗಿರುತ್ತದೆ. ಕಾಫಿ ಸಿದ್ಧವಾಗಿರುತ್ತದೆ. ಅದನ್ನು ಮುಗಿಸಿಕೊಂಡು ಬಹುವೇಗವಾಗಿ ವಿದ್ಯಾರ್ಥಿ ವೃಂದವು ಸುಮಾರು ೨೦ ಮೈಲಿ ಇರುವ ತಲಕಾಡಿಗೆ ಬಸ್ಸಿನಲ್ಲಿ ಪ್ರಯಾಣ ಮಾಡುತ್ತಾರೆ. ಅದನ್ನು ಸೇರುವುದು ಸುಮಾರು ೬ ಗಂಟೆಯಾಗುತ್ತದೆ.

ಇತಿಹಾಸದ ಪ್ರಕಾರ ತಲಕಾಡು ಗಂಗರ ರಾಜಧಾನಿ. ಇದನ್ನು ೧೧೦೪ರಲ್ಲಿ ಹೊಯ್ಸಳ ವಿಷ್ಣುವರ್ಧನನು ಗಂಗರನ್ನು ತನ್ನ ಸ್ವಾಧೀನಪಡಿಸಿಕೊಂಡನು. ಇದು ಕಾವೇರಿಯ ಎಡ ದಡದ ಮೇಲಿದೆ. ತಲ ಮತ್ತು ಕಾಡ ಎಂಬಿಬ್ಬರಿಗೆ ಇಲ್ಲಿ ಮೋಕ್ಷ ದೊರಕಿದುದರಿಂದ ಇದಕ್ಕೆ ಈ ಹೆಸರು ಬಂದಿದೆಯೆಂಬುದು ಸ್ಥಳ ಪುರಾಣದಿಂದ ತಿಳಿದು ಬಂದಿರುವ ಅಂಶ. ಈ ಊರಿಗೆ ಸಂಸ್ಕೃತದಲ್ಲಿ ತಲಕನ ಸ್ವರವೆಂದು ಹೆಸರು. ಚೋಳರು ೧೧ನೆಯ ಶತಮಾನದಲ್ಲಿ ಗಂಗವನ್ನು ಜಯಿಸಿ ಇದಕ್ಕೆ ರಾಜರಾಜ ಪುರವೆಂದು ನಾಮಕರಣ ಮಾಡಿದರು. ಒಂದು ಶತಮಾನದವಾದ ಮೇಲೆ ವಿಷ್ಣುವರ್ಧನನನ್ನು ಜಯಿಸಿದನು. ೧೪ನೆಯ ಶತಮಾನದಲ್ಲಿ ವಿಜಯನಗರದ ಸಾಮಂತರ ಕೈವಶವಾಯಿತು. ೧೬೬೪ರಲ್ಲಿ ಶ್ರೀರಂಗ ಪಟ್ಟಣ ಶ್ರೀರಂಗರಾಯನ ಹೆಂಡತಿ ಅಲಮೇಲಮ್ಮನು ತನ್ನ ಒಡೆಯನೊಡನೆ ಇದರ ಸಮೀಪದಲ್ಲಿರುವ ಮಾಲಿಂಗಿಯ ಹತ್ತಿರ ಕಾವೇರಿಯಲ್ಲಿ ಬಿದ್ದಳೆಂದು ಪ್ರತೀತಿ. ಮರಳಿನೊಡನೆ ೩೬ ದೇವಾಲಯಗಳು ಮುಚ್ಚಿಹೋಗಿವೆ ಎಂದು ಹೇಳುತ್ತಾರೆ. ಈ ಭಾಗವು ಕಾವೇರಿಯ ತಿರುವಿನಲ್ಲಿ ತಂದೆರಚುವ ಮರಳಿನಿಂದ ಮುಚ್ಚಿ ಹೋಗಿವೆಯೆಂದು ಹೇಳುತ್ತಾರೆ. ಈ ಮರಳಿನಲ್ಲಿರುವ ವೈದ್ಯೇಶ್ವರ ಗೋಕರ್ಣೇಶ್ವರ ಮರಳೇಶ್ವರ ಪಾತಾಳೇಶ್ವರ ಮತ್ತು ಮುಡುಕತೊರೆಯ ಮಲ್ಲಿಕಾರ್ಜುನ ದೇವಾಲಯಗಳಲ್ಲಿ ಹನ್ನೆರಡು ವರ್ಷಗಳಿಗೊಂದು ಸಲ ಪಂಚಲಿಂಗ ದರ್ಶನವಾಗುತ್ತದೆ. ಇಲ್ಲಿಯ ಮರಳದಿಣ್ಣೆ ಬಹು ಆಕರ್ಷಕ. ಇವುಗಳ ಮೇಲೆ ಗೇರುಗಿಡಗಳನ್ನು ನೆಟ್ಟು ಮರಳು ಹರಡುವುದನ್ನು ತಪ್ಪಿಸಿದ್ದಾರೆ. ಈಶ್ವರ ದೇವಾಲಯಗಳನ್ನು ಕೀರ್ತಿನಾರಾಯಣಸ್ವಾಮಿ ದೇವಾಲಯವನ್ನು ಮರಳಿನಿಂದ ಬಿಡಿಸಿದ್ದಾರೆ. ವೈದ್ಯೇಶ್ವರ ಮತ್ತು ಕೀರ್ತಿನಾರಾಯಣ ದೇವಾಲಯಗಳು ಆಕರ್ಷಕವಾಗಿವೆ. ಕೀರ್ತಿನಾರಾಯಣ ದೇವಾಲಯ ೧೧೧೭ರಲ್ಲಿ ವಿಷ್ಣುವರ್ಧನನಿಂದ ಚೋಳರ ಮೇಲೆ ತಾನು ಪಡೆದ ಜಯದ ಸ್ಮಾರವಾಗಿ ಕಟ್ಟಿದುದು. ಬೆಳದಿಂಗಳ ರಾತ್ರಿಯಲ್ಲಿ ಈ ಸನ್ನಿವೇಶಗಳು ಬಹು ಆಕರ್ಷಕವಾಗಿರುತ್ತವೆ. ಪ್ರವಾಸಿಗರೆಲ್ಲ ಇಲ್ಲೆಲ್ಲ ಅಡ್ಡಾಡಿ ತಂದಿರುವ ಹಣ್ಣು ಹಂಪಲು ಪೆಪ್ಪರ್‌ಮೆಂಟ್ ಮೊದಲಾದುವನ್ನು ಭುಂಜಿಸಿ ಸುಮಾರು ೮ ಗಂಟೆಗೆ ಹೊರಟು ಹತ್ತೂವರೆ

ಗಂಟೆಗೆ ಮೈಸೂರಿಗೆ ಬಂದು ಸೇರುತ್ತಾರೆ. ಪ್ರವಾಸದಿಂದ ಉಂಟಾದ ಆನಂದ, ಮೈತ್ರಿ, ಮನಶ್ಶಾಂತಿಯನ್ನು ಕುರಿತು ಒಂದು ವಾರದವರೆಗಾದರೂ ಜ್ಞಾಪಿಸಿಕೊಂಡು ಮೆಲುಕು ಹಾಕುತ್ತಿರುತ್ತಾರೆ. ಕೆಲವರು ತಮ್ಮ ಪ್ರವಾಸವನ್ನು ಕುರಿತು ವಿವಿಧ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದಿರುವುದುಂಟು. ಇಂತಹವುಗಳ ಅನುಭವವನ್ನು ಕುರಿತು ಅಂದಿನವರು ಈಗಲೂ ಆನಂದಿಸುತ್ತಾರೆ. ವಿದ್ಯಾಭ್ಯಾಸ ಕ್ರಮದಲ್ಲಿ ಸುವ್ಯವಸ್ಥಿತವಾಗಿ ಏರ್ಪಡಿಸಿದ ಪ್ರವಾಸಗಳ ಬೆಲೆಯೆಷ್ಟೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕೆ?





# ಆಯುಸ್ಸು ಗಟ್ಟಿಯಾಗಿದ್ದರೆ ಮೃತ್ಯು ಏನು ಮಾಡೀತು?

ಸುಮಾರು ೪೫ ವರ್ಷಗಳ ಹಿಂದಿನ ಮಾತು. ಒಂದು ವರ್ಷ ಜ್ಯೇಷ್ಠ ಮಾಸ. ನಾನು ನಮ್ಮೂರಿನಿಂದ ಕಾನಕಾನಹಳ್ಳಿಗೆ (ಈಗಿನ ಕನಕಪುರ) ಒಂದು ಮದುವೆಗೆ ಹೋದೆ. ಕಾರಣಾಂತರದಿಂದ ಮದುವೆ ಎರಡು ದಿನ ಮುಂದಕ್ಕೆ ಹಾಕಲಾಯಿತು. ಮದುವೆಯ ಮನೆಯವರು ಆಪ್ತಬಂಧುಗಳು. ಮದುವೆಯ ಸಂಬಂಧವಾಗಿ ಒಂದು ಆವಶ್ಯಕವಾದ ಪದಾರ್ಥವನ್ನು ತರಲು ಬೆಂಗಳೂರಿಗೆ ಹೋಗಿ ಬರಬೇಕಾಯಿತು. ಈಗಿನ ಹಾಗೆ ಕಾನಕಾನಹಳ್ಳಿಯಿಂದ ಬೆಂಗಳೂರಿಗೆ ನೇರವಾಗಿ ಹೋಗುವುದಕ್ಕೆ ವಾಹನ ಸೌಲಭ್ಯವಿರಲಿಲ್ಲ. ಕಾನಕಾನಹಳ್ಳಿಯಿಂದ ಕ್ಲೋಸ್‌ಪೇಟೆಗೆ (ಈಗಿನ ರಾಮನಗರ) ಹೋಗಿ ಅಲ್ಲಿಂದ ಬೆಂಗಳೂರಿಗೆ ಹೋಗಿ ಪುನಃ ಹಾಗೆಯೇ ಹಿಂದಿರುಗಬೇಕಾಗಿತ್ತು. ಆದುದರಿಂದ ನಾನು ಬೈಸಿಕಲ್ಲಿನಲ್ಲಿ ನೇರ ರಸ್ತೆಯಲ್ಲಿ ಬೆಂಗಳೂರಿಗೆ ಹೋಗಿ ಬರುವುದೆಂದು ನಿಷ್ಕರ್ಷೆಯಾಯಿತು. ಬೆಂಗಳೂರಿಗೂ ಕಾನಕಾನಹಳ್ಳಿಗೂ ಸುಮಾರು ೩೫ ಮೈಲಿಗಳ ದೂರ.

ಮಧ್ಯಾಹ್ನ ಮೂರು ಗಂಟೆ ಸಮಯಕ್ಕೆ ಕಾನಕಾನಹಳ್ಳಿಯನ್ನು ಬಿಟ್ಟು ವೇಗವಾಗಿಯೂ ಹೋದೆ. ಸುಮಾರು ಹತ್ತು ಹನ್ನೆರಡು ಮೈಲಿಗಳ ದೂರ ಹೋಗಿರಬಹುದು. ಇದ್ದಕ್ಕಿದ್ದ ಹಾಗೆ ಪಟಪಟನೆ ಮಳೆ ಪ್ರಾರಂಭವಾಯಿತು. ಮುಂದೆ ಸಾಗುವಂತಿರಲಿಲ್ಲ. ಪಕ್ಕದಲ್ಲಿರುವ ಒಂದು ಆಲದ ಮರದ ಕೆಳಗೆ ನಿಂತುಕೊಳ್ಳೋಣವೆಂದು ಅಲ್ಲಿಗೆ ಹೋದೆ. ಅದು ರಸ್ತೆಯ ಪಕ್ಕದ ಭಾರಿ ಮರ. ಆಗಲೇ ಅದರ ಕೆಳಗೆ ಒಬ್ಬ ಮುದುಕ, ೨-೩ ಹೆಣ್ಣುಮಕ್ಕಳು ಸುಮಾರು ೨೦೦ ಕುರಿ, ಇಬ್ಬರು ದನ ಕಾಯುವ ಹುಡುಗರು, ಮೂರು ನಾಲ್ಕು ದನಗಳೂ ಇದ್ದವು. ನಾನು ಕೊನೆಯ ಭಾಗದಲ್ಲಿ ನಿಲ್ಲಬೇಕಾದುದರಿಂದ ಮಳೆಯಿಂದ ರಕ್ಷಣೆಯಾದಂತಾಗಲಿಲ್ಲ. ಆ ವೇಳೆಗೆ ಮತ್ತೊಬ್ಬ ಸೈಕಲು ಸವಾರನು ಅಲ್ಲಿಗೆ ಬಂದು ನಿಂತ. ನಮ್ಮಿಬ್ಬರಿಗೂ ಅಲ್ಲಿ ರಕ್ಷಣೆ ಸಿಕ್ಕುವ ದಾರಿ ತೋಚಲಿಲ್ಲ. ನಾವಿಬ್ಬರೂ ಯೋಚಿಸಿ ಅಲ್ಲಿಂದ ಸುಮಾರು ೩೦೦ ಅಡಿ ದೂರದಲ್ಲಿದ್ದ ಮತ್ತೊಂದು ಮರದ ಕೆಳಕ್ಕೆ ಮಳೆಯಲ್ಲಿ ನೆನೆದುಕೊಂಡೇ ಹೋದೆವು. ಮಳೆ ಕಡಿಮೆಯಾಯಿತು.

ಮೋಡ ಮಾತ್ರ ಬಹಳ ಕಪ್ಪಗೆ ವ್ಯಾಪಿಸಿತ್ತು. ಸುತ್ತಲೂ ಅಂಧಕಾರವೇ ಆಯಿತು. ಹತ್ತು ನಿಮಿಷಗಳಲ್ಲಿ ನಾವು ಹಿಂದೆ ನಿಂತಿದ್ದ ಆಲದ ಮರಕ್ಕೆ ಒಂದು ಬರಸಿಡಿಲು ಬಡಿಯಿತು. ದೊಡ್ಡ ಉರಿ ಕಂಡಿತು. ಅದರ ಜ್ವಾಲೆ ತೆಂಗಿನ ಮರದೆತ್ತರವನ್ನು ಮೀರಿತು. ಅದನ್ನು ನೋಡುವುದಕ್ಕಾಗದಂತೆ ಕಣ್ಣು ಕೋರೈಸಿತು. ಹತ್ತು ನಿಮಿಷಗಳಲ್ಲಿ ಕೆಳಗಿಂದ ಎಲ್ಲ ಮನುಷ್ಯರೂ ರಾಸುಗಳೂ ಭಸ್ಮೀಕೃತವಾಯಿತು. ನಮ್ಮ ಎದೆ ಜರ್ಝರಿತವಾಯಿತು. ಸುಮಾರು ಕಾಲು ಗಂಟೆಯು ಕಾಲ ದಿಙ್ಮೂಢರಾದೆವು. ಮಳೆ ನಿಂತು ಹೋಯಿತು. ನಿಧಾನವಾಗಿ ಸುಧಾರಿಸಿಕೊಂಡು ಬೆಂಗಳೂರು ಪ್ರಯಾಣವನ್ನು ಮನ್ನ ಮಾಡಿ ಕಾನಕಾನಹಳ್ಳಿಗೆ ಹಿಂತಿರುಗಿದೆವು. ಎದೆಯ ಬಡಿತ ವಿಶೇಷವಾಗಿ ಗಂಟೆಗೆ ೫ ಮೈಲಿಗಿಂತ ಹೆಚ್ಚು ವೇಗವಾಗಿ ಸಾಗಲಾರದೆ ಸುಮಾರು ಏಳು ಗಂಟೆಯ ಹೊತ್ತಿಗೆ ಕಾನಕಾನಹಳ್ಳಿಯನ್ನು ಸೇರಿದೆವು. ಆಯಸ್ಸು ಗಟ್ಟಿಯಾಗಿದ್ದರೆ ಯಾವ ಮೃತ್ಯು ಏನು ಮಾಡೀತು?

ನನ್ನ ಜೀವನದಲ್ಲಿ ಮತ್ತೊಂದು ಸಲ ಹೀಗೆ ಒಂದು ಸಂದರ್ಭ ನಡೆಯಿತು. ಇದಾದ ಒಂದೆರಡು ವರ್ಷದ ಮೇಲೆ ನಡೆದುದು. ಒಂದು ದಿನ ಬೆಳಿಗ್ಗೆ ಏಳು ಗಂಟೆಗೆ ಮೈಸೂರಿನಿಂದ ನರಸೀಪುರಕ್ಕೆ ಹೊರಟೆ. ನಾನು ಬಸ್ ನಿಲ್ದಾಣಕ್ಕೆ ಹೋಗುವುದಕ್ಕೆ ಮುಂಚೆ ಬಸ್ಸು ಪೂರ್ಣವಾಗಿ ತುಂಬಿಹೋಗಿತ್ತು. ನನೂ ನಮ್ಮ ಊರಿನ ಸಾಹುಕಾರ್ರು ನಮಗೂ ಸ್ಥಳ ಕೊಡಬೇಕೆಂದು ಒತ್ತಾಯ ಮಾಡಿದೆವು. ಆಗ ಮೇಲಿನವರ ನಿರ್ಬಂಧ ಬಹಳವಾಗಿತ್ತು. ಕಂಡಕ್ಟರ್ ಏನು ಮಾಡಿದರೂ ಕೊಡಲಾಗುವುದಿಲ್ಲವೆಂದು ಬಿಟ್ಟ. ಅವನೊಂದಿಗೆ ಜಗಳವಾಡಿಯೂ ಆಯಿತು. ಏನೂ ಪ್ರಯೋಜನವಾಗಲಿಲ್ಲ. ಆ ಬಸ್ಸು ಹೊರಟುಬಿಟ್ಟಿತು. ನಾವು ಮುಂದಿನ ಎಂಟು ಗಂಟೆಯ ಬಸ್ಸಿನಲ್ಲಿ ಪ್ರಯಾಣ ಮಾಡಿದೆವು. ಮೊದಲು ಹೊರಟ ಬಸ್ಸು ಮೈಸೂರಿನಿಂದ ೬-೭ ಮೈಲಿ ಹೋಗಿ ಅಲ್ಲಿ ಬ್ರೇಕ್ ತಪ್ಪಿ ಪಕ್ಕದಲ್ಲಿದ್ದ ವರುಣದ ಕೆರೆಗೆ ಮಗುಚಿಕೊಂಡಿತು. ಪೆಟ್ರೋಲ್ ಟ್ಯಾಂಕ್ ತಲೆಕೆಳಗಾಗಿ ಹತ್ತಿ ಉರಿಯಲು ಪ್ರಾರಂಭವಾಯಿತು. ಬಹು ಕಷ್ಟಪಟ್ಟು ತಪ್ಪಿಸಿಕೊಂಡು ಓಡಿದವರು ಕೆಲವರು. ಬಸ್ಸಿನ ಚಾಲಕ ಮತ್ತು ಕಂಡಕ್ಟರು ಸೇರಿ ಸುಮಾರು ೨೪ ಜನ ಸುಟ್ಟು ಕರಕಲಾದರು. ಹಿಂದಿನ ಬಸ್ಸಿನಲ್ಲಿ ಬಂದ ನಾವು ನೋಡುವಾಗ ಬಸ್ಸು ಇನ್ನೂ ಉರಿಯುತ್ತಲೆ ಇತ್ತು. ಅದನ್ನು ನೋಡಿ ನಾವು ನಮ್ಮ ಆಯಸ್ಸು ಗಟ್ಟಿಯಾಗಿತ್ತೆಂದು ಸಿದ್ಧಾಂತ ಮಾಡಿದೆವು. ಇದೂ ಮೃತ್ಯುವಿಗೆ ಸವಾಲ್ ತಾನೆ?



# ಬ್ರಹ್ಮ ತೇಜೋ ಬಲಂ ಬಲಂ

ಭಾರತದ ಪ್ರಾಚೀನ ಋಷಿವರ್ಗದಲ್ಲಿ ವಿಶ್ವಾಮಿತ್ರರು ಬಹಳ ಪ್ರಸಿದ್ಧರು. ಇವರು ಸಾಕ್ಷಾತ್ ಧರ್ಮಪುರುಷರು, ವೀರರಲ್ಲಿ ವೀರರು, ವಿದ್ಯಾನಿಧಿಗಳು. ತಪಸ್ಸಿನ ಪರಾಕಾಷ್ಠೆಯೇ ಇವರು. ಇವರಿಗೆ ನಾನಾ ರೀತಿಯ ಮಂತ್ರಾಸ್ತ್ರಗಳು ಗೊತ್ತಿದ್ದವು. ಇವರ ಶಕ್ತಿಯನ್ನು ಲೋಕತ್ರಯರಲ್ಲಿ ಯಾರೂ ಸರಿಯಾಗಿ ಅರಿತಿರಲಿಲ್ಲ. ಇವರು ಅನೇಕ ವರ್ಷ ರಾಜ್ಯಭಾರ ಮಾಡಿ ಪ್ರಜಾರಂಜಕರಾದ ರಾಜರ್ಷಿಗಳಾಗಿದ್ದರು. ಇಂತಹವರು ಒಂದು ಸಲ ಜೈತ್ರಯಾತ್ರೆಗಾಗಿ ಹೊರಟು ಯಾದೃಚ್ಛಿಕವಾಗಿ ಬ್ರಹ್ಮರ್ಷಿಗಳಾದ ವಸಿಷ್ಠರ ಆಶ್ರಮಕ್ಕೆ ತಮ್ಮ ಅಕ್ಷೋಹಿಣಿ ಸೈನ್ಯದೊಡನೆ ಹೋದರು. ವಸಿಷ್ಠರು ಸ್ವಭಾವ ಸಹಜವಾಗಿ ಅವರಿಗೂ ಅವರ ಅಪಾರ ಸೈನ್ಯಕ್ಕೂ ಉತ್ತಮ ರೀತಿಯಲ್ಲಿ ಅತಿ ಶೀಘ್ರವಾಗಿ ಮೃಷ್ಟಾನ್ನ ಭೋಜನ ಮಾಡಿಸಿದರು. ಕಾಡತಪಸಿಯಾದ ವಸಿಷ್ಠರಿಗೆ ಇದು ಹೇಗೆ ಸಾಧ್ಯವಾಯಿತು ಎಂದು ವಿಶ್ವಾಮಿತ್ರರಿಗೆ ಆಶ್ಚರ್ಯವಾಯಿತು. ವಸಿಷ್ಠರೇ ತನ್ನಲ್ಲಿರುವ ದೇವಲೋಕದ ನಂದಿನಿಧೇನುವೆಂಬ ಹಸುವಿನ ಶಕ್ತಿಯಿಂದ ಇದು ಸಾಧ್ಯವಾಯಿತೆಂದು ತಿಳಿಸಿದರು. ರಾಜರ್ಷಿಗಳಾದ ವಿಶ್ವಾಮಿತ್ರರಿಗೆ ಬ್ರಾಹ್ಮಣ ಸಹಜವಾದ ಇಂದ್ರಿಯ ಸಂಯಮವಿರಲಿಲ್ಲ. ಲೋಕಕಲ್ಯಾಣಕ್ಕಾಗಿ ವಸಿಷ್ಠರಲ್ಲಿದ್ದ ನಂದಿನಿ ಧೇನುವನ್ನು ತನ್ನ ಸ್ವಾರ್ಥಕ್ಕೆ ಪಡೆಯಬೇಕೆಂಬ ಆಕಾಂಕ್ಷೆ ಉಂಟಾಯಿತು. ಸಾಮಾನ್ಯವಾಗಿ ಇಂದ್ರಿಯಸಂಗದಿಂದ ಕಾಮವುಂಟಾಗುತ್ತದೆ. ಕಾಮವನ್ನು ಸಾಧಿಸಲಾಗದಿದ್ದರೆ ಕ್ರೋಧವುಂಟಾಗುತ್ತದೆ. ಅದರಿಂದ ಬುದ್ಧಿನಾಶವೂ ಬುದ್ಧಿನಾಶದಿಂದ ಆತ್ಮನಾಶವೂ ಉಂಟಾಗುತ್ತದೆ. ವಿಶ್ವಾಮಿತ್ರರಿಗಾದುದೂ ಹೀಗೆಯೇ ಅವರ ಪರನ್ಯಾಸಹರಣರೂಪವಾದ ಕಾಮವು ಪ್ರಬಲವಾಯಿತು. ನಂದಿನಿಧೇನುವನ್ನು ಪಡೆಯಲು ವಸಿಷ್ಠರಿಗೆ ನಾನಾ ರೀತಿಯ ಪ್ರಲೋಭನವನ್ನುಂಟುಮಾಡಿದರು. ವಸಿಷ್ಠರು ಜಗ್ಗಲಿಲ್ಲ. ವಿಶ್ವಾಮಿತ್ರರ ಕೋಪವು ಉಲ್ಬಣವಾಯಿತು. ಅತ್ಯಂತ ಪ್ರೀತಿಯಿಂದ ತಮಗೆ ಆತಿಥ್ಯವನ್ನು ನೀಡಿದ ವಸಿಷ್ಠರನ್ನೇ ನಾಶಮಾಡಲು ಸಮಸ್ತ ಸೈನ್ಯದೊಡನೆ ಯುದ್ಧಮಾಡಿ ಸೋತರು. ಅವರ ಕೋಪವು ಅಲ್ಲಿಗೆ ನಿಲ್ಲಲಿಲ್ಲ. ಸಹಸ್ರಾರು ವರ್ಷ ತಪಸ್ಸು ಮಾಡಿ ಮಹೇಶ್ವರನಿಂದ ಪಡೆದ ದಿವ್ಯಾಸ್ತ್ರಗಳನ್ನು ವಸಿಷ್ಠರ ನಾಶಕ್ಕಾಗಿ ಪ್ರಯೋಗಿಸಿದರು. ವಸಿಷ್ಠರ ಬ್ರಹ್ಮದಂಡದ ಮುಂದೆ ನಿಲ್ಲಲಾರದೆ ಸರ್ವನಾಶವಾಯಿತು. ಆಗ ವಿಶ್ವಾಮಿತ್ರರಿಗೆ ಜ್ಞಾನೋದಯವಾಗಿ ಬ್ರಹ್ಮತೇಜಸ್ಸಿನ ಶಕ್ತಿಯ ಅರಿವಾಗಿ ಹೀಗೆ ಉದ್ಗಾರ ತೆಗೆದರು.

ದಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋ ಬಲಂ ಬಲಂ
ಏಕೇನ ಬ್ರಹ್ಮದಂಡೇನ ಸರ್ವಾಸ್ತ್ರಾಣಿ ಹತಾನಿ ಮೇ

ಕ್ಷತ್ರಿಯ ಬಲವನ್ನು ಸುಡಬೇಕು. ಬ್ರಹ್ಮ ಬಲವೇ ಬಲ. ಒಂದು ಬ್ರಹ್ಮದಂಡದಿಂದ ಸರ್ವಾಸ್ತ್ರಗಳು ನಾಶವಾಯಿತಲ್ಲ. ಮುಂದೆ ನಾನು ಬ್ರಾಹ್ಮಣ್ಯವನ್ನು ಸಂಪಾದಿಸಬೇಕು, ಕಾಮಕ್ರೋಧಗಳನ್ನು ತ್ಯಜಿಸಿ ಜಿತೇಂದ್ರಿಯನಾಗಬೇಕು ಎಂದು ನಾಲ್ಕುದಿಕ್ಕುಗಳಲ್ಲಿಯೂ ಸಹಸ್ರಾರು ವರ್ಷಗಳ ಕಾಲ ತಪಸ್ಸು ಮಾಡಿದರು. ತ್ರಿಶಂಕು, ಶುನಶ್ಶೇಪ, ಮೇನಕೆ, ರಂಭೆಯರು ಬೇರೆ ಬೇರೆ ರೀತಿಯಲ್ಲಿ ಅವರ ತಪಸ್ಸಿಗೆ ವಿಘ್ನವನ್ನುಂಟು ಮಾಡಿದರು. ಪ್ರತಿಸಲವೂ ಬ್ರಹ್ಮನು ಬಂದು `ನೀನು ಬ್ರಹ್ಮ ಋಷಿಯಾಗಲಿಲ್ಲ' ಎಂದು ಹೇಳಿ ಹೋಗುತ್ತಿದ್ದರು. ಕೊನೆಗೆ ಪೂರ್ವದಿಕ್ಕಿನಲ್ಲಿ ಘೋರ ತಪಸ್ಸನ್ನಾಚರಿಸಿ ಇಂದ್ರಿಯ ಜಯವನ್ನು ಸಂಪಾದಿಸಿ ಕಾಮಕ್ರೋಧವನ್ನು ಸಂಪೂರ್ಣವಾಗಿ ದೂರಮಾಡಿ ಬ್ರಹ್ಮತೇಜಸ್ಸನ್ನು ಗಳಿಸಿದರು. ಅವರ ಬ್ರಹ್ಮತೇಜಸ್ಸಿಗೆ ಮೂರು ಲೋಕವೂ ತಲ್ಲಣಿಸಿತು. ಬ್ರಹ್ಮನು ತಾನೇ ಬಂದು ಅವರ ಬ್ರಾಹ್ಮಣ್ಯವನ್ನು ಒಪ್ಪಿಕೊಂಡನು. ಬ್ರಹ್ಮರ್ಷಿಯಾದ ವಸಿಷ್ಠರು ಅವರನ್ನು ಬ್ರಹ್ಮರ್ಷಿಗಳೆಂದು ಕರೆದು ಮನ್ನಿಸಿದರು. ಅಂದಿನಿಂದ ಅವರ ಸ್ವಾರ್ಥ ಮನೋಭಾವವು ಮಾಯವಾಗಿ ಇಂದ್ರಿಯ ಜಯವುಂಟಾಗಿ ಅವರ ಜೀವನ ಲೋಕಕಲ್ಯಾಣಕ್ಕಾಗಿ ಮುಡಿಪಾಯಿತು. ಮುಂದೆ ಲೋಕಕಂಟಕರಾದ ರಾವಣಾದಿಗಳ ಸಂಹಾರಕ್ಕೆ ಸಾಧನರಾದ ರಾಮಲಕ್ಷ್ಮಣರಿಗೆ ನಾನಾ ರೀತಿಯ ಮಂತ್ರಾಸ್ತ್ರಗಳನ್ನುಪದೇಶಿಸಿ ಲೋಕಕ್ಷೇಮಕ್ಕೆ ಕಾರಣರಾದರು.

ಇಷ್ಟು ಪವಿತ್ರವಾದ ಸುಲಭವಲ್ಲದ ಬ್ರಾಹ್ಮಣ್ಯದ ಕಲ್ಪನೆ ಇಂದು ವಿಪರೀತವಾಗಿ ಜನಸಾಮಾನ್ಯರ ತಿರಸ್ಕಾರಕ್ಕೆ ಪಾತ್ರವಾಗಿದೆ. ಜಾತಿ, ಕುಲ, ಹುಟ್ಟು, ಆಚಾರ, ಆಕಾರಗಳು ಬ್ರಾಹ್ಮಣ್ಯದ ಅಳತೆ ಗೋಲಾಗಿ ಮೂಲಗುಣದ ಅರಿವೇ ನಾಶವಾಗಿದೆ. ಬ್ರಾಹ್ಮಣ್ಯವು ಯಾವ ಜಾತಿ, ಕುಲ, ಹುಟ್ಟುಗಳಿಗೆ ಸೀಮಿತವಾದುದಲ್ಲ, ಸ್ವಂತ ಸಾಧನೆಯಿಂದ ತಪಸ್ಸಿನಿಂದ ಯಾರಾದರೂ ಬ್ರಾಹ್ಮಣರಾಗಬಹುದು. ವಾಸ್ತವವಾಗಿ ತಪಸ್ಸಿನಿಂದ ದಿವ್ಯಶಕ್ತಿಯನ್ನು ಪಡೆದು ಸ್ವಾರ್ಥತ್ಯಾಗಮಾಡಿ ಲೋಕಕ್ಕಾಗಿ ದುಡಿಯುವುದೇ ಅವರ ಧ್ಯೇಯ. `ಇದಂ ಬ್ರಾಹ್ಮ್ಯಮಿದಂ ಕ್ಷಾತ್ರಂ ಶಾಪಾದಪಿ ಶರಾದಪಿ' ಎಂಬ ವಾಕ್ಯಕ್ಕನುಗುಣವಾಗಿ ಅವರು ಸರ್ವಶಕ್ತರಾಗಿರಬೇಕು. ಆದರೆ ಅದನ್ನು ತಮ್ಮ ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳಬಾರದು. ಹಿಂದಿನ ಗೌತಮ, ವಸಿಷ್ಠ, ಚಾಣಕ್ಯ ಮೊದಲಾದವರಂತಹವರು ಈಚಿನ ಶ್ರೀರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಮಹಾತ್ಮ ಗಾಂಧಿ, ಶ್ರೀ ಅರವಿಂದರಂಥವರು ಸದ್ಬ್ರಾಹ್ಮಣರು. ಹಿಂದೆ ಲೋಕಕ್ಷೇಮವುಂಟಾದುದೂ ಅಂತಹವರಿಂದಲೇ. ಮುಂದೆ ಆಗಬೇಕಾದುದೂ ಅಂತಹವರಿಂದಲೇ. ಭಾರತೀಯರೆಲ್ಲರೂ ಮೂಲಾರ್ಥದಲ್ಲಿ ಬ್ರಾಹ್ಮಣರಾದಾಗಲೇ ಭಾರತಕ್ಕೆ ಏಳಿಗೆ. ಆಡಳಿತಗಾರರೂ ಪ್ರಜಾನಾಯಕರೂ ಮೂಲಬ್ರಾಹ್ಮಣ್ಯಗುಣಗಳನ್ನು ಸಂಪಾದಿಸುವುದು ಪರಮಾವಶ್ಯಕ. `ಗೋ ಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ ಲೋಕಾಃ ಸಮಸ್ತಾಃ ಸುಖಿನೋ ಭವಂತು' - ಇಂತಹ ಬ್ರಾಹ್ಮಣರು ಈ ಭೂಮಿಯಲ್ಲಿ ಮೂಡಲಿ. ಎಲ್ಲರಿಗೂ ಒಳ್ಳೆಯದಾಗಲಿ.



# ಕುಪ್ಪಿ ಮಾತ್ರೆಗಳು

ಭಾರತೀಯ ಆಯುರ್ವೇದಶಾಸ್ತ್ರವು ಬಹುಪ್ರಾಚೀನ ಕಾಲದಿಂದ ಪರಂಪರಾನುಗತವಾಗಿ ಬೆಳೆದು ಬಂದಿದೆ. ಆ ವಿಷಯಕವಾದ ಗ್ರಂಥಗಳು ಸಾವಿರಾರು ವರ್ಷಗಳಿಂದ ಅನುಸ್ಯೂತವಾಗಿ ರಚಿತವಾಗಿದೆ. ಆಯುರ್ವೇದಶಾಸ್ತ್ರಕ್ಕೆ ಅಥರ್ವವೇದವೇ ಮೂಲ. ಆಗಿನ ಕಾಲದಿಂದ ಅದರ ಸಂಶೋಧನೆ ನಾನಾ ರೀತಿಯಲ್ಲಿ ನಡೆದಿದೆ. ಇತರ ಭಾಗದಂತೆಯೇ ಅದರ ಔಷಧವಿಜ್ಞಾನ ಭಾಗವು ಬಹು ಆಶ್ಚರ್ಯಕರವಾಗಿದೆ. ಔಷಧಗಳನ್ನು ಮೂಲಿಕೆ, ರಸ, ಅಭ್ರಕ, ಭೃಂಗ, ತಾಮ್ರ, ರೋಪ್ಯ, ವತಾಕ್ತಿಕ, ಸುವರ್ಣ ಮೊದಲಾದ ಅನೇಕ ಪದಾರ್ಥಗಳಿಂದ ಕಲ್ಕ, ಭಸ್ಮ, ರಸಾಯನ, ತೈಲ, ಮಾತ್ರೆ ಮೊದಲಾದ ರೂಪಗಳಲ್ಲಿ ಸಿದ್ಧಪಡಿಸಿವೆ. ಮಾತ್ರೆಗಳಲ್ಲೂ ಬಹಳ ಪ್ರಧಾನವಾದವು ಕುಪ್ಪಿಮಾತ್ರೆಗಳು. ಈ ಶಬ್ದದ ಭಾಗವಾದ `ಕುಪ್ಪಿ' ಎಂಬುದಕ್ಕೆ ಅರ್ಥ ಸ್ಪಷ್ಟವಾಗಿಲ್ಲ. ಇದು ಸರ್ವರೋಗ ಪರಿಹಾರಕವಾದ ಏಕೈಕ ಸಾಮಗ್ರಿ. ಇದು ಈಗ ಬಹಳ ವಿರಳವಾಗಿದೆ. ಇದನ್ನು ಸಿದ್ಧಪಡಿಸುವುದು ಬಹಳ ಅಪೂರ್ವವೆಂದೇ ಹೇಳಬಹುದು. ಇದಕ್ಕೆ ತಗಲುವ ವೆಚ್ಚವು ಅತ್ಯಧಿಕವಾಗಿರುವುದರಿಂದ ಇದನ್ನು ತಯಾರು ಮಾಡುವವರು ಇಲ್ಲವೆಂದೇ ಹೇಳಬಹುದು. ಪ್ರಾಚೀನಕಾಲದಲ್ಲಿ ರಾಜಮಹಾರಾಜರುಗಳು ವಿಶೇಷ ಧನಸಹಾಯದ ಮೂಲಕ ತಮ್ಮ ಆಸ್ಥಾನ ಪಂಡಿತರುಗಳಿಂದ ಇದನ್ನು ತಯಾರಿಸುತ್ತಿದ್ದರಂತೆ. ಅವು ಸಿದ್ಧವಾಗುತ್ತಿದ್ದುದು ಅವರ ಉಪಯೋಗಕ್ಕಾಗಿಯೇ. ಆದರೆ ಅದನ್ನು ತಯಾರಿಸಿದ ವೈದ್ಯರಿಗೆ ಅರ್ಧಪಾಲು ಸಲ್ಲುತ್ತಿತ್ತು. ಅದನ್ನು ಅವರು ಯಾವ ಪ್ರತಿಫಲಾಪೇಕ್ಷೆ ಇಲ್ಲದೆ ಸಾರ್ವತ್ರಿಕರ ಉಪಯೋಗಕ್ಕಾಗಿ ಬಳಸುತ್ತಿದ್ದರು. ಇತ್ತೀಚಿನವರೆಗೆ ಇದರ ಪ್ರಯೋಜನ ಅನೇಕ ಪ್ರಾಚೀನ ಪಂಡಿತರಲ್ಲಿ ಬಳಕೆಯಲ್ಲಿತ್ತು. ಗ್ರಾಮಾಂತರಗಳಲ್ಲಿದ್ದ ಅನೇಕ ವೈದ್ಯರು ಇವುಗಳ ಸಹಾಯದಿಂದ ಅನೇಕರಿಗೆ ವಿಶೇಷ ಸಹಾಯ ಮಾಡುತ್ತಿದ್ದರು. ಈ ಒಂದೊಂದು ಮಾತ್ರೆಗಳೂ ಈಗಿನ ಅನೇಕ ಔಷಧಾಲಯಗಳ ಪ್ರತಿನಿಧಿಯಾಗಿರುತ್ತಿದ್ದವು. ಈ ಮಾತ್ರೆಗಳಿಗೆ ಬಹುಮುಖಗಳಿರುತ್ತಿದ್ದವು. ಒಂದೊಂದು ಮುಖವೂ ಭಿನ್ನ ಭಿನ್ನ ವ್ಯಾಧಿಗಳಿಗೆ ಪರಿಹಾರಕವಾಗಿರುತ್ತಿದ್ದವು. ಅನುಪಾತಗಳ ವ್ಯತ್ಯಾಸದಿಂದ ಅವುಗಳ ಉಪಯೋಗ ಇನ್ನೂ

ಹೆಚ್ಚಿನ ರೋಗನಿವಾರಣೆಗಳಿಗೆ ಸಹಾಯಕವಾಗುತ್ತಿತ್ತು. ಸಾಮಾನ್ಯವಾಗಿ ಅವುಗಳ ಆಕಾರ ನಿಂಬೆಹಣ್ಣಿನ ಗಾತ್ರದಷ್ಟು ಇರುತ್ತಿತ್ತು. ಇವುಗಳ ಉಪಯೋಗಕ್ಕೆ ಯಾವ ಪೂರ್ವಸಿದ್ಧತೆಯಾಗಲೀ ವಿಶೇಷ ಪರಿಕರಗಳಾಗಲೀ ಅವಶ್ಯಕವಿರಲಿಲ್ಲ. ಹಳ್ಳಿಗಳಲ್ಲಿ ವೈದ್ಯಸಹಾಯ ಒಂದು ಸಾರ್ವತ್ರಿಕ ಸೇವೆಯಾಗಿ ಪರಿಗಣಿತವಾಗಿರುತ್ತಿತ್ತು. ಪಂಡಿತರಲ್ಲಿ ಅನೇಕರು ಪ್ರತಿನಿತ್ಯವೂ ಊರಿನ ಸುತ್ತಲೂ ಸಂಚಾರ ಮಾಡಿ ಎಲ್ಲರ ಮನೆಗಳಿಗೂ ಭೇಟಿಯಿತ್ತು ಈ ಮಾತ್ರೆಗಳ ಸಹಾಯದಿಂದ ಉಚಿತವಾದ ಚಿಕಿತ್ಸೆಯನ್ನು ಮಾಡುತ್ತಿದ್ದರು. ಇವುಗಳ ಸಹಾಯದಿಂದ ಅವರು ಸಂಚಾರಿ ವೈದ್ಯಶಾಲೆಯಾಗಿದ್ದು ಸಮಾಜವು ಅವರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿತ್ತು. ಅವರಿಗೆ ಬೇಕಾಗಿದ್ದುದು ಈ ಒಂದು ಮಾತ್ರೆ. ಜೊತೆಗೆ ಒಂದು ಸಾಂಬ್ರಾಣಿ ಕಲ್ಲು. ಇವೆರಡನ್ನು ಅವರು ಒಂದು ರೇಷ್ಮೆ ಚೀಲದಲ್ಲಿ ಹಾಕಿಕೊಂಡು ಆ ಚೀಲವನ್ನು ನಡುವಿಗೆ ಸಿಕ್ಕಿಸಿಕೊಂಡು ಮನೆಮನೆಗಳಿಗೂ ಹೋಗಿ ಅವಶ್ಯಕವಾದ ಅನುಪಾನಗಳನ್ನು ಅವರಿಂದ ತರಿಸಿ, ಪರೀಕ್ಷೆಯ ಮೂಲಕ ವ್ಯಾಧಿಯ ಸ್ವರೂಪವನ್ನು ತಿಳಿದು ಔಷಧಿಗಳನ್ನು ಕೊಡುತ್ತಿದ್ದರು. ಈ ಮಾತ್ರೆಯ ಉಪಯೋಗದಲ್ಲಿ ಅವುಗಳನ್ನು ಎಷ್ಟೆಷ್ಟು ಸುತ್ತು ತೇಯಬೇಕು ಎಂಬುವುದರಿಂದ ಅದು ವಿವಿಧ ವಯಸ್ಸಿನ ಸ್ತ್ರೀಪುರುಷರಿಗೂ ಸಮಾನವಾಗಿ ಉಪಯೋಗವಾಗುತ್ತಿತ್ತು. ಭೌತಶಾಸ್ತ್ರದ ದೃಷ್ಟಿಯಿಂದ ಕೆಲವು ಕುಪ್ಪಿಮಾತ್ರೆಗಳು ವಿಜ್ಞಾನಶಾಸ್ತ್ರಕ್ಕೆ ಭ್ರಮೆಯನ್ನುಂಟು ಮಾಡುತ್ತಿತ್ತು. ಈಗ ೫೦ ವರ್ಷಗಳ ಹಿಂದೆ ನನ್ನಲ್ಲಿದ್ದ ಒಂದು ಕುಪ್ಪಿಮಾತ್ರೆಯ ಸಾಪೇಕ್ಷ ಸಾಂದ್ರತೆ (Specific gravity) ೨೭ ಆಗಿತ್ತು. ಆಗ ಇನ್ನೂ ಕ್ಯೂರಿ ದಂಪತಿಗಳ ಸಂಶೋಧನೆಗಳು ಬೆಳಕಿಗೆ ಬಂದಿರಲಿಲ್ಲ. ಆಗ ಅತ್ಯಧಿಕ ಸಾಂದ್ರತೆಯುಳ್ಳ ಸುವರ್ಣಕ್ಕಿಂತ ಇದು ಅತ್ಯಧಿಕವಾಗಿದ್ದುದರಿಂದ ಇದು ಯಾವ ಸಾಮಗ್ರಿಗಳಿಂದ ಸಿದ್ಧವಾಗಿದೆಯೆಂಬುದನ್ನು ಸಿದ್ಧ ಮಾಡುವುದು ಸಾಧ್ಯವಾಗಲಿಲ್ಲ. ನಾನು ಅದನ್ನು ಒಬ್ಬರು ವಿಜ್ಞಾನಿಗೆ ಕಳುಹಿಸಿಕೊಡಲು, ಅದರ ಒಂದು ಭಾಗವನ್ನು ಪುಡಿಮಾಡಿ ನೋಡುವವರೆಗೆ ಅದರ ವಿವರವನ್ನು ಹೇಳಲಾಗುವುದಿಲ್ಲವೆಂದರು. ನಾನು ಅದಕ್ಕೆ ಒಪ್ಪಲಿಲ್ಲವಾಗಿ ಅದರ ಸ್ವರೂಪ ತಿಳಿಯಲಾಗಲೇ ಇಲ್ಲ. ಈಗ ಆ ಮಾತ್ರೆ ನನ್ನಲ್ಲಿಲ್ಲ. ಆದರೂ ಅನೇಕ ಪ್ರಾಚೀನ ವೈದ್ಯಕೀಯ ಮನೆತನಗಳಲ್ಲಿ ಇವುಗಳ ಅವಶೇಷ ವಿಶೇಷವಾಗಿ ಉಳಿದಿದೆ. ಆದರೆ ಅವುಗಳ ಉಪಯೋಗದ ರೀತಿ ಮಾತ್ರ ಬಹುಜನರಿಗೆ ಪರಿಚಯವಿಲ್ಲವಾಗಿದೆ. ಆದುದರಿಂದ ಅಷ್ಟು ಅಮೂಲ್ಯವಾದ ಆ ಮಾತ್ರೆಗಳು ಸಾರ್ವಜನಿಕರ ಉಪಯೋಗಕ್ಕೆ ನಿಷ್ಪ್ರಯೋಜಕವಾಗಿದೆ. ಶಾಸ್ತ್ರಜ್ಞರೂ ಪ್ರಜಾರೋಗ್ಯದಲ್ಲಿ ಹಿತಾಕಾಂಕ್ಷಿಗಳೂ ಇವುಗಳನ್ನು ಬಹುಶ್ರಮದಿಂದ ಶೇಖರಿಸಿ ಶಾಸ್ತ್ರೀಯ ಸಂಶೋಧನೆಯಿಂದ ಅವುಗಳ ಪ್ರಯೋಗಗಳನ್ನು ನಿಶ್ಚಯಿಸಿ ಉಪಯೋಗಕ್ಕೆ ತಂದರೆ ಹಾಗೆಯೇ ಒಂದು ಹೆಜ್ಜೆ ಮುಂದೆ ನಡೆದು ವೈಜ್ಞಾನಿಕ ರೀತಿಯಲ್ಲಿ ಅವುಗಳನ್ನು ಪುನರ್ನಿರ್ಮಾಣ ಮಾಡುವ ಕಾರ್ಯವನ್ನು ಸಾಧಿಸುವುದಾದರೆ ಅವುಗಳಿಂದ ಲೋಕಕ್ಕೆ ಎಷ್ಟು ಪ್ರಯೋಜನವಾಗಬಹುದೆಂಬುದು ಊಹೆಗೂ ಮೀರಿದ ವಿಷಯವಾಗುತ್ತದೆ.

❒

# ಏಕಾಗ್ರತೆ

ಈಗಿನ ಕಾಲದಲ್ಲಿ ವಿಜ್ಞಾನದ ಮುನ್ನಡೆಯಿಂದ ಮನುಷ್ಯ ಮನುಷ್ಯನ ಸಂಬಂಧ ವಿಶ್ವವ್ಯಾಪಿಯಾಗಿದೆ. ಅವನು ತಿಳಿಯಬೇಕಾಗಿರುವ ವಿಷಯಗಳು ಅಪಾರವಾಗಿದೆ. ಅವೆಲ್ಲವನ್ನು ಜೀರ್ಣಿಸಿಕೊಂಡು ಅದರಲ್ಲಿ ಪೂರ್ಣಪಾಂಡಿತ್ಯವನ್ನು ಪಡೆಯುವುದು ಸಾಧ್ಯವಲ್ಲದ ಕೆಲಸವಾಗಿದೆ. ಜ್ಞಾನಾರ್ಜನೆಗೆ ಪ್ರಧಾನವಾದ ಅಂಶ ಏಕಾಗ್ರತೆ. ಅದಕ್ಕೆ ಈಗ ವಿಶೇಷ ಗಮನ ಕೊಡುತ್ತಿರುವ ಹಾಗೆ ಕಾಣುವುದಿಲ್ಲ. ಆದುದರಿಂದಲೇ ನಮ್ಮ ಶಿಕ್ಷಣ ಪ್ರಪಂಚದಲ್ಲಿ ಇತರ ಕ್ಷೇತ್ರಗಳಲ್ಲಿ ಉದ್ದೇಶಿಸಿದಷ್ಟು ಪೂರ್ಣಫಲ ದೊರೆಯುತ್ತಿಲ್ಲ.

ಜ್ಞಾನಾರ್ಜನೆಗೆ ಏಕಾಗ್ರತೆಯೊಂದೇ ಮಾರ್ಗ. ಶಿಕ್ಷಣದ ಸಾರವೆಲ್ಲಾ ಮಾನಸಿಕ ಏಕಾಗ್ರತೆಯೇ ಆಗಿದೆ. ಅತಿ ಕೀಳುಮಟ್ಟದ ಸಾಮಾನ್ಯ ಮನುಷ್ಯನಿಂದ ಅತ್ಯುಚ್ಚಮಟ್ಟದ ಯೋಗಿಯವರೆಗೆ ಎಲ್ಲರೂ ಜ್ಞಾನಸಂಪಾದನೆಗೆ ಈ ಮಾರ್ಗವನ್ನೇ ಅನುಸರಿಸಬೇಕು. ಪ್ರಯೋಗ ಶಾಲೆಯಲ್ಲಿ ಕೆಲಸ ಮಾಡುವ ಒಬ್ಬ ರಸಾಯನ ಶಾಸ್ತ್ರಜ್ಞನು ಅವನ ಮನಸ್ಸನ್ನೆಲ್ಲಾ ಕೇಂದ್ರೀಕರಿಸಿ ಎಲ್ಲವನ್ನು ಒಂದು ಬಿಂದುವಿನಲ್ಲಿ ಒಟ್ಟುಗೂಡಿಸಿ ಮೂಲವಸ್ತುಗಳ ಮೇಲೆ ಪ್ರಯೋಗಿಸುತ್ತಾನೆ. ಆಗ ಆ ವಸ್ತುಗಳ ವಿಶ್ಲೇಷಣವುಂಟಾಗುತ್ತದೆ. ಅದರ ಜ್ಞಾನವುಂಟಾಗುತ್ತದೆ.

ಕೇಂದ್ರೀಕರಣ ಹೆಚ್ಚಿದಷ್ಟೂ ಸಂಪಾದಿಸುವ ಜ್ಞಾನವು ಹೆಚ್ಚುವುದು. ಚಿನ್ನ ಬೆಳ್ಳಿಗಳನ್ನು ಉಜ್ಜಿದಷ್ಟೂ ಹೊಳಪು ಹೆಚ್ಚುವುದು. ಹಣವನ್ನು ಸಂಪಾದನೆ ಮಾಡುವುದರಲ್ಲಿಯೂ ದೇವರ ಪೂಜೆ ಮಾಡುವುದರಲ್ಲಿಯೂ ಏಕಾಗ್ರತೆ ಹೆಚ್ಚಿದಷ್ಟು ಆ ಕಾರ್ಯಗಳಲ್ಲಿನ ಫಲ ಇನ್ನೂ ಉತ್ತಮವಾಗುವುದು. ಸಾಮಾನ್ಯ ಮನುಷ್ಯನ ಆಲೋಚನಾ ಶಕ್ತಿಯ ಶೇಕಡ ತೊಂಬತ್ತು ಭಾಗ ದುರ್ವ್ಯಯವಾಗುವುದರಿಂದ ಅವನು ಏಕಪ್ರಕಾರವಾದ ತಪ್ಪುಗಳನ್ನು ಮಾಡುತ್ತಾನೆ. ಸುಶಿಕ್ಷಿತನಾದ ಮನುಷ್ಯನಾಗಲೀ ಮನಸ್ಸಾಗಲೀ ಎಂದಿಗೂ ಅಂತಹ ತಪ್ಪನ್ನು ಮಾಡುವುದಿಲ್ಲ. ಮನುಷ್ಯನಿಗೂ ಪ್ರಾಣಿಗಳಿಗೂ ಇರುವ ವ್ಯತ್ಯಾಸವೆಂದರೆ ಅವರಿಬ್ಬರ ಮನಸ್ಸಿನ ಏಕಾಗ್ರತೆಯಲ್ಲಿರುವ ವ್ಯತ್ಯಾಸ. ಪ್ರಾಣಿಗಳಿಗೆ ಈ ಏಕಾಗ್ರತೆಯ ಶಕ್ತಿ ಅತ್ಯಲ್ಪವಾಗಿದೆ.

ಪ್ರಾಣಿಗಳನ್ನು ಪಳಗಿಸುವವನಿಗೂ ಕಂಡುಬಂದಿರುವ ಕಷ್ಟವೇನೆಂದರೆ ಪ್ರಾಣಿಗಳು ಅವುಗಳಿಗೆ ಕಲಿಸಿದ ವಿಷಯಗಳನ್ನು ಬಹುಬೇಗ ಮರೆತುಬಿಡುತ್ತವೆ. ಮನುಷ್ಯ ಮನುಷ್ಯನಲ್ಲಿರುವ ವ್ಯತ್ಯಾಸಕ್ಕೂ ಏಕಾಗ್ರತೆಯ ಮಟ್ಟವೇ ಕಾರಣ.

ಯಾವ ಕ್ಷೇತ್ರದಲ್ಲಾದರೂ ಉಂಟಾಗುವ ಎಲ್ಲ ಜಯವೂ ಇದರ ಫಲವೇ. ಕಲೆ, ಸಂಗೀತಗಳಲ್ಲಿ ಉನ್ನತ ಪ್ರಾವೀಣ್ಯವನ್ನು ಪಡೆಯುವುದು ಏಕಾಗ್ರತೆಯಿಂದಲೇ. ಮನಸ್ಸಿನ ಶಕ್ತಿಯೆಲ್ಲ ಕೇಂದ್ರೀಕೃತವಾಗಿ ಅಂತರ್ಮುಖಿಯಾದರೆ ನಮ್ಮಲ್ಲಿರುವುದೆಲ್ಲ ನಮ್ಮನ್ನು ಆಳುವುದಕ್ಕೆ ಬದಲಾಗಿ ಅವು ನಮ್ಮ ಸೇವಕರಾಗುತ್ತವೆ. ಅನೇಕರು ತಮ್ಮ ಮನಶ್ಶಕ್ತಿಯನ್ನು ಬಾಹ್ಯ ಪ್ರಪಂಚದಲ್ಲಿ ಕೇಂದ್ರೀಕರಿಸಿದರು. ಅದರ ಫಲ ಅವರಿಗೆ ಉಂಟಾದ ಕಲಾಸಾಹಿತ್ಯದ ನೈಪುಣ್ಯ.

ಏಕಾಗ್ರತೆಯೊಂದೇ ಜ್ಞಾನ ಭಂಡಾರಕ್ಕಿರುವ ಒಂದೇ ಒಂದು ಬೀಗದ ಕೈ. ನಮ್ಮ ಈಗಿನ ಪರಿಸ್ಥಿತಿಯಲ್ಲಿ ನಾವು ಪ್ರಕ್ಷುಬ್ಧರಾಗಿದ್ದೇವೆ. ನಮ್ಮ ಮನಸ್ಸು ನೂರಾರು ವಿಷಯಗಳಲ್ಲಿ ಹರಿದು ಹಂಚಿಹೋಗಿದೆ. ಒಂದು ವಿಷಯವನ್ನು ಯೋಚಿಸುತ್ತಿರುವಾಗ ಸಾವಿರಾರು ಅನಪೇಕ್ಷಿತ ವಿಷಯಗಳು ತಲೆಗೆ ನುಗ್ಗಿ ಸಾವಿರಾರು ಭಾವನೆಗಳು ಮನಸ್ಸಿನ ಮೇಲೆ ಧಾಳಿ ಮಾಡಿ ತೊಂದರೆ ಮಾಡುತ್ತದೆ. ಆದುದರಿಂದ ಮರ್ಕಟದಂತೆ ವಿವಿಧ ದಿಕ್ಕುಗಳಿಗೆ ಹರಿದಾಡುವ ಮನಸ್ಸನ್ನು ಕೇಂದ್ರೀಕರಿಸಿ ಏಕಾಗ್ರತೆಯನ್ನು ಸಾಧಿಸುವುದೊಂದೇ ಸರ್ವತೋಮುಖವಾದ ಅಭಿವೃದ್ಧಿಗೆ ಸೂಕ್ತ ಮಾರ್ಗ. ಈಗಿನ ಶಿಕ್ಷಣ ಕ್ರಮದಲ್ಲಿಯೂ ಇದು ಅತ್ಯಾವಶ್ಯಕವಾದ ವಿಷಯ.

ಪ್ರಪಂಚದ ರಹಸ್ಯವನ್ನು ಅನ್ವೇಷಣೆ ಮಾಡುವ ವಿಜ್ಞಾನಿಗಳಿಗೂ ಆಂತರ್ಯವಾದ ಆಧ್ಯಾತ್ಮ ವಿಷಯಾನ್ವೇಷಣ ಮಾಡುವ ಸಾಧುಸಂತರಿಗೂ ಏಕಾಗ್ರಚಿತ್ತವು ಸಮಾನವಾಗಿ ಅನಿವಾರ್ಯವಾದ ಪರಿಸ್ಥಿತಿ.



# ಸತ್ಯಾನ್ವೇಷಣೆ

ಭಾರತವು ಆದಿಕಾಲದಿಂದಲೂ ಸತ್ಯಾನ್ವೇಷಣೆಗೆ ಪ್ರಸಿದ್ಧವಾಗಿದೆ. ಅದರ ಫಲವಾಗಿಯೇ ಅನೇಕ ದರ್ಶನಗಳೂ ಉಪನಿಷತ್ತುಗಳೂ ಉದ್ಭವಿಸಿದುವು. ಅನ್ವೇಷಣಕಾರರು ನಿರ್ಭಯವಾಗಿ ತಮಗೆ ಸತ್ಯವೆಂದು ತೋರಿದುದನ್ನು ಘೋಷಿಸಿ ಅಂಗೀಕೃತವಾದ ಅನೇಕ ಸಿದ್ಧಾಂತಗಳನ್ನು ಖಂಡಿಸಿದರು. ಶಿಕ್ಷಣ ಪ್ರಪಂಚದಲ್ಲಿಯೂ ಸತ್ಯಾನ್ವೇಷಣೆಗೆ, ಆಲೋಚನಾ ಸ್ವಾತಂತ್ರ್ಯಕ್ಕೆ ಪ್ರಧಾನ ಸ್ಥಾನವಿದ್ದಿತು. ಕಾಲಾನುಕಾಲದಲ್ಲಿ ಅಂಧಶ್ರದ್ಧೆ, ಧರ್ಮಪಕ್ಷಪಾತ, ಪರಂಪರಾಭಿಮಾನ, ವೈಯಕ್ತಿಕ ಆಲಸ್ಯ ಇವುಗಳ ಫಲವಾಗಿ ಮೂಢನಂಬಿಕೆಗೆ ಎಡೆಯಾಗಿ ವಿಚಾರಶೀಲತ್ವವೇ ಮಾಯವಾಗುತ್ತಿದೆ.

ಧಾರ್ಮಿಕ ಮೂಢನಂಬಿಕೆಗಳಂತೆಯೇ ವೈಜ್ಞಾನಿಕ ಮೂಢನಂಬಿಕೆಗಳೂ ಇರುತ್ತವೆ. ಧಾರ್ಮಿಕ ಕ್ಷೇತ್ರದ ಧರ್ಮಗುರುಗಳಂತೆಯೇ ಭೌತತತ್ತ್ವಗಳ ಅಭ್ಯಾಸ ತಮಗೇ ಮೀಸಲೆಂದು ನಂಬಿರುವ ವಿಜ್ಞಾನಿಗಳೂ ಇದ್ದಾರೆ. ಅನೇಕ ವೈಜ್ಞಾನಿಕ ವಿಷಯಗಳೂ ಅಂತ್ಯಸತ್ಯಗಳೇನೂ ಅಲ್ಲ. ಮುಂದಿನ ಅನುಭವಗಳು, ಹೊಸದಾಗಿ ಸಿಕ್ಕಿದ ಸಾಧನ ಸಾಮಗ್ರಿಗಳು ಇವುಗಳನ್ನು ಏಕಪ್ರಕಾರವಾಗಿ ಬದಲಾಯಿಸುತ್ತಿರುತ್ತವೆ. ಸಾಮಾಜಿಕ ಮತ್ತು ಧಾರ್ಮಿಕ ಪ್ರಪಂಚದಲ್ಲಿಯೂ ಅಂಗೀಕೃತ ಭಾವನೆಗಳು ವ್ಯತ್ಯಾಸವಾಗುತ್ತಿರುತ್ತವೆ. ಪ್ರಕೃತಿಶಾಸ್ತ್ರಗಳ ವಿಷಯದಲ್ಲಿಯೂ ಅಂತರ, ದೂರ, ಕಾಲ ಮೊದಲಾದ ವಿಷಯಗಳ ಭಾವನೆಗಳು ಹೊಸ ಹೊಸ ಅರ್ಥದಿಂದ ಕಾಣಿಸಿಕೊಳ್ಳುತ್ತದೆ.

ಆದುದರಿಂದ ಆಲೋಚನಾ ಶಕ್ತಿಯುಳ್ಳ ಮನುಷ್ಯನು ತೆರೆದ ಮನಸ್ಸುಳ್ಳವನಾಗಿ ಹಿಂದೆ ಕಾಣದ ಹೊಸ ಸತ್ಯವನ್ನು ಕಾಣಲು ಸ್ವತಂತ್ರ ಬುದ್ಧಿಯುಳ್ಳವನಾಗಿ ಮೂಲದೃಷ್ಟಿಯಿಂದ ವಿಭಜಿಸಿ, ಮೂಲವನ್ನು ಜಳ್ಳಿನಿಂದ ಬೇರ್ಪಡಿಸಿ ಸರಿಯಾದ ಸಿದ್ಧಾಂತಕ್ಕೆ ಬರುವ ಶಕ್ತಿಯನ್ನು ಪಡೆಯಬೇಕು. ಯಾವ ಪಕ್ಷಪಾತವೂ ಇಲ್ಲದೆ, ಯಾವ ವಿಧವಾದ ಪೂರ್ವಾಗ್ರಹವೂ ಇಲ್ಲದೆ ಸ್ವಂತ ಇಷ್ಟಾನಿಷ್ಟಗಳ ಸಂಬಂಧವಿಲ್ಲದೆ ನಿಷ್ಪಕ್ಷಪಾತವಾದ ಆಲೋಚನಾ ಮಾರ್ಗವನ್ನು

ಹೊಂದಿರಬೇಕಾದುದು ಆವಶ್ಯಕ. ವೈಜ್ಞಾನಿಕ ಮಾರ್ಗದ ಮೂಲಗುಣ ಪರಿಣಾಮದ ಫಲಾಫಲಗಳ ಯೋಚನೆ ಇಲ್ಲದಿರುವುದು. ಇದರಲ್ಲಿ ಅಂಗೀಕೃತವಾದ ವಿಷಯವನ್ನು ಸಿದ್ಧಾಂತ ಮಾಡುವುದಕ್ಕೂ ಖಂಡಿಸುವುದಕ್ಕೂ ಪ್ರಯತ್ನಪಡದೆ ಸತ್ಯವನ್ನು ಅಂಗೀಕರಿಸುವ ಶಕ್ತಿಯಿರಬೇಕು. ಆಲೋಚನಾಪರವಾದ ಮನಸ್ಸು ಉಪರ್ಯುಪರಿ ಬರುವ ಫಲಗಳಿಗೆ ಸೋಲದೆ ವಿಷಯವನ್ನು ಆಳವಾಗಿ ಪ್ರವೇಶಿಸಿ ಮೂಲಕಾರಣವನ್ನು ಸ್ವಭಾವವನ್ನು ಪರಿಶೀಲಿಸುತ್ತವೆ.

ಸತ್ಯಾನ್ವೇಷಣೆಯು ಅಪಾರವಾದ ಧೈರ್ಯವನ್ನು ಶಕ್ತಿಯನ್ನು ಅಪೇಕ್ಷಿಸುತ್ತದೆ. ಸ್ವಂತವಾದ ಪಾರ್ಥಿವ ಐಶ್ವರ್ಯಕ್ಕೂ ಅಧಿಕಾರಕ್ಕೂ ಹಾತೊರೆಯುವವರು ಎಂದಿಗೂ ಈ ಶಕ್ತಿಯನ್ನು ಪಡೆಯಲಾರರು. ಸತ್ಯಾನ್ವೇಷಣೆಗಾಗಿ ಆತ್ಮಾರ್ಪಣೆ ಮಾಡಿಕೊಂಡ ಸಾಕ್ರೆಟಿಸ್ಸಿನಂತಹವರು ಚರಿತ್ರೆಯಲ್ಲಿ ಅನೇಕರು ಸಿಗುತ್ತಾರೆ. ಈಗಿನ ಕಾಲದಲ್ಲಿಯೂ ಸತ್ಯಾನ್ವೇಷಣೆಗಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟ ಗಾಂಧೀಜಿಯವರ ಆದರ್ಶ ನಮ್ಮ ಮುಂದೆ ಇದೆ. ಮಹಮ್ಮದೀಯರಲ್ಲಿ ಸಹಾನುಭೂತಿಯನ್ನು ತೋರಿಸುವ ಧೈರ್ಯವನ್ನು ಅವರು ಪ್ರದರ್ಶಿಸಿದುದರಿಂದ ಅವರು ಕೊಲೆಗೀಡಾದರು. ತಮ್ಮ ಪ್ರಯೋಗ ಸಾಧನೆಗಾಗಿ ತಮ್ಮ ಶರೀರವನ್ನು ಒಪ್ಪಿಸಿದ ಅನೇಕ ವಿಜ್ಞಾನಿಗಳೂ ಇದ್ದಾರೆ. ಇಂತಹ ಸ್ವಾತಂತ್ರ್ಯ ಮನೋಭಾವವನ್ನು ನಮ್ಮ ವಿದ್ಯಾರ್ಥಿಗಳಿಗೂ ದೇಶಸೇವಕರಿಗೂ ವಿವಿಧ ರೀತಿಗಳಲ್ಲಿ ತಿಳಿಯಪಡಿಸಿದಾಗಲೇ ನಮ್ಮ ರಾಷ್ಟ್ರದ ಭಾವೀಜೀವನವು ಸುಖಮಯವಾಗುತ್ತದೆ.



# ರಾಮರಾಜ್ಯ

`ರಾಜಾ ಕಾಲಸ್ಯ ಕಾರಣಂ', `ಯಥಾ ರಾಜಾ ತಥಾ ಪ್ರಜಾಃ' ಎಂಬ ನಾಣ್ನುಡಿ ಭಾರತದಲ್ಲಿ ಬಹಳ ಕಾಲದಿಂದಲೂ ಚಿರಪರಿಚಿತವಾಗಿದೆ. ಪ್ರಜಾಪ್ರಭುತ್ವವಿರುವ ಈಗಿನ ಕಾಲದಲ್ಲಿಯೂ ಈ ವಾಕ್ಯವು ಅಕ್ಷರಶಃ ಸತ್ಯವಾಗಿದೆ. ಆಳುವ ಸರ್ಕಾರದ ದಕ್ಷತೆ, ನೀತಿ ಮತ್ತು ಧ್ಯೇಯ ಧೋರಣೆಗಳ ಆಧಾರದ ಮೇಲೆಯೇ ರಾಷ್ಟ್ರದ ಕ್ಷೇಮ ಲಾಭಗಳು ನಿರ್ಧಾರವಾಗುತ್ತವೆ. ಆದಿಕವಿ ವಾಲ್ಮೀಕಿ ಮಹರ್ಷಿಯು ಶ್ರೀ ರಾಮಾಯಣ ಮಹಾಕಾವ್ಯದಲ್ಲಿ ರಾಮರಾಜ್ಯದ ವಿಸ್ತಾರವಾದ ಚಿತ್ರಣದಿಂದ ಈ ವಾಕ್ಯದ ಸತ್ಯಾಂಶವನ್ನು ಸಿದ್ಧಮಾಡಿದ್ದಾರೆ. ರಾಷ್ಟ್ರದ ಸರ್ವತೋಮುಖವಾದ ಅಭಿವೃದ್ಧಿಗೆ ರಾಜ, ಅವನ ಮಂತ್ರಿಮಂಡಲ, ಆ ರಾಷ್ಟ್ರದ ಪ್ರಜೆಗಳೆಲ್ಲರೂ ಕಾರಣರು. ಅವರೆಲ್ಲರೂ ಸರಿಯಾದ ವ್ಯವಸ್ಥಿತವಾದ ರೀತಿಯಲ್ಲಿ ದುಡಿಯಬೇಕಾಗುತ್ತದೆ. ಆ ದೃಷ್ಟಿಯಿಂದ ರಾಮರಾಜ್ಯವು ಬಹು ಸುಭಿಕ್ಷದಿಂದ ಕೂಡಿತ್ತು. ಆದುದರಿಂದಲೇ ರಾಜಕಾರಣಿಗಳೆಲ್ಲ ತಮ್ಮ ರಾಜ್ಯ ರಾಮರಾಜ್ಯವೆಂದು ಹೇಳಿಕೊಳ್ಳುತ್ತಾರೆ. ಇದರ ನಿಜವಾದ ಅರಿವಾಗಬೇಕಾದರೆ ರಾಮರಾಜ್ಯದ ಕಲ್ಪನೆ ಪ್ರತಿಯೊಬ್ಬರಿಗೂ ದೃಷ್ಟವಾಗಬೇಕಾದುದು ಅತ್ಯಾವಶ್ಯಕ. ರಾಮರಾಜ್ಯದ ಮೂಲಸ್ತಂಭ ಅದರ ರಾಜನಾದ ಶ್ರೀರಾಮ. ಅವನು ಆದರ್ಶ ಮಾನವ ಮತ್ತು ಆದರ್ಶ ಮಹಾರಾಜ. ಅವನು ಯಾವಾಗಲೂ ಶಾಂತಸ್ವಭಾವದವನು. ಅವನು ಯಾರನ್ನೂ ದ್ವೇಷಿಸುತ್ತಿರಲಿಲ್ಲ. ಯಾರೂ ಅವನನ್ನು ದ್ವೇಷಿಸುತ್ತಿರಲಿಲ್ಲ. ಜನರೊಡನೆ ಮೃದುವಾಗಿ ಮಾತನಾಡತಕ್ಕವನು. ತನಗೆ ಕಠಿಣವಾಗಿ ನುಡಿದವರಿಗೂ ಪ್ರತಿಮಾತನಾಡತಕ್ಕವನಲ್ಲ. ಚಿಕ್ಕ ಉಪಕಾರಕ್ಕೂ ಸಂತೋಷಪಡುವವನು. ನೂರು ಅಪಕಾರಗಳನ್ನು ಮಾಡಿದರೂ ಲೆಕ್ಕಿಸುವವನಲ್ಲ. ಪರಿಶುದ್ಧ ಚಾರಿತ್ರವುಳ್ಳವನು. ಮೇಧಾವಿ. ಪ್ರಿಯವಾಗಿ ಮಾತನಾಡತಕ್ಕವನು. ಜನರನ್ನು ಕಂಡಾಗ ತಾನೇ ಮೊದಲು ಮಾತನಾಡಿಸುವವನು. ಶೂರನೆಂಬ ಜಂಬವಿಲ್ಲ. ಸುಳ್ಳು ಎಂಬುದು ಅವನಲ್ಲಿಗೆ ಸುಳಿಯದು. ಗುರುಹಿರಿಯರಲ್ಲಿ ಗೌರವ, ಪ್ರಜೆಗಳಲ್ಲಿ ಅನುರಾಗ, ಬಡಬಗ್ಗರಲ್ಲಿ ದಯೆ ಮತ್ತು ಅನುಕಂಪ-

ಇವು ಅವನಲ್ಲಿ ವಿಶೇಷವಾಗಿದ್ದವು. ಧರ್ಮಜ್ಞ, ಸತ್ಯಸಂಧ. ಕೋಪವನ್ನರಿಯದವನು. ಶ್ರೇಯಸ್ಕರವಲ್ಲದ್ದನ್ನು ಎಂದಿಗೂ ಮಾಡದವನು. ಬೃಹಸ್ಪತಿಯಂತೆ ವಾಗ್ವೈಖರಿಯುಳ್ಳವನು. ಸದಾ ಆರೋಗ್ಯಶಾಲಿ, ತರುಣ, ದೇಶಕಾಲವನ್ನರಿತು ವ್ಯವಹರಿಸುವವನು. ಪರಹೃದಯವನ್ನು ಗುರುತಿಸಬಲ್ಲ ಮರ್ಮಜ್ಞ. ಪ್ರಜೆಗಳೆಲ್ಲರೂ ಅವನನ್ನು ತಮ್ಮ ಬಹಿಪ್ರಾಣವೆಂದು ತಿಳಿದಿದ್ದರು. ವೇದವೇದಾಂಗವನ್ನು ಅವನು ವಿಧಿಪೂರ್ವಕವಾಗಿ ಅಭ್ಯಾಸಮಾಡಿದ್ದನು. ಶೂರನಾಗಿದ್ದಷ್ಟೇ ಕ್ಷಮಾಶಾಲಿ, ಮಹಾ ಪ್ರತಿಭಾಶಾಲಿ, ಲೌಕಿಕ ವ್ಯವಹಾರಜ್ಞ, ವಿನಯಶಾಲಿ, ಗಂಭೀರ ಸ್ವಭಾವದವನು. ಅವನ ಅನುಗ್ರಹ ನಿಗ್ರಹಗಳು ತಕ್ಷಣ ಫಲಕಾರಿಯಾಗುತ್ತಿದ್ದವು. ಆದರೂ ಎಂದಿಗೂ ಕೆಟ್ಟವರನ್ನು ಹತ್ತಿರ ಸೇರಿಸುತ್ತಿರಲಿಲ್ಲ. ದುರ್ಮಾರ್ಗದಲ್ಲಿ ಪ್ರವರ್ತಿಸದವನು. ಸರ್ವಶಾಸ್ತ್ರಜ್ಞ, ಕೃತಜ್ಞ ಜನರ ಸ್ವಭಾವವನ್ನು ಪರಿಶೀಲಿಸುವುದರಲ್ಲಿ ಕೋವಿದ. ಮಿತ್ರರನ್ನು ಸಂಗ್ರಹಿಸುವುದರಲ್ಲಿಯೂ ಸಕಾಲದಲ್ಲಿ ಅವರಿಗೆ ಉಪಕಾರ ಮಾಡುವುದರಲ್ಲೂ ವಿಚಕ್ಷಣ, ದುಷ್ಟಶಿಕ್ಷಣ, ಶಿಷ್ಟರಕ್ಷಣದ ಔಚಿತ್ಯವನ್ನು ಬಲ್ಲವನು. ಧನಸಂಚಯದಲ್ಲಿ ಎಷ್ಟು ಧರ್ಮದೃಷ್ಟಿಯೋ ವ್ಯಯದಲ್ಲಿಯೂ ಅಷ್ಟೇ ಎಚ್ಚರಿಕೆಯುಳ್ಳವನು. ಆಲಸ್ಯವೆಂಬುದನ್ನೇ ಅರಿಯದವನು. ಸಂಗೀತ, ಸಾಹಿತ್ಯ, ನಾಟಕಾದಿಗಳಲ್ಲಿ ಪೂರ್ಣ ನೈಪುಣ್ಯವುಳ್ಳವನು. ಸಂಗ್ರಾಮವಿದ್ಯೆಯಲ್ಲಿ ಬಹುಕುಶಲನಾದರೂ ಕ್ರೋಧಪರವಶನಲ್ಲ. ಮತ್ಸರಿಯಲ್ಲ, ಅಹಂಕಾರಿಯಲ್ಲ, ತಾಳ್ಮೆಯಲ್ಲಿ ಭೂದೇವಿಗೂ ಬುದ್ಧಿಯಲ್ಲಿ ಬೃಹಸ್ಪತಿಗೂ ಪರಾಕ್ರಮದಲ್ಲಿ ದೇವೇಂದ್ರನಿಗೂ ಸಮಾನವಾದವನು. ಸಕಲ ಪ್ರಾಣಿಗಳಲ್ಲಿಯೂ ಸಮಾನವಾದ ಅನುಕಂಪ. ಪ್ರಜೆಗಳಲ್ಲಿ ತಂದೆತಾಯಿಗಳಿಗಿರುವಷ್ಟು ಪ್ರೀತಿ. ಸೌಂದರ್ಯಶಾಲಿ ಶ್ರೀಮನ್ನಾರಾಯಣನಂತೆ ಲೋಕಾಭಿರಾಮನಾದವನು.

ಅವನ ಮಂತ್ರಿಗಳೆಲ್ಲರೂ ಪರರ ಇಂಗಿತವನ್ನು ಬಲ್ಲವರೂ ರಾಜನಿಗೆ ಹಿತವಾದ ಕಾರ್ಯವನ್ನೇ ಮಾಡತಕ್ಕವರು. ಕಪಟವಿಲ್ಲದೆ ರಾಜನಲ್ಲಿ ಅನುರಕ್ತರಾದವರು. ಎಲ್ಲರೂ ವಿದ್ಯಾವಿನಯ ಸಂಪನ್ನರು, ತೇಜಸ್ವಿಗಳು, ಮಹಾತ್ಮರು, ಕೀರ್ತಿಶಾಲಿಗಳು, ಕ್ಷಮಾಶೀಲರು, ಹಸನ್ಮುಖಿಗಳು, ನೀತಿಶಾಸ್ತ್ರಜ್ಞರು, ಪ್ರಿಯಂವದರು, ಸ್ವಾರ್ಥಕ್ಕಾಗಿ ಸುಳ್ಳು ಹೇಳುವವರಲ್ಲ. ಗೂಢಚಾರರ ಮೂಲಕ ಎಲ್ಲ ರಹಸ್ಯಗಳನ್ನು ತಿಳಿಯುತ್ತಿದ್ದರು. ವ್ಯವಹಾರ ದಕ್ಷರು. ಅಪರಾಧಿಗಳಾದರೆ ತಮ್ಮ ಮಕ್ಕಳನ್ನು ಶಿಕ್ಷಿಸದೇ ಬಿಡುತ್ತಿರಲಿಲ್ಲ. ಅಪರಾಧಿಯಲ್ಲದಿದ್ದರೆ ಶತ್ರುಗಳನ್ನು ಹಿಂಸಿಸುತ್ತಿರಲಿಲ್ಲ. ವ್ಯವಹಾರದಕ್ಷರೂ ನ್ಯಾಯಶೀಲರೂ ಸೌಹಾರ್ದಯುತರೂ ಆಗಿದ್ದರು. ಭಂಡಾರವನ್ನು ಚತುರಂಗಬಲವನ್ನು ಅಭಿವೃದ್ಧಿಪಡಿಸುವುದರಲ್ಲಿ ಸರ್ವದಾ ಆಸಕ್ತಿಯುಳ್ಳವರಾಗಿದ್ದರು. ವಸ್ತ್ರಭೂಷಣಾಲಂಕಾರಗಳಲ್ಲಿ ಗಾಂಭೀರ್ಯವುಳ್ಳವರು, ದೇಶವಿದೇಶಗಳಲ್ಲಿ ಪ್ರಸಿದ್ಧರಾಗಿದ್ದರು.

ಆ ರಾಜ್ಯದ ಪ್ರಜೆಗಳು ಧರ್ಮಾತ್ಮರೂ, ವಿದ್ವಾಂಸರೂ, ಸತ್ಯವಂತರೂ, ಪರದ್ರವ್ಯದಲ್ಲಿ ವಿಮುಖರೂ ನಿತ್ಯತೃಪ್ತರೂ ಸಂತುಷ್ಟರೂ ಗೋಸಮೃದ್ಧಿಯುಳ್ಳವರೂ ಆಗಿದ್ದರು.

ಆ ಪಟ್ಟಣಗಳಲ್ಲಿ ಕಾಮುಕನಾಗಲೀ ಕೃಪಣನಾಗಲೀ ಕ್ರೂರಿಯಾಗಲೀ ಹಿಂಸಾಚಾರಿಯಾಗಲೀ ಹುಡುಕಿದರೂ ಸಿಗುತ್ತಿರಲಿಲ್ಲ. ಎಲ್ಲರೂ ವಸ್ತ್ರಭೂಷಣಾಲಂಕಾರಗಳಿಂದ ಕೂಡಿದ್ದರು. ಅಯೋಧ್ಯಾಪಟ್ಟಣದಲ್ಲಿ ನಿತ್ಯವೂ ಮೃಷ್ಟಾನ್ನಭೋಜನ ಮಾಡದವನೂ ದಾನಮಾಡದವನೂ ಜಿತೇಂದ್ರಿಯನಲ್ಲದವನೂ ಇರಲಿಲ್ಲ. ನಾಸ್ತಿಕನನ್ನಾಗಲೀ ಅಲ್ಪವಿದ್ಯಾವಂತರನ್ನಾಗಲೀ ಅಸೂಯಾಪರರನ್ನಾಗಲೀ ಅಲ್ಲಿ ಕಾಣಲಾಗುತ್ತಿರಲಿಲ್ಲ. ಸ್ತ್ರೀ ಪುರುಷರೆಲ್ಲರೂ ಸುಂದರರೂ ಶ್ರೀಮಂತರೂ ಆರೋಗ್ಯಶಾಲಿಗಳೂ ರಾಜಭಕ್ತರೂ ಆಗಿದ್ದರು.

ಇಂತಹ ರಾಜ್ಯದಲ್ಲಿ ಕಾಲಕಾಲಕ್ಕೆ ಮಳೆಯಾಗುತ್ತಿತ್ತು. ಸರ್ವದಾ ಸಸ್ಯಸಮೃದ್ಧಿ ಇರುತ್ತಿತ್ತು. ರೋಗಾದಿ ಉಪದ್ರವಗಳಿರಲಿಲ್ಲ. ಕಳ್ಳಕಾಕರ ಭೀತಿ ಇರಲಿಲ್ಲ. ಅಕಾಲ ಮರಣವಿರಲಿಲ್ಲ. ಎಲ್ಲ ದೃಷ್ಟಿಯಿಂದಲೂ ರಾಜ್ಯವು ಸಂತೋಷಭರಿತವಾಗಿತ್ತು. ಇದು ರಾಮರಾಜ್ಯ. ಇದು ಅಪೇಕ್ಷಣೀಯವಾದರೂ ಆಚರಣೆಗೆ ತರಲು ಬಹು ಕಷ್ಟಸಾಧ್ಯವಾದುದು. ಅತ್ಯುತ್ತಮವಾದ ಆದರ್ಶ.



## ಧರ್ಮೋ ರಕ್ಷತಿ ರಕ್ಷಿತಃ

ಭಾರತವು ಪುಣ್ಯಭೂಮಿ. ಆದಿಕಾಲದಿಂದ ಇಲ್ಲಿಯ ಜನಜೀವನದಲ್ಲಿ ಧರ್ಮಕ್ಕೆ ಪ್ರಧಾನಸ್ಥಾನ. ತೈತ್ತರೀಯೋಪನಿಷತ್ತಿನಲ್ಲಿ 'ಧರ್ಮೋ ವಿಶ್ವಸ್ಯ ಜನತಃ ಪ್ರತಿಷ್ಠಾ, ಲೋಕೇ ಧರ್ಮಿಷ್ಠ ಪ್ರಜಾ ಉಪಸರ್ಪಂತಿ, ಧರ್ಮೇಣ ಪಾಪಮಪನುದತಿ, ಧರ್ಮೇ ಸರ್ವಂ ಪ್ರತಿಷ್ಠಿತಂ, ತಸ್ಮಾದ್ಧರ್ಮಂ ಪರಮಂ ವದಂತಿ' ಎಂದರೆ ವಿಶ್ವಜಗತ್ತಿನ ಪ್ರತಿಷ್ಠೆಯೇ ಧರ್ಮ. ಲೋಕದಲ್ಲಿ ಧರ್ಮಿಷ್ಟರಾದವರನ್ನು ಪ್ರಜೆಗಳು ಉಪಸರ್ಪಣ ಮಾಡುತ್ತಾರೆ. ಧರ್ಮದಲ್ಲಿಯೇ ಎಲ್ಲವೂ ಅಡಕವಾಗಿರುತ್ತದೆ. ಧರ್ಮದಿಂದ ಪಾಪ ಪರಿಹಾರವಾಗುತ್ತದೆ. ಆದುದರಿಂದ ಧರ್ಮವೇ ಅತ್ಯುತ್ತಮವಾದುದು ಎಂದು ಹೇಳಿದೆ. ರಾಮಾಯಣದಲ್ಲಿ 'ಧರ್ಮಾದರ್ಥ ಪ್ರಭವತೇ ಧರ್ಮಾತ್ ಪ್ರಭಾವತೇ ಸುಖಮ್ ಧರ್ಮೇಣ ಲಭತೇ ಸರ್ವಂ ಧರ್ಮಸಾರಮಿದಂ ಜಗತ್' ಎಂದು ಹೇಳಿದೆ. ಆದರೆ ಈ 'ಧರ್ಮ' ಶಬ್ದಕ್ಕೆ ಸರಿಯಾದ ಅರ್ಥ ಹೇಳುವುದು ಸುಲಭವಲ್ಲ. ಈ ಶಬ್ದವು ಋಗ್ವೇದ, ಐತ್ತರೇಯ ಬ್ರಾಹ್ಮಣ, ಛಾಂದೋಗ್ಯೋಪನಿಷತ್, ತೈತ್ತರೀಯೋ ಪನಿಷತ್ ಮತ್ತು ಮಹಾಭಾರತದಲ್ಲಿ ಪ್ರಯೋಗವಾಗಿದೆ. ಈ ಒಂದೊಂದರಲ್ಲೂ ಅದು ಭಿನ್ನಾರ್ಥವಾಚಿಯಾಗಿದೆ. ಮೂಲಾರ್ಥದಲ್ಲಿ ಅದು ಪ್ರಪಂಚಕ್ಕೆ ಧಾರಕಶಕ್ತಿ ಎಂದು ಅರ್ಥವಾಗುತ್ತದೆ. ಮುಂದೆ ನ್ಯಾಯ, ನೀತಿ, ನಡತೆ, ಕರ್ತವ್ಯ ಮೊದಲಾದುವೆಲ್ಲವೂ ಅದರ ಅರ್ಥವ್ಯಾಪ್ತಿಯಲ್ಲಿ ಅಡಕವಾಗುತ್ತವೆ. ಧರ್ಮರೂಪವೂ ಏಕರೀತಿಯದಲ್ಲ. ಕಾಲ, ದೇಶ, ಸನ್ನಿವೇಶ, ಆಶ್ರಮ, ವ್ಯಕ್ತಿಗಳಿಗೆ ಅದು ಬೇರೆ ಬೇರೆ ರೀತಿಯದಾಗಿರುತ್ತದೆ. ಆದುದರಿಂದಲೇ ಧರ್ಮಶಾಸ್ತ್ರಕಾರರು ಧರ್ಮವು ವರ್ಣಧರ್ಮ, ಆಶ್ರಮಧರ್ಮ, ವರ್ಣಾಶ್ರಮಧರ್ಮ, ನೈಮಿತ್ತಿಕಧರ್ಮ, ಗುಣಧರ್ಮ ಎಂಬ ಐದು ಭಾಗಗಳಲ್ಲಿ ಕರ್ತವ್ಯವನ್ನು ನಿರ್ಣಯಿಸತಕ್ಕದ್ದೆಂದು ಸಿದ್ಧಾಂತಮಾಡಿದ್ದಾರೆ.

ಧರ್ಮಕ್ಕೆ ವೇದಸ್ಮೃತಿ ಮತ್ತು ಶಿಷ್ಟಾಚಾರಗಳು ಮೂಲವೆಂದು ಎಲ್ಲ ಧರ್ಮಶಾಸ್ತ್ರಕಾರರೂ ಒಪ್ಪಿದ್ದಾರೆ. ಇದರ ಮೇಲೆ ಮಹಾಭಾರತವು ಶ್ರುತಿರ್ವಿಭಿನ್ನಾಃ ಸ್ಮೃತಿಯಶ್ಚ ಭಿನ್ನಾಃ ನೈಕೋ ಮುನಿಃ ಮದ್ಯವಚಃ ಪ್ರಮಾಣಂ। ಧರ್ಮಸ್ಯ ತತ್ವಂ ನಿಹಿತಂ ಗುಹಾಯಾಂ

ಮಹಾಜನೋಯೇನ ಗತಃ ಸ ಪಂಥಾಃ || ಎಂದರೆ ಶ್ರುತಿಗಳು ಬೇರೆ ಬೇರೆಯಾಗಿವೆ. ಧೃತಿಗಳೂ ಬೇರೆ ಬೇರೆಯಾಗಿವೆ. ಯಾರ ಮಾತು ಪ್ರಮಾಣವೋ ಅಂತಹ ಮುನಿಗಳು ಅನೇಕರಿದ್ದಾರೆ. ಧರ್ಮದ ಸತ್ವ ಗುಹೆಯೊಳಗೆ ಅಡಗಿದೆ. ಆದುದರಿಂದ ಮಹಾಜನರು ನಡೆಯುವ ದಾರಿಯೇ ಧರ್ಮ' ಎಂದು ಹೇಳಿದೆ. ಈ ವಿವರಣೆಯೂ ಅಷ್ಟು ಸ್ಪಷ್ಟವಾಗಿಲ್ಲ. ಕಾಲಾನುಕಾಲದಲ್ಲಿ ಕಾಲ, ಸಂಸ್ಕಾರ, ಅಭಿರುಚಿ, ಸಂಸರ್ಗ, ಸನ್ನಿವೇಶ ಮೊದಲಾದುವುಗಳು ವ್ಯತ್ಯಾಸವಾದಂತೆಲ್ಲಾ ಸಾರ್ವತ್ರಿಕವಾಗಿ ಅನುಸರಿಸಬಹುದಾದ ಧರ್ಮವನ್ನು ಸ್ಮೃತಿಕಾರರು ವಿಶದಗೊಳಿಸಿದ್ದಾರೆ.

ಧೃತಿಃ ಕ್ಷಮಾ ದಮಃ ಅಸ್ತೇಯಂ ಶೌಚಂ ಇಂದ್ರಿಯನಿಗ್ರಹಂ
ಧೀಃ ವಿದ್ಯಾಸತ್ಯಂ ಅಕ್ರೋಧಂ ದಶಕಂ ಧರ್ಮಲಕ್ಷಣಂ||

ಎಂಬುದು ಮನುವಿನ ಧರ್ಮಲಕ್ಷಣ. ಮಹಾಭಾರತವು ಧರ್ಮದ ನಿರಾಭಾದಿತವಾದ ಲಕ್ಷಣವನ್ನು ಈ ರೀತಿ ನಿರೂಪಿಸುತ್ತದೆ.

ಧರ್ಮಂ ಯೇ ಬಾಧತೇ ಧರ್ಮಂ ನ ಸ ಧರ್ಮಃ ಕುಧರ್ಮಕಃ
ಅವಿರೋಧಾತ್ತು ಯೋ ಧರ್ಮಃ ಸಧರ್ಮದ್ವರ್ತ್ಯವಿಕ್ರಮಃ ||

ಮತ್ತೊಂದು ಧರ್ಮವನ್ನು ಬಾಧಿಸತಕ್ಕ ಧರ್ಮ ಧರ್ಮವಲ್ಲ. ಅದು ಕುಧರ್ಮ. ಇನ್ನೊಂದು ಧರ್ಮಕ್ಕೆ ವಿರೋಧವಲ್ಲದುದು ಧರ್ಮ. ರಾಮಾಯಣದಲ್ಲಿ ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ಯಾವುದು ಯಾರಿಗೂ ಮನೋವ್ಯಥೆಯನ್ನುಂಟುಮಾಡುವುದಿಲ್ಲವೋ ಅದು ಧರ್ಮ ಎಂದು ಹೇಳಿದೆ. ಇಂತಹ ಧರ್ಮವನ್ನು ನಾಶಪಡಿಸುವುದರಿಂದ ನಾವು ವಿಧಿಸಲ್ಪಡುತ್ತೇವೆ. ಆ ಧರ್ಮವನ್ನು ರಕ್ಷಿಸುವವನನ್ನು ಆ ಧರ್ಮವೇ ರಕ್ಷಿಸುತ್ತದೆ ಎಂಬುದು 'ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ' ಎಂಬ ವಾಕ್ಯದಿಂದ ಸಿದ್ಧವಾಗುತ್ತದೆ.

ಧರ್ಮವನ್ನು ಪಾಲಿಸಿದ ಶ್ರೀರಾಮ, ಧರ್ಮರಾಯ ಭೀಷ್ಮಾದಿಗಳನ್ನು ಅವರವರು ರಕ್ಷಿಸಿದ ಧರ್ಮವೇ ಕಾಪಾಡಿತು. ಮೇಲೆ ಹೇಳಿದ ಧರ್ಮಾದಿಗಳನ್ನು ನಾಶಪಡಿಸಿದ ರಾವಣಾದಿಗಳು ಆ ಧರ್ಮದಿಂದಲೇ ನಾಶವಾಗಿದ್ದಾರೆ.

ಆದುದರಿಂದ ಪ್ರತಿವ್ಯಕ್ತಿಯೂ ಸ್ವಧರ್ಮದ ಅರಿವಿನಿಂದ ಪರಧರ್ಮಕ್ಕೆ ಲೋಪಬಾರದಂತೆ ಸಮಾಜದ ಭದ್ರತೆಯುನ್ನು ಸಾಧಿಸಿ ತನ್ಮೂಲಕ ರಾಷ್ಟ್ರದ ಸರ್ವತೋಮುಖವಾದ ಅಭಿವೃದ್ಧಿಗೆ ಕಾರಣನಾಗಬೇಕೆಂಬುದು ಧರ್ಮಾಚರಣೆಯ ಪರಮಧ್ಯೇಯ.







ಮಹಾರಾಜ ಕಾಲೇಜಿನ ಮನರಂಜನ ಸಂಘ (ನಿಂತ ಮೊದಲನೆಯ ಸಾಲಿನಲ್ಲಿ ಮೊದಲನೆಯವರು ಡಾ. ಅನಂತರಂಗಾಚಾರ್) ಕುಳಿತಿರುವ ಸಾಲಿನಲ್ಲಿ ಡಾ. ರೋಲೋ, ಡಾ. ಗೋಪಾಲಸ್ವಾಮಿ, ಬಿ.ಎಂ.ಶ್ರೀ ಮುಂತಾದವರಿದ್ದಾರೆ.



ಮಹಾರಾಜಾ ಕಾಲೇಜು ಕರ್ನಾಟಕ ಸಂಘ



ಘನತೆವೆತ್ತ ರಾಜ್ಯಪಾಲ ಡಾ. ಉಮಾಶಂಕರ ದೀಕ್ಷಿತ್ ಅವರಿಂದ ಡಿ. ಲಿಟ್ ಸ್ವೀಕಾರ (೧೯೭೪)



ಘನತೆವೆತ್ತ ರಾಜ್ಯಪಾಲ ಶ್ರೀ ಮೋಹನಲಾಲ್ ಸುಖಾಡಿಯಾ ಅವರಿಂದ ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿ ಸ್ವೀಕಾರ (೧೯೭೪)



೬೦ ವರ್ಷದ ಶಾಂತಿ ನಡೆದ ಸಂದರ್ಭ



ತಮ್ಮ ಹಾಗೂ ಮಕ್ಕಳೊಂದಿಗೆ ಆಚಾರ್ಯರು



ಓರಿಯಂಟಲ್ ಲೈಬ್ರರಿ ಮೈಸೂರು - ಇಲ್ಲಿ ಉದ್ಯೋಗದಲ್ಲಿದ್ದಾಗ ತೆಗೆದ ಚಿತ್ರ (೧೯೩೭)
ಮೈಸೂರು ವಿಶ್ವವಿದ್ಯಾನಿಲಯದ ಆಗಿನ ಕುಲಪತಿ ಇ.ಪಿ. ಮೆಟ್‌ಕಾಫ್ ಅವರೊಂದಿಗೆ



ರನ್ನನ ಗದಾಯುದ್ಧ ನಾಟಕ ಪ್ರದರ್ಶನದ ನಂತರದ ಚಿತ್ರ (೧೯೨೫) ಎಸ್.ವಿ. ರಂಗಣ್ಣ, ಪಿ. ಶ್ರೀಕಂಠಯ್ಯ ಮುಂತಾದವರೊಂದಿಗೆ ದೃತರಾಷ್ಟ್ರನಪಾತ್ರದಲ್ಲಿ ಅನಂತರಂಗಾಚಾರ್ (ನಿಂತಿರುವವರಲ್ಲಿ ಎಡದಿಂದ ಐದನೆಯವರು)



ಡಾ. ಅನಂತರಂಗಾಚಾರ್ ಅವರ ಮೊದಲ ಪತ್ನಿ ಶ್ರೀಮತಿ ಜಾನಕಮ್ಮ



ಅನಂತರಂಗಾಚಾರ್ ಅವರ ದ್ವಿತೀಯ ಪತ್ನಿ ಶ್ರೀಮತಿ ಇಂದಿರಾ



ಅನಂತರಂಗಾಚಾರ್ ಅವರು ಮನೆಯುಡುಗೆಯಲ್ಲಿ



ಮೊಮ್ಮಗಳೊಂದಿಗೆ

## ಡಾ. ಎನ್. ಅನಂತರಂಗಾಚಾರ್

- ಜನನ - ಕ್ರೋಧಿನಾಮ ಸಂವತ್ಸರ ವೈಶಾಖಮಾಸ ಕೃತ್ತಿಕಾನಕ್ಷತ್ರ ೦೪-೦೬-೧೯೦೪ - ತಿರುಮಕೂಡಲು ನರಸೀಪುರದಲ್ಲಿ ಜನನ*. ತಂದೆ: ಉಪಾಧ್ಯ ಸ್ವಚ್ಛಂದಂ ಲಕ್ಷ್ಮೀ ನರಸಿಂಹಾಚಾರ್ಯ : ತಾಯಿ ಶ್ರೀಮತಿ ವೆಂಕಟಲಕ್ಷ್ಮಮ್ಮ
- ವಿದ್ಯಾಭ್ಯಾಸ : ಪ್ರಾಥಮಿಕ : ತಿ. ನರಸೀಪುರದ ಎ.ವಿ. ಸ್ಕೂಲ್‌ನಲ್ಲಿ ಎಲ್. ಎಸ್. ನವರೆಗೆ
  ಪ್ರೌಢವಿದ್ಯಾಭ್ಯಾಸ : ಮೈಸೂರು ಮಹಾರಾಜರವರ ಹೈಸ್ಕೂಲು
- **ಕಾಲೇಜು ವಿದ್ಯಾಭ್ಯಾಸ :**
  ಬಿ. ಎ. : ಮಹಾರಾಜಾಕಾಲೇಜು, ಮೈಸೂರು (೧೯೨೪-೨೭)
  ಎಂ. ಎ. : ಮಹಾರಾಜಾ ಕಾಲೇಜು, ಮೈಸೂರು (೧೯೨೭-೨೯)
  ಬಿ. ಟಿ. : ಮಹಾರಾಜಾ ಕಾಲೇಜು, ಮೈಸೂರು (೧೯೨೯-೩೦)
- **ಬೋಧನೆ / ಸಂಶೋಧನೆ :** ಮಹಾರಾಜಾ ಕಾಲೇಜಿನಲ್ಲಿ ಪಂಡಿತ ವೃತ್ತಿ (೧೯೩೧-೩೨)
  ಮೈಸೂರು ಪ್ರಾಚ್ಯಕೋಶಾಗಾರದಲ್ಲಿ ಪಂಡಿತ (೧೯೩೨-೪೨)
- **ಕನ್ನಡ ಉಪನ್ಯಾಸಕ**
  ಮೈಸೂರು ಮಹಾರಾಜಾ ಕಾಲೇಜು,
  ಮಹಾರಾಣಿಯವರ ಕಾಲೇಜು, ಮೈಸೂರು
  ಯುವರಾಜಾ ಕಾಲೇಜು, ಮೈಸೂರು
  ಸರಕಾರಿ ಕಾಲೇಜು, ಕೋಲಾರ
- **ಕನ್ನಡ ಪ್ರವಾಚಕ:**
  ಸಹ್ಯಾದ್ರಿ ಕಾಲೇಜು ಶಿವಮೊಗ್ಗ
  . ಮಹಾರಾಣಿಯವರ ಕಾಲೇಜು, ಬೆಂಗಳೂರು
  (೧೯೬೨ರಲ್ಲಿ ನಿವೃತ್ತಿ)

(ಒಟ್ಟು ೩೦ ವರ್ಷಗಳ ಬೋಧನ ಸಂಶೋಧನಾನುಭವ)

- **ಶೈಕ್ಷಣಿಕ ಮನ್ನಣೆ, ಗೌರವ / ಸಾರ್ವಜನಿಕ ಕಾರ್ಯ**
  . ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಿಲಿಟ್ ಪದವಿ ೧೯೩೫
  . ರಾಜ್ಯ ಸಾಹಿತ್ಯ ಅಕಾಡಮಿಯ ಪ್ರಶಸ್ತಿ.
  . ಸಂಪಾದಕ : ಪ್ರಬುದ್ಧ ಕರ್ನಾಟಕ ತ್ರೈಮಾಸಿಕ ಪತ್ರಿಕೆ
  . ಶ್ರೀವೈಷ್ಣವ ಸಭಾ, ಸರಸ್ವತೀಪುರಂ - ಇದರ ಸ್ಥಾಪಕಾಧ್ಯಕ್ಷ (೧೯೪೨)
  . ತಿ. ನರಸೀಪುರದ ಗುಂಜಾನರಸಿಂಹಸ್ವಾಮಿ ದೇವಸ್ಥಾನದ ಜೀರ್ಣೋದ್ಧಾರ ಸಮಿತಿ ಅಧ್ಯಕ್ಷ.

---

* ಸರಕಾರಿ ದಾಖಲೆಯಲ್ಲಿ ಈ ದಿನಾಂಕದಲ್ಲಿ ಬದಲಾವಣೆಯಿದೆ.

## ಗ್ರಂಥಗಳು

**ಸಂಪಾದಿತ**

ಮಲ್ಲಿಕಾರ್ಜುನನ ಸೂಕ್ತಿ ಸುಧಾರ್ಣವ - ೧೯೪೨
ಕುಮಾರವ್ಯಾಸನ ದ್ರೋಣಪರ್ವ - ೧೯೩೬
ಕುಮಾರವ್ಯಾಸನ ಕರ್ಣಪರ್ವ - ೧೯೪೦
ಕುಮಾರವ್ಯಾಸನ ಶಲ್ಯಗದಾಪರ್ವಗಳು - ೧೯೪೨
ಜಗನ್ನಾಥವಿಜಯ ಸಂಗ್ರಹ - ೧೯೭೪
ಕುಮಾರರಾಮ ಸಾಂಗತ್ಯ ಸಂಗ್ರಹ - ೧೯೬೦
ಮಾನೌನಮಿಯ ಚಾಪದ - ೧೯೬೧
ನಾಗವರ್ಮನ ಕರ್ನಾಟಕ ಕಾದಂಬರಿ - ೧೯೭೩
ಮಲ್ಲಕವಿಯ ಕಾವ್ಯಸಾರ - ೧೯೭೬
ಕರ್ಣಾಟಕ ಪಂಚತಂತ್ರಂ - ೧೯೭೩

**ಕೃತಿಗಳು :**

ಅಶ್ವತ್ಥಾಮನ್
ಕನ್ನಡ ರತ್ನತ್ರಯ - ೧೯೫೯
ಕವಿರನ್ನ
ನೇಮಿಚಂದ್ರ
ಲಕ್ಷ್ಮೀಶ
ಸಾಹಿತ್ಯ ಭಾರತಿ - ೧೯೭೦
ಕನ್ನಡ ಚಂಪೂಕಾವ್ಯಗಳ ಪದ್ಯಾನುಕ್ರಮಣಿಕೆ - ೧೯೭೨
ವೇದಾಂತ ದೇಶಿಕರು ಮತ್ತು ಅವರ ಗ್ರಂಥಗಳು
ಶ್ರೀಮನ್ನಿಗಮಾನ್ತ ದೇಶಿಕರು
ನಮ್ಮಾಳ್ವಾರ್ ತಿರುವಾಯ್ ಮೊೞಿಯ ವ್ಯಾಖ್ಯಾನ
ಪ್ರಬುದ್ಧ ಕರ್ನಾಟಕದ ಅಕಾರಾದಿ ಸೂಚಿ- ೧೯೮೨
ಪಂಪಭಾರತದ ಗದ್ಯಾನುವಾದ - ೧೯೭೭
ರಾ. ನರಸಿಂಹಾಚಾರ್ಯ ಜೀವನ ಮತ್ತು ಕಾರ್ಯ ೧೯೭೧
ಭಾರತೀಯ ತೀರ್ಥಕಲಾಕ್ಷೇತ್ರ ಸಂದರ್ಶಿನಿ
ರಾಮಾಯಣ ಭಾರತಿ

ಅನಂತರಂಗಾಚಾರ್ಯರಿಗೆ ಇಬ್ಬರು ತಮ್ಮಂದಿರು. ಶ್ರೀ ಅನಂತರಾಮಯ್ಯಂಗಾರ್ (ಸರ್ಕಾರಿ ಮುದ್ರಣಾಲಯದಲ್ಲಿ ನೌಕರಿಯಲ್ಲಿದ್ದರು) ಮತ್ತು ಶ್ರೀ ಅನಂತಾಚಾರ್ಯ (ಬೆಂಗಳೂರು ಸಂಸ್ಕೃತ ಪಾಠಶಾಲೆಯಲ್ಲಿ ಘನಪಾಠಿಗಳಾಗಿದ್ದರು.)

ಅನಂತರಂಗಾಚಾರ್ಯರು ೧೯೧೮ರಲ್ಲಿ ವಿದ್ವಾನ್ ಶ್ರೀನಿವಾಸ ಚಕ್ರವರ್ತಿಯವರ ಹಿರಿಯ ಮಗಳು ಶ್ರೀಮತಿ ಜಾನಕಿಯವರನ್ನು ವಿವಾಹವಾದರು. ಈ ದಂಪತಿಗಳಿಗೆ ಶ್ರೀ ಎ. ಎಲ್. ನರಸಿಂಹಾಚಾರ್, ಶ್ರೀ ಎ. ಶ್ರೀನಿವಾಸರಂಗಾಚಾರ್, ಶ್ರೀಮತಿ ಜಯಲಕ್ಷ್ಮಿ, ಶ್ರೀಮತಿ ರಾಧಾ ಮತ್ತು ಶ್ರೀಮತಿ ಪದ್ಮಾವತಿ ಇವರು ಮಕ್ಕಳು. ಶ್ರೀಮತಿ ಜಾನಕಮ್ಮನವರು ೧೯೪೮ರಲ್ಲಿ ಅನಾರೋಗ್ಯ ಕಾರಣ ನಿಧನರಾದರು. ೧೯೫೨ರಲ್ಲಿ ಸೋಸಲೆ ಗೋಪಾಲಾಚಾರ್ ಅವರ ಮಗಳು ಶ್ರೀಮತಿ ಇಂದಿರಾ ಅವರನ್ನು ವಿವಾಹವಾದರು-ಇವರಿಗೆ ಶ್ರೀಮತಿ ಎ. ಜಾನಕಿ, ಡಾ. ಎ. ಶಶಿಕಲಾ, ಶ್ರೀಮತಿ ಸುಧಾ, ಶ್ರಿ ಎ. ಗೋಪಾಲ್, ಶ್ರೀಮತಿ ಜಯಶ್ರೀ, ಶ್ರೀಮತಿ ಜ್ಯೋತಿ ಮತ್ತು ಶ್ರೀಮತಿ ಭಾರತಿ - ಇವರು ಮಕ್ಕಳು.

ಶ್ರೀಮತಿ ಅನಂತರಾಮಯ್ಯಂಗಾರ್ ಮತ್ತು ಶ್ರೀನಿವಾಸಮ್ಮ - ಈ ದಂಪತಿಗಳಿಗೆ ಶ್ರೀ ಎ. ಎಲ್. ನರಸಿಂಹನ್, ಡಾ. ಎ. ಜಾನಕಿ, ಶ್ರೀಮತಿ ಇಂದಿರಾ, ಶ್ರೀಮತಿ ಲಕ್ಷ್ಮಿ ಶ್ರೀ ರಾಘವನ್ - ಇವರು ಮಕ್ಕಳು.

ಶ್ರೀ ಅನಂತಾಚಾರ್ಯ-ಜಾನಕಮ್ಮ ಇವರಿಗೆ ಶ್ರೀಮತಿ ವಿಜಯಲಕ್ಷ್ಮಿ, ಶ್ರೀಮತಿ ರಂಗನಾಯಕಿ, ಶ್ರೀಮತಿ ಪದ್ಮ, ಶ್ರೀ ಅನಂತನರಸಿಂಹನ್, ಶ್ರೀಮತಿ ರಮಾ, ಶ್ರೀಮತಿ ಪ್ರೇಮ, ಶ್ರೀಮತಿ ಯಶೋಧ, ಶ್ರೀ ಅನಂತರಂಗಾಚಾರ್, ಶ್ರೀಮತಿ ಜಯಶ್ರೀ ಮತ್ತು ಶ್ರೀಮತಿ ಮಾಲಾ ಇವರು ಮಕ್ಕಳು.

ಲೇಖಕರ ವಿಳಾಸಗಳು

1. ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ, 68 , ಬಿ. ಆಶ್ರಮರಸ್ತೆ (ಹಿಂಭಾಗ) ಮೂರನೆಯ ಬ್ಲಾಕ್, ಜಯಲಕ್ಷ್ಮೀಪುರಂ ಮೈಸೂರು - 570 012.
2. ಡಾ. ಎನ್. ನಾಗಪ್ಪ 197, 5ನೇ ಮುಖ್ಯ ರಸ್ತೆ, ವೈಯಾಲಿಕಾವಲ್, ಬೆಂಗಳೂರು. -
3. ಶ್ರೀ ಜಿ. ಬ್ರಹ್ಮಪ್ಪ 310, 3ನೇ ಕ್ರಾಸ್, 7ನೇ ಮೇನ್ ಆಲನಹಳ್ಳಿ ಲೇಔಟ್, ಮೈಸೂರು - 570 011.
4. ಶ್ರೀ ಎನ್. ಬಸವಾರಾಧ್ಯ, 743, 45ನೇ ಕ್ರಾಸ್, 12ನೇ ಮೇನ್, 3ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - 560 010.
5. ಡಾ. ಎಂ. ಚಿದಾನಂದಮೂರ್ತಿ 8/w, 4ನೇ ತಿರುವು, 11ನೇ ಮುಖ್ಯರಸ್ತೆ, ವಿಜಯನಗರ, ೭ನೇ ಹಂತ, ಬೆಂಗಳೂರು - 560 040.
6. ಡಾ. ಹಂಪ ನಾಗರಾಜಯ್ಯ,1079, 18 A ಮೇನ್, 5ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು
7. ಡಾ. ಕಮಲಾ ಹಂಪನಾ, 1079, 18A ಮೇನ್, 5ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು)
8. ಎನ್. ಶ್ರೀನಿವಾಸನ್, 80/6, ಹೊಸನಂ 210 `ರೋಹಿಣಿ' (ಮಹಡಿ) 5ನೇ ಮುಖ್ಯ ರಸ್ತೆ, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು.
9. ವಿ. ಅಮೃತಾ, ನಿವೃತ್ತ ಪ್ರಾಧ್ಯಾಪಕರು, ಶರದ್ರವಿ, 103, ಬನಶಂಕರಿ, ೭ನೇ ಸ್ಟೇಜ್, ಬೆಂಗಳೂರು.
10. ನಾ. ಗೀತಾಚಾರ್ಯ, ಕಾರ್ಯದರ್ಶಿ, ಬಿ. ಎಂ. ಶ್ರೀ ಪ್ರತಿಷ್ಠಾನ, ೪ನೇ ಮೇನ್, ಎನ್. ಆರ್. ಕಾಲೊನಿ, ಬೆಂಗಳೂರು.
11. ಎಸ್. ಎಸ್. ಅಂಗಡಿ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ ಹಸ್ತಪ್ರತಿ ಶಾಸ್ತ್ರ ವಿಭಾಗ, ವಿದ್ಯಾರಣ್ಯ, ಕಾಮಲಾಪುರ - 583 276.
12. ಎಸ್. ಕೆ. ಚಕ್ರವರ್ತಿ, 2269, ೲಲವಾಲ ರಸ್ತೆ, ಜಯಲಕ್ಷ್ಮಿಪುರಂ, ಮೈಸೂರು - 570 012.
13. ಡಾ. ನೀಲತ್ತಹಳ್ಳಿ ರಾಮಶೇಷನ್, ನಂ. ೧೭, ೧ನೇ ಮೈನ್, ಎಲ್.ಐ.ಸಿ. ಕಾಲೋನಿ, ಶ್ರೀರಾಂಪುರ, ೨ನೇ ಸ್ಟೇಜ್, ಮೈಸೂರು.
14. ಡಾ. ಎ. ಜಾನಕಿ, ವಿಶ್ರಾಂತ ಜಂಟಿ ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಎಮ್.ಕೆ.ಜಿ. ೮೭೯, ೨ನೇ ಹಂತ, ಕುವೆಂಪು ನಗರ, ಮೈಸೂರು.
15. ಡಾ. ಎ. ಶಶಿಕಲ, ಪ್ರಾಧ್ಯಾಪಕರು, ಸೈಂಟ್ ಆನ್ಸ್ ಶಿಕ್ಷಣ ಮಹಾವಿದ್ಯಾಲಯ, ಮಂಗಳೂರು.
16. ಶ್ರೀ ಎ. ಎಲ್. ನರಸಿಂಹನ್, ೨೬೧, ಶಾರದಾ ಕಾಲೋನಿ, ಬಸವೇಶ್ವರ ನಗರ, ಬೆಂಗಳೂರು.

■ ■

## ಡಾ. ಎನ್. ಅನಂತರಂಗಾಚಾರ್ ಜನ್ಮ ಶತಮಾನೋತ್ಸವ ಸಮಿತಿ

೬೪ - ಬಿ, ಆಶ್ರಮರಸ್ತೆ (ಹಿಂಭಾಗ), ಮೂರನೆಯ ಬ್ಲಾಕ್,
ಜಯಲಕ್ಷ್ಮೀಪುರಂ, ಮೈಸೂರು - ೫೭೦ ೦೧೨.

---

ಗೌರವಾಧ್ಯಕ್ಷರು: ಡಾ. ಎನ್. ಎಸ್. ಅನಂತರಂಗಾಚಾರ್

ಅಧ್ಯಕ್ಷರು:ಡಾ. ಟಿ.ವಿ. ವೆಂಕಟಾಚಲಶಾಸ್ತ್ರೀ

ಗೌರವ ಸಲಹೆಗಾರರು:ಪ್ರೊ. ಜಿ. ವೆಂಕಟಸುಬ್ಬಯ್ಯ, ಶ್ರೀ ಹರಿಕೃಷ್ಣ ಪುನರೂರು
(ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು)
ಶ್ರೀ ಎಸ್.ಕೆ. ಚಕ್ರವರ್ತಿ




ಉಪಾಧ್ಯಕ್ಷರು:
ಶ್ರೀ ಎನ್. ಬಸವಾರಾಧ್ಯ, ಡಾ. ವೃಷಭೇಂದ್ರ ಸ್ವಾಮಿ,
ಡಾ. ಎಂ. ಚಿದಾನಂದಮೂರ್ತಿ, ಡಾ. ಸಾ. ಶಿ. ಮರುಳಯ್ಯ
ಡಾ. ಹಂಪ ನಾಗರಾಜಯ್ಯ, ಡಾ. ಕಮಲಾ ಹಂಪನಾ
ಪ್ರೊ. ನ. ಸುಬ್ರಹ್ಮಣ್ಯಂ, ಪ್ರೊ. ಜಿ. ಮಹಾದೇವಪ್ಪ
ಪ್ರೊ. ಎಸ್. ಶ್ರೀನಿವಾಸನ್, ಶ್ರೀ ಶ್ರೀನಿವಾಸರಂಗಾಚಾರ್
ಡಾ. ಎ. ಅನಂತ ನರಸಿಂಹನ್, ಶ್ರೀ ನಾರಾಯಣ ಅಯ್ಯಂಗಾರ್
ಶ್ರೀ ಎ. ಎಲ್. ನರಸಿಂಹನ್, ಶ್ರೀ ಎಸ್.ಜೆ. ನಾರಾಯಣ ಶೆಟ್ಟಿ

ಕಾರ್ಯದರ್ಶಿಗಳು:
ಡಾ. ಎ. ಶಶಿಕಲ, ಶ್ರೀ ಎ. ಗೋಪಾಲ್

ಸಹಕಾರ್ಯದರ್ಶಿಗಳು: ಶ್ರೀ ರಾಮಪ್ರಿಯನ್, ಶ್ರೀ ಪ್ರಕಾಶ್

ಕೋಶಾಧಿಕಾರಿ: ಡಾ. ಎ. ಜಾನಕಿ

ಸದಸ್ಯರು: ಶ್ರೀಮತಿ ಎ. ಜಾನಕಿ, ಶ್ರೀ ಶೇಷಾದ್ರಿ, ಶ್ರೀ ರಘು, ಶ್ರೀಮತಿ ಜಯಲಕ್ಷಿ
ಶ್ರೀ ರಾಘವನ್, ಶ್ರೀ ರಾಜಗೋಪಾಲ್, ಶ್ರೀ ಶ್ರೀವತ್ಸನ್
ಶ್ರೀ ಸತೀಶ್, ಶ್ರೀ ಮನುರಾಜನ್
ಶ್ರೀ ಅನಂತರಂಗಾಚಾರ್
ಡಾ. ಸತ್ಯನಾರಾಯಣ

ಕನ್ನಡ ಅಧ್ಯಾಪಕ, ಗ್ರಂಥ ಸಂಪಾದಕ, ಸಂಶೋಧಕ, ಸಾಮಾಜಿಕ ಕಾರ್ಯಕರ್ತ, ಕುಸ್ತಿಪಟು ಹೀಗೆ ಹಲವು ಮುಖಗಳ ವ್ಯಕ್ತಿ ಡಾ. ಎನ್. ಅನಂತರಂಗಾಚಾರ್. ಆಚಾರ್ಯರ ಶಿಷ್ಯರು, ಹಿತೈಷಿಗಳು, ಕುಟುಂಬದ ಸದಸ್ಯರು ಅವರ ವ್ಯಕ್ತಿತ್ವವನ್ನು ಕಟ್ಟಿ ಕೊಟ್ಟಿರುವ ಲೇಖನಗಳು ಇಲ್ಲಿವೆ. ಅನಂತರಂಗಾಚಾರ್ ಅವರ ಚದುರಿಹೋಗಿದ್ದ ಹಲವು ಪ್ರಬಂಧಗಳನ್ನು, ಅವರ ಜೀವಿತಾವಧಿಯಲ್ಲಿನ ಅನುಭವದ ತುಣುಕುಗಳ ಬರಹಗಳನ್ನು ಈ ಕೃತಿಯಲ್ಲಿ ಅಳವಡಿಸಲಾಗಿದೆ. ಅನಂತರಂಗಾಚಾರ್ ಅವರ ಜನ್ಮಶತಾಬ್ದಿಯ ನೆನಪಿಗೆ ಅನಂತರಂಗಾಚಾರ್ ಜನ್ಮ ಶತಮಾನೋತ್ಸವ ಸಮಿತಿ ಈ ನಿಧಿಯನ್ನು ಅನಾವರಣಗೊಳಿಸುತ್ತಿದೆ.

ಡಾ. ಎನ್. ಅನಂತರಂಗಾಚಾರ್ ಜನ್ಮ ಶತಮಾನೋತ್ಸವ ಸಮಿತಿ
೬೮, ಆಶ್ರಮ ರಸ್ತೆ, (ಹಿಂಭಾಗ), ಮೂರನೆಯ ಬ್ಲಾಕ್, ಜಯಲಕ್ಷ್ಮೀ ಪುರಂ, ಮೈಸೂರು ೫೭೦ ೦೧೨